C ನಂ
4852

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ಬ್ರಹ್ಮಖಂಡ

೩

## ಬ್ರಹ್ಮೋತ್ತರಖಂಡ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

DONATED BY
M. S. SIDDAPPA BROTHERS
Merchants, Manufacturers & Bankers,
THYAGARAJA ROAD, MYSORE-4.
TO
SHREE JANGAMAVADI MUTT
BENARES CITY

ಬೆಂಗಳೂರು ಪ್ರೆಸ್
...ರು ರೋಡು, ಬೆಂಗಳೂರು ಸಿಟಿ
೧೯೪೭

Q23:226
33H6.13
CC-0. Jangamwadi Math Collection. Digitized by eGangotri

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ಬ್ರಹ್ಮಖಂಡ

೩

## ಬ್ರಹ್ಮೋತ್ತರಖಂಡ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ನೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

DONATED BY
M. S. SIDDAPPA BROTHERS
Merchants, Manufacrurers & Bankers,
THYAGARAJA ROAD, MYSORE-4.
TO
SHREE JANGAMAVADI MUTT
BENARES CITY

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೭

CC-0. Jangamwadi Math Collection. Digitized by eGangotri

# ಅರಿಕೆ

ಈ ಹದಿಮೂರನೆಯ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಭಾಗವಾದ ಬ್ರಹ್ಮೋತ್ತರ ಖಂಡವು ಮುಗಿದಿದೆ. ಇಲ್ಲಿಗೆ ಮೂರನೆಯ ಬ್ರಹ್ಮಖಂಡವೂ ಸಂಪೂರ್ಣವಾಯಿತು. ಇಲ್ಲಿಂದ ಮುಂದೆ ಹದಿನಾಲ್ಕನೆಯ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣಕ್ಕೆ ಶಿರೋಮಣಿ ಪ್ರಾಯವಾಗಿ ಐಹಿಕಾಮುಷ್ಮಿಕ ಸುಖಸಂಪತ್ಸಾಧನ ಮೂಲವೆನಿಸಿ, ಸಾಂದ್ರಾನಂದರೂಪ ಮಹಾ ಮಹೇಶ್ವರನ ಅನಂತಾನಂತ ಮಾಹಾತ್ಮ್ಯ ಪ್ರಸಂಗಗಳಿಂದ ಪರಿರಂಜಿತವಾಗಿರುವ ನಾಲ್ಕನೆಯ ಶ್ರೀ ಕಾಶೀ ಖಂಡವು ಪ್ರಾರಂಭವಾಗುತ್ತದೆ.

ಈ ಬ್ರಹ್ಮಖಂಡದ ಅನುವಾದಕಾರ್ಯದಲ್ಲಿ ನನ್ನ ಮಾನ್ಯಮಿತ್ರರಾದ ಸಾಹಿತ್ಯವಿದ್ವಾನ್ ಶ್ರೀ॥ ಕೆ. ನರಸಿಂಹಾಚಾರ್ಯರವರು ಸಹಭಾಗಿಗಳು; ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

DONATED BY
M. S. SIDDAPPA BROTHERS
Merchants, Manufacrurers & Bankers,
THYAGARAJA ROAD, MYSORE-4.
TO
SHREE JANGAMAVADI MUTT
BENARES CITY

CC-0. Jangamwadi Math Collection. Digitized by eGangotri

# ವಿಷಯಾನುಕ್ರಮಣಿಕೆ



CC-0. Jangamwadi Math Collection. Digitized by eGangotri

ಪುಟ ಸಂಖ್ಯೆ



CC-0. Jangamwadi Math Collection. Digitized by eGangotri

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣ ಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

CC-0. Jangamwadi Math Collection. Digitized by eGangotri

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಬ್ರಹ್ಮೋತ್ತರಖಂಡಃ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ಪಂಚಾಕ್ಷರಮಂತ್ರಮಾಹಾತ್ಮ್ಯವರ್ಣನಂ

ಜ್ಯೋತಿರ್ಮಾತ್ರಸ್ವರೂಪಾಯ ನಿರ್ಮಲಜ್ಞಾನಚಕ್ಷುಷೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥ ೧ ॥

ಋಷಯ ಊಚುಃ:—

ಆಖ್ಯಾತಂ ಭವತಾ ಸೂತ ವಿಷ್ಣೋರ್ಮಾಹಾತ್ಮ್ಯಮುತ್ತಮಂ ।
ಸಮಸ್ತಾಘಹರಂ ಪುಣ್ಯಂ ಸಮಾಸೇನ ಶ್ರುತಂ ಚ ನಃ ॥ ೨ ॥

---

## ಕನ್ನಡದ ಅನುವಾದ

### ಪಂಚಾಕ್ಷರಮಂತ್ರಮಾಹಾತ್ಮ್ಯವರ್ಣನ

೧. ತೇಜೋರೂಪನೂ, ಶುದ್ಧಜ್ಞಾನನೇತ್ರನೂ, ಶಾಂತನೂ, ಬ್ರಹ್ಮಸ್ವರೂಪನೂ, ಲಿಂಗಾಕಾರದೇಹವುಳ್ಳವನೂ ಆಗಿರುವ ಮಹೇಶ್ವರನಿಗೆ ನಮಸ್ಕಾರವು.

೨. ಋಷಿಗಳು ಹೇಳುತ್ತಾರೆ:—ಸೂತನೆ! ನೀನು ಸಮಸ್ತ ದುರಿತಗಳನ್ನು ನೀಗಿಸುವ ಉತ್ತಮವಾದ ಮಹಾವಿಷ್ಣುವಿನ ಪವಿತ್ರಮಾಹಾತ್ಮ್ಯೆಯನ್ನು ಸಂಕ್ಷೇಪವಾಗಿ ಹೇಳಿರುವೆ. ನಾವು ಕೇಳಿದ್ದೇವೆ.

CC-0. Jangamwadi Math Collection. Digitized by eGangotri

ಇದಾನೀಂ ಶ್ರೋತುಮಿಚ್ಛಾಮೋ ಮಾಹಾತ್ಮ್ಯಂ ತ್ರಿಪುರದ್ವಿಷಃ ।
ತದ್ಭಕ್ತಾನಾಂ ಚ ಮಾಹಾತ್ಮ್ಯಮಶೇಷಾಘಹರಂ ಪರಂ ॥ ೩ ॥
ತನ್ಮಂತ್ರಾಣಾಂ ಚ ಮಾಹಾತ್ಮ್ಯಂ ತಥೈವ ದ್ವಿಜಸತ್ತಮ ।
ತತ್ಕಥಾಯಾಶ್ಚ ತದ್ಭಕ್ತೇಃ ಪ್ರಭಾವಮನುವರ್ಣಯ ॥ ೪ ॥

ಸೂತ ಉವಾಚ :—

ಏತಾವದೇವ ಮರ್ತ್ಯಾನಾಂ ಪರಂ ಶ್ರೇಯಃ ಸನಾತನಂ ।
ಯದೀಶ್ವರಕಥಾಯಾಂ ವೈ ಜಾತಾ ಭಕ್ತಿರಹೈತುಕೀ ॥ ೫ ॥
ಅತಸ್ತದ್ಭಕ್ತಿಲೇಶಸ್ಯ ಮಾಹಾತ್ಮ್ಯಂ ವರ್ಣ್ಯತೇ ಮಯಾ ।
ಅಪಿ ಕಲ್ಪಾಯುಷಾ ನಾಲಂ ವಕ್ತುಂ ವಿಸ್ತರತಃ ಕ್ವಚಿತ್ ॥ ೬ ॥
ಸರ್ವೇಷಾಮಪಿ ಪುಣ್ಯಾನಾಂ ಸರ್ವೇಷಾಂ ಶ್ರೇಯಸಾಮಪಿ ।
ಸರ್ವೇಷಾಮಪಿ ಯಜ್ಞಾನಾಂ ಜಪಯಜ್ಞಃ ಪರಃ ಸ್ಮೃತಃ ॥ ೭ ॥
ತತ್ರಾದೌ ಜಪಯಜ್ಞಸ್ಯ ಫಲಂ ಸ್ವಸ್ತ್ಯಯನಂ ಮಹತ್ ।
ಶೈವಂ ಷಡಕ್ಷರಂ ದಿವ್ಯಂ ಮಂತ್ರಮಾಹುರ್ಮಹರ್ಷಯಃ ॥ ೮ ॥
ದೇವಾನಾಂ ಪರಮೋ ದೇವೋ ಯಥಾ ವೈ ತ್ರಿಪುರಾಂತಕಃ ।
ಮಂತ್ರಾಣಾಂ ಪರಮೋ ಮಂತ್ರಸ್ತಥಾ ಶೈವಃ ಷಡಕ್ಷರಃ ॥ ೯ ॥

---

೩. ಈಗ ತ್ರಿಪುರಾಂತಕನಾದ ಮಹೇಶ್ವರನ ಮತ್ತು ಅವನ ಭಕ್ತರ ಸಕಲ ಪಾಪನಿವಾರಕವಾದ ಉತ್ತಮಮಾಹಾತ್ಮ್ಯೆಯನ್ನು ಕೇಳಲು ಬಯಸುತ್ತೇವೆ.

೪. ದ್ವಿಜೋತ್ತಮ! ಆ ಮಹೇಶ್ವರನ ಮಂತ್ರ, ಕಥೆ ಮತ್ತು ಭಕ್ತಿಯ ಪ್ರಭಾವವನ್ನು ವರ್ಣಿಸು.

೫. ಸೂತನು ಹೇಳುತ್ತಾನೆ:—ಮಾನವರಿಗೆ ಈಶ್ವರ ಕಥೆಯಲ್ಲಿ ನಿಷ್ಕಾರಣ ಭಕ್ತಿಯುದಯಿಸಿದರೆ ಅದು ಪರಮಶ್ರೇಯಸ್ಸಿಗೆ ಕಾರಣವಾಗುವುದು.

೬. ಆದುದರಿಂದ ಅವನ ಭಕ್ತಿಮಾಹಾತ್ಮ್ಯೆಯನ್ನು ಲೇಶಮಾತ್ರ ನಾನು ಹೇಳುವೆನು. ವಿಸ್ತಾರವಾಗಿ ಹೇಳಲು ಪ್ರಳಯಕಾಲದವರೆಗೆ ಬದುಕಿದರೂ ಸಾಧ್ಯವಿಲ್ಲ.

೭. ಸಮಸ್ತ ಪುಣ್ಯ, ಶ್ರೇಯಸ್ಸು, ಯಜ್ಞ ಇವುಗಳಲ್ಲಿ ಜಪಯಜ್ಞವು ಉತ್ತಮವಾದುದು.

೮. ಜಪಯಜ್ಞವು ಮಹಾ ಮಂಗಳಕರವಾದ ಫಲವನ್ನೀಯುವುದು. ಮಹರ್ಷಿಗಳು ಓಂಕಾರಸಹಿತವಾಗಿ ಆರಕ್ಷರವುಳ್ಳ ಶಿವಮಂತ್ರವು ಅತ್ಯುತ್ತಮವಾದುದೆಂದು ಹೇಳುವರು.

೯. ದೇವತೆಗಳಲ್ಲಿ ತ್ರಿಪುರಾಂತಕನಾದ ಮಹೇಶ್ವರನು ಉತ್ತಮ ದೇವತೆಯಾಗಿರುವಂತೆ ಮಂತ್ರಗಳಲ್ಲಿ ಶಿವಷಡಕ್ಷರ ಮಂತ್ರವು ಶ್ರೇಷ್ಠವಾದುದು.

CC-0. Jangamwadi Math Collection. Digitized by eGangotri

ಏಷ ಪಂಚಾಕ್ಷರೋ ಮಂತ್ರೋ ಜಪ್ತೃಣಾಂ ಮುಕ್ತಿದಾಯಕಃ ।
ಸಂಸೇವ್ಯತೇ ಮುನಿಶ್ರೇಷ್ಠೈರಶೇಷೈಃ ಸಿದ್ಧಿಕಾಂಕ್ಷಿಭಿಃ ॥ ೧೦ ॥
ಅಸ್ಯೈವಾಽಕ್ಷರಮಾಹಾತ್ಮ್ಯಂ ನಾಽಲಂ ವಕ್ತುಂ ಚತುರ್ಮುಖಃ ।
ಶ್ರುತಯೋ ಯತ್ರ ಸಿದ್ಧಾಂತಂ ಗತಾಃ ಪರಮನಿರ್ವೃತಾಃ ॥ ೧೧ ॥
ಸರ್ವಜ್ಞಃ ಪರಿಪೂರ್ಣಶ್ಚ ಸಚ್ಚಿದಾನಂದಲಕ್ಷಣಃ ।
ಸ ಶಿವೋ ಯತ್ರ ರಮತೇ ಶೈವೇ ಪಂಚಾಕ್ಷರೇ ಶುಭೇ ॥ ೧೨ ॥
ಏತೇನ ಮಂತ್ರರಾಜೇನ ಸರ್ವೋಪನಿಷದಾತ್ಮನಾ ।
ಲೇಭಿರೇ ಮುನಯಃ ಸರ್ವೇ ಪರಂಬ್ರಹ್ಮ ನಿರಾಮಯಂ ॥ ೧೩ ॥
ನಮಸ್ಕಾರೇಣ ಜೀವತ್ವಂ ಶಿವೇಽತ್ರ ಪರಮಾತ್ಮನಿ ।
ಐಕ್ಯಂ ಗತಮತೋ ಮಂತ್ರಃ ಪರಬ್ರಹ್ಮಮಯೋ ಹ್ಯಸೌ ॥ ೧೪ ॥
ಭವಪಾಶನಿಬದ್ಧಾನಾಂ ದೇಹಿನಾಂ ಹಿತಕಾಮ್ಯಯಾ ।
ಆಹೋಂ ನಮಃ ಶಿವಾಯೇತಿ ಮಂತ್ರಮಾದ್ಯಂ ಶಿವಃ ಸ್ವಯಂ ॥ ೧೫ ॥
ಕಿಂ ತಸ್ಯ ಬಹುಭಿರ್ಮಂತ್ರೈಃ ಕಿಂ ತೀರ್ಥೈಃ ಕಿಂ ತಪೋಽಧ್ವರೈಃ ।
ಯಸ್ಯೋಂ ನಮಃ ಶಿವಾಯೇತಿ ಮಂತ್ರೋ ಹೃದಯಗೋಚರಃ ॥ ೧೬ ॥

---

೧೦. ಓಂಕಾರವನ್ನು ಬಿಟ್ಟು ಐದಕ್ಷರವುಳ್ಳ ಈ ಮಂತ್ರವು ಜಪಿಸುವವರಿಗೆ ಮುಕ್ತಿಯನ್ನೀಯುವುದು. ಸಿದ್ಧಿಯನ್ನು ಬಯಸುವ ಸಕಲ ಮುನಿವರೇಣ್ಯರೂ ಇದನ್ನು ಜಪಿಸುತ್ತಾರೆ.

೧೧. ಶ್ರುತ್ಯರ್ಥಸಾರಭೂತವಾದ ಈ ಪಂಚಾಕ್ಷರ ಮಂತ್ರದ ಮಾಹಾತ್ಮ್ಯೆಯನ್ನು ಹೇಳಲು ಚತುರ್ಮುಖನೂ ಶಕ್ತನಲ್ಲ.

೧೨. ಪಂಚಾಕ್ಷರ ಮಂತ್ರದಿಂದ ಸರ್ವಜ್ಞನೂ, ಪರಿಪೂರ್ಣನೂ, ಜ್ಞಾನಾನಂದಸ್ವರೂಪನೂ ಆದ ಶ್ರೀ ಪರಮೇಶ್ವರನು ಸಂತೋಷಗೊಳ್ಳುತ್ತಾನೆ.

೧೩. ಸಕಲೋಪನಿಷತ್ತುಗಳ ಸ್ವರೂಪವಾದ ಈ ಶ್ರೇಷ್ಠಮಂತ್ರದಿಂದ ಸಮಸ್ತ ಮುನಿಗಳೂ ಶಾಶ್ವತಬ್ರಹ್ಮವನ್ನು ಪಡೆದಿರುವರು.

೧೪. ಜೀವನು ನಮಸ್ಕಾರದಿಂದ ಶಿವಪರಮಾತ್ಮನಲ್ಲಿ ಐಕ್ಯವನ್ನು ಹೊಂದುವುದರಿಂದ ಈ ಮಂತ್ರವು ಪರಬ್ರಹ್ಮರೂಪವಾದುದು.

೧೫. ಸಂಸಾರವೆಂಬ ಹಗ್ಗದಿಂದ ಕಟ್ಟಲ್ಪಟ್ಟ ಜೀವರಿಗೆ ಹಿತವನ್ನುಂಟುಮಾಡಲೋಸುಗ ಶಿವನು ತಾನೆ "ಓಂ ನಮಶ್ಶಿವಾಯ" ಎಂಬ ಪಂಚಾಕ್ಷರ ಮಂತ್ರವನ್ನು ಹೇಳಿದನು.

೧೬. ಈ ಪಂಚಾಕ್ಷರ ಮಂತ್ರವನ್ನು ತಿಳಿದವನಿಗೆ ಇತರ ಅನೇಕ ಮಂತ್ರಗಳಿಂದಲೂ, ತೀರ್ಥಗಳಿಂದಲೂ, ಯಾಗಗಳಿಂದಲೂ ಪ್ರಯೋಜನವೇನು?

CC-0. Jangamwadi Math Collection. Digitized by eGangotri

ತಾವದ್ಭ್ರಮಂತಿ ಸಂಸಾರೇ ದಾರುಣೇ ದುಃಖಸಂಕುಲೇ ।
ಯಾವನ್ನೋಚ್ಚಾರಯಂತೀಮಂ ಮಂತ್ರಂ ದೇಹಭೃತಃ ಸಕೃತ್ ॥ ೧೭ ॥
ಮಂತ್ರಾಧಿರಾಜರಾಜೋಽಯಂ ಸರ್ವವೇದಾಂತಶೇಖರಃ ।
ಸರ್ವಜ್ಞಾನನಿಧಾನಂ ಚ ಸೋಽಯಂ ಚೈವ ಷಡಕ್ಷರಃ ॥ ೧೮ ॥
ಕೈವಲ್ಯಮಾರ್ಗದೀಪೋಽಯಮವಿದ್ಯಾಸಿಂಧುವಾಡವಃ ।
ಮಹಾಪಾತಕದಾವಾಗ್ನಿಃ ಸೋಽಯಂ ಮಂತ್ರಃ ಷಡಕ್ಷರಃ ॥ ೧೯ ॥
ತಸ್ಮಾತ್ಸರ್ವಪ್ರದೋ ಮಂತ್ರಃ ಸೋಽಯಂ ಪಂಚಾಕ್ಷರಃ ಸ್ಮೃತಃ ।
ಸ್ತ್ರೀಭಿಃ ಶೂದ್ರೈಶ್ಚ ಸಂಕೀರ್ಣೈರ್ಧಾರ್ಯತೇ ಮುಕ್ತಿಕಾಂಕ್ಷಿಭಿಃ ॥ ೨೦ ॥
ನಾಽಸ್ಯ ದೀಕ್ಷಾ ನ ಹೋಮಶ್ಚ ನ ಸಂಸ್ಕಾರೋ ನ ತರ್ಪಣಂ ।
ನ ಕಾಲೋ ನೋಪದೇಶಶ್ಚ ಸದಾ ಶುಚಿರಯಂ ಮನುಃ ॥ ೨೧ ॥
ಮಹಾಪಾತಕವಿಚ್ಛಿತ್ತ್ಯೈ ಶಿವ ಇತ್ಯಕ್ಷರದ್ವಯಂ ।
ಅಲಂ ನಮಸ್ಕ್ರಿಯಾಯುಕ್ತೋ ಮುಕ್ತಯೇ ಪರಿಕಲ್ಪತೇ ॥ ೨೨ ॥
ಉಪದಿಷ್ಟಃ ಸದ್ಗುರುಣಾ ಜಪ್ತಃ ಕ್ಷೇತ್ರೇ ಚ ಪಾವನೇ ।
ಸದ್ಯೋ ಯಥೇಪ್ಸಿತಾಂ ಸಿದ್ಧಿಂ ದದಾತೀತಿ ಕಿಮದ್ಭುತಂ ॥ ೨೩ ॥

---

೧೭. ಮನುಷ್ಯರು ಈ ಮಂತ್ರವನ್ನು ಒಂದು ಸಾರಿ ಉಚ್ಚರಿಸುವವರೆಗೆ ದುಃಖದಾರುಣವಾದ ಸಂಸಾರಚಕ್ರದಲ್ಲಿ ತಿರುಗುತ್ತಿರುವರು.

೧೮. ಈ ಷಡಕ್ಷರ ಮಂತ್ರವು ಮಂತ್ರಗಳಲ್ಲಿ ಶ್ರೇಷ್ಠವೂ, ಸಮಸ್ತ ಉಪನಿಷತ್ತುಗಳಲ್ಲಿ ಅಗ್ರಗಣ್ಯವೂ, ಸಕಲಜ್ಞಾನಭಂಡಾರವೂ ಆಗಿರುವುದು.

೧೯. ಈ ಮಂತ್ರವು ಮೋಕ್ಷಮಾರ್ಗದ ದೀಪವೂ, ಅವಿದ್ಯೆಯೆಂಬ ಸಮುದ್ರಕ್ಕೆ ವಾಡವಾಗ್ನಿಯೂ, ಮಹಾಪಾತಕವೆಂಬ ಕಾಡಿಗೆ ಬೆಂಕಿಯೂ ಆಗಿರುವುದು.

೨೦. ಈ ಪಂಚಾಕ್ಷರ ಮಂತ್ರವು ಸಕಲೇಷ್ಟಪ್ರದವಾಗಿರುವುದರಿಂದ ಮೋಕ್ಷವನ್ನಪೇಕ್ಷಿಸುವ ಹೆಂಗಸರೂ, ಶೂದ್ರರೂ, ಮಿಶ್ರಜಾತಿಯವರೂ ಉಚ್ಚರಿಸುವರು.

೨೧. ಯಾವಾಗಲೂ ಶುದ್ಧವಾದ ಈ ಮಂತ್ರಕ್ಕೆ ದೀಕ್ಷೆ, ಹೋಮ, ಸಂಸ್ಕಾರ, ತರ್ಪಣ, ಸಮಯ, ಉಪದೇಶ ಇವುಗಳಾವುವೂ ಅವಶ್ಯಕವಿಲ್ಲ.

೨೨. ನಮಸ್ಕಾರಸಹಿತವಾದ ಈ ಶಿವವೆಂಬೆರಡಕ್ಷರವು ಮಹಾಪಾಪವನ್ನು ನೀಗಿಸಿ ಮುಕ್ತಿಯನ್ನೀಯಲು ಸಮರ್ಥವಾದುದು.

೨೩. ಹೀಗಿರುವಾಗ ಪವಿತ್ರ ಕ್ಷೇತ್ರದಲ್ಲಿ ಸದ್ಗುರುವಿನಿಂದ ಉಪದೇಶ ಪಡೆದು ಜಪಿಸಿದರೆ ಕೂಡಲೆ ಇಷ್ಟಾರ್ಥವನ್ನು ನೀಡುವುದೆಂಬುದು ಆಶ್ಚರ್ಯವಲ್ಲ.

CC-0. Jangamwadi Math Collection. Digitized by eGangotri

ಅತಃ ಸದ್ಗುರುಮಾಶ್ರಿತ್ಯ ಗ್ರಾಹ್ಯೋಽಯಂ ಮಂತ್ರನಾಯಕಃ ।
ಪುಣ್ಯಕ್ಷೇತ್ರೇಷು ಜಪ್ತವ್ಯಃ ಸದ್ಯಃ ಸಿದ್ಧಿಂ ಪ್ರಯಚ್ಛತಿ ॥ ೨೪ ॥
ಗುರವೋ ನಿರ್ಮಲಾಃ ಶಾಂತಾಃ ಸಾಧವೋ ಮಿತಭಾಷಿಣಃ ।
ಕಾಮಕ್ರೋಧವಿನಿರ್ಮುಕ್ತಾಃ ಸದಾಚಾರಾ ಜಿತೇಂದ್ರಿಯಾಃ ॥ ೨೫ ॥
ಏತೈಃ ಕಾರುಣ್ಯತೋ ದತ್ತೋ ಮಂತ್ರಃ ಕ್ಷಿಪ್ರಂ ಪ್ರಸಿದ್ಧ್ಯತಿ ।
ಕ್ಷೇತ್ರಾಣಿ ಜಪಯೋಗ್ಯಾನಿ ಸಮಾಸಾತ್ಕಥಯಾಮ್ಯಹಂ ॥ ೨೬ ॥
ಪ್ರಯಾಗಂ ಪುಷ್ಕರಂ ರಮ್ಯಂ ಕೇದಾರಂ ಸೇತುಬಂಧನಂ ।
ಗೋಕರ್ಣಂ ನೈಮಿಷಾರಣ್ಯಂ ಸದ್ಯಃ ಸಿದ್ಧಿಕರಂ ನೃಣಾಂ ॥ ೨೭ ॥
ಅತ್ರಾಽನುವರ್ಣ್ಯತೇ ಸದ್ಭಿರಿತಿಹಾಸಃ ಪುರಾತನಃ ।
ಅಸಕೃದ್ವಾ ಸಕೃದ್ವಾಽಪಿ ಶೃಣ್ವತಾಂ ಮಂಗಲಪ್ರದಃ ॥ ೨೮ ॥
ಮಥುರಾಯಾಂ ಯದುಶ್ರೇಷ್ಠೋ ದಾಶಾರ್ಹ ಇತಿ ವಿಶ್ರುತಃ ।
ಬಭೂವ ರಾಜಾ ಮತಿಮಾನ್ಮಹೋತ್ಸಾಹೋ ಮಹಾಬಲಃ ॥ ೨೯ ॥
ಶಾಸ್ತ್ರಜ್ಞೋ ನಯವಾಕ್ಶೂರೋ ಧೈರ್ಯವಾನಮಿತದ್ಯುತಿಃ ।
ಅಪ್ರಧೃಷ್ಯಃ ಸುಗಂಭೀರಃ ಸಂಗ್ರಾಮೇಷ್ವನಿವರ್ತಿತಃ ॥ ೩೦ ॥

---

೨೪. ಆದುದರಿಂದ ಈ ಉತ್ತಮ ಮಂತ್ರವನ್ನು ಸದ್ಗುರುವಿನಿಂದ ಉಪದೇಶಹೊಂದಿ ಪುಣ್ಯಕ್ಷೇತ್ರಗಳಲ್ಲಿ ಜಪಿಸಬೇಕು. ಹಾಗೆ ಮಾಡಿದರೆ ಇದು ಕೂಡಲೆ ಸಿದ್ಧಿಯನ್ನೀಯುವುದು.

೨೫. ಶುದ್ಧರೂ, ಶಾಂತರೂ, ಸಾಧುಗಳೂ, ಮಿತವಾಗಿ ಮಾತನಾಡುವವರೂ, ಕಾಮಕ್ರೋಧಗಳನ್ನು ತ್ಯಜಿಸಿದವರೂ, ಸದಾಚಾರಿಗಳೂ, ಜಿತೇಂದ್ರಿಯರೂ ಆಗಿರುವವರು ಗುರುಗಳೆನ್ನಿಸಿಕೊಳ್ಳುವರು.

೨೬. ಇಂತಹ ಗುರುಗಳು ದಯೆಯಿಂದ ಉಪದೇಶಿಸಿದ ಮಂತ್ರವು ಕೂಡಲೆ ಫಲಿಸುವುದು. ನಾನು ನಿನಗೆ ಈಗ ಜಪಕ್ಕುಚಿತವಾದ ಕ್ಷೇತ್ರಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ.

೨೭. ಪ್ರಯಾಗ, ಪುಷ್ಕರಕ್ಷೇತ್ರ, ರಮ್ಯವಾದ ಕೇದಾರ, ಸೇತು, ಗೋಕರ್ಣ, ನೈಮಿಷಾರಣ್ಯ ಇವುಗಳು ಮನುಷ್ಯನಿಗೆ ಕೂಡಲೇ ಮಂತ್ರಸಿದ್ಧಿಯನ್ನು ಕೊಡುವುವು.

೨೮. ಈ ವಿಷಯದಲ್ಲೊಂದು ಹಿಂದಿನ ಕಥೆಯನ್ನು ಸಜ್ಜನರು ಹೇಳಿದ್ದಾರೆ. ಇದನ್ನು ಅನೇಕ ಸಾರಿ ಅಥವಾ ಒಂದು ಸಾರಿ ಕೇಳಿದವರಿಗೆ ಮಂಗಳವಾಗುವುದು.

೨೯–೩೧. ಮಥುರೆಯಲ್ಲಿ ಜ್ಞಾನಿಯೂ, ಅತ್ಯಂತೋತ್ಸಾಹಿಯೂ, ಅತಿಬಲಿಷ್ಠನೂ, ಶಾಸ್ತ್ರವನ್ನರಿತವನೂ, ನ್ಯಾಯವಾದಿಯೂ, ಶೂರನೂ, ಧೈರ್ಯ

CC-0. Jangamwadi Math Collection. Digitized by eGangotri

ಮಹಾರಥೋ ಮಹೇಷ್ವಾಸೋ ನಾನಾಶಾಸ್ತ್ರಾರ್ಥಕೋವಿದಃ ।
ವದಾನ್ಯೋ ರೂಪಸಂಪನ್ನೋ ಯುವಾ ಲಕ್ಷಣಸಂಯುತಃ ॥ ೩೧ ॥
ಸ ಕಾಶಿರಾಜತನಯಾಮುಪಯೇಮೇ ವರಾನನಾಂ ।
ಕಾಂತಾಂ ಕಲಾವತೀಂ ನಾಮ ರೂಪಶೀಲಗುಣಾನ್ವಿತಾಂ ॥ ೩೨ ॥
ಕೃತೋದ್ವಾಹಃ ಸ ರಾಜೇಂದ್ರಃ ಸಂಪ್ರಾಪ್ಯ ನಿಜಮಂದಿರಂ ।
ರಾತ್ರೌ ತಾಂ ಶಯನಾರೂಢಾಂ ಸಂಗಮಾಯ ಸಮಾಹ್ವಯತ್ ॥ ೩೩ ॥
ಸಾ ಸ್ವಭರ್ತ್ರಾ ಸಮಾಹೂತಾ ಬಹುಶಃ ಪ್ರಾರ್ಥಿತಾ ಸತೀ ।
ನ ಬಬಂಧ ಮನಸ್ತಸ್ಮಿನ್ನ ಚಾಗಚ್ಛತ್ತದಂತಿಕಂ ॥ ೩೪ ॥
ಸಂಗಮಾಯ ಯದಾಹೂತಾ ನಾಗತಾ ನಿಜವಲ್ಲಭಾ ।
ಬಲಾದಾಹರ್ತುಕಾಮಸ್ತಾಮುದತಿಷ್ಠನ್ಮಹೀಪತಿಃ । ॥ ೩೫ ॥

ರಾಜ್ಞ್ಯುವಾಚ :—

ಮಾ ಮಾಂ ಸ್ಪೃಶ ಮಹಾರಾಜ ಕಾರಣಜ್ಞಾಂ ವ್ರತೇ ಸ್ಥಿತಾಂ ।
ಧರ್ಮಾಧರ್ಮೌ ವಿಜಾನಾಸಿ ಮಾಕಾರ್ಷೀಃ ಸಾಹಸಂ ಮಯಿ ॥ ೩೬ ॥
ಕ್ವಚಿತ್ಪ್ರಿಯೇಣ ಭುಕ್ತಂ ಯದ್ರೋಚತೇ ತು ಮನೀಷಿಣಾಂ ।
ದಂಪತ್ಯೋಃ ಪ್ರೀತಿಯೋಗೇನ ಸಂಗಮಃ ಪ್ರೀತಿವರ್ಧನಃ ॥ ೩೭ ॥

---

ವುಳ್ಳವನೂ, ಅತಿಶಯ ಕಾಂತಿಯುಳ್ಳವನೂ, ತಿರಸ್ಕರಿಸಲಶಕ್ಯನೂ, ಗಂಭೀರನೂ, ರಣಧೀರನೂ, ಮಹಾರಥನೂ, ದೊಡ್ಡ ಧನುಸ್ಸುಳ್ಳವನೂ, ಅನೇಕ ಶಾಸ್ತ್ರಾರ್ಥಗಳಲ್ಲಿ ವಿದ್ವಾಂಸನೂ, ದಾನಶೂರನೂ, ಸುಂದರನೂ, ಯುವಕನೂ, ಸುಲಕ್ಷಣನೂ ಆಗಿರುವ ದಾಶಾರ್ಹನೆಂಬ ಯಾದವೋತ್ತಮನಿದ್ದನು.

೩೨. ಅವನು ಸೌಂದರ್ಯ, ಒಳ್ಳೆಸ್ವಭಾವ, ಗುಣಗಳಿಂದ ಕಂಗೊಳಿಸುವ ಕಲಾವತಿಯೆಂಬ ಕಾಶಿರಾಜನ ಮಗಳನ್ನು ವಿವಾಹಮಾಡಿಕೊಂಡನು.

೩೩. ಆ ರಾಜನು ಅವಳನ್ನು ಮದುವೆಯಾಗಿ ತನ್ನ ಭವನವನ್ನು ಸೇರಿ ರಾತ್ರಿಯಲ್ಲಿ ಮಂಚವನ್ನೇರಿದ ಅವಳನ್ನು ಸಂಗಮಕ್ಕಾಗಿ ಕರೆದನು.

೩೪. ಅವಳನ್ನು ಅವನು ಬಹುವಾಗಿ ಕರೆದು ಬೇಡಿಕೊಂಡರೂ ಆ ರಾಣಿಯು ಅವನನ್ನು ಕಾಮಿಸಲಿಲ್ಲ. ಹತ್ತಿರ ಬರಲೂ ಇಲ್ಲ.

೩೫. ಆಗ ಆ ರಾಜನು ಅವಳು ಕರೆದರೂ ಬಾರದಿರಲು ಬಲಾತ್ಕರಿಸಲೆದ್ದನು.

೩೬. ರಾಣಿಯು ಹೇಳುತ್ತಾಳೆ:—ಮಹಾರಾಜ! ವ್ರತವನ್ನಾಚರಿಸುತ್ತಿರುವ ನನ್ನನ್ನು ಮುಟ್ಟಬೇಡ. ನೀನು ಧರ್ಮಾಧರ್ಮಗಳನ್ನರಿತಿರುವೆ. ಸಾಹಸಮಾಡಬೇಡ.

೩೭. ಜ್ಞಾನಿಗಳಿಗೆ ಕೆಲವು ವೇಳೆ ಪ್ರಿಯೋಪಭೋಗವು ಹಿತವಾಗುವುದು.

CC-0. Jangamwadi Math Collection. Digitized by eGangotri

ಪ್ರಿಯಂ ಯದಾ ಮೇ ಜಾಯೇತ ತದಾ ಸಂಗಸ್ತು ತೇ ಮಯಿ ।
ಕಾ ಪ್ರೀತಿಃ ಕಿಂ ಸುಖಂ ಪುಂಸಾಂ ಬಲಾದ್ಭೋಗೇನ ಯೋಷಿತಾಂ ॥ ೩೮ ॥
ಅಪ್ರೀತಾಂ ರೋಗಿಣೀಂ ನಾರೀಮಂತರ್ವತ್ನೀಂ ಧೃತವ್ರತಾಂ ।
ರಜಸ್ವಲಾಮಕಾಮಾಂ ಚ ನ ಕಾಮೇನ ಬಲಾತ್ಪುಮಾನ್ ॥ ೩೯ ॥
ಪ್ರೀಣನಂ ಲಾಲನಂ ಪೋಷಂ ರಂಜನಂ ಮಾರ್ದವಂ ದಯಾಂ ।
ಕೃತ್ವಾ ವಧೂಮುಪಗಮೇದ್ಯುವತೀಂ ಪ್ರೇಮವಾನ್ಪತಿಃ ।
ಯುವತೌ ಕುಸುಮೇ ಚೈವ ವಿಧೇಯಂ ಸುಖಮಿಚ್ಛಯಾ ॥ ೪೦ ॥
ಇತ್ಯುಕ್ತೋಽಪಿ ತಯಾ ಸಾಧ್ವ್ಯಾ ಸ ರಾಜಾ ಸ್ಮರವಿಹ್ವಲಃ ।
ಬಲಾದಾಕೃಷ್ಯ ತಾಂ ಹಸ್ತೇ ಪರಿರೇಭೇ ರಿರಂಸಯಾ ॥ ೪೧ ॥
ತಾಂ ಸ್ಪೃಷ್ಟಮಾತ್ರಾಂ ಸಹಸಾ ತಪ್ತಾಽಯಃಪಿಂಡಸನ್ನಿಭಾಂ ।
ನಿರ್ದಹಂತೀಮಿವಾತ್ಮಾನಂ ತತ್ಯಾಜ ಭಯವಿಹ್ವಲಃ ॥ ೪೨ ॥

ರಾಜೋವಾಚ :—

ಅಹೋ ಸುಮಹದಾಶ್ಚರ್ಯಮಿದಂ ದೃಷ್ಟಂ ತವ ಪ್ರಿಯೇ ।
ಕಥಮಗ್ನಿಸಮಂ ಜಾತಂ ವಪುಃ ಪಲ್ಲವಕೋಮಲಂ ॥ ೪೩ ॥

---

ದಂಪತಿಗಳು ಪರಸ್ಪರ ಪ್ರೀತಿಯನ್ನು ಹೊಂದಿದ್ದರೆ ಸಂಗಮವು ಸಂತೋಷವನ್ನು ಹೆಚ್ಚಿಸುವುದು.

೩೮–೩೯. ನನಗೆ ಪ್ರಿಯವಾದಾಗ ನಮ್ಮೀರ್ವರಿಗೆ ಸಂಗಮವಾಗಲಿ. ಪುರುಷರು ಬಲಾತ್ಕಾರದಿಂದ ಸ್ತ್ರೀಯನ್ನುಪಭೋಗಿಸಿದರೆ ಎಂತಹ ಪ್ರೀತಿಯೂ, ಸುಖವೂ ಆಗಬಹುದು? ಪುರುಷನು ಪ್ರೀತಿಯಿಲ್ಲದವಳೂ, ಕಾಯಿಲೆಯವಳೂ, ಗರ್ಭಿಣಿಯೂ, ನಿಯಮಸ್ಥಳೂ, ರಜಸ್ವಲೆಯೂ, ಕಾಮರಹಿತಳೂ ಆಗಿರುವ ಕಾಂತೆಯನ್ನು ಕಾಮದಿಂದ ಬಲಾತ್ಕರಿಸಕೂಡದು.

೪೦. ಸುಖವನ್ನು ಬಯಸುವ ಪ್ರೀತಿಯುಳ್ಳ ಪತಿಯು ಹೂವಿನಂತೆ ಯುವತಿಯಲ್ಲಿ ಪ್ರೀತಿ, ಲಾಲನೆ, ಪೋಷಣೆ, ರಂಜನೆ, ಮೃದುತ್ವ, ದಯೆ ಇವುಗಳನ್ನು ಮಾಡಿ ಅವಳನ್ನು ಸೇರಬೇಕು.

೪೧. ಆ ಪತಿವ್ರತೆಯು ಹೀಗೆ ಹೇಳಿದಾಗ್ಯೂ ರಾಜನು ಕಾಮಾಂಧನಾಗಿ ಕೈಯನ್ನು ಹಿಡಿದು ಬಲಾತ್ಕಾರವಾಗಿ ಎಳೆದು ಸಂಭೋಗಾಪೇಕ್ಷೆಯಿಂದ ಅವಳನ್ನು ಆಲಿಂಗಿಸಿದನು.

೪೨. ಕಾದ ಕಬ್ಬಿಣದ ಮುದ್ದೆಯಂತಿರುವ ಅವಳನ್ನು ಮುಟ್ಟಿದ ಕೂಡಲೆ ರಾಜನು ತನ್ನನ್ನು ಸುಡುತ್ತಾಳೆಂಬ ಭಯದಿಂದ ಅವಳನ್ನು ಬಿಟ್ಟನು.

೪೩. ರಾಜನು ಹೇಳುತ್ತಾನೆ:—ಪ್ರಿಯಳೆ! ಇದೇನಾಶ್ಚರ್ಯ! ಚಿಗುರಿನಂತೆ ಮೃದುವಾದ ನಿನ್ನ ದೇಹವು ಏಕೆ ಬೆಂಕಿಯಂತಾಯಿತು?

CC-0. Jangamwadi Math Collection. Digitized by eGangotri

ಇತ್ಥಂ ಸುವಿಸ್ಮಿತೋ ರಾಜಾ ಭೀತಃ ಸಾ ರಾಜವಲ್ಲಭಾ ।
ಪ್ರತ್ಯುವಾಚ ವಿಹಸ್ಯೈನಂ ವಿನಯೇನ ಶುಚಿಸ್ಮಿತಾ ॥ ೪೪ ॥
ರಾಜ್ಞ್ಯುವಾಚ :—
ರಾಜನ್ಮಮ ಪುರಾ ಬಾಲ್ಯೇ ದುರ್ವಾಸಾ ಮುನಿಪುಂಗವಃ ।
ಶೈವೀಂ ಪಂಚಾಽಕ್ಷರೀಂ ವಿದ್ಯಾಂ ಕಾರುಣ್ಯೇನೋಪದಿಷ್ಟವಾನ್ ॥ ೪೫ ॥
ತೇನ ಮಂತ್ರಾಽನುಭಾವೇನ ಮಮಾಂಗಂ ಕಲುಷೋಜ್ಝಿತಂ ।
ಸ್ಪ್ರಷ್ಟುಂ ನ ಶಕ್ಯತೇ ಪುಂಭಿಃ ಸಪಾಪೈರ್ದೈವವರ್ಜಿತೈಃ ॥ ೪೬ ॥
ತ್ವಯಾ ರಾಜನ್ಪ್ರಕೃತಿನಾ ಕುಲಟಾಗಣಿಕಾದಯಃ ।
ಮದಿರಾಸ್ವಾದನಿರತಾ ನಿಷೇವ್ಯಂತೇ ಸದಾ ಸ್ತ್ರಿಯಃ ॥ ೪೭ ॥
ನ ಸ್ನಾನಂ ಕ್ರಿಯತೇ ನಿತ್ಯಂ ನ ಮಂತ್ರೋ ಜಪ್ಯತೇ ಶುಚಿಃ ।
ನಾರಾಧ್ಯತೇ ತ್ವಯೇಶಾನಃ ಕಥಂ ಮಾಂ ಸ್ಪ್ರಷ್ಟುಮರ್ಹಸಿ ॥ ೪೮ ॥
ರಾಜೋವಾಚ :—
ತಾಂ ಸಮಾಖ್ಯಾಹಿ ಸುಶ್ರೋಣಿ ಶೈವೀಂ ಪಂಚಾಕ್ಷರೀಂ ಶುಭಾಂ ।
ವಿದ್ಯಾವಿಧ್ವಸ್ತಪಾಪೋಽಹಂ ತ್ವಯಿಚ್ಛಾಮಿ ರತಿಂ ಪ್ರಿಯೇ ॥ ೪೯ ॥

---

೪೪. ಹೀಗೆ ಆಶ್ಚರ್ಯ ಮತ್ತು ಭಯದಿಂದ ತತ್ತರಿಸುತ್ತಿರುವ ರಾಜನನ್ನು ಕುರಿತು ಆ ಸಾಧ್ವೀಮಣಿಯು ನಕ್ಕು ವಿನಯದಿಂದ ಹೀಗೆಂದಳು.

೪೫. ರಾಣಿಯು ಹೇಳುತ್ತಾಳೆ:—ಅರಸ! ಹಿಂದೆ ಬಾಲ್ಯದಲ್ಲಿ ದುರ್ವಾಸರೆಂಬ ಮುನಿವರ್ಯರು ದಯೆಯಿಂದ ನನಗೆ ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿರುವರು.

೪೬. ಆ ಮಂತ್ರದ ಪ್ರಭಾವದಿಂದ ನಿಷ್ಕಲ್ಮಷವಾದ ನನ್ನೀದೇಹವನ್ನು ದೇವತೆಗಳನ್ನು ಬಿಟ್ಟು ಬೇರೆ ಪಾಪಪುರುಷರು ಮುಟ್ಟಲಾರರು.

೪೭. ದೊರೆಯೆ! ನೀನು ರಾಜನ ಸ್ವಭಾವದಿಂದ ಯಾವಾಗಲೂ ಮದ್ಯಪಾನನಿರತರಾದ ವ್ಯಭಿಚಾರಿಣಿಯರು, ಸೂಳೆಯರು ಇವರೇ ಮೊದಲಾದವರನ್ನು ರಮಿಸುತ್ತಿರುವೆ.

೪೮. ನೀನು ನಿತ್ಯವೂ ಸ್ನಾನಮಾಡುವುದಿಲ್ಲ. ಶುದ್ಧನಾಗಿ ಮಂತ್ರವನ್ನು ಜಪಿಸುವುದಿಲ್ಲ. ಮಹೇಶ್ವರನನ್ನು ಆರಾಧಿಸುವುದಿಲ್ಲ. ಹೀಗಿರುವ ನೀನು ಹೇಗೆ ನನ್ನನ್ನು ಮುಟ್ಟಲರ್ಹನಾಗುವೆ?

೪೯. ರಾಜನು ಹೇಳುತ್ತಾನೆ:—ಸುಂದರಿ! ಆ ಶಿವಪಂಚಾಕ್ಷರಿ ಮಂತ್ರವನ್ನು ನನಗೆ ಹೇಳು. ಪ್ರಿಯಳೆ! ಅದರಿಂದ ನಾನು ಪಾಪಮುಕ್ತನಾಗಿ ನಿನ್ನ ಸಂಗವನ್ನು ಬಯಸುವೆನು.

CC-0. Jangamwadi Math Collection. Digitized by eGangotri

ರಾಜ್ಞ್ಯುವಾಚ :—

ನಾಽಹಂ ತವೋಪದೇಶಂ ವೈ ಕುರ್ಯಾಂ ಮಮ ಗುರುರ್ಭವಾನ್ ।
ಉಪಾತಿಷ್ಠ ಗುರುಂ ರಾಜನ್ಗರ್ಗಂ ಮಂತ್ರವಿದಾಂ ವರಂ ॥ ೫೦ ॥

ಸೂತ ಉವಾಚ :—

ಇತಿ ಸಂಭಾಷಮಾಣೌ ತೌ ದಂಪತೀ ಗರ್ಗಸನ್ನಿಧಿಂ ।
ಪ್ರಾಪ್ಯ ತಚ್ಚರಣೌ ಮೂರ್ಧ್ನಾ ವವಂದಾತೇ ಕೃತಾಂಜಲೀ ॥ ೫೧ ॥
ಅಥ ರಾಜಾ ಗುರುಂ ಪ್ರೀತಮಭಿಪೂಜ್ಯ ಪುನಃ ಪುನಃ ।
ಸಮಾಚಷ್ಟ ವಿನೀತಾತ್ಮಾ ರಹಸ್ಯಾತ್ಮಮನೋರಥಂ ॥ ೫೨ ॥

ರಾಜೋವಾಚ :—

ಕೃತಾರ್ಥಂ ಮಾಂ ಕುರು ಗುರೋ ಸಂಪ್ರಾಪ್ತಂ ಕರುಣಾರ್ದ್ರಧೀಃ ।
ಶೈವೀಂ ಪಂಚಾಕ್ಷರೀಂ ವಿದ್ಯಾಮುಪದೇಷ್ಟುಂ ತ್ವಮರ್ಹಸಿ ॥ ೫೩ ॥
ಅನಾಜ್ಞಾತಂ ಯದಾ ಜ್ಞಾತಂ ಯತ್ಕೃತಂ ರಾಜಕರ್ಮಣಾ ।
ತತ್ಪಾಪಂ ಯೇನ ಶುಧ್ಯೇತ ತನ್ಮಂತ್ರಂ ದೇಹಿ ಮೇ ಗುರೋ ॥ ೫೪ ॥
ಏವಮಭ್ಯರ್ಥಿತೋ ರಾಜ್ಞಾ ಗರ್ಗೋ ಬ್ರಾಹ್ಮಣಪುಂಗವಃ ।
ತೌ ನಿನಾಯ ಮಹಾಪುಣ್ಯಂ ಕಾಲಿಂದ್ಯಾಸ್ತಟಮುತ್ತಮಂ ॥ ೫೫ ॥
ತತ್ರ ಪುಣ್ಯತರೋರ್ಮೂಲೇ ನಿಷಣ್ಣೋಽಥ ಗುರುಃ ಸ್ವಯಂ ।
ಪುಣ್ಯತೀರ್ಥಜಲೇ ಸ್ನಾತಂ ರಾಜಾನಂ ಸಮುಪೋಷಿತಂ ॥ ೫೬ ॥

---

೫೦. ರಾಣಿಯು ಹೇಳುತ್ತಾಳೆ:—ಅರಸ! ನೀನು ನನಗೆ ಪೂಜ್ಯ (ಗುರು) ನಾದುದರಿಂದ ನಾನು ಉಪದೇಶಮಾಡುವುದಿಲ್ಲ. ಮಂತ್ರವನ್ನರಿತವರಲ್ಲಿ ವರಿಷ್ಠರಾದ ಗರ್ಗಾಚಾರ್ಯರನ್ನು ಗುರುಗಳನ್ನಾಗಿ ಹೊಂದು.

೫೧. ಸೂತನು ಹೇಳುತ್ತಾನೆ:—ಹೀಗೆ ಮಾತಾಡುತ್ತಿರುವ ಆ ದಂಪತಿಗಳು ಗರ್ಗರನ್ನು ಸಮೀಪಿಸಿ ಕೈಮುಗಿದು ಸಾಷ್ಟಾಂಗಪ್ರಣಾಮಗೈದರು.

೫೨. ಬಳಿಕ ರಾಜನು ವಿನಯದಿಂದ ಸಂತೋಷಗೊಂಡ ಗುರುವನ್ನು ಪೂಜಿಸಿ ಗುಟ್ಟಿನಲ್ಲಿ ತನ್ನ ಅಭಿಲಾಷೆಯನ್ನು ತಿಳಿಸಿದನು.

೫೩–೫೪. ರಾಜನು ಹೇಳುತ್ತಾನೆ:—ಗುರುಗಳೆ! ದಯೆಯಿಂದ ಶಿವಪಂಚಾಕ್ಷರೀಮಂತ್ರವನ್ನುಪದೇಶಿಸಿ ತಮ್ಮನ್ನು ಮರೆಹೊಕ್ಕಿರುವ ನನ್ನನ್ನು ಕೃತಕೃತ್ಯನನ್ನಾಗಿಸಿರಿ. ರಾಜಕಾರ್ಯವನ್ನು ನೆರವೇರಿಸುವಾಗ ತಿಳಿದೊ ತಿಳಿಯದೆಯೊ ಮಾಡಿದ ಪಾಪವನ್ನು ನೀಗಿಸುವ ಆ ಮಂತ್ರವನ್ನು ನನಗೆ ಉಪದೇಶಿಸಿರಿ.

೫೫. ರಾಜನು ಹೀಗೆ ಪ್ರಾರ್ಥಿಸಲು ಗರ್ಗಾಚಾರ್ಯರು ಆ ರಾಜದಂಪತಿಗಳನ್ನು ಯಮುನಾ ದಡಕ್ಕೆ ಕರೆದುಕೊಂಡು ಹೋದರು.

೫೬–೫೭. ಅಲ್ಲಿ ಪವಿತ್ರವಾದ ಮರದ ಬುಡದಲ್ಲಿ ಗರ್ಗರು ತಾವು ಕೂತು


CC-0. Jangamwadi Math Collection. Digitized by eGangotri

ಪ್ರಾಙ್ಮುಖಂ ಚೋಪವೇಶ್ಯಾಽಥ ನತ್ವಾ ಶಿವಪದಾಂಬುಜಂ ।
ತನ್ಮಸ್ತಕೇ ಕರಂ ನ್ಯಸ್ಯ ದದೌ ಮಂತ್ರಂ ಶಿವಾತ್ಮಕಂ ॥ ೫೭ ॥
ತನ್ಮಂತ್ರಧಾರಣಾದೇವ ತದ್ಗುರೋರ್ಹಸ್ತಸಂಗಮಾತ್ ।
ನಿರ್ಯಯುಸ್ತಸ್ಯ ವಪುಷೋ ವಾಯಸಾಃ ಶತಕೋಟಯಃ ॥ ೫೮ ॥
ತೇ ದಗ್ಧಪಕ್ಷಾಃ ಕ್ರೋಶಂತೋ ನಿಪತಂತೋ ಮಹೀತಲೇ ।
ಭಸ್ಮೀಭೂತಾಸ್ತತಸ್ಸರ್ವೇ ದೃಶ್ಯಂತೇ ಸ್ಮ ಸಹಸ್ರಶಃ ॥ ೫೯ ॥
ದೃಷ್ಟ್ವಾ ತದ್ವಾಯಸಕುಲಂ ದಹ್ಯಮಾನಂ ಸುವಿಸ್ಮಿತೌ ।
ರಾಜಾ ಚ ರಾಜಮಹಿಷೀ ತಂ ಗುರುಂ ಪರ್ಯಪೃಚ್ಛತಾಂ ॥ ೬೦ ॥
ಭಗವನ್ನಿದಮಾಶ್ಚರ್ಯಂ ಕಥಂ ಜಾತಂ ಶರೀರತಃ ।
ವಾಯಸಾನಾಂ ಕುಲಂ ದೃಷ್ಟಂ ಕಿಮೇತತ್ಸಾಧು ಭಣ್ಯತಾಂ ॥ ೬೧ ॥

ಶ್ರೀ ಗುರುರುವಾಚ :—

ರಾಜನ್ಭವಸಹಸ್ರೇಷು ಭವತಾ ಪರಿಧಾವತಾ ।
ಸಂಚಿತಾನಿ ದುರಂತಾನಿ ಸಂತಿ ಪಾಪಾನ್ಯನೇಕಶಃ ॥ ೬೨ ॥
ತೇಷು ಜನ್ಮಸಹಸ್ರೇಷು ಯಾನಿ ಪುಣ್ಯಾನಿ ಸಂತಿ ತೇ ।
ತೇಷಾಮಾಧಿಕ್ಯತಃ ಕ್ವಾಽಪಿ ಜಾಯತೇ ಪುಣ್ಯಯೋನಿಷು ॥ ೬೩ ॥

---

ಕೊಂಡು ಯಮುನೆಯ ಪವಿತ್ರ ಜಲದಲ್ಲಿ ಮಿಂದು ಉಪವಾಸ ಮಾಡಿದ ದೊರೆಯನ್ನು ಪೂರ್ವಮುಖವಾಗಿ ಕುಳ್ಳಿರಿಸಿ ಶಿವನ ಚರಣಕಮಲವನ್ನು ವಂದಿಸಿ ಅವನ ಶಿರಸ್ಸಿನಲ್ಲಿ ಕರವನ್ನಿಟ್ಟು ಪಂಚಾಕ್ಷರೀಮಂತ್ರವನ್ನುಪದೇಶಿಸಿದರು.

೫೮. ಆ ಗುರುಗಳ ಕೈಯ ಸಂಬಂಧದಿಂದ ಮಂತ್ರವನ್ನುಪದೇಶಪಡೆದ ಕೂಡಲೆ ಆ ರಾಜನ ದೇಹದಿಂದ ನೂರಾರುಕೋಟಿ ಕಾಗೆಗಳು ಹೊರಟುವು.

೫೯. ಆ ಸಾವಿರಾರು ಕಾಗೆಗಳು ರೆಕ್ಕೆ ಸುಟ್ಟು ಕೂಗಿಕೊಳ್ಳುತ್ತ ನೆಲದ ಮೇಲೆ ಬಿದ್ದು ಬೂದಿಯಾಗಿ ಕಾಣಿಸಿಕೊಂಡುವು.

೬೦. ಹಾಗೆ ಸುಟ್ಟುಹೋಗುತ್ತಿರುವ ಕಾಗೆಗಳನ್ನು ಕಂಡು ರಾಜದಂಪತಿಗಳು ಗುರುಗಳನ್ನು ಪ್ರಶ್ನಿಸಿದರು.

೬೧. ಪೂಜ್ಯರೆ! ಇದೇನಾಶ್ಚರ್ಯ! ಶರೀರದಿಂದ ಕಾಗೆಗಳು ಹೊರಟುವಷ್ಟೆ. ಇದರಿಂದ ಒಳ್ಳೆಯದಾಗುವುದೊ ಹೇಗೆ? ಹೇಳಿರಿ.

೬೨. ಶ್ರೀ ಗುರುವು ಹೇಳುತ್ತಾನೆ:—ಅರಸ! ನೀನು ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳು ಹೇರಳವಾಗಿವೆ.

೬೩. ಜೀವನು ಆ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದ ಆಧಿಕ್ಯದಿಂದ ಯಾವುದೊ ಪವಿತ್ರವಾದ ಯೋನಿಯಲ್ಲಿ ಜನಿಸುವನು.

CC-0. Jangamwadi Math Collection. Digitized by eGangotri

ತಥಾ ಪಾಪೀಯಸೀಂ ಯೋನಿಂ ಕ್ವಚಿತ್ಪಾಪೇನ ಗಚ್ಛತಿ ।
ಸಾಮ್ಯೇ ಪುಣ್ಯಾಸ್ಯಯೋಶ್ಚೈವ ಮಾನುಷೀಂ ಯೋನಿಮಾಪ್ತವಾನ್ ॥೬೪॥
ಶೈವೀ ಪಂಚಾಕ್ಷರೀ ವಿದ್ಯಾ ಯದಾ ತೇ ಹೃದಯಂ ಗತಾ ।
ಅಘಾನಾಂ ಕೋಟಯಸ್ತ್ವತ್ತಃ ಕಾಕರೂಪೇಣ ನಿರ್ಗತಾಃ ॥ ೬೫ ॥
ಕೋಟಯೋ ಬ್ರಹ್ಮಹತ್ಯಾನಾಮಗಮ್ಯಾಗಮ್ಯಕೋಟಯಃ ।
ಸ್ವರ್ಣಸ್ತೇಯಸುರಾಪಾನಭ್ರೂಣಹತ್ಯಾದಿ ಕೋಟಯಃ ।
ಭವಕೋಟಿಸಹಸ್ರೇಷು ಯೇಽನ್ಯೇ ಪಾತಕರಾಶಯಃ ॥ ೬೬ ॥
ಕ್ಷಣಾದ್ಭಸ್ಮೀಭವಂತ್ಯೇವ ಶೈವೇ ಪಂಚಾಕ್ಷರೇ ಧೃತೇ ।
ಅಸಂಸ್ತ್ವಮದ್ಯ ರಾಜೇಂದ್ರ ದಗ್ಧಾಃ ಪಾತಕಕೋಟಯಃ ॥ ೬೭ ॥
ಅನಯಾ ಸಹ ಪೂತಾತ್ಮಾ ವಿಹರಸ್ವ ಯಥಾ ಸುಖಂ ।
ಇತ್ಯಾಭಾಷ್ಯ ಮುನಿಶ್ರೇಷ್ಠಸ್ತಂ ಮಂತ್ರಮುಪದಿಶ್ಯ ಚ ॥ ೬೮ ॥
ತಾಭ್ಯಾಂ ವಿಸ್ಮಿತಚಿತ್ತಾಭ್ಯಾಂ ಸಹಿತಃ ಸ್ವಗೃಹಂ ಯಯೌ ।
ಗುರುವರ್ಯಮನುಜ್ಞಾಪ್ಯ ಮುದಿತೌ ತೌ ಚ ದಂಪತೀ ॥ ೬೯ ॥
ತತಃ ಸ್ವಭವನಂ ಪ್ರಾಪ್ಯ ರೇಜತುಃ ಸ್ಮ ಮಹಾದ್ಯುತೀ ।
ರಾಜಾ ದೃಢಂ ಸಮಾಶ್ಲಿಷ್ಯ ಪತ್ನೀಂ ಚಂದನಶೀತಲಾಂ ।
ಸಂತೋಷಂ ಪರಮಂ ಲೇಭೇ ನಿಸ್ಸ್ವಃ ಪ್ರಾಪ್ಯ ಯಥಾ ಧನಂ ॥ ೭೦ ॥

---

೬೪. ಹಾಗೆಯೇ ಪಾಪವು ಹೆಚ್ಚಾಗಿದ್ದರೆ ಪಾಪಯೋನಿಗಳಲ್ಲಿ ಹುಟ್ಟು ವನು. ನೀನು ಪುಣ್ಯಪಾಪಗಳನ್ನು ಸಮವಾಗಿ ಸಂಪಾದಿಸಿರುವುದರಿಂದ ಮನುಷ್ಯನಾಗಿ ಜನಿಸಿದೆ.

೬೫. ಈಗ ಶಿವಪಂಚಾಕ್ಷರೀವಿದ್ಯೆಯು ನಿನ್ನ ಹೃದಯದಲ್ಲಿ ನಾಟದ ಕೂಡಲೆ ಆ ಪಾಪರಾಶಿಗಳು ಕಾಗೆಗಳ ರೂಪದಿಂದ ನಿನ್ನ ದೇಹದಿಂದ ಹೊರಟುವು.

೬೬–೬೭. ಅನೇಕ ಜನ್ಮಗಳಲ್ಲೆಸಗಿದ ಬ್ರಹ್ಮಹತ್ಯಾ, ಅಗಮ್ಯಾಗಮನ, ಸುವರ್ಣಚೌರ್ಯ, ಸುರಾಪಾನ, ಶಿಶುಹತ್ಯಾ ಇವುಗಳೂ, ಇತರ ಪಾಪಕೋಟಿ ಗಳೂ ಶಿವಪಂಚಾಕ್ಷರಮಂತ್ರದ ಉಪದೇಶವಾದ ಕ್ಷಣದಲ್ಲಿಯೇ ಬೂದಿ ಯಾಗುವುವು. ಮಹಾರಾಜ! ನಿನ್ನ ಪಾಪಗಳೆಲ್ಲ ಈಗ ಭಸ್ಮವಾದುವು.

೬೮–೭೦. ಈಗ ಪವಿತ್ರನಾದ ನೀನು ಈ ಸತಿಯೊಡನೆ ಸುಖದಿಂದ ವಿಹರಿಸು. ಹೀಗೆಂದು ಗರ್ಗಮುನಿವರ್ಯರು ಆಶ್ಚರ್ಯಗೊಂಡ ಆ ದಂಪತಿ ಗಳೊಡನೆ ತಮ್ಮ ಮನೆಗೆ ತೆರಳಿದರು. ಆ ದಂಪತಿಗಳು ಗುರುವಿನ ಅನುಮತಿ ಯನ್ನು ಪಡೆದು ಸಂತೋಷಗೊಂಡು ತಮ್ಮ ಮನೆಯನ್ನು ಸೇರಿ ಅತಿ ತೇಜಸ್ಸಿ ನಿಂದ ಕಂಗೊಳಿಸಿದರು. ದೊರೆಯು ಗಂಧದಂತೆ ತಣ್ಣಗಿರುವ ಸತಿಯನ್ನು

CC-0. Jangamwadi Math Collection. Digitized by eGangotri

ಅಶೇಷವೇದೋಪನಿಷತ್ಪುರಾಣ
ಶಾಸ್ತ್ರಾಽವತಂಸೋಽಯಮಘಾಂತಕಾರೀ ।
ಪಂಚಾಕ್ಷರಸ್ಯೈವ ಮಹಾಪ್ರಭಾವೋ
ಮಯಾ ಸಮಾಸಾತ್ಕಥಿತೋ ವರಿಷ್ಠಃ ॥ ೭೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಪಂಚಾಕ್ಷರಮಂತ್ರ ಮಾಹಾತ್ಮ್ಯವರ್ಣನಂ" ನಾಮ ಪ್ರಥಮೋಽಧ್ಯಾಯಃ

---

ಆಲಿಂಗಿಸಿ ಧನವನ್ನು ಪಡೆದ ದರಿದ್ರನಂತೆ ಅತ್ಯಂತ ಸಂತೋಷವನ್ನು ಹೊಂದಿದನು.

೭೧. ಸಕಲ ವೇದ, ಉಪನಿಷತ್, ಪುರಾಣ, ಶಾಸ್ತ್ರ ಇವುಗಳಿಗೆ ಅಲಂಕಾರದಂತಿರುವ ಈ ಪಂಚಾಕ್ಷರಮಂತ್ರದ ಮಾಹಾತ್ಮ್ಯೆಯನ್ನು ನಾನು ನಿನಗೆ ಸಮಗ್ರವಾಗಿ ಹೇಳಿದೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಪಂಚಾಕ್ಷರಮಂತ್ರಮಾಹಾತ್ಮ್ಯವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

### ಗೋಕರ್ಣಮಹಿಮಾನುವರ್ಣನಂ

ಸೂತ ಉವಾಚ :—

ಅಥಾಽನ್ಯದಪಿ ವಕ್ಷ್ಯಾಮಿ ಮಾಹಾತ್ಮ್ಯಂ ತ್ರಿಪುರದ್ವಿಷಃ ।
ಶ್ರುತಮಾತ್ರೇಣ ಯೇನಾಽಽಶು ಛಿದ್ಯಂತೇ ಸರ್ವಸಂಶಯಾಃ ॥ ೧ ॥
ಅತಃ ಪರತರಂ ನಾಽಸ್ತಿ ಕಿಂಚಿತ್ಪಾಪವಿಶೋಧನಂ ।
ಸರ್ವಾನಂದಕರಂ ಶ್ರೀಮತ್ಸರ್ವಕಾಮಾಽರ್ಥಸಾಧನಂ ॥ ೨ ॥
ದೀರ್ಘಾಯುರ್ವಿಜಯಾರೋಗ್ಯಭುಕ್ತಿಮುಕ್ತಿಫಲಪ್ರದಂ ।
ಯದನನ್ಯೇನ ಭಾವೇನ ಮಹೇಶಾರಾಧನಂ ಪರಂ ॥ ೩ ॥
ಆರ್ದ್ರಾಣಾಮಪಿ ಶುಷ್ಕಾಣಾಮಲ್ಪಾನಾಂ ಮಹತಾಮಪಿ ।
ಏತದೇವ ವಿನಿರ್ದಿಷ್ಟಂ ಪ್ರಾಯಶ್ಚಿತ್ತಮಘೋತ್ತಮಂ ॥ ೪ ॥
ಸರ್ವಕಾಲೇಽಪ್ಯಭೇದ್ಯಾನಾಮಘಾನಾಂ ಕ್ಷಯಕಾರಣಂ ।
ಮಹಾಮುನಿವಿನಿರ್ದಿಷ್ಟೈಃ ಪ್ರಾಯಶ್ಚಿತ್ತೈರಘೋತ್ತಮೈಃ ॥ ೫ ॥
ಇದಮೇವ ಪರಂ ಶ್ರೇಯಃ ಸರ್ವಶಾಸ್ತ್ರವಿನಿಶ್ಚಿತಂ ।
ಯದ್ಭಕ್ತ್ಯಾ ಪರಮೇಶಸ್ಯ ಪೂಜನಂ ಪರಮೋದಯಂ ॥ ೬ ॥

---

### ಕನ್ನಡದ ಅನುವಾದ

#### ಗೋಕರ್ಣಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ:—ಕೇಳಿದ ಕೂಡಲೇ ಸಕಲ ಸಂಶಯಗಳನ್ನು ಪರಿಹರಿಸುವ ಪರಮೇಶ್ವರನ ಮತ್ತೊಂದು ಮಾಹಾತ್ಮ್ಯೆಯನ್ನು ಹೇಳುವೆನು.

೨–೩. ಅನನ್ಯಭಾವದಿಂದ ಪರಮೇಶ್ವರನ ಪೂಜೆಯನ್ನು ಮಾಡಿದರೆ ಸಮಸ್ತಾನಂದವೂ, ಸಕಲೇಷ್ಟಾರ್ಥಗಳೂ, ದೀರ್ಘಾಯುಸ್ಸೂ, ಜಯವೂ, ಆರೋಗ್ಯವೂ, ಭುಕ್ತಿಮುಕ್ತಿಗಳೂ ಲಭಿಸುವುವು. ಇದಕ್ಕಿಂತ ಪಾಪಪರಿಹಾರಕ ವಾದುದು ಮತ್ತೊಂದಿಲ್ಲ.

೪. ಹೊಸ ಮತ್ತು ಹಳೆಯ, ಸ್ವಲ್ಪ ಮತ್ತು ಹೆಚ್ಚಾದ ಪಾಪಗಳಿಗೆ ಪ್ರಾಯಶ್ಚಿತ್ತವು ಇದಕ್ಕಿಂತ ಉತ್ತಮವಾದುದು ಬೇರೊಂದಿಲ್ಲ.

೫–೬. ಸಮಸ್ತ ಕಾಲಗಳಲ್ಲಿ ಅಭೇದ್ಯಗಳಾದ ಪಾಪಗಳನ್ನು ನಾಶಮಾಡುವ ಮುನಿವರ್ಯರು ಹೇಳಿದ ಉತ್ತಮ ಪ್ರಾಯಶ್ಚಿತ್ತಗಳಲ್ಲಿ ಪರಮೇಶ್ವರನನ್ನು ಭಕ್ತಿಯಿಂದ ಪೂಜಿಸುವುದೇ ಉತ್ತಮವಾದ ಪ್ರಾಯಶ್ಚಿತ್ತವೆಂದು ಸಕಲ ಶಾಸ್ತ್ರಗಳಲ್ಲಿ ನಿರ್ಣೀತವಾಗಿದೆ.

CC-0. Jangamwadi Math Collection. Digitized by eGangotri

ಜಾನತಾಽಜಾನತಾ ವಾಽಪಿ ಯೇನ ಕೇನಾಽಪಿ ಹೇತುನಾ ।
ಯತ್ಕಿಂಚಿದಪಿ ದೇವಾಯ ಕೃತಂ ಕರ್ಮ ವಿಮುಕ್ತಿದಂ ॥ ೭ ॥
ಮಾಘೇ ಕೃಷ್ಣಚತುರ್ದಶ್ಯಾಮುಪವಾಸೋಽತಿದುರ್ಲಭಃ ।
ತತ್ರಾಽಪಿ ದುರ್ಲಭಂ ಮನ್ಯೇ ರಾತ್ರೌ ಜಾಗರಣಂ ನೃಣಾಂ ॥ ೮ ॥
ಅತೀವ ದುರ್ಲಭಂ ಮನ್ಯೇ ಶಿವಲಿಂಗಸ್ಯ ದರ್ಶನಂ ।
ಸುದುರ್ಲಭತರಂ ಮನ್ಯೇ ಪೂಜನಂ ಪರಮೇಶಿತುಃ ॥ ೯ ॥
ಭವಕೋಟಿಶತೋತ್ಪನ್ನಪುಣ್ಯರಾಶಿವಿಪಾಕತಃ ।
ಲಭ್ಯತೇ ವಾ ಪುನಸ್ತತ್ರ ಬಿಲ್ವಪತ್ರಾರ್ಚನಂ ವಿಭೋಃ ॥ ೧೦ ॥
ವರ್ಷಾಣಾಮಯುತಂ ಯೇನ ಸ್ನಾತಂ ಗಂಗಾಸರಿಜ್ಜಲೇ ।
ಸಕೃದ್ಬಿಲ್ವಾರ್ಚನೇನೈವ ತತ್ಫಲಂ ಲಭತೇ ನರಃ ॥ ೧೧ ॥
ಯಾನಿ ಯಾನಿ ತು ಪುಣ್ಯಾನಿ ಲೀನಾನೀಹ ಯುಗೇ ಯುಗೇ ।
ಮಾಘೇಽಸಿತಚತುರ್ದಶ್ಯಾಂ ತಾನಿ ತಿಷ್ಠಂತಿ ಕೃತ್ಸ್ನಶಃ ॥ ೧೨ ॥
ಏತಾಮೇವ ಪ್ರಶಂಸಂತಿ ಲೋಕೇ ಬ್ರಹ್ಮಾದಯಃ ಸುರಾಃ ।
ಮುನಯಶ್ಚ ವಸಿಷ್ಠಾದ್ಯಾ ಮಾಘೇಽಸಿತಚತುರ್ದಶೀಂ ॥ ೧೩ ॥
ಅತ್ರೋಪವಾಸಃ ಕೇನಾಽಪಿ ಕೃತಃ ಕ್ರತುಶತಾಽಧಿಕಃ ।
ರಾತ್ರೌ ಜಾಗರಣಂ ಪುಣ್ಯಂ ಕಲ್ಪಕೋಟಿತಪೋಽಧಿಕಂ ॥ ೧೪ ॥

---

೭. ತಿಳಿದೊ, ತಿಳಿಯದೆಯೊ, ಯಾವುದಾದರೊಂದು ಕಾರಣದಿಂದ ಪರಮೇಶ್ವರನಿಗಾಗಿ ಮಾಡಿದ ಕರ್ಮವು ಮೋಕ್ಷದಾಯಕವು.

೮–೧೦. ಮಾಘ ಕೃಷ್ಣ ಚತುರ್ದಶೀ ದಿನ ಉಪವಾಸವೂ, ರಾತ್ರಿ ಜಾಗರಣವೂ, ಶಿವಲಿಂಗದರ್ಶನವೂ, ಪರಮೇಶ್ವರನ ಪೂಜೆಯೂ ಅತಿದುರ್ಲಭವಾದುವು. ಅನೇಕ ಕೋಟಿ ಜನ್ಮಗಳಲ್ಲೆಸಗಿದ ಪುಣ್ಯರಾಶಿಯ ಪರಿಣಾಮದಿಂದ ಶಿವನ ಬಿಲ್ವಪತ್ರಾರ್ಚನೆಯು ಲಭಿಸುವುದು.

೧೧. ಒಂದು ಸಾರಿ ಬಿಲ್ವಾರ್ಚನೆಯಿಂದ ನರನು ಹತ್ತುಸಾವಿರವರ್ಷ ಗಂಗೆಯಲ್ಲಿ ಮಿಂದ ಫಲವನ್ನು ಪಡೆಯುವನು.

೧೨. ಯುಗಯುಗಗಳ ಪುಣ್ಯಗಳೆಲ್ಲ ಮಾಘ ಕೃಷ್ಣ ಚತುರ್ದಶೀ ದಿನ ಒಟ್ಟಿಗೆ ಸೇರುವುವು.

೧೩. ಈ ಮಾಘ ಕೃಷ್ಣ ಚತುರ್ದಶಿಯನ್ನು ಬ್ರಹ್ಮಾದಿದೇವತೆಗಳೂ, ವಸಿಷ್ಠಾದಿಮುನಿಗಳೂ ಹೊಗಳುತ್ತಾರೆ.

೧೪. ಯಾರಾದರೂ ಈದಿನ ಉಪವಾಸ ಮಾಡಿದರೆ ಅದು ನೂರು ಯಜ್ಞಗಳಿಗಿಂತಲೂ ಹೆಚ್ಚಾಗುವುದು. ರಾತ್ರಿಯಲ್ಲಿ ಮಾಡಿದ ಜಾಗರಣೆಯು ಅನೇಕ ಕಲ್ಪಗಳಲ್ಲಿ ಆಚರಿಸಿದ ತಪಸ್ಸಿಗಿಂತ ಅಧಿಕವು.

CC-0. Jangamwadi Math Collection. Digitized by eGangotri

ಏಕೇನ ಬಿಲ್ವಪತ್ರೇಣ ಶಿವಲಿಂಗಾರ್ಚನಂ ಕೃತಂ ।
ತ್ರೈಲೋಕ್ಯೇ ತಸ್ಯ ಪುಣ್ಯಸ್ಯ ಕೋ ವಾ ಸಾದೃಶ್ಯಮಿಚ್ಛತಿ ॥ ೧೫ ॥
ಅತ್ರಾऽನುವರ್ಣ್ಯತೇ ಗಾಥಾ ಪುಣ್ಯಾ ಪರಮಶೋಭನಾ ।
ಗೋಪನೀಯಾऽಪಿ ಕಾರುಣ್ಯಾದ್ಗೌತಮೇನ ಪ್ರಕಾಶಿತಾ ॥ ೧೬ ॥
ಇಕ್ಷ್ವಾಕುವಂಶಜಃ ಶ್ರೀಮಾನ್ರಾಜಾ ಪರಮಧಾರ್ಮಿಕಃ ।
ಆಸೀನ್ಮಿತ್ರಸಹೋನಾಮ ಶ್ರೇಷ್ಠಃ ಸರ್ವಧನುರ್ಭೃತಾಂ ॥ ೧೭ ॥
ಸ ರಾಜಾ ಸಕಲಾऽಸ್ತ್ರಜ್ಞಃ ಶಾಸ್ತ್ರಜ್ಞಃ ಶ್ರುತಿಪಾರಗಃ ।
ವೀರೋऽತ್ಯಂತಬಲೋತ್ಸಾಹೋ ನಿತ್ಯೋದ್ಯೋಗೀ ದಯಾನಿಧಿಃ ॥ ೧೮ ॥
ಪುಣ್ಯಾನಾಮಿವ ಸಂಘಾತಸ್ತೇಜಸಾಮಿವ ಪಂಜರಃ ।
ಆಶ್ಚರ್ಯಾಣಾಮಿವ ಕ್ಷೇತ್ರಂ ಯಸ್ಯ ಮೂರ್ತಿರ್ವಿರಾಜತೇ ॥ ೧೯ ॥
ಹೃದಯಂ ದಯಯಾಕ್ರಾಂತಂ ಶ್ರಿಯಾಕ್ರಾಂತಂ ಚ ತದ್ವಪುಃ ।
ಚರಣೌ ಯಸ್ಯ ಸಾಮಂತಚೂಡಾಮಣಿಮರೀಚಿಭಿಃ ॥ ೨೦ ॥
ಏಕದಾ ಮೃಗಯಾ ಕೇಲಿಲೋಲುಪಃ ಸ ಮಹೀಪತಿಃ ।
ವಿವೇಶ ಗಹ್ವರಂ ಘೋರಂ ಬಲೇನ ಮಹತಾ ವೃತಃ ॥ ೨೧ ॥

---

೧೫. ಬಿಲ್ವಪತ್ರೆಯಿಂದ ಮಾಡಿದ ಒಂದು ಶಿವಲಿಂಗಾರ್ಚನೆಯ ಪುಣ್ಯಕ್ಕೆ ಎಣೆಯಾದುದು ತ್ರೈಲೋಕ್ಯದಲ್ಲಿ ಯಾವುದೂ ಇಲ್ಲ.

೧೬. ಈ ವಿಷಯದಲ್ಲಿ ಗೋಪ್ಯವಾದಾಗ್ಯೂ ಗೌತಮರು ದಯೆಯಿಂದ ಪ್ರಕಾಶಗೊಳಿಸಿದ ಒಂದು ಕಥೆಯು ಹೇಳಲ್ಪಟ್ಟದೆ.

೧೭. ಇಕ್ಷ್ವಾಕುವಂಶದ ಅತಿಧಾರ್ಮಿಕನಾದ ಧನುರ್ಧಾರಿಗಳಲ್ಲಿ ಶ್ರೇಷ್ಠನೆನಿಸಿದ ಮಿತ್ರಸಹನೆಂಬ ದೊರೆಯಿದ್ದನು.

೧೮. ಅವನು ಸಕಲಾಸ್ತ್ರಗಳನ್ನೂ, ಶಾಸ್ತ್ರಗಳನ್ನೂ ಅರಿತವನೂ, ವೇದ ಪಾರಂಗತನೂ, ವೀರನೂ, ಅತ್ಯಂತ ಬಲಿಷ್ಠನೂ, ಉತ್ಸಾಹಿಯೂ, ಯಾವಾಗಲೂ ಉದ್ಯಮಶೀಲನೂ, ದಯಾಳುವೂ ಆಗಿದ್ದನು.

೧೯. ಇವನ ದೇಹವು ಪುಣ್ಯಗಳ ಸಮೂಹವೊ, ತೇಜಸ್ಸಿನ ಪಂಜರವೊ, ಆಶ್ಚರ್ಯಗಳ ಆವಾಸಸ್ಥಾನವೊ ಎಂಬಂತೆ ವಿರಾಜಿಸುತ್ತಿದ್ದಿತು.

೨೦. ಇವನ ಹೃದಯವು ದಯೆಯಿಂದಲೂ, ದೇಹವು ಕಾಂತಿಯಿಂದಲೂ, ಪಾದಗಳು ಸಾಮಂತರಾಜರ ಮಸ್ತಕರತ್ನದ ಕಾಂತಿಗಳಿಂದಲೂ ಆಕ್ರಾಂತವಾಗಿದ್ದುವು.

೨೧. ಒಂಥಾನೊಂದು ವೇಳೆ ಆ ರಾಜನು ಬೇಟೆಯಾಡಲಾಶೆಯಿಂದ ಮಹಾಸೈನ್ಯದೊಡನೆ ಭಯಂಕರವಾದ ಕಾಡನ್ನು ಹೊಕ್ಕನು.

CC-0. Jangamwadi Math Collection. Digitized by eGangotri

ತತ್ರ ವಿವ್ಯಾಧ ವಿಶಿಖೈಃ ಶಾರ್ದೂಲಾನ್ಗವಯಾನ್ಮೃಗಾನ್ ।
ರುರೂನ್ವರಾಹಾನ್ಮಹಿಷಾನ್ಮೃಗೇಂದ್ರಾನಪಿ ಭೂರಿಶಃ ॥ ೨೨ ॥
ಸ ರಥೀ ಮೃಗಯಾಸಕ್ತೋ ಗಹನಂ ದಂಶಿತಶ್ಚರನ್ ।
ಕಮಪಿ ಜ್ವಲನಾಕಾರಂ ನಿಜಘಾನ ನಿಶಾಚರಂ ॥ ೨೩ ॥
ತಸ್ಯಾನುಜಃ ಶುಚಾವಿಷ್ಟೋ ದೃಷ್ಟ್ವಾ ದೂರೇ ತಿರೋಹಿತಃ ।
ಭ್ರಾತರಂ ನಿಹತಂ ದೃಷ್ಟ್ವಾ ಚಿಂತಯಾಮಾಸ ಚೇತಸಾ ॥ ೨೪ ॥
ನನ್ವೇಷ ರಾಜಾ ದುರ್ಧರ್ಷೋ ದೇವಾನಾಂ ರಕ್ಷಸಾಮಪಿ ।
ಛದ್ಮನೈವ ಪ್ರಜೇತವ್ಯೋ ಮಮ ಶತ್ರುರ್ನ ಚಾನ್ಯಥಾ ॥ ೨೫ ॥
ಇತಿ ವ್ಯವಸಿತಃ ಪಾಪೋ ರಾಕ್ಷಸೋ ಮನುಜಾಕೃತಿಃ ।
ಆಸಸಾದ ನೃಪಶ್ರೇಷ್ಠಮುತ್ಪಾತ ಇವ ಮೂರ್ತಿಮಾನ್ ॥ ೨೬ ॥
ತಂ ವಿನಮ್ರಾಕೃತಿಂ ದೃಷ್ಟ್ವಾ ಭೃತ್ಯತಾಂ ಕರ್ತುಮಾಗತಂ ।
ಚಕ್ರೇ ಮಹಾನಸಾಧ್ಯಕ್ಷಮಜ್ಞಾನಾತ್ಸ ಮಹೀಪತಿಃ ॥ ೨೭ ॥
ಅಥ ತಸ್ಮಿನ್ವನೇ ರಾಜಾ ಕಿಂಚಿತ್ಕಾಲಂ ವಿಹೃತ್ಯ ಸಃ ।
ನಿವೃತ್ತೋ ಮೃಗಯಾಂ ಹಿತ್ವಾ ಸ್ವಪುರೀಂ ಪುನರಾಯಯೌ ॥ ೨೮ ॥

---

೨೨. ಅಲ್ಲಿ ಬಾಣಗಳಿಂದ ಹುಲಿ, ಗವಯ, ಜಿಂಕೆ, ಕರಿಮಚ್ಚೆಯುಳ್ಳ ಜಿಂಕೆ, ಹಂದಿ, ಕೋಣ, ಸಿಂಹ ಇವುಗಳನ್ನು ಬಹಳವಾಗಿ ಹೊಡೆದನು.

೨೩. ರಥದಲ್ಲಿ ಕುಳಿತು ಸಾಮಗ್ರಿಗಳನ್ನು ಸಿದ್ಧಮಾಡಿಕೊಂಡು ಕಾಡಿನಲ್ಲಿ ಸಂಚರಿಸುತ್ತಿರುವ ಆ ರಾಜನು ಬೆಂಕಿಯಂತಿರುವ ಒಬ್ಬ ರಾಕ್ಷಸನನ್ನು ಕೊಂದನು.

೨೪. ದೂರದಲ್ಲಿ ಅವಿತುಕೊಂಡಿರುವ ಅವನ ತಮ್ಮನು ಅಣ್ಣನು ಕೊಲ್ಲಲ್ಪಟ್ಟಿದನ್ನು ನೋಡಿ ದುಃಖಗೊಂಡು ಆಲೋಚಿಸಿದನು.

೨೫. ದೇವತೆಗಳಿಗೂ, ರಾಕ್ಷಸರಿಗೂ ತಡೆಯಲಾಗದ ಈ ರಾಜನನ್ನು ಕಪಟದಿಂದಲೇ ಜಯಿಸಬೇಕು.

೨೬. ಹೀಗೆ ನಿಶ್ಚಯಿಸಿ ಪಾಪಿಯಾದ ರಾಕ್ಷಸನು ಮನುಷ್ಯದೇಹವನ್ನು ತಾಳಿ ದೇಹಗೊಂಡ ಉತ್ಪಾತದಂತೆ ರಾಜನನ್ನು ಹೊಂದಿದನು.

೨೭. ಆ ರಾಜನು ಅವನ ನಿಜಸ್ಥಿತಿಯನ್ನರಿಯದೆ ಸೇವಕನ ಕಾರ್ಯವನ್ನು ಮಾಡಲು ನಮ್ರತೆಯಿಂದ ಬಂದ ಅವನನ್ನು ಅಡಿಗೆಮನೆಯ ಯಜಮಾನನ್ನಾಗಿರಿಸಿದನು.

೨೮. ಬಳಿಕ ಆ ರಾಜನು ಆ ಕಾಡಿನಲ್ಲಿ ಸ್ವಲ್ಪ ಹೊತ್ತು ವಿಹರಿಸಿ ಬೇಟೆಯನ್ನು ಬಿಟ್ಟು ತನ್ನ ಪಟ್ಟಣಕ್ಕೆ ಬಂದನು.

CC-0. Jangamwadi Math Collection. Digitized by eGangotri

ತಸ್ಯ ರಾಜೇಂದ್ರಮುಖ್ಯಸ್ಯ ಮದಯಂತೀತಿ ನಾಮತಃ ।
ದಮಯಂತೀ ನಲಸ್ಯೇವ ವಿದಿತಾ ವಲ್ಲಭಾ ಸತೀ ॥ ೨೯ ॥
ಏತಸ್ಮಿನ್ನಂತರೇ ರಾಜಾ ನಿಮಂತ್ರ್ಯ ಮುನಿಪುಂಗವಂ ।
ವಸಿಷ್ಠಂ ಗೃಹಮಾನಿನ್ಯೇ ಸಂಪ್ರಾಪ್ತೇ ಪಿತೃವಾಸರೇ ॥ ೩೦ ॥
ರಕ್ಷಸಾ ಸೂದರೂಪೇಣ ಸಂಮಿಶ್ರಿತನರಾಮಿಷಂ ।
ಶಾಕಾಮಿಷಂ ಪುರಃ ಕ್ಷಿಪ್ತಂ ದೃಷ್ಟ್ವಾ ಗುರುರಥಾಽಬ್ರವೀತ್ ॥ ೩೧ ॥
ಧಿಗ್ಧಿಙ್ನರಾಮಿಷಂ ರಾಜಂಸ್ತ್ವಯೈತಚ್ಛದ್ಮಕಾರಿಣಾ ।
ಖಲೇನೋಪಹೃತಂ ಮೇಽದ್ಯ ಅತೋ ರಕ್ಷೋ ಭವಿಷ್ಯಸಿ ॥ ೩೨ ॥
ರಕ್ಷಃಕೃತಮವಿಜ್ಞಾಯ ಶಪ್ತ್ವೈವಂ ಸ ಗುರುಸ್ತತಃ ।
ಪುನರ್ವಿಮೃಶ್ಯ ತಂ ಶಾಪಂ ಚಕಾರ ದ್ವಾದಶಾಬ್ದಿಕಂ ॥ ೩೩ ॥
ರಾಜಾಽಪಿ ಕೋಪಿತಃ ಪ್ರಾಹ ಯದಿದಂ ಮೇ ನ ಚೇಷ್ಟಿತಂ ।
ನ ಜ್ಞಾತಂ ಚ ವೃಥಾ ಶಪ್ತೋ ಗುರುಂ ಚೈವ ಶಪಾಮ್ಯಹಂ ॥ ೩೪ ॥
ಇತ್ಯಪೋಽಂಜಲಿನಾದಾಯ ಗುರುಂ ಶಪ್ತುಂ ಸಮುದ್ಯತಃ ।
ಪತಿತ್ವಾ ಪಾದಯೋಸ್ತಸ್ಯ ಮದಯಂತೀ ನ್ಯವಾರಯತ್ ॥ ೩೫ ॥

---

೨೯. ಆ ಮಹಾರಾಜನಿಗೆ ನಲನಿಗೆ ದಮಯಂತಿಯಂತೆ ಮದಯಂತಿಯೆಂಬ ಪ್ರಿಯಭಾರ್ಯೆಯಿದ್ದಳು.

೩೦. ಈ ಮಧ್ಯದಲ್ಲಿ ತಂದೆ ಶ್ರಾದ್ಧದಿನವು ಬರಲು ಆ ರಾಜನು ವಸಿಷ್ಠ ಮುನಿವರ್ಯರನ್ನು ನಿಮಂತ್ರಿಸಿ ಮನೆಗೆ ಕರೆತಂದನು.

೩೧. ಆ ಗುರುಗಳು ಅಡಿಗೆಯವನಾದ ರಾಕ್ಷಸನು ಮನುಷ್ಯಮಾಂಸವನ್ನು ಸೇರಿಸಿ ಬಡಿಸಿದ ತರಕಾರಿ ಮೇಲೋಗರವನ್ನು ನೋಡಿ ಹೀಗೆಂದರು.

೩೨. ಮಹಾರಾಜ! ಛೀ. ಕಪಿಟಿಯೂ, ದುಷ್ಟನೂ ಆದ ನೀನು ನನಗೆ ಮನುಷ್ಯಮಾಂಸವನ್ನು ಬಡಿಸಿರುವೆ. ಆದುದರಿಂದ ನೀನು ರಾಕ್ಷಸನಾಗು.

೩೩. ಆ ವಸಿಷ್ಠರು ರಾಕ್ಷಸನು ಮಾಡಿದ ಮೋಸವನ್ನರಿಯದೆ ಹೀಗೆ ಶಪಿಸಿ ಅನಂತರ ಆಲೋಚಿಸಿ ಆ ಶಾಪವು ಹನ್ನೆರಡು ವರ್ಷದವರೆಗೆಮಾತ್ರ ಇರುವುದಾಗಿ ಮಾರ್ಪಡಿಸಿದರು.

೩೪. ರಾಜನೂ ಕೋಪಿಸಿಕೊಂಡು "ಈ ದುಷ್ಕಾರ್ಯವನ್ನು ನಾನು ಮಾಡಿದುದಲ್ಲವೆಂದರಿಯದೆ ನನ್ನನ್ನು ಶಪಿಸಿದ ಗುರುವನ್ನು ನಾನೂ ಶಪಿಸುವೆನು."

೩೫. ಎಂದು ಶಾಪ ಜಲವನ್ನು ಕೈಯಲ್ಲಿ ತೆಗೆದುಕೊಂಡು ಗುರುವನ್ನು ಶಪಿಸಲುದ್ಯುಕ್ತನಾದ ಪತಿಯ ಪಾದಗಳಲ್ಲಿ ಮದಯಂತಿಯು ಬಿದ್ದು ಅವನನ್ನು ತಡೆದಳು.

CC-0. Jangamwadi Math Collection. Digitized by eGangotri

ತತೋ ನಿವೃತ್ತಃ ಶಾಪಾಚ್ಚ ತಸ್ಯಾ ವಚನಗೌರವಾತ್ ।
ತತ್ಯಾಜ ಪಾದಯೋರಂಭಃ ಪಾದೌ ಕಲ್ಮಷತಾಂ ಗತೌ ॥ ೩೬ ॥
ಕಲ್ಮಷಾಂಘ್ರಿರಿತಿ ಖ್ಯಾತಸ್ತತಃ ಪ್ರಭೃತಿ ಪಾರ್ಥಿವಃ ।
ಬಭೂವ ಗುರುಶಾಪೇನ ರಾಕ್ಷಸೋ ವನಗೋಚರಃ ॥ ೩೭ ॥
ಸ ಬಿಭ್ರದ್ರಾಕ್ಷಸಂ ರೂಪಂ ಘೋರಂ ಕಾಲಾಂತಕೋಪಮಂ ।
ಚಖಾದ ವಿವಿಧಾನ್ ಜಂತೂನ್ಮಾನುಷಾದೀನ್ವನೇಚರಃ ॥ ೩೮ ॥
ಸ ಕದಾಚಿದ್ವನೇ ಕ್ವಾಪಿ ರಮಮಾಣೌ ಕಿಶೋರಕೌ ।
ಅಪಶ್ಯದಂತಕಾಕಾರೋ ನವೋಢೌ ಮುನಿದಂಪತೀ ॥ ೩೯ ॥
ರಾಕ್ಷಸೋ ಮಾನುಷಾಹಾರಃ ಕಿಶೋರಂ ಮುನಿನಂದನಂ ।
ಜಗ್ಧುಂ ಜಗ್ರಾಹ ಶಾಪಾರ್ತೋ ವ್ಯಾಘ್ರೋ ಮೃಗಶಿಶುಂ ಯಥಾ ॥ ೪೦ ॥
ರಕ್ಷೋಗೃಹೀತಂ ಭರ್ತಾರಂ ದೃಷ್ಟ್ವಾ ಭೀತಾಽಥ ತತ್ಪ್ರಿಯಾ ।
ಉವಾಚ ಕರುಣಂ ಬಾಲಾ ಕ್ರಂದಂತೀ ಭೃಶವೇಪಿತಾ ॥ ೪೧ ॥
ಭೋ ಭೋ ಮಾ ಮಾಕೃಥಾಃ ಪಾಪಂ ಸೂರ್ಯವಂಶಯಶೋಧರ ।
ಮದಯಂತೀಪತಿಸ್ತ್ವಂ ಹಿ ರಾಜೇಂದ್ರೋ ನ ತು ರಾಕ್ಷಸಃ ॥ ೪೨ ॥

---

೩೬. ಬಳಿಕ ರಾಜನು ಅವಳ ಮಾತಿನ ಗೌರವದಿಂದ ಶಾಪವನ್ನೀಯದೆ ಆ ನೀರನ್ನು ಕಾಲುಗಳಲ್ಲಿ ಬಿಡಲು ಕಾಲುಗಳು ಕಲುಷಿತವಾದುವು.

೩೭. ಅದು ಮೊದಲ್ಗೊಂಡು ರಾಜನು ಕಲ್ಮಾಷಪಾದನೆಂದು ಪ್ರಸಿದ್ಧನಾಗಿ ಗುರುಶಾಪದಿಂದ ವನದಲ್ಲಿ ಸಂಚರಿಸುವ ರಾಕ್ಷಸನಾದನು.

೩೮. ಅವನು ಪ್ರಳಯಕಾಲದ ಯಮನಿಗೆ ಸಮಾನವಾದ ಭಯಂಕರ ರಾಕ್ಷಸ ರೂಪದಿಂದ ಕಾಡಿನಲ್ಲಿ ಸಂಚರಿಸುತ್ತ ಮನುಷ್ಯರೇ ಮೊದಲಾದ ನಾನಾ ವಿಧ ಜಂತುಗಳನ್ನು ತಿನ್ನುತ್ತಿದ್ದನು.

೩೯. ಯಮನಂತಿರುವ ಅವನು ಒಂದಾನೊಂದು ದಿನ ಒಂದೆಡೆಯಲ್ಲಿ ವಿನೋದಪಡುತ್ತಿರುವ ನೂತನವಾಗಿ ವಿವಾಹಮಾಡಿಕೊಂಡ ಬಾಲ ಮುನಿ ದಂಪತಿಗಳನ್ನು ಕಂಡನು.

೪೦. ಮನುಷ್ಯಭಕ್ಷಕನಾದ ರಾಕ್ಷಸನು ಹುಲಿಯು ಜಿಂಕೆಮರಿಯನ್ನು ಹಿಡಿಯುವಂತೆ ತಿನ್ನುವುದಕ್ಕಾಗಿ ಮುನಿಕುಮಾರನನ್ನು ಹಿಡಿದುಕೊಂಡನು.

೪೧. ಆಗ ಆ ಮುನಿಕುಮಾರನ ಪತ್ನಿಯು ರಾಕ್ಷಸನು ಹಿಡಿದುಕೊಂಡ ಪತಿಯನ್ನು ಕಂಡು ಭಯದಿಂದ ನಡುಗುತ್ತಲೂ, ಅಳುತ್ತಲೂ ದೀನಧ್ವನಿಯಿಂದ ಹೀಗೆಂದಳು.

೪೨. ಸೂರ್ಯವಂಶದ ಕೀರ್ತಿವಂತನಾದ ದೊರೆಯೆ! ನೀನು ಪಾಪ ಕಾರ್ಯವನ್ನೆಸಗಬೇಡ. ರಾಜೇಂದ್ರ! ನೀನು ಮದಯಂತಿಯ ಪತಿಯು, ರಾಕ್ಷಸನಲ್ಲ.

CC-0. Jangamwadi Math Collection. Digitized by eGangotri

ನ ಖಾದ ಮನು ಭರ್ತಾರಂ ಪ್ರಾಣಾತ್ಪ್ರಿಯತಮಂ ಪ್ರಭೋ ।
ಆರ್ತಾನಾಂ ಶರಣಾರ್ತಾನಾಂ ತ್ವಮೇವ ಹಿ ಯತೋ ಗತಿಃ ॥ ೪೩ ॥
ಪಾಪಾನಾಮಿವ ಸಂಘಾತೈಃ ಕಿಂ ಮೇ ದುಷ್ಟೈರ್ಜಡಾಽಸುಭಿಃ ।
ದೇಹೇನ ಚಾಽತಿಭಾರೇಣ ವಿನಾ ಭರ್ತ್ರಾ ಮಹಾತ್ಮನಾ ॥ ೪೪ ॥
ಮಲೀಮಸೇನ ಪಾಪೇನ ಪಾಂಚಭೌತೇನ ಕಿಂ ಸುಖಂ ।
ಬಾಲೋಽಯಂ ವೇದವಿಚ್ಛಾಂತಸ್ತಪಸ್ವೀ ಬಹುಶಾಸ್ತ್ರವಿತ್ ॥ ೪೫ ॥
ಅತೋಽಸ್ಯ ಪ್ರಾಣದಾನೇನ ಜಗದ್ರಕ್ಷಾ ತ್ವಯಾ ಕೃತಾ ।
ಕೃಪಾಂ ಕುರು ಮಹಾರಾಜ ಬಾಲಾಯಾಂ ಬ್ರಾಹ್ಮಣಸ್ತ್ರಿಯಾಂ ॥ ೪೬ ॥
ಅನಾಥಕೃಪಣಾರ್ತೇಷು ಸಘೃಣಾಃ ಖಲು ಸಾಧವಃ ।
ಇತ್ಥಮಭ್ಯರ್ಥಿತಃ ಸೋಽಪಿ ಪುರುಷಾದಃ ಸ ನಿರ್ಘೃಣಃ ॥ ೪೭ ॥
ಚಖಾದ ಶಿರ ಉತ್ಕೃತ್ಯ ವಿಪ್ರಪುತ್ರಂ ದುರಾಶಯಃ ।
ಅಥ ಸಾಧ್ವೀ ಕೃಶಾ ದೀನಾ ವಿಲಪ್ಯ ಭೃಶದುಃಖಿತಾ ॥ ೪೮ ॥
ಆಹೃತ್ಯ ಭರ್ತುರಸ್ಥೀನಿ ಚಿತಾಂ ಚಕ್ರೇ ತಥೋಲ್ಬಣಾಂ ।
ಭರ್ತಾರಮನುಗಚ್ಛಂತೀ ಸಾ ವಿಶಂತೀ ಹುತಾಶನಂ ॥ ೪೯ ॥
ರಾಜಾನಂ ರಾಕ್ಷಸಾಕಾರಂ ಶಾಪಾಽಸ್ತ್ರೇಣ ಜಘಾನ ತಂ ।
ರೇ ರೇ ಪಾರ್ಥಿವ ಪಾಪಾತ್ಮಂಸ್ತ್ವಯಾ ಮೇ ಭಕ್ಷಿತಃ ಪತಿಃ ॥ ೫೦ ॥

---

೪೩. ದುಃಖಿತರಾಗಿ ಮರೆಹೊಕ್ಕಿರುವವರಿಗೆ ಗತಿಯಾಗಿರುವ ನೀನು ನನ್ನ ಪ್ರಾಣಕ್ಕಿಂತಲೂ ಪ್ರಿಯನಾದ ಪತಿಯನ್ನು ಭಕ್ಷಿಸಬೇಡ.

೪೪–೪೬. ಮಹಾತ್ಮನಾದ ಪತಿಯನ್ನು ಕಳೆದುಕೊಂಡಮೇಲೆ ಪಾಪದ ರಾಶಿಯಂತಿರುವ ದುಷ್ಟಪ್ರಾಣದಿಂದಲೂ, ಅತಿ ಭಾರವಾದ ದೇಹದಿಂದಲೂ ನನಗೆ ಏನುಪ್ರಯೋಜನವು? ಮಲಿನವಾದ ಪಾಂಚಭೌತಿಕ ದೇಹದಿಂದಾಗುವ ಸುಖವಾದರೂ ಏನು? ಈ ಮುನಿಕುಮಾರನು ವೇದಜ್ಞನೂ, ಶಾಂತನೂ, ತಪಸ್ವಿಯೂ, ಬಹಳ ಶಾಸ್ತ್ರಗಳನ್ನರಿತವನೂ ಆಗಿರುವುದರಿಂದ ಇವನ ಪ್ರಾಣವನ್ನು ದಾನಮಾಡಿದರೆ ನೀನು ಪ್ರಪಂಚವನ್ನು ಕಾಪಾಡಿದಂತಾಗುವುದು. ಮಹಾರಾಜ! ಬಾಲೆಯಾದ ಈ ಬ್ರಾಹ್ಮಣಕುಮಾರಿಯಲ್ಲಿ ದಯೆಮಾಡು.

೪೭–೫೧. ಸಜ್ಜನರು, ದಿಕ್ಕಿಲ್ಲದವರು, ದೀನರು, ದುಃಖಗೊಂಡವರು ಇವರಲ್ಲಿ ದಯೆಯುಳ್ಳವರು. ಎಂದು ಬೇಡಿಕೊಂಡರೂ ಆ ನಿರ್ದಯನಾದ ರಾಕ್ಷಸನು ಬ್ರಾಹ್ಮಣಕುಮಾರನ ತಲೆಯನ್ನು ಕತ್ತರಿಸಿ ತಿಂದನು. ಬಳಿಕ ಪತಿವ್ರತೆಯಾದ ದೀನ ಮುನಿಕುಮಾರಿಯು ಬಹುವಾಗಿ ಗೋಳಾಡಿ ಗಂಡನ ಮೂಳೆಗಳನ್ನು ತೆಗೆದುಕೊಂಡು ಭಯಂಕರವಾದ ಚಿತಿಯನ್ನು ರಚಿಸಿದ್ದಳು. ಸಹಗಮನಮಾಡುವವಳಾಗಿ ಅಗ್ನಿಯನ್ನು ಪ್ರವೇಶಿಸುತ್ತ ರಾಕ್ಷಸಾಕೃತಿಯುಳ್ಳ

CC-0. Jangamwadi Math Collection. Digitized by eGangotri

ಅತಃ ಪತಿವ್ರತಾಯಾಸ್ತ್ವಂ ಶಾಪಂ ಭುಂಕ್ಷ್ವ ಯಥೋಲ್ಬಣಂ ।
ಅದ್ಯ ಪ್ರಭೃತಿ ನಾರೀಷು ಯದಾ ತ್ವಮಪಿ ಸಂಗತಃ ।
ತದಾ ಮೃತಿಸ್ತವೇತ್ಯುಕ್ತ್ವಾ ವಿವೇಶ ಜ್ವಲನಂ ಸತೀ ॥ ೫೧ ॥
ಸೋಽಪಿ ರಾಜಾ ಗುರೋಃ ಶಾಪಮುಪಭುಜ್ಯ ಕೃತಾಽವಧಿಂ ।
ಪುನಃ ಸ್ವರೂಪಮಾದಾಯ ಸ್ವಗೃಹಂ ಮುದಿತೋ ಯಯೌ ॥ ೫೨ ॥
ಜ್ಞಾತ್ವಾ ವಿಪ್ರಸತೀಶಾಪಂ ತತ್ಪತ್ನೀರತಿಲಾಲಸಂ ।
ಪತಿಂ ನಿವಾರಯಾಮಾಸ ವೈಧವ್ಯಾದತಿಬಿಭ್ಯತೀ ॥ ೫೩ ॥
ಅನಪತ್ಯಃ ಸ ನಿರ್ವಿಣ್ಣೋ ರಾಜ್ಯಭೋಗೇಷು ಪಾರ್ಥಿವಃ ।
ವಿಸೃಜ್ಯ ಸಕಲಾಂ ಲಕ್ಷ್ಮೀಂ ಯಯೌ ಭೂಯೋಽಪಿ ಕಾನನಂ ॥ ೫೪ ॥
ಸೂರ್ಯವಂಶಪ್ರತಿಷ್ಠಿತ್ಯೈ ವಸಿಷ್ಠೋ ಮುನಿಸತ್ತಮಃ ।
ತಸ್ಯಾಮುತ್ಪಾದಯಾಮಾಸ ಮದಯಂತ್ಯಾಂ ಸುತೋತ್ತಮಂ ॥ ೫೫ ॥
ವಿಸೃಷ್ಟರಾಜ್ಯೋ ರಾಜಾಽಪಿ ವಿಚರನ್ಸಕಲಾಂ ಮಹೀಂ ।
ಆಯಾಂತೀಂ ಪೃಷ್ಠತೋಽಪಶ್ಯತ್ಪಿಶಾಚೀಂ ಘೋರರೂಪಿಣೀಂ ॥ ೫೬ ॥
ಸಾ ಹಿ ಮೂರ್ತಿಮತೀ ಘೋರಾ ಬ್ರಹ್ಮಹತ್ಯಾ ದುರತ್ಯಯಾ ।
ಯದಾಽಸೌ ಶಾಪವಿಭ್ರಷ್ಟೋ ಮುನಿಪುತ್ರಮಭಕ್ಷಯತ್ ॥ ೫೭ ॥

---

ಆ ರಾಜನನ್ನು ಹೀಗೆ ಶಪಿಸಿದಳು. ಎಲೈ ಪಾಪಿಯಾದ ದೊರೆಯೆ! ನೀನು ನನ್ನ ಪತಿಯನ್ನು ತಿಂದಿರುವೆ. ಆದುದರಿಂದ ಪತಿವ್ರತೆಯಾದ ನನ್ನ ಉಲ್ಬಣ ಶಾಪವನ್ನನುಭವಿಸು. ಇದು ಮೊದಲ್ಗೊಂಡು ನೀನು ಯಾವಾಗ ಸ್ತ್ರೀಸಂಗ ಮಾಡುವಿಯೊ, ಆಗ ಸಾಯುವೆ. ಎಂದು ಹೇಳಿ ಅಗ್ನಿಯನ್ನು ಪ್ರವೇಶಿಸಿದಳು.

೫೨. ಆ ರಾಜನೂ ಮುನಿಯು ವಿಧಿಸಿದ ಅವಧಿಯವರೆಗೆ ಶಾಪವನ್ನನುಭವಿಸಿ ಮರಳಿ ತನ್ನ ಮೊದಲಿನ ನೃಪರೂಪವನ್ನು ಪಡೆದು ಸಂತೋಷದಿಂದ ಮನೆಗೆ ಹೋದನು.

೫೩. ಅಲ್ಲಿ ಅವನ ಸತಿಯು ವಿಪ್ರಪತ್ನಿಯ ಶಾಪವನ್ನು ತಿಳಿದು ವೈಧವ್ಯದಿಂದ ಭಯಗೊಳ್ಳುತ್ತ ರತಿಸುಖದಲ್ಲಿ ಆಶೆಯುಳ್ಳ ಪತಿಯನ್ನು ತಡೆದಳು.

೫೪. ಮಕ್ಕಳಿಲ್ಲದ ಆ ರಾಜನು ರಾಜ್ಯಭೋಗಗಳಲ್ಲಿ ಬೇಸರಗೊಂಡು ಸಕಲ ಸಂಪತ್ತನ್ನು ತ್ಯಜಿಸಿ ಮರಳಿ ಕಾಡಿಗೆ ತೆರಳಿದನು.

೫೫. ಮುನಿವರ್ಯರಾದ ವಸಿಷ್ಠರು ಸೂರ್ಯವಂಶವು ಉಳಿಯುವುದಕ್ಕಾಗಿ ಆ ಮದಯಂತಿಯಲ್ಲಿ ಉತ್ತಮ ಪುತ್ರನನ್ನು ಉತ್ಪಾದನೆಮಾಡಿದರು.

೫೬. ರಾಜ್ಯವನ್ನು ತ್ಯಜಿಸಿದ ರಾಜನು ಸಕಲ ಭೂಮಂಡಲದಲ್ಲಿ ಸಂಚರಿಸುತ್ತ ಹಿಂಬಾಲಿಸುತ್ತಿರುವ ಘೋರ ಪಿಶಾಚಿಯನ್ನು ಕಂಡನು.

೫೭–೫೮. ಬಳಿಕ ಮುನಿವರ್ಯರಿಂದ ರಾಜನು ತಾನು ಶಾಪದೋಷದಿಂದ

CC-0. Jangamwadi Math Collection. Digitized by eGangotri

ತೇನಾತ್ಮಕರ್ಮಣಾ ಯಾಂತೀಂ ಬ್ರಹ್ಮಹತ್ಯಾಂ ಸ ಪೃಷ್ಠತಃ ।
ಬುಬುಧೇ ಮುನಿವರ್ಯಾಣಾಮುಪದೇಶೇನ ಭೂಪತಿಃ ॥ ೩೮ ॥
ತಸ್ಯಾ ನಿರ್ವೇಶಮನ್ವಿಚ್ಛನ್ರಾಜಾ ನಿರ್ವಿಣ್ಣಮಾನಸಃ ।
ನಾನಾಕ್ಷೇತ್ರಾಣಿ ತೀರ್ಥಾನಿ ಚಚಾರ ಬಹುವತ್ಸರಂ ॥ ೩೯ ॥
ಯದಾ ಸರ್ವೇಷು ತೀರ್ಥೇಷು ಸ್ನಾತ್ವಾಪಿ ಚ ಮುಹುರ್ಮುಹುಃ ।
ನ ನಿವೃತ್ತಾ ಬ್ರಹ್ಮಹತ್ಯಾ ಮಿಥಿಲಾಮಾಯಯೌ ತದಾ ।
ಬಾಹ್ಯೋದ್ಯಾನಗತಸ್ತಸ್ಯಾಶ್ಚಿಂತಯಾ ಪರಯಾರ್ದಿತಃ ॥ ೬೦ ॥
ದದರ್ಶ ಮುನಿಮಾಯಾಂತಂ ಗೌತಮಂ ವಿಮಲಾಶಯಂ ।
ಹುತಾಶನಮಿವಾಽಶೇಷತಪಸ್ವಿಜನಸೇವಿತಂ ॥ ೬೧ ॥
ವಿವಸ್ವಂತಮಿವಾಽತ್ಯಂತಂ ಘನದೋಷತಮೋನುದಂ ।
ಶಶಾಂಕಮಿವ ನಿಃಶಂಕಮವದಾತಗುಣೋದಯಂ ॥ ೬೨ ॥
ಮಹೇಶ್ವರಮಿವ ಶ್ರೀಮದ್ದ್ವಿಜರಾಜಕಲಾಧರಂ ।
ಶಾಂತಂ ಶಿಷ್ಯಗಣೋಪೇತಂ ತಪಸಾಮೇಕಭಾಜನಂ ॥ ೬೩ ॥
ಉಪಸೃತ್ಯ ಸ ರಾಜೇಂದ್ರಃ ಪ್ರಣನಾಮ ಮುಹುರ್ಮುಹುಃ ।
ಗೌತಮೋಽಪಿ ಮುನಿಶ್ರೇಷ್ಠೋ ರಾಜಾನಂ ರವಿವಂಶಜಂ ॥ ೬೪ ॥
ಅಭಿನಂದ್ಯ ಮುನಿಃ ಪ್ರೀತ್ಯಾ ಸಸ್ಮಿತಂ ಸಮಭಾಷತ ॥ ೬೫ ॥

---

ಮುನಿಕುಮಾರನನ್ನು ಭಕ್ಷಿಸಿದ ಕಾರಣ ಉಂಟಾದ ದೇಹಧಾರಿಯಾದ ಘೋರ ಬ್ರಹ್ಮಹತ್ಯೆಯೇ ಅದೆಂಬುದನ್ನರಿತನು.

೩೯. ಅದರಿಂದ ಆ ರಾಜನು ವ್ಯಥೆಗೊಂಡು ಆ ಬ್ರಹ್ಮಹತ್ಯೆಯ ಪರಿಹಾರಕ್ಕಾಗಿ ಅನೇಕ ಸಂವತ್ಸರಕಾಲ ನಾನಾ ಕ್ಷೇತ್ರಗಳಲ್ಲಿಯೂ, ತೀರ್ಥಗಳಲ್ಲಿಯೂ ಸಂಚರಿಸಿದನು.

೬೦–೬೩. ಸಕಲ ತೀರ್ಥಗಳಲ್ಲಿ ಅನೇಕಬಾರಿ ಮಿಂದರೂ ಬ್ರಹ್ಮಹತ್ಯೆಯು ಕಳೆಯದಿರಲು ಮಿಥಿಲಾಪಟ್ಟಣಕ್ಕೆ ಬಂದು ಅಲ್ಲಿ ಹೊರಗಿನ ಉದ್ಯಾನದಲ್ಲಿ ಚಿಂತಾಕ್ರಾಂತನಾಗಿ ಆ ರಾಜನು ಬರುತ್ತಿರಲು, ವಿಶುದ್ಧಾಭಿಪ್ರಾಯವುಳ್ಳವನೂ, ಬೆಂಕಿಯಂತೆ ಸಕಲ ಮುನಿಗಳಿಂದ ಸೇವಿತನೂ, ವಿಪುಲದೋಷಗಳೆಂಬ ಕತ್ತಲೆಯನ್ನು ನಾಶಗೊಳಿಸುವ ಸೂರ್ಯನಂತಿರುವವನೂ, ಚಂದ್ರನಂತೆ ಶುದ್ಧಗುಣನೂ, ಚಂದ್ರಮೌಳಿಯಾದ ಮಹೇಶ್ವರನಂತಿರುವವನೂ, ಶಾಂತನೂ, ಶಿಷ್ಯ ಸಮೂಹಗಳಿಂದ ಸಹಿತನೂ, ತಪಸ್ಸಿಗೆ ಮುಖ್ಯಾಶ್ರಯನೂ ಆಗಿರುವ ಗೌತಮ ಮುನಿಯನ್ನು ನೋಡಿದನು.

೬೪–೬೫. ಅವನು ಅವರನ್ನು ಸಮೀಪಿಸಿ ಅನೇಕಸಾರಿ ವಂದಿಸಿದನು. ಗೌತಮಮುನಿವರ್ಯನೂ ಸೂರ್ಯವಂಶೋತ್ಪನ್ನನಾದ ಆ ದೊರೆಯನ್ನು ಪ್ರೀತಿಯಿಂದ ಅಭಿನಂದಿಸಿ ಮುಗುಳ್ನಗೆಯಿಂದ ಮಾತಾಡಿದನು.

CC-0. Jangamwadi Math Collection. Digitized by eGangotri

ಗೌತಮ ಉವಾಚ:—

ಕಚ್ಚಿತ್ತೇ ಕುಶಲಂ ರಾಜನ್ಕಚ್ಚಿತ್ತೇ ಪದಮವ್ಯಯಂ ॥ ೬೬ ॥
ಕುಶಲಿನ್ಯಃ ಪ್ರಜಾಃ ಕಚ್ಚಿದವರೋಧಜನೋಽಪಿ ವಾ ।
ಕಿಮರ್ಥಮಿಹ ಸಂಪ್ರಾಪ್ತೋ ವಿಸೃಜ್ಯ ಸಕಲಾಂ ಶ್ರಿಯಂ ॥ ೬೭ ॥
ಕಿಂ ಚ ಧ್ಯಾಯಸಿ ಭೋ ರಾಜನ್ದೀರ್ಘಮುಷ್ಣಂ ಚ ನಿಃಶ್ವಸನ್ ॥ ೬೮ ॥

ರಾಜೋವಾಚ:—

ಸರ್ವೇ ಕುಶಲಿನೋ ಬ್ರಹ್ಮನ್ವಯಂ ತ್ವದನುಕಂಪಯಾ ।
ರಾಜ್ಞಾಮುತ್ತಮವಂಶ್ಯಾನಾಂ ಬ್ರಹ್ಮಾಯತ್ತಾ ಹಿ ಸಂಪದಃ ।
ಕಿಂ ನು ಮಾಂ ಬಾಧತೇ ತ್ವೇಷಾ ಪಿಶಾಚೀ ಘೋರರೂಪಿಣೀ ॥ ೬೯ ॥
ಅಲಕ್ಷಿತಾ ಮದಪರೈರ್ಭರ್ತ್ಸಯಂತೀ ಪದೇ ಪದೇ ।
ಯನ್ಮಯಾ ಶಾಪದಗ್ಧೇನ ಕೃತಮಂಹೋ ದುರತ್ಯಯಂ ।
ನ ಶಾಂತಿರ್ಜಾಯತೇ ತಸ್ಯ ಪ್ರಾಯಶ್ಚಿತ್ತಸಹಸ್ರಕೈಃ ॥ ೭೦ ॥
ಇಷ್ಟಾಶ್ಚ ವಿವಿಧಾ ಯಜ್ಞಾಃ ಕೋಶಸರ್ವಸ್ವದಕ್ಷಿಣಾಃ ।
ಸರಿತ್ಸರಾಂಸಿ ಸ್ನಾತಾನಿ ಯಾನಿ ಪೂಜ್ಯಾನಿ ಭೂತಲೇ ।
ನಿಷೇವಿತಾನಿ ಸರ್ವಾಣಿ ಕ್ಷೇತ್ರಾಣಿ ಭ್ರಮತಾ ಮಯಾ ॥ ೭೧ ॥
ಜಪ್ತಾನ್ಯಖಿಲಮಂತ್ರಾಣಿ ಧ್ಯಾತಾಃ ಸಕಲದೇವತಾಃ ।
ಮಹಾವ್ರತಾನಿ ಚೀರ್ಣಾನಿ ಪರ್ಣಮೂಲಫಲಾಶಿನಾ ॥ ೭೨ ॥

---

೬೬–೬೭. ಗೌತಮನು ಹೇಳುತ್ತಾನೆ:—ಅರಸ! ನೀನು ಕ್ಷೇಮವಾಗಿರುವೆಯೊ? ನಿನ್ನ ಪದವಿಯು ಶಾಶ್ವತವಾಗಿರುವುದೊ? ಪ್ರಜೆಗಳೂ, ರಾಣಿವಾಸದವರೂ ಸೌಖ್ಯವಾಗಿರುವರೊ? ಸಕಲ ಸಂಪತ್ತುಗಳನ್ನು ತ್ಯಜಿಸಿ ಇಲ್ಲಿಗೆ ಏಕೆ ಬಂದಿರುವೆ?

೬೮. ಮಹಾರಾಜ! ಉಷ್ಣವಾಗಿ ನಿಟ್ಟುಸಿರನ್ನು ಬಿಡುತ್ತ ಏನನ್ನು ಆಲೋಚಿಸಿರುತ್ತಿರುವೆ?

೬೯–೭೦. ದ್ವಿಜನೆ! ನಿನ್ನದಯೆಯಿಂದ ನಾವೆಲ್ಲ ಕುಶಲಿಗಳು. ಉತ್ತಮ ಕುಲದಲ್ಲಿ ಜನಿಸಿದ ರಾಜರ ಸಂಪತ್ತುಗಳು ಬ್ರಾಹ್ಮಣರ ಅಧೀನವಾದುವು. ಆದರೆ ಇತರರು ಕಾಣಲಾರದ ಈ ಘೋರಪಿಶಾಚಿಯು ನನ್ನನ್ನು ಹೆದರಿಸುತ್ತ ಪೀಡಿಸುತ್ತಿದೆ. ಶಾಪಾಂಧನಾಗಿ ನಾನು ಮಾಡಿದ ಸ್ಥಿರವಾದ ಪಾಪವು ಅನೇಕ ಪ್ರಾಯಶ್ಚಿತ್ತಗಳಿಂದಲೂ ಶಾಂತವಾಗುವುದಿಲ್ಲ.

೭೧–೭೨. ನಾನು ಬೊಕ್ಕಸಗಳನ್ನೆಲ್ಲ ದಕ್ಷಿಣೆಕೊಟ್ಟು ನಾನಾ ಯಜ್ಞಗಳನ್ನು ನೆರವೇರಿಸಿದೆನು. ಭೂಮಿಯಲ್ಲಿ ಪೂಜ್ಯವಾದ ನದಿ, ಸರೋವರಗಳಲ್ಲಿ ಮಿಂದೆನು. ಸಂಚರಿಸುತ್ತ ಸಕಲಕ್ಷೇತ್ರಗಳನ್ನು ಸೇವಿಸಿದೆನು. ಸಕಲಮಂತ್ರ

CC-0. Jangamwadi Math Collection. Digitized by eGangotri

ತಾನಿ ಸರ್ವಾಣಿ ಕುರ್ವಂತಿ ಸ್ವಸ್ಥಂ ಮಾಂ ನ ಕದಾಚನ ।
ಅದ್ಯ ಮೇ ಜನ್ಮಸಾಫಲ್ಯಂ ಸಂಪ್ರಾಪ್ತಮಿವ ಲಕ್ಷ್ಯತೇ ॥ ೭೩ ॥
ಯತಸ್ತ್ವದ್ದರ್ಶನಾದೇವ ಮಮಾತ್ಮಾನಂದಭಾಗಭೂತ್ ।
ಅಸ್ವಿಚ್ಛಂಲ್ಲಭತೇ ಕ್ವಾಽಪಿ ವರ್ಷಪೂಗೈರ್ಮನೋರಥಂ ॥ ೭೪ ॥
ಇತ್ಯೇವಂ ಜನವಾದೋಽಪಿ ಸಂಪ್ರಾಪ್ತೋ ಮಯಿ ಸತ್ಯತಾಂ ।
ಆಜನ್ಮಸಂಚಿತಾನಾಂ ತು ಪುಣ್ಯಾನಾಮುದಯೋದಯೋ ॥ ೭೫ ॥
ಯದ್ಭವಾನ್ಭವಭೀತಾನಾಂ ತ್ರಾತಾ ನಯನಗೋಚರಃ ।
ಕಸ್ಮಾದ್ದೇಶಾದಿಹಾಯಾತೋ ಭವಾನ್ಭವಭಯಾಪಹಃ ॥ ೭೬ ॥
ದೂರಭ್ರಮಣವಿಶ್ರಾಂತಂ ಶಂಕೇ ತ್ವಾಮಿಹ ಚಾಗತಂ ।
ದೃಷ್ಟ್ವಾಽಽಶ್ಚರ್ಯಮಿವಾಽತ್ಯರ್ಥಂ ಮುದಿತೋಽಸಿ ಮುಖಶ್ರಿಯಾ ॥ ೭೭ ॥
ಆನಂದಯಸಿ ಮೇ ಚೇತಃ ಪ್ರೇಮ್ಣಾ ಸಂಭಾಷಣಾದಿವ ।
ಅದ್ಯ ಮೇ ತವ ಪಾದಬ್ಜಶರಣಸ್ಯ ಕೃತೈನಸಃ ।
ಶಾಂತಿಂ ಕುರು ಮಹಾಭಾಗ ಯೇನಾಽಹಂ ಸುಖಮಾಪ್ನುಯಾಂ ॥ ೭೮ ॥
ಇತಿ ತೇನ ಸಮಾದಿಷ್ಟೋ ಗೌತಮಃ ಕರುಣಾನಿಧಿಃ ।
ಸಮಾದಿದೇಶ ಘೋರಾಣಾಮಘಾನಾಂ ಸಾಧು ನಿಷ್ಕೃತಿಂ ॥ ೭೯ ॥

---

ಗಳನ್ನು ಜಪಿಸಿದೆನು. ಸಕಲದೇವತೆಗಳನ್ನು ಧ್ಯಾನಿಸಿದೆನು. ಎಲೆ, ಗೆಣಸು, ಹಣ್ಣುಗಳನ್ನು ತಿನ್ನುತ್ತ ಮಹಾವ್ರತಗಳನ್ನಾಚರಿಸಿದೆನು.

೭೩–೭೬. ಅವುಗಳೆಲ್ಲ ನನ್ನನ್ನು ಸ್ವಸ್ಥನನ್ನಾಗಿಸಲಿಲ್ಲ. ನಿನ್ನ ದರ್ಶನದಿಂದಲೆ ನನ್ನ ಮನಸ್ಸು ಆನಂದಗೊಂಡಿರುವುದರಿಂದ ಈಗ ನನ್ನ ಜನ್ಮವು ಸಫಲವಾದಂತಿದೆ. ಉದ್ಯೋಗಶೀಲನಾಗಿ ನಿರೀಕ್ಷಿಸುತ್ತಿರುವವನು ಅನೇಕ ವರ್ಷಗಳ ಮೇಲೆ ಅಭಿಲಷಿತಾರ್ಥವನ್ನು ಪಡೆಯುವನು ಎಂಬ ಜನರ ಮಾತು ನನ್ನಲ್ಲಿ ಸತ್ಯವಾಯಿತು. ಸಂಸಾರದಿಂದ ಭಯಗೊಂಡವರನ್ನು ರಕ್ಷಿಸುವ ನಿನ್ನ ದರ್ಶನವಾದುದರಿಂದ ಹುಟ್ಟಿದಂದಿನಿಂದ ನಾನು ಗಳಿಸಿದ ಪುಣ್ಯಗಳು ಫಲೋನ್ಮುಖವಾಗಿವೆ ಎಂದು ತಿಳಿಯುತ್ತೇನೆ. ನೀನು ಯಾವ ದೇಶದಿಂದ ಇಲ್ಲಿಗೆ ಬಂದೆ?

೭೭–೭೮. ನೀನು ಬಹಳ ದೂರದೇಶದಿಂದ ಬಂದಿರುವೆ ಎಂದು ಊಹಿಸುತ್ತೇನೆ. ಇಲ್ಲಿ ಆಗಮಿಸಿರುವ ನಿನ್ನನ್ನು ನೋಡಿ ಆಶ್ಚರ್ಯಗೊಂಡಿದ್ದೇನೆ. ಪ್ರಸನ್ನಮುಖನಾಗಿದ್ದೀಯೆ. ಪ್ರೀತಿಯಿಂದ ಮಾತಾಡಿ ನನ್ನ ಮನಸ್ಸನ್ನು ಆನಂದಗೊಳಿಸುವಂತಿದ್ದೀಯೆ. ಮಹಾನುಭಾವ! ಈಗ ನಿನ್ನ ಪಾದಕಮಲವನ್ನು ಶರಣುಹೊಂದಿರುವ ಪಾಪಿಯಾದ ನನ್ನ ಮನಸ್ಸನ್ನು ಶಾಂತಗೊಳಿಸಿ ಸುಖಿಯಾಗಿರುವಂತೆ ಮಾಡು.

೭೯. ಹೀಗೆ ಆ ರಾಜನಿಂದ ಪ್ರಾರ್ಥಿಸಲ್ಪಟ್ಟ ದಯಾಳುವಾದ ಗೌತಮನು ಘೋರಪಾಪಗಳ ಪರಿಹಾರೋಪಾಯವನ್ನು ತಿಳಿಸಿದನು.

CC-0. Jangamwadi Math Collection. Digitized by eGangotri

ಗೌತಮ ಉವಾಚ :—

ಸಾಧು ರಾಜೇಂದ್ರ ಧನ್ಯೋಽಸಿ ಮಹಾಘೇಭ್ಯೋ ಭಯಂ ತ್ಯಜ ।
ಶಿವೇ ತ್ರಾತರಿ ಭಕ್ತಾನಾಂ ಕ್ವ ಭಯಂ ಶರಣೈಷಿಣಾಂ ॥ ೮೦ ॥
ಶೃಣು ರಾಜನ್ಮಹಾಭಾಗ ಕ್ಷೇತ್ರಮನ್ಯತ್ಪ್ರತಿಷ್ಠಿತಂ ।
ಮಹಾಪಾತಕಸಂಹಾರಿ ಗೋಕರ್ಣಾಖ್ಯಂ ಮನೋರಮಂ ॥ ೮೧ ॥
ಯತ್ರ ಸ್ಥಿತಿರ್ನ ಪಾಪಾನಾಂ ಮಹದ್ಭ್ಯೋ ಮಹತಾಮಪಿ ॥ ೮೨ ॥
ಸ್ಮೃತೋ ಹ್ಯಶೇಷಪಾಪಘ್ನೋ ಯತ್ರ ಸನ್ನಿಹಿತಃ ಶಿವಃ ।
ಯಥಾ ಕೈಲಾಸಶಿಖರೇ ಯಥಾ ಮಂದಾರಮೂರ್ಧನಿ ॥ ೮೩ ॥
ನಿವಾಸೋ ನಿಶ್ಚಿತಃ ಶಂಭೋಸ್ತಥಾ ಗೋಕರ್ಣಮಂಡಲೇ ।
ನಾಽಗ್ನಿನಾ ನ ಶಶಾಂಕೇನ ನ ತಾರಾಗ್ರಹನಾಯಕೈಃ ॥ ೮೪ ॥
ತಮೋ ನಿಸ್ತೀರ್ಯತೇ ಸಮ್ಯಗ್ಯಥಾ ಸವಿತೃದರ್ಶನಾತ್ ।
ತಥೈವ ನೇತರೈಸ್ತೀರ್ಥೈರ್ನ ಚ ಕ್ಷೇತ್ರೈರ್ಮನೋರಮೈಃ ॥ ೮೫ ॥
ಸದ್ಯಃ ಪಾಪವಿಶುದ್ಧಿಃ ಸ್ಯಾದ್ಯಥಾ ಗೋಕರ್ಣದರ್ಶನಾತ್ ।
ಅಪಿ ಪಾಪಶತಂ ಕೃತ್ವಾ ಬ್ರಹ್ಮಹತ್ಯಾದಿ ಮಾನವಃ ॥ ೮೬ ॥
ಸಕೃತ್ಪ್ರವಿಶ್ಯ ಗೋಕರ್ಣಂ ನ ಬಿಭೇತಿ ಹ್ಯಘಾತ್ಕ್ವಚಿತ್ ।
ತತ್ರ ಸರ್ವೇ ಮಹಾತ್ಮಾನಸ್ತಪಸಾ ಶಾಂತಿಮಾಗತಾಃ ॥ ೮೭ ॥
ಇಂದ್ರೋಪೇಂದ್ರವಿರಿಂಚ್ಯಾದ್ಯೈಃ ಸೇವ್ಯತೇ ಸಿದ್ಧಿಕಾಂಕ್ಷಿಭಿಃ ।
ತತ್ರೈಕೇನ ದಿನೇನಾಽಪಿ ಯತ್ಕೃತಂ ವ್ರತಮುತ್ತಮಂ ॥ ೮೮ ॥

---

೮೦–೮೨. ಮಹಾರಾಜ! ಒಳ್ಳೆಯದು. ಧನ್ಯನಾಗಿದ್ದೀಯೆ. ಘೋರ ಪಾಪಗಳಿಂದ ಭಯಪಡಬೇಡ. ಶಿವನು ಕಾಪಾಡುತ್ತಿರಲು ಮರೆಹೊಕ್ಕ ಭಕ್ತರಿಗೆ ಭಯವೆಲ್ಲಿಯದು? ಮಹಾಪಾಪಗಳನ್ನು ನೀಗಿಸುವ ಗೋಕರ್ಣವೆಂಬ ಮನೋಹರ ಕ್ಷೇತ್ರವಿರುವುದು. ಇಲ್ಲಿ ಮಹಾ ಪಾಪಗಳ ಸುಳಿವೇ ಇಲ್ಲ.

೮೩–೮೭. ಈ ಗೋಕರ್ಣ ಕ್ಷೇತ್ರದಲ್ಲಿ ಸ್ಮರಣಮಾತ್ರದಿಂದ ಸಕಲಪಾಪಗಳನ್ನು ಪರಿಹರಿಸುವ ಶಿವನು ಕೈಲಾಸಶಿಖರದಲ್ಲಿಯೂ, ಮಂದಾರದ ತಲೆಯಲ್ಲಿಯೂ ನೆಲೆಸಿರುವಂತೆ ಸ್ಥಿರವಾಗಿರುವನು. ಸೂರ್ಯನ ದರ್ಶನದಿಂದ ಕತ್ತಲೆಯು ಮಾಯವಾಗುವಂತೆ ಅಗ್ನಿ, ಚಂದ್ರ, ನಕ್ಷತ್ರ, ಗ್ರಹಗಳಿಂದ ಅಡಗಿ ಹೋಗುವುದಿಲ್ಲ. ಅಂತೆಯೇ ಗೋಕರ್ಣ ದರ್ಶನದಿಂದ ಪಾಪವು ಕಳೆಯುವಂತೆ ಇತರ ಮನೋಹರ ತೀರ್ಥ, ಕ್ಷೇತ್ರಗಳಿಂದ ಪರಿಹಾರವಾಗುವುದಿಲ್ಲ. ಮನುಷ್ಯನು ಬ್ರಹ್ಮಹತ್ಯಾದ್ಯನೇಕ ಪಾಪಗಳನ್ನು ಮಾಡಿದ್ದರೂ ಒಂದಾವೃತ್ತಿ ಗೋಕರ್ಣವನ್ನು ಪ್ರವೇಶಿಸಿದರೆ ಪಾಪದಿಂದ ಹೆದರುವುದಿಲ್ಲ. ಅಲ್ಲಿ ಸಕಲ ಮಹಾತ್ಮರೂ ತಪಸ್ಸಿನಿಂದ ಶಾಂತಿಯನ್ನು ಪಡೆದಿರುವರು.

೮೮–೧೦೭. ತಪಸ್ಸಿನಿಂದ ಸಿದ್ಧಿಯನ್ನು ಬಯಸುವ ಇಂದ್ರ, ಉಪೇಂದ್ರ,

CC-0. Jangamwadi Math Collection. Digitized by eGangotri

ತದನ್ಯತ್ರಾಽಬ್ದಲಕ್ಷೇಣ ಕೃತಂ ಭವತಿ ತತ್ಸಮಂ ।
ಯತ್ರೇಂದ್ರಬ್ರಹ್ಮವಿಷ್ಣ್ವಾದಿದೇವಾನಾಂ ಹಿತಕಾಮ್ಯಯಾ ॥ ೮೯ ॥
ಮಹಾಬಲಾಽಭಿಧಾನೇನ ದೇವಃ ಸನ್ನಿಹಿತಃ ಸ್ವಯಂ ।
ಘೋರೇಣ ತಪಸಾ ಲಬ್ಧಂ ರಾವಣಾಖ್ಯೇನ ರಕ್ಷಸಾ ॥ ೯೦ ॥
ತಲ್ಲಿಂಗಂ ಸ್ಥಾಪಯಾಮಾಸ ಗೋಕರ್ಣೇ ಗಣನಾಯಕಃ ।
ಇಂದ್ರೋ ಬ್ರಹ್ಮಾ ಮುಕುಂದಶ್ಚ ವಿಶ್ವೇದೇವಾ ಮರುದ್ಗಣಾಃ ॥ ೯೧ ॥
ಆದಿತ್ಯಾ ವಸವೋ ದಸ್ರೌ ಶಶಾಂಕಶ್ಚ ದಿವಾಕರಃ ।
ಏತೇ ವಿಮಾನಗತಯೋ ದೇವಾಸ್ತೇ ಸಹ ಪಾರ್ಷದೈಃ ॥ ೯೨ ॥
ಪೂರ್ವದ್ವಾರಂ ನಿಷೇವಂತೇ ದೇವದೇವಸ್ಯ ಶೂಲಿನಃ ।
ಯೋಽನ್ಯೋ ಮೃತ್ಯುಃ ಸ್ವಯಂ ಸಾಕ್ಷಾಚ್ಚಿತ್ರಗುಪ್ತಶ್ಚ ಪಾವಕಃ ॥ ೯೩ ॥
ಪಿತೃಭಿಃ ಸಹ ರುದ್ರೈಶ್ಚ ದಕ್ಷಿಣದ್ವಾರಮಾಶ್ರಿತಃ ।
ವರುಣಃ ಸರಿತಾಂ ನಾಥೋ ಗಂಗಾದಿಸರಿತಾಂ ಗಣೈಃ ॥ ೯೪ ॥
ಆಸೇವತೇ ಮಹಾದೇವಂ ಪಶ್ಚಿಮದ್ವಾರಮಾಶ್ರಿತಃ ।
ತಥಾ ವಾಯುಃ ಕುಬೇರಶ್ಚ ದೇವೇಶೀ ಭದ್ರಕರ್ಣಿಕಾ ॥ ೯೫ ॥
ಮಾತೃಭಿಶ್ಚಂಡಿಕಾದ್ಯಾಭಿರುತ್ತರದ್ವಾರಮಾಶ್ರಿತಾಃ ।
ವಿಶ್ವಾವಸುಶ್ಚಿತ್ರರಥಶ್ಚಿತ್ರಸೇನೋ ಮಹಾಬಲಃ ॥ ೯೬ ॥

---

ಬ್ರಹ್ಮ ಇವರೇ ಮೊದಲಾದವರು ಆ ಕ್ಷೇತ್ರವನ್ನು ಸೇವಿಸುತ್ತಾರೆ. ಅಲ್ಲಿ ಒಂದು ದಿನ ಆಚರಿಸಿದ ಉತ್ತಮ ವ್ರತವು ಇತರ ಕ್ಷೇತ್ರಗಳಲ್ಲಿ ಒಂದು ಲಕ್ಷ ವರ್ಷಕಾಲಮಾಡಿದ ವ್ರತಕ್ಕೆ ಸಮಾನವು. ಅಲ್ಲಿ ಶ್ರೀ ಮಹಾದೇವನು ಬ್ರಹ್ಮಾದಿ ದೇವತೆಗಳಿಗೆ ಹಿತವನ್ನುಂಟುಮಾಡಲು ಮಹಾಬಲನೆಂಬ ಹೆಸರಿನಿಂದ ಸನ್ನಿಹಿತ ನಾಗಿರುವನು. ರಾವಣನು ಘೋರ ತಪಸ್ಸಿನಿಂದ ಪಡೆದ ಲಿಂಗವನ್ನು ಗಣ ನಾಯಕನು ಗೋಕರ್ಣದಲ್ಲಿ ಸ್ಥಾಪಿಸಿರುವನು. ಇಂದ್ರ, ಬ್ರಹ್ಮ, ವಿಷ್ಣು, ವಿಶ್ವೇದೇವರು, ಮರುತ್ತುಗಳು, ದ್ವಾದಶಾದಿತ್ಯರು, ಅಷ್ಟವಸುಗಳು, ಅಶ್ವಿನೀ ದೇವತೆಗಳು, ಚಂದ್ರನು, ನಕ್ಷತ್ರಗಳು ಇವರು ಪರಿವಾರಸಮೇತ ವಿಮಾನಗಳಲ್ಲಿ ಬಂದು ಮಹೇಶ್ವರನ ಆಲಯದ ಪೂರ್ವಬಾಗಿಲಿನಲ್ಲಿ ಇರುತ್ತಾರೆ. ಯಮ, ಚಿತ್ರಗುಪ್ತ, ಅಗ್ನಿ, ಪಿತೃದೇವತೆಗಳು, ಏಕಾದಶರುದ್ರರು ಇವರು ದಕ್ಷಿಣ ಬಾಗಿಲಿನಲ್ಲಿಯೂ, ನದೀಪತಿಯಾದ ವರುಣನು ಗಂಗಾದಿನದಿಗಳೊಡನೆ ಪಶ್ಚಿಮ ಬಾಗಿಲಿನಲ್ಲಿಯೂ ಇದ್ದು ಮಹೇಶ್ವರನನ್ನು ಸೇವಿಸುತ್ತಾರೆ. ವಾಯು, ಕುಬೇರ, ದೇವೇಶೀ, ಭದ್ರಕರ್ಣಿಕಾ ಇವರು ಚಂಡಿಕಾದಿಮಾತೃಗಳೊಡನೆ ಉತ್ತರ ದ್ವಾರದಲ್ಲಿ ಶಿವನನ್ನು ಸೇವಿಸುತ್ತಾರೆ. ವಿಶ್ವಾವಸು, ಚಿತ್ರರಥ, ಚಿತ್ರಸೇನ ಇವರು ಗಂಧರ್ವರೊಡನೆ ಮಹಾಬಲೇಶ್ವರನನ್ನು ಪೂಜಿಸುತ್ತಾರೆ. ರಂಭಾ,

CC-0. Jangamwadi Math Collection. Digitized by eGangotri

ಸಹ ಗಂಧರ್ವವರ್ಗೈಶ್ಚ ಪೂಜಯಂತಿ ಮಹಾಬಲಂ ।
ರಂಭಾ ಘೃತಾಚೀ ಮೇನಾ ಚ ಪೂರ್ವಚಿತ್ತಿಸ್ತಿಲೋತ್ತಮಾ ॥ ೯೭ ॥
ನೃತ್ಯಂತಿ ಪುರತಃ ಶಂಭೋರುರ್ವಶ್ಯಾದ್ಯಾಃ ಸುರಸ್ತ್ರಿಯಃ ।
ವಸಿಷ್ಠಃ ಕಶ್ಯಪಃ ಕಣ್ವೋ ವಿಶ್ವಾಮಿತ್ರೋ ಮಹಾತಪಾಃ ॥ ೯೮ ॥
ಜೈಮಿನಿಶ್ಚ ಭರದ್ವಾಜೋ ಜಾಬಾಲಿಃ ಕ್ರತುರಂಗಿರಾಃ ।
ಏತೇ ವಯಂ ಚ ರಾಜೇಂದ್ರ ಸರ್ವೇ ಬ್ರಹ್ಮರ್ಷಯೋಽಮಲಾಃ ॥ ೯೯ ॥
ದೇವಂ ಮಹಾಬಲಂ ಭಕ್ತ್ಯಾ ಸಮಂತಾತ್ಪರ್ಯುಪಾಸ್ಮಹೇ ।
ಮರೀಚಿನಾ ಸಹಾಽತ್ರಿಶ್ಚ ದಕ್ಷಾದ್ಯಾಶ್ಚ ಮುನೀಶ್ವರಾಃ ॥ ೧೦೦ ॥
ಸನಕಾದ್ಯಾ ಮಹಾತ್ಮಾನ ಉಪವಿಷ್ಟಾ ಉಪಾಸತೇ ।
ತಥೈವ ಮುನಯಃ ಸಾಧ್ಯಾ ಅಜಿನಾಽಂಬರಧಾರಿಣಃ ॥ ೧೦೧ ॥
ದಂಡಿನೋ ವ್ರತಮುಂಡಾಶ್ಚ ಸ್ನಾತಕಾ ಬ್ರಹ್ಮಚಾರಿಣಃ ।
ತ್ವಗಸ್ಥಿಮಾತ್ರಾಽವಯವಾಸ್ತಪಸಾ ದಗ್ಧಕಿಲ್ಬಿಷಾಃ ॥ ೧೦೨ ॥
ಸೇವಂತೇ ಪರಯಾ ಭಕ್ತ್ಯಾ ದೇವದೇವಂ ಪಿನಾಕಿನಂ ।
ತಥಾ ದೇವಾಃ ಸಗಂಧರ್ವಾಃ ಪಿತರಃ ಸಿದ್ಧಚಾರಣಾಃ ॥ ೧೦೩ ॥
ವಿದ್ಯಾಧರಾಃ ಕಿಂಪುರುಷಾಃ ಕಿನ್ನರಾ ಗುಹ್ಯಕಾಃ ಖಗಾಃ ।
ನಾಗಾಃ ಪಿಶಾಚಾ ವೇತಾಲಾ ದೈತೇಯಾಶ್ಚ ಮಹಾಬಲಾಃ ॥ ೧೦೪ ॥
ನಾನಾವಿಭವಸಂಪನ್ನಾ ನಾನಾಭೂಷಣವಾಹನಾಃ ।
ವಿಮಾನೈಃ ಸೂರ್ಯಸಂಕಾಶೈರಗ್ನಿವರ್ಣೈಃ ಶಶಿಪ್ರಭೈಃ ॥ ೧೦೫ ॥

---

ಘೃತಾಚೀ, ಮೇನಾ, ಪೂರ್ವಚಿತ್ತಿ, ತಿಲೋತ್ತಮಾ, ಉರ್ವಶೀ ಮೊದಲಾದ ಅಪ್ಸರಸ್ತ್ರೀಯರು ಶಿವನ ಮುಂದೆ ಕುಣಿಯುತ್ತಾರೆ. ವಸಿಷ್ಠ, ಕಶ್ಯಪ, ಕಣ್ವ, ವಿಶ್ವಾಮಿತ್ರ, ಜೈಮಿನಿ, ಭರದ್ವಾಜ, ಜಾಬಾಲಿ, ಕ್ರತು, ಅಂಗಿರಾ—ಇವರೂ ನಾನೂ ಮೊದಲಾದ ಪವಿತ್ರರಾದ ಬ್ರಹ್ಮರ್ಷಿಗಳು ಮಹಾಬಲೇಶ್ವರನನ್ನು ಭಕ್ತಿಯಿಂದ ಉಪಾಸಿಸುತ್ತೇವೆ. ಮರೀಚಿ, ಅತ್ರಿ, ದಕ್ಷ, ಸನಕ ಮೊದಲಾದ ಮಹಾತ್ಮರಾದ ಮುನೀಶ್ವರರು ಕೂತುಕೊಂಡು ಸೇವಿಸುತ್ತಾರೆ. ಹಾಗೆಯೇ ಮುನಿಗಳೂ, ಸಾಧ್ಯರೂ, ಕೃಷ್ಣಾಜಿನವನ್ನು ಧರಿಸಿದ ಸನ್ಯಾಸಿಗಳೂ, ಸ್ನಾತಕರೂ, ಬ್ರಹ್ಮಚಾರಿಗಳೂ, ತಪಸ್ಸಿನಿಂದ ಪಾಪವನ್ನು ಕಳೆದುಕೊಂಡ ಚರ್ಮಮೂಳೆ ಮಾತ್ರವುಳ್ಳ ಮುನಿವರ್ಯರೂ ಅತಿ ಭಕ್ತಿಯಿಂದ ಸೇವಿಸುತ್ತಾರೆ. ಹಾಗೆಯೇ ದೇವತೆಗಳೂ, ಗಂಧರ್ವರೂ, ಪಿತೃಗಳೂ, ಸಿದ್ಧರೂ, ಗಾಯಕರೂ, ವಿದ್ಯಾಧರರೂ, ಕಿಂಪುರುಷರೂ, ಕಿನ್ನರರೂ, ಗುಹ್ಯಕರೂ, ಪಕ್ಷಿಗಳೂ, ನಾಗಗಳೂ, ಪಿಶಾಚಗಳೂ, ಬೇತಾಳಗಳೂ, ದೈತ್ಯರೂ ನಾನಾ ವೈಭವಗಳಿಂದಲೂ, ಭೂಷಣಗಳಿಂದಲೂ, ವಾಹನಗಳಿಂದಲೂ ಸಹಿತರಾಗಿ ಸೂರ್ಯಸಮಾನಗಳೂ, ಅಗ್ನಿ

CC-0. Jangamwadi Math Collection. Digitized by eGangotri

ವಿದ್ಯುತ್ಪುಂಜನಿಭೈರನ್ಯೈಃ ಸಮನ್ತಾತ್ಪರಿವಾರಿತಂ ।
ಪ್ರಸ್ತುವಂತಿ ಪ್ರಗಾಯಂತಿ ಪಠಂತಿ ಪ್ರಣಮಂತಿ ಚ ॥ ೧೦೬ ॥
ಪ್ರನೃತ್ಯಂತಿ ಪ್ರಹೃಷ್ಯಂತಿ ಗೋಕರ್ಣೇ ಪೃಥಿವೀಪತೇ ।
ಲಭಂತೇಽಭೀಪ್ಸಿತಾನ್ಕಾಮಾನ್ರಮಂತೇ ಚ ಯಥಾಸುಖಂ ॥ ೧೦೭ ॥
ಗೋಕರ್ಣಸದೃಶಂ ಕ್ಷೇತ್ರಂ ನಾಽಸ್ತಿ ಬ್ರಹ್ಮಾಂಡಗೋಲಕೇ ।
ತತ್ರ ಘೋರಂ ತಪಸ್ತಪ್ತಮಗಸ್ತ್ಯೇನ ಮಹಾತ್ಮನಾ ॥ ೧೦೮ ॥
ತಥಾ ಸನತ್ಕುಮಾರೇಣ ಪ್ರಿಯವ್ರತಸುತೈರಪಿ ।
ಅಗ್ನಿನಾ ದೇವವರ್ಯೇಣ ಕಂದರ್ಪೇಣ ಚ ಪಾರ್ಥಿವ ॥ ೧೦೯ ॥
ತಥಾ ದೇವ್ಯಾ ಭದ್ರಕಾಲ್ಯಾ ಶಿಂಶುಮಾರೇಣ ಧೀಮತಾ ।
ದುರ್ಮುಖೇನ ಫಣೀಂದ್ರೇಣ ಮಣಿನಾಗಾಹ್ವಯೇನ ಚ ॥ ೧೧೦ ॥
ಇಲಾವರ್ತಾದಿಭಿರ್ನಾಗೈರ್ಗರುಡೇನ ಬಲೀಯಸಾ ।
ರಕ್ಷಸಾ ರಾವಣೇನಾಽಪಿ ಕುಂಭಕರ್ಣಾಹ್ವಯೇನ ತು ॥ ೧೧೧ ॥
ವಿಭೀಷಣೇನ ಪುಣ್ಯೇನ ತಪಸ್ತಪ್ತಂ ಮಹಾತ್ಮನಾ ।
ಏತೇ ಚಾಽನ್ಯೇ ಚ ಗೀರ್ವಾಣಾಃ ಸಿದ್ಧದಾನವಮಾನವಾಃ ॥ ೧೧೨ ॥
ಗೋಕರ್ಣೇ ದೇವದೇವೇಶಂ ಶಿವಮಾರಾಧ್ಯ ಭಕ್ತಿತಃ ।
ಸ್ವನಾಮಾಂಕಾನಿ ಲಿಂಗಾನಿ ಸ್ಥಾಪಯಿತ್ವಾ ಸಹಸ್ರಶಃ ॥ ೧೧೩ ॥
ಲೇಭಿರೇ ಪರಮಾಂ ಸಿದ್ಧಿಂ ತಥಾ ತೀರ್ಥಾನಿ ಚಕ್ರಿರೇ ।
ಅತ್ರ ಸ್ಥಾನಾನಿ ಸರ್ವೇಷಾಂ ದೇವಾನಾಂ ಸಂತಿ ಪಾರ್ಥಿವ ॥ ೧೧೪ ॥

---

ವರ್ಣಗಳೂ, ಚಂದ್ರನಂತೆ ಕಾಂತಿಯುಳ್ಳವೂ, ಮಿಂಚಿಗೆ ಸಮಾನಗಳೂ ಆಗಿರುವ ವಿಮಾನಗಳಿಂದ ಪರಿವೃತನಾದ ಶಿವನನ್ನು ಸ್ತುತಿಸುತ್ತ, ಹಾಡುತ್ತ, ಪಠಿಸುತ್ತ ನಮಸ್ಕರಿಸುತ್ತ, ನರ್ತಿಸುತ್ತ, ಸಂತೋಷಗೊಳ್ಳುತ್ತ ಸೇವಿಸಿ ಇಷ್ಟಾರ್ಥಗಳನ್ನು ಪಡೆಯುತ್ತಾರೆ.

೧೦೮. ಬ್ರಹ್ಮಾಂಡದಲ್ಲಿ ಗೋಕರ್ಣಕ್ಕೆ ಸಮಾನವಾದ ಕ್ಷೇತ್ರವಿಲ್ಲ. ಅಲ್ಲಿ ಮಹಾತ್ಮರಾದ ಅಗಸ್ತ್ಯ ಮಹರ್ಷಿಗಳು ಘೋರ ತಪಸ್ಸನ್ನಾಚರಿಸಿರುವರು.

೧೦೯–೧೧೪. ಹಾಗೆಯೇ ಸನತ್ಕುಮಾರರು, ಪ್ರಿಯವ್ರತನ ಪುತ್ರರು, ಅಗ್ನಿ, ಮನ್ಮಥ, ಭದ್ರಕಾಳೀ, ಶಿಂಶುಮಾರ, ದುರ್ಮುಖ, ಮಣಿನಾಗ, ಇಲಾವರ್ತಾದಿನಾಗರು, ಗರುಡ, ರಾವಣ, ಕುಂಭಕರ್ಣ, ವಿಭೀಷಣ ಇವರು ತಪಸ್ಸನ್ನು ಆಚರಿಸಿರುವರು. ಇನ್ನೂ ಇತರ ದೇವತೆಗಳೂ, ಸಿದ್ಧರೂ, ದಾನವರೂ, ಮನುಷ್ಯರೂ ಗೋಕರ್ಣದಲ್ಲಿ ಮಹೇಶ್ವರನನ್ನು ಪೂಜಿಸಿ ತಮ್ಮ ಹೆಸರಿನ ಸಾವಿರಾರು ಲಿಂಗಗಳನ್ನು ಸ್ಥಾಪಿಸಿ ಪರಮ ಸಿದ್ಧಿಯನ್ನು ಹೊಂದಿ ತೀರ್ಥಗಳನ್ನು ನಿರ್ಮಿಸಿರುವರು. ಇಲ್ಲಿ ಸಕಲದೇವತೆಗಳ ಕ್ಷೇತ್ರಗಳಿರುವುವು.

CC-0. Jangamwadi Math Collection. Digitized by eGangotri

ವಿಷ್ಣೋಃಶ್ಚ ದೇವದೇವಸ್ಯ ಬ್ರಹ್ಮಣಃ ಪರಮೇಷ್ಠಿನಃ ।
ಕಾರ್ತಿಕೇಯಸ್ಯ ವೀರಸ್ಯ ಗಜವಕ್ತ್ರಸ್ಯ ಚಾಽನಘ ॥ ೧೧೫ ॥
ಧರ್ಮಸ್ಯ ಕ್ಷೇತ್ರಪಾಲಸ್ಯ ದುರ್ಗಾಯಾಶ್ಚ ಮಹಾಮತೇ ।
ಗೋಕರ್ಣೇ ಶಿವಲಿಂಗಾನಿ ವಿದ್ಯಂತೇ ಕೋಟಿಕೋಟಿಶಃ ॥ ೧೧೬ ॥
ಅಸಂಖ್ಯಾತಾನಿ ತೀರ್ಥಾನಿ ತಿಷ್ಠಂತಿ ಚ ಪದೇ ಪದೇ ।
ಬಹುನಾಽತ್ರ ಕಿಮುಕ್ತೇನ ಗೋಕರ್ಣಸ್ಥಾನಿ ಪಾರ್ಥಿವ ॥ ೧೧೭ ॥
ಸರ್ವಾಣ್ಯಶ್ಮಾನಿ ಲಿಂಗಾನಿ ತೀರ್ಥಾನ್ಯಂಭಾಂಸಿ ಸರ್ವಶಃ ।
ಗೋಕರ್ಣೇ ಶಿವಲಿಂಗಾನಾಂ ತೀರ್ಥನಾಮಪಿ ಭೂರಿಶಃ ॥ ೧೧೮ ॥
ಗೀಯತೇ ಮಹಿಮಾ ರಾಜನ್ಪುರಾಣೇಷು ಮಹರ್ಷಿಭಿಃ ।
ಗೋಕರ್ಣೇ ಕೋಟಿತೀರ್ಥಂ ಚ ತೀರ್ಥಾನಾಂ ಮುಖ್ಯತಾಂ ಗತಂ॥೧೧೯॥
ಸರ್ವೇಷಾಂ ಶಿವಲಿಂಗಾನಾಂ ಸಾರ್ವಭೌಮೋ ಮಹಾಬಲಃ ।
ಕೃತೇ ಮಹಾಬಲಃ ಶ್ವೇತಸ್ತ್ರೇತಾಯಾಮತಿಲೋಹಿತಃ ॥ ೧೨೦ ॥
ದ್ವಾಪರೇ ಪೀತವರ್ಣಶ್ಚ ಕಲೌ ಶ್ಯಾಮೋ ಭವಿಷ್ಯತಿ ।
ಆಕ್ರಾಂತಂ ಸಪ್ತಪಾತಾಲಂ ಕುರ್ವನ್ನಪಿ ಮಹಾಬಲಃ ॥ ೧೨೧ ॥
ಪ್ರಾಪ್ತೇ ಕಲಿಯುಗೇ ಘೋರೇ ಮೃದುತಾಮುಪಯಾಸ್ಯತಿ ।
ಪಶ್ಚಿಮಾಂಬುಧಿತೀರಸ್ಥಂ ಗೋಕರ್ಣಕ್ಷೇತ್ರಮುತ್ತಮಂ ॥ ೧೨೨ ॥
ಬ್ರಹ್ಮಹತ್ಯಾದಿಪಾಪಾನಿ ದಹತೀತಿ ಕಿಮದ್ಭುತಂ ।
ಯೇ ಚಾಽತ್ರ ಬ್ರಹ್ಮಹಂತಾರೋ ಯೇ ಚ ಭೂತದ್ರುಹಃ ಶಠಾಃ॥ ೧೨೩ ॥

---

೧೧೫–೧೩೪. ಮತ್ತು ವಿಷ್ಣು, ಬ್ರಹ್ಮ, ಷಣ್ಮುಖ, ಗಣನಾಥ, ಧರ್ಮರಾಜ, ಕ್ಷೇತ್ರಪಾಲ, ದುರ್ಗಾ ಇವರಿಂದ ಸ್ಥಾಪಿತವಾದ ಕೋಟ್ಯಂತರ ಶಿವಲಿಂಗಗಳೂ, ಲೆಕ್ಕವಿಲ್ಲದ ತೀರ್ಥಗಳೂ ಇವೆ. ಹೆಚ್ಚು ಮಾತಿನಿಂದೇನು, ಗೋಕರ್ಣದಲ್ಲಿರುವ ಕಲ್ಲುಗಳೆಲ್ಲ ಲಿಂಗಗಳೂ, ನೀರೆಲ್ಲ ತೀರ್ಥಗಳೂ ಆಗಿರುವುವು. ಅಲ್ಲಿರುವ ಶಿವಲಿಂಗ, ತೀರ್ಥ ಇವುಗಳ ಮಾಹಾತ್ಮ್ಯೆಯನ್ನು ಮಹರ್ಷಿಗಳು ಪುರಾಣಗಳಲ್ಲಿ ಹೊಗಳಿರುತ್ತಾರೆ. ಅಲ್ಲಿ ಕೋಟಿತೀರ್ಥವು ತೀರ್ಥಗಳಲ್ಲಿ ಮುಖ್ಯವಾದುದು. ಮಹಾಬಲೇಶ್ವರನು ಸರ್ವಶಿವಲಿಂಗಗಳಿಗೆ ಚಕ್ರವರ್ತಿಯು. ಆ ಮಹಾಬಲೇಶ್ವರ ಲಿಂಗವು ಕೃತಯುಗದಲ್ಲಿ ಬೆಳ್ಳಗೂ, ತ್ರೇತಾಯುಗದಲ್ಲಿ ಅತಿ ಕೆಂಪಗೂ, ದ್ವಾಪರಯುಗದಲ್ಲಿ ಹಳದಿಬಣ್ಣವಾಗಿಯೂ, ಕಲಿಯುಗದಲ್ಲಿ ನೀಲವರ್ಣವಾಗಿಯೂ ಇರುವುದು. ಮಹಾಬಲೇಶ್ವರನು ಏಳು ಅಧೋಲೋಕಗಳನ್ನು ಆಕ್ರಮಿಸಿರುವವನಾದಾಗ್ಯೂ ಘೋರಕಲಿಯುಗವು ಬರಲು ಮೃದುವಾಗುವನು. ಪಶ್ಚಿಮ ಸಮುದ್ರದ ದಡದಲ್ಲಿರುವ ಉತ್ತಮವಾದ ಇಂತಹ ಗೋಕರ್ಣಕ್ಷೇತ್ರವು ಬ್ರಹ್ಮಹತ್ಯೆ ಮೊದಲಾದ ಮಹಾ ಪಾಪಗಳನ್ನು ಸುಡುವು

CC-0. Jangamwadi Math Collection. Digitized by eGangotri

ಯೇ ಸರ್ವಗುಣಹೀನಾಶ್ಚ ಪರದಾರರತಾಶ್ಚ ಯೇ ।
ಯೇ ದುರ್ವೃತ್ತಾ ದುರಾಚಾರಾ ದುಃಶೀಲಾಃ ಕೃಪಣಾಶ್ಚ ಯೇ॥ ೧೨೪ ॥
ಲುಬ್ಧಾಃ ಕ್ರೂರಾ ಖಲಾ ಮೂಢಾಃ ಸ್ತೇನಾಶ್ಚೈವಾಽತಿಕಾಮಿನಃ ।
ತೇ ಸರ್ವೇ ಪ್ರಾಪ್ಯ ಗೋಕರ್ಣಂ ಸ್ನಾತ್ವಾ ತೀರ್ಥಜಲೇಷು ಚ ॥ ೧೨೫ ॥
ದೇವಂ ಮಹಾಬಲಂ ದೃಷ್ಟ್ವಾ ಪ್ರಯಾತಾಃ ಶಾಂಕರಂ ಪದಂ ।
ತತ್ರ ಪುಣ್ಯಾಸು ತಿಥಿಷು ಪುಣ್ಯರ್ಕ್ಷೇ ಪುಣ್ಯವಾಸರೇ ॥ ೧೨೬ ॥
ಯೇಽರ್ಚಯಂತಿ ಮಹೇಶಾನಂ ತೇ ರುದ್ರಾಃ ಸ್ಯುರ್ನ ಸಂಶಯಃ ।
ಯದಾ ಕದಾಚಿದ್ಗೋಕರ್ಣಂ ಯೋ ವಾ ಕೋ ವಾಽಪಿ ಮಾನವಃ॥
ಪ್ರವಿಶ್ಯ ಪೂಜಯೇದೀಶಂ ಸ ಗಚ್ಛೇದ್ಬ್ರಹ್ಮಣಃ ಪದಂ ।
ರವೀಂದುಸೌಮ್ಯವಾರೇಷು ಯದಾ ದರ್ಶೋ ಭವಿಷ್ಯತಿ ॥ ೧೨೮ ॥
ತದಾ ಜಲನಿಧೌ ಸ್ನಾನಂ ದಾನಂ ಚ ಪಿತೃತರ್ಪಣಂ ।
ಶಿವಪೂಜಾ ಜಪೋ ಹೋಮೋ ವ್ರತಚರ್ಯಾ ದ್ವಿಜಾರ್ಚನಂ ॥ ೧೨೯ ॥
ಯತ್ಕಿಂಚಿದ್ವಾ ಕೃತಂ ಕರ್ಮ ತದನಂತಫಲಪ್ರದಂ ।
ವ್ಯತೀಪಾತಾದಿಯೋಗೇಷು ರವಿಸಂಕ್ರಮಣೇಷು ಚ ॥ ೧೩೦ ॥
ಮಹಾಪ್ರದೋಷವೇಲಾಸು ಶಿವಪೂಜಾ ವಿಮುಕ್ತಿದಾ ।
ಅಥೈಕಾಂ ತೇ ಪ್ರವಕ್ಷ್ಯಾಮಿ ತಿಥಿಂ ಪಾರ್ಥಿವ ಮುಕ್ತಿದಾಂ ॥ ೧೩೧ ॥
ಯಸ್ಯಾಂ ಕಿಲ ಮಹಾವ್ಯಾಧೋ ಲೇಭೇ ಶಂಭೋಃ ಪರಂ ಪದಂ ।
ಮಾಘಮಾಸೇ ಮಹಾಪುಣ್ಯಾ ಯಾ ಸಾ ಕೃಷ್ಣಚತುರ್ದಶೀ ॥ ೧೩೨ ॥

---

ದೆಂಬುದು ಆಶ್ಚರ್ಯಕರವಲ್ಲ. ಅಲ್ಲಿ ಬ್ರಹ್ಮಘ್ನರೂ, ಪ್ರಾಣಿದ್ರೋಹಿಗಳೂ, ಮೂರ್ಖರೂ, ಯಾವೊಂದು ಗುಣವಿಲ್ಲದವರೂ, ಪರಸತಿಯರಲ್ಲಾಸಕ್ತರೂ, ದುರ್ನಡತೆಯುಳ್ಳವರೂ, ದುರಾಚಾರಿಗಳೂ, ದುಷ್ಟಸ್ವಭಾವದವರೂ, ದೀನರೂ, ಲೋಭಿಗಳೂ, ಕಠಿನರೂ, ದುಷ್ಟರೂ, ಮೂಢರೂ, ಕಳ್ಳರೂ, ಕಾಮುಕರೂ, ಇವರೆಲ್ಲರೂ ತೀರ್ಥಗಳಲ್ಲಿ ಮಿಂದು, ಮಹಾಬಲೇಶ್ವರನ ದರ್ಶನ ಮಾಡಿ ಶಿವನ ಸ್ಥಾನವನ್ನು ಪಡೆಯುವರು. ಅಲ್ಲಿ ಪುಣ್ಯತಿಥಿಗಳಲ್ಲಿಯೂ, ಪುಣ್ಯನಕ್ಷತ್ರಗಳಲ್ಲಿಯೂ, ಪುಣ್ಯವಾರಗಳಲ್ಲಿಯೂ ಶಿವನನ್ನು ಪೂಜಿಸಿದವರು ನಿಶ್ಚಯವಾಗಿ ರುದ್ರರೇ ಆಗುವರು. ಮಾನವನು ಯಾವಾಗಲಾದರೂ ಗೋಕರ್ಣವನ್ನು ಪ್ರವೇಶಿಸಿ ಮಹಾದೇವನನ್ನು ಅರ್ಚಿಸಿದರೆ ಅವನು ಬ್ರಹ್ಮನ ಸ್ಥಾನಕ್ಕೆ ತೆರಳುವನು. ಭಾನು, ಸೋಮ, ಬುಧವಾರಗಳಲ್ಲಿ ಅಮಾವಾಸ್ಯೆ ಯಾದರೆ ಆದಿನ ಸಾಗರದಲ್ಲಿ ಮಿಂದು ದಾನ, ಪಿತೃತರ್ಪಣ, ಶಿವಪೂಜೆ, ಜಪ, ಹೋಮ, ವ್ರತಾನುಷ್ಠಾನ, ಬ್ರಾಹ್ಮಣ ಪೂಜೆ ಇವುಗಳಲ್ಲಿ ಯಾವುದನ್ನು ಮಾಡಿದರೂ ಆ ಕರ್ಮವು ಅತಿಶಯ ಫಲವನ್ನು ಕೊಡುವುದು. ವ್ಯತೀಪಾತ,

CC-0. Jangamwadi Math Collection. Digitized by eGangotri

ಶಿವಲಿಂಗಂ ಬಿಲ್ವಪತ್ರಂ ದುರ್ಲಭಂ ಹಿ ಚತುಷ್ಟಯಂ ।
ಅಹೋ ಬಲವತೀ ಮಾಯಾ ಯಯಾ ಶೈವೀ ಮಹಾತಿಥಿಃ ॥ ೧೩೩ ॥
ನೋಪೋಷ್ಯತೇ ಜನ್ಯೈರ್ಮೂಢೈರ್ಮಹಾಮೂಕೈರಿವ ತ್ರಯೀ ।
ಉಪವಾಸೋ ಜಾಗರಣಂ ಸನ್ನಿಧಿಃ ಪರಮೇಶಿತುಃ ॥ ೧೩೪ ॥
ಗೋಕರ್ಣಂ ಶಿವಲೋಕಸ್ಯ ನೃಣಾಂ ಸೋಪಾನಪದ್ಧತಿಃ ।
ಶೃಣು ರಾಜನ್ನಹಮಪಿ ಗೋಕರ್ಣಾದಧುನಾಗತಃ ॥ ೧೩೫ ॥
ಉಪಾಸ್ಯೈನಾಂ ಶಿವತಿಥಿಂ ವಿಲೋಕ್ಯ ಚ ಮಹೋತ್ಸವಂ ।
ಅಸ್ಯಾಂ ಶಿವತಿಥೌ ಸರ್ವೇ ಮಹೋತ್ಸವದಿದೃಕ್ಷವಃ ॥ ೧೩೬ ॥
ಆಗತಾಃ ಸರ್ವದೇಶೇಭ್ಯಶ್ಚಾತುರ್ವರ್ಣ್ಯಾ ಮಹಾಜನಾಃ ।
ಸ್ತ್ರಿಯೋ ವೃದ್ಧಾಶ್ಚ ಬಾಲಾಶ್ಚ ಚತುರಾಶ್ರಮವಾಸಿನಃ ॥ ೧೩೭ ॥
ಆಗತ್ಯ ದೃಷ್ಟ್ವಾ ದೇವೇಶಂ ಲೇಭಿರೇ ಕೃತಕೃತ್ಯತಾಂ ।
ಅಥಾಽಹಮಪ್ಯಮೀ ಶಿಷ್ಯಾ ಋಷಯಶ್ಚ ತಥಾಽಪರೇ ॥ ೧೩೮ ॥
ರಾಜರ್ಷಯಶ್ಚ ರಾಜೇಂದ್ರ ಸನಕಾದ್ಯಾಃ ಸುರರ್ಷಯಃ ।
ಸ್ನಾತ್ವಾ ಸರ್ವೇಷು ತೀರ್ಥೇಷು ಸಮುಪಾಸ್ಯ ಮಹಾಬಲಂ ॥ ೧೩೯ ॥
ಲಬ್ಧ್ವಾ ಚ ಜನ್ಮಸಾಫಲ್ಯಂ ಪ್ರಯಾತಾಃ ಸರ್ವತೋದಿಶಂ ।
ಅಮುನಾಽದ್ಯ ನರೇಂದ್ರೇಣ ಜನಕೇನ ಯಿಯಕ್ಷುಣಾ ॥ ೧೪೦ ॥

---

ಸಂಕ್ರಾಂತಿ, ಮಹಾಪ್ರದೋಷ ಇವುಗಳಲ್ಲಿ ಮಾಡಿದ ಶಿವಪೂಜೆಯು ಮೋಕ್ಷ ವನ್ನೀಯುವುದು. ಮಹಾವ್ಯಾಧನು ಶಿವನ ಸ್ಥಾನವನ್ನು ಪಡೆದ ಮೋಕ್ಷದಾಯಕವಾದ ಒಂದು ತಿಥಿಯನ್ನು ನಿನಗೆ ಹೇಳುವೆನು. ಅದು ಮಾಘ ಬಹುಳ ಚತುರ್ದಶಿಯಾಗಿರುವುದು. ಈ ಮಾಘಮಾಸ, ಶಿವರಾತ್ರಿ, ಶಿವಲಿಂಗ, ಬಿಲ್ವಪತ್ರೆ ಇವುಗಳು ಲೋಕದಲ್ಲಿ ದುರ್ಲಭವಾದವುಗಳು. ಬಲಿಷ್ಠವಾದ ಮಾಯೆಯಿಂದ ಮೂಢರಾದ ಜನರು ಮೂಕರಂತೆ ಈ ಶಿವರಾತ್ರಿದಿನ ಉಪವಾಸ, ಜಾಗರಣ, ಶಿವನ ಸಮೀಪದಲ್ಲಿ ವಾಸಿಸುವುದು ಈ ಮೂರನ್ನು ಮಾಡುವುದಿಲ್ಲ.

೧೩೫—೧೪೧. ಗೋಕರ್ಣಕ್ಷೇತ್ರವು ಮಾನವರಿಗೆ ಶಿವಲೋಕಕ್ಕೆ ಹೋಗಲು ಮೆಟ್ಟಲು. ಮಹಾರಾಜ! ನಾನೀಗ ಶಿವರಾತ್ರಿಯನ್ನು ಸೇವಿಸಿ, ಮಹೋತ್ಸವವನ್ನು ಕಂಡು ಗೋಕರ್ಣದಿಂದ ಬಂದಿದ್ದೇನೆ. ಈ ಶಿವರಾತ್ರಿದಿನ ಮಹೋತ್ಸವವನ್ನು ನೋಡಲು ಸಕಲದೇಶಗಳಿಂದ ನಾಲ್ಕುಜಾತಿ ಮತ್ತು ಆಶ್ರಮದವರೂ ಹೆಂಗಸರೂ, ಮುದುಕರೂ, ಬಾಲಕರೂ ಬಂದು ಮಹೇಶ್ವರನನ್ನು ಕಂಡು ಧನ್ಯರಾದರು. ನಾನೂ, ಈ ಶಿಷ್ಯರೂ, ಇತರ ಮುನಿಗಳೂ, ರಾಜರ್ಷಿಗಳೂ, ಸನಕಾದಿ ದೇವಮುನಿಗಳೂ ಸಕಲತೀರ್ಥಗಳಲ್ಲಿ ಸ್ನಾನಮಾಡಿ ಮಹಾಬಲೇಶ್ವರನನ್ನು ಸೇವಿಸಿ ಜನ್ಮಸಾರ್ಥಕ್ಯವನ್ನು ಹೊಂದಿ ನಾನಾ ದಿಕ್ಕುಗಳಿಗೆ ಹೊರಟೆವು.

CC-0. Jangamwadi Math Collection. Digitized by eGangotri

ನಿಮಂತ್ರಿತೋಽಹಂ ಸಂಪ್ರಾಪ್ತೋ ಗೋಕರ್ಣಾಜ್ಜಿವಮಂದಿರಾತ್ ।
ಪ್ರತ್ಯಾಗಮಂ ಕಿಮಪ್ಯಂಗ ದೃಷ್ಟ್ವಾಶ್ಚರ್ಯಮಹಂ ಪಥಿ ।
ಮಹಾನಂದೇನ ಮನಸಾ ಕೃತಾರ್ಥೋಽಸ್ಮಿ ಮಹೀಪತೇ ॥ ೧೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಗೋಕರ್ಣ ಮಹಿಮಾನುವರ್ಣನಂ" ನಾಮ ದ್ವಿತೀಯೋಽಧ್ಯಾಯಃ

---

ಈಗ ಯಾಗಮಾಡಲಿಚ್ಛಿಸಿದ ಜನಕಮಹಾರಾಜನ ಆಹ್ವಾನವನ್ನು ಸ್ವೀಕರಿಸಿ ಗೋಕರ್ಣದಿಂದ ಬರುತ್ತ ದಾರಿಯಲ್ಲಿ ಯಾವುದೋ ಒಂದು ಆಶ್ಚರ್ಯವಿಷಯವನ್ನು ನೋಡಿ ಸಂತೋಷಗೊಂಡ ಮನಸ್ಸುಳ್ಳವನಾಗಿ ಧನ್ಯನಾದೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರಖಂಡದಲ್ಲಿ "ಗೋಕರ್ಣಮಹಿಮಾನುವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ತೃತೀಯೋಽಧ್ಯಾಯಃ

### ಶಿವಚತುರ್ದಶೀ ಗೋಕರ್ಣಮಾಹಾತ್ಮ್ಯವರ್ಣನಂ

ರಾಜೋವಾಚ :—

ಕಿಂ ದೃಷ್ಟಂ ಭವತಾ ಬ್ರಹ್ಮನ್ನಾಶ್ಚರ್ಯಂ ಪಥಿ ಕುತ್ರ ವಾ ।
ತನ್ಮಮಾಖ್ಯಾಹಿ ಯೇನಾಽಹಂ ಕೃತಕೃತ್ಯತ್ವಮಾಪ್ನುಯಾಂ ॥ ೧ ॥

ಗೌತಮ ಉವಾಚ :—

ಗೋಕರ್ಣಾದಹಮಾಗಚ್ಛ ಕ್ವಾಽಪಿ ದೇಶೇ ವಿಶಾಂಪತೇ ।
ಜಾತೇ ಮಧ್ಯಾಹ್ನಸಮಯೇ ಲಬ್ಧವಾನ್ವಿಮಲಂ ಸರಃ ॥ ೨ ॥
ತತ್ರೋಽಪಸ್ಪೃಶ್ಯ ಸಲಿಲಂ ವಿನೀಯ ಚ ಪಥಿ ಶ್ರಮಂ ।
ಸುಸ್ನಿಗ್ಧಶೀತಲಚ್ಛಾಯಂ ನ್ಯಗ್ರೋಧಂ ಸಮುಪಾಶ್ರಯಂ ॥ ೩ ॥
ಅಥಾವಿದೂರೇ ಚಾಂಡಾಲೀಂ ವೃದ್ಧಾಮಂಧಾಂ ಕೃಶಾಕೃತಿಂ ।
ಶುಷ್ಯನ್ಮುಖೀಂ ನಿರಾಹಾರಾಂ ಬಹುರೋಗನಿಪೀಡಿತಾಂ ॥ ೪ ॥
ಕುಷ್ಠವ್ರಣಪರೀತಾಂಗೀಮುದ್ಯತ್ಕೃಮಿಕುಲಾಕುಲಾಂ ।
ಪೂಯಶೋಣಿತಸಂಸಕ್ತಜರತ್ಪಟಲಸತ್ಕಟೀಂ ॥ ೫ ॥

---

### ಕನ್ನಡದ ಅನುವಾದ

#### ಶಿವಚತುರ್ದಶೀ ಗೋಕರ್ಣಮಾಹಾತ್ಮ್ಯಾನುವರ್ಣನ

೧. ರಾಜನು ಹೇಳುತ್ತಾನೆ:—ಮುನಿಗಳೆ! ನೀವು ದಾರಿಯಲ್ಲಿ ಎಲ್ಲಿ ಏನನ್ನು ನೋಡಿದಿರಿ? ಅದನ್ನು ನನಗೆ ಹೇಳಿರಿ. ಅದರಿಂದ ನಾನೂ ಧನ್ಯನಾಗುವೆನು.

೨. ಗೌತಮನು ಹೇಳುತ್ತಾನೆ:—ಮಹಾರಾಜ! ನಾನು ಗೋಕರ್ಣದಿಂದ ಬರುತ್ತ ಯಾವುದೊ ಒಂದು ಸ್ಥಳದಲ್ಲಿ ಮಧ್ಯಾಹ್ನ ಸಮಯದಲ್ಲಿ ಒಂದು ನಿರ್ಮಲವಾದ ಸರಸ್ಸನ್ನು ಕಂಡೆನು.

೩. ಅದರಲ್ಲಿ ಆಚಮನ ಮಾಡಿ ಮಾರ್ಗಾಯಾಸವನ್ನು ಹೋಗಲಾಡಿಸಿಕೊಂಡು ತಣ್ಣಗಾದ ನೆರಳುಳ್ಳ ಆಲದ ಮರವನ್ನು ಆಶ್ರಯಿಸಿದೆನು.

೪–೮. ಬಳಿಕ ಹತ್ತಿರದಲ್ಲಿ ಕುರುಡಳೂ, ಕೃಶಳೂ, ಒಣಗಿದ ಮುಖವುಳ್ಳವಳೂ, ಆಹಾರವಿಲ್ಲದವಳೂ, ಅನೇಕ ರೋಗಗಳಿಂದ ಪೀಡಿತಳೂ, ಕುಷ್ಠರೋಗದ ಹುಣ್ಣುಗಳುಳ್ಳವಳೂ, ಹೊರಹೊಮ್ಮುತ್ತಿರುವ ಕ್ರಿಮಿಗಳುಳ್ಳವಳೂ, ಕೀವು, ರಕ್ತಗಳಿಂದ ವ್ಯಾಪ್ತವಾದ ವಸ್ತ್ರವನ್ನುಟ್ಟವಳೂ, ಕ್ಷಯರೋಗದಿಂದ

CC-0. Jangamwadi Math Collection. Digitized by eGangotri

ಮಹಾಯಕ್ಷ್ಮಗಲಸ್ಥೇನ ಕಂಠಸಂರೋಧವಿಹ್ವಲಾಂ ।
ವಿನಷ್ಟದಂತಾಮವ್ಯಕ್ತಾಂ ವಿಲುಠಂತೀಂ ಮುಹುರ್ಮುಹುಃ ॥ ೬ ॥
ಚಂಡಾರ್ಕಕಿರಣಸ್ಪೃಷ್ಟಖರೋಷ್ಣರಜಸಾಪ್ಲುತಾಂ ।
ವಿಣ್ಮೂತ್ರಪೂಯದಿಗ್ಧಾಂಗೀಮಸೃಗ್ಗಂಧದುರಾಸದಾಂ ॥ ೭ ॥
ಕಫರೋಗಬಹುಶ್ವಾಸಶ್ಲಥನಾಡೀಬಹುವ್ಯಥಾಂ ।
ವಿಧ್ವಸ್ತಕೇಶಾವಯವಾಮಪಶ್ಯಂ ಮರಣೋನ್ಮುಖೀಂ ॥ ೮ ॥
ತಾದೃಗ್ವ್ಯಥಾಂ ಚ ತಾಂ ವೀಕ್ಷ್ಯ ಕೃಪಯಾಽಹಂ ಪರಿಪ್ಲುತಃ ।
ಪ್ರತೀಕ್ಷನ್ಮರಣಂ ತಸ್ಯಾಃ ಕ್ಷಣಂ ತತ್ರೈವ ಸಂಸ್ಥಿತಃ ॥ ೯ ॥
ತಥಾಂತರಿಕ್ಷಪದವೀಂ ಸಿಂಚಂತಮಿವ ರಶ್ಮಿಭಿಃ ।
ದಿವ್ಯಂ ವಿಮಾನಮಾನೀತಮದ್ರಾಕ್ಷಂ ಶಿವಕಿಂಕರೈಃ ॥ ೧೦ ॥
ತಸ್ಮಿನ್ರವೀಂದುವಹ್ನೀನಾಂ ತೇಜಸಾಮಿವ ಪಂಜರೇ ।
ವಿಮಾನೇ ಸೂರ್ಯಸಂಕಾಶಾನಪಶ್ಯಂ ಶಿವಕಿಂಕರಾನ್ ॥ ೧೧ ॥
ತೇ ವೈ ತ್ರಿಶೂಲಖಟ್ವಾಂಗಟಂಕಚರ್ಮಾಸಿಪಾಣಯಃ ।
ಚಂದ್ರಾರ್ಧಭೂಷಣಾಃ ಸಾಂದ್ರಚಂದ್ರಕುಂದೋರುವರ್ಚಸಃ ॥ ೧೨ ॥
ಕಿರೀಟಕುಂಡಲಭ್ರಾಜನ್ಮಹಾಹಿವಲಯೋಜ್ವಲಾಃ ।
ಶಿವಾನುಗಾ ಮಯಾ ದೃಷ್ಟಾಶ್ಚತ್ವಾರಃ ಶುಭಲಕ್ಷಣಾಃ ॥ ೧೩ ॥

---

ಕುಗ್ಗಿದ ಕಂಠವುಳ್ಳವಳೂ, ಹಲ್ಲುಗಳಿಲ್ಲದೆ ಅಸ್ಪಷ್ಟವಾಗಿ ನುಡಿಯುತ್ತ ಹೊರಳಾಡುತ್ತಿರುವವಳೂ, ಚಂಡಸೂರ್ಯಕಿರಣಗಳಿಂದ ಕಾದ ಧೂಳುಗಳಿಂದ ವ್ಯಾಪ್ತಳೂ, ಮಲ, ಮೂತ್ರ, ಕೀವುಗಳಿಂದ ಲಿಪ್ತಾಂಗಳೂ, ರಕ್ತದ ದುರ್ವಾಸನೆಯುಳ್ಳವಳೂ, ಕಫರೋಗದ ಉಬ್ಬಸದಿಂದ ಸಡಿಲವಾದ ನರಗಳುಳ್ಳವಳಾಗಿ ಬಹಳ ವ್ಯಥೆಪಡುತ್ತಿರುವವಳೂ, ಉದುರಿದ ಕೂದಲು ಮತ್ತು ಅಂಗಗಳುಳ್ಳವಳೂ, ಸಾಯುತ್ತಿರುವವಳೂ ಆಗಿರುವ ಓರ್ವ ಚಂಡಾಲರ ಮುದುಕಿಯನ್ನು ಕಂಡೆನು.

೯. ಹಾಗೆ ವ್ಯಥೆಪಡುತ್ತಿರುವ ಅವಳನ್ನು ನೋಡಿ ನಾನು ದಯೆಗೊಂಡು ಅವಳ ಸಾವನ್ನು ನಿರೀಕ್ಷಿಸುತ್ತ ಕ್ಷಣಕಾಲ ಅಲ್ಲಿಯೇ ನಿಂತೆನು.

೧೦. ಬಳಿಕ ಆಕಾಶಮಾರ್ಗವನ್ನು ಕಾಂತಿಯಿಂದ ಬೆಳಗುತ್ತಿರುವ ಶಿವದೂತರು ತಂದ ವಿಮಾನವನ್ನೀಕ್ಷಿಸಿದೆನು.

೧೧. ಚಂದ್ರ, ಸೂರ್ಯ, ಅಗ್ನಿಗಳ ಕಾಂತಿಪಂಜರದಂತಿರುವ ಆ ವಿಮಾನದೊಳಗೆ ಸೂರ್ಯನಂತಿರುವ ನಾಲ್ಕು ಮಂದಿ ಶಿವದೂತರನ್ನು ಕಂಡೆನು.

೧೨–೧೩. ಅವರು ತ್ರಿಶೂಲ, ಖಟ್ವಾಂಗ, ಉಳಿ, ಗುರಾಣಿ, ಕತ್ತಿಗಳನ್ನು ಹಿಡಿದು, ಅರ್ಧಚಂದ್ರನಿಂದಲಂಕೃತರಾಗಿ, ಚಂದ್ರ, ಮಲ್ಲಿಗೆ ಹೂವುಗಳ ತೇಜಸ್ಸುಳ್ಳವರಾಗಿ, ಕಿರೀಟಕುಂಡಲಗಳಿಂದ ಪ್ರಕಾಶಮಾನರೂ, ಸರ್ಪದ ಬಳೆಗಳಿಂದ ಉಜ್ವಲರೂ, ಮನೋಹರಲಕ್ಷಣವುಳ್ಳವರೂ ಆಗಿದ್ದರು.


CC-0. Jangamwadi Math Collection. Digitized by eGangotri

ತಾನಾಪತತ ಆಲೋಕ್ಯ ವಿಮಾನಸ್ಥಾನ್ಸುವಿಸ್ಮಿತಃ ।
ಉಪಸೃತ್ಯಾಂತಿಕೇ ವೇಗಾದಪೃಚ್ಛಂ ಗಗನೇ ಸ್ಥಿತಾನ್ ॥ ೧೪ ॥
ನಮೋ ನಮೋ ವಸ್ತ್ರಿದಶೋತ್ತಮೇಭ್ಯ
ಸ್ತ್ರಿಲೋಚನಶ್ರೀ ಚರಣಾನುಗೇಭ್ಯಃ ।
ತ್ರಿಲೋಕರಕ್ಷಾವಿಧಿಮಾವಹದ್ಭ್ಯ
ಸ್ತ್ರಿಶೂಲ ಚರ್ಮಾಸಿಗದಾಧರೇಭ್ಯಃ ॥ ೧೫ ॥
ವಿದಿತಾ ಹಿ ಮಯಾ ಯೂಯಂ ಮಹೇಶ್ವರಪದಾನುಗಾಃ ।
ಇಯಂ ವೋ ಲೋಕರಕ್ಷಾರ್ಥಾ ಗತಿರಾಹೋ ವಿನೋದಜಾ ॥ ೧೬ ॥
ಉತ ಸರ್ವಜನಾಘೌಘವಿಜಯಾಯ ಕೃತೋದ್ಯಮಾಃ ।
ಬ್ರೂತ ಕಾರುಣ್ಯತೋ ಮಹ್ಯಂ ಯಸ್ಮಾದ್ಯೂಯಮಿಹಾಗತಾಃ ॥ ೧೭ ॥
ಶಿವದೂತಾ ಊಚುಃ:—
ಏಷಾಗ್ರೇ ದೃಶ್ಯತೇ ವೃದ್ಧಾ ಚಾಂಡಾಲೀ ಮರಣೋನ್ಮುಖೀ ।
ಏತಾಮಾನೇತುಮಾಯಾತಾಃ ಸಂದಿಷ್ಟಾಃ ಪ್ರಭುಣಾ ವಯಂ ॥ ೧೮ ॥
ಇತ್ಯುಕ್ತೇ ಶಿವದೂತೈಸ್ತೈರಪೃಚ್ಛಂ ಪುನರಪ್ಯಹಂ ।
ವಿಸ್ಮಯಾವಿಷ್ಟಚಿತ್ತಸ್ಸನ್ಕೃತಾಂಜಲಿರವಸ್ಥಿತಃ ॥ ೧೯ ॥
ಅಹೋ ಪಾಪೀಯಸೀ ಘೋರಾ ಚಾಂಡಾಲೀ ಕಥಮರ್ಹತಿ ।
ದಿವ್ಯಂ ವಿಮಾನಮಾರೋಢುಂ ಶುನೀವಾಧ್ವರಮಂಡಲಂ ॥ ೨೦ ॥

---

೧೪. ನಾನು ವಿಮಾನಾರೂಢರಾಗಿ ಆಕಾಶದಲ್ಲಿ ಬರುತ್ತಿರುವ ಅವರನ್ನು ನೋಡಿ ಆಚ್ಚರಿಗೊಂಡು ಬೇಗನೆ ಹತ್ತಿರ ಹೋಗಿ ಹೀಗೆ ಕೇಳಿದೆನು :—

೧೫. "ದೇವೋತ್ತಮರೂ, ಶಿವಸೇವಕರೂ, ಮೂರು ಲೋಕಗಳ ರಕ್ಷಾಕಾರ್ಯದಲ್ಲಿ ನಿರತರೂ, ತ್ರಿಶೂಲ, ಗುರಾಣಿ, ಕತ್ತಿ, ಗದೆ ಇವುಗಳನ್ನು ಧರಿಸಿದವರೂ ಆದ ಎಲೈ ಶಿವಕಿಂಕರರೇ ! ನಿಮಗೆ ನಮಸ್ಕಾರವು.

೧೬. ನೀವು ಪರಮೇಶ್ವರನ ದೂತರೆಂಬುದನ್ನು ತಿಳಿದೆನು. ಈಗ ನೀವು ಲೋಕರಕ್ಷಣೆಗಾಗಿ ಹೊರಟಿರುವಿರೊ, ಅಥವಾ ವಿಹಾರಕ್ಕಾಗಿ ಹೊರಟಿರುವಿರೊ?

೧೭. ಅಥವಾ ಸಮಸ್ತ ಜನರ ಪಾಪಸಮೂಹದ ನಾಶಕ್ಕಾಗಿ ಉದ್ಯುಕ್ತರಾಗಿದ್ದೀರೊ? ದಯವಿಟ್ಟು ನನಗೆ ಹೇಳಿರಿ.

೧೮. ಶಿವದೂತರು ಹೇಳುತ್ತಾರೆ:—ಇಗೋ, ಇಲ್ಲಿನೋಡು. ವೃದ್ಧಳಾದ ಈ ಚಾಂಡಾಲಿಯು ಸಾಯುತ್ತಿದ್ದಾಳೆ. ಇವಳನ್ನು ಕರೆತರುವುದಕ್ಕಾಗಿ ನಮ್ಮ ಪ್ರಭುವು ಆಜ್ಞಾಪಿಸಿರುತ್ತಾನೆ.

೧೯. ಶಿವದೂತರು ಹೀಗೆನ್ನಲು ನಾನು ಆಶ್ಚರ್ಯಗೊಂಡವನಾಗಿ ಕೈಮುಗಿದುಕೊಂಡು ತಿರುಗಿ ಅವರನ್ನು ಹೀಗೆ ಕೇಳಿದೆನು.

೨೦. "ಇದೇನಾಶ್ಚರ್ಯ! ಘೋರಪಾಪಿನಿಯಾದ ಈ ಚಂಡಾಲರ

CC-0. Jangamwadi Math Collection. Digitized by eGangotri

ಆಜನ್ಮತೋಽಶುಚಿಪ್ರಾಯಾಂ ಪಾಪಾಂ ಪಾಪಾಽನುಗಾಮಿನೀಂ ।
ಕಥಮೇನಾಂ ದುರಾಚಾರಾಂ ಶಿವಲೋಕಂ ನಿನೀಷಥ ॥ ೨೧ ॥
ಅಸ್ಯಾ ನಾಽಸ್ತಿ ಶಿವಜ್ಞಾನಂ ನಾಽಸ್ತಿ ಘೋರತರಂ ತಪಃ ।
ಸತ್ಯಂ ನಾಽಸ್ತಿ ದಯಾ ನಾಽಸ್ತಿ ಕಥಮೇನಾಂ ನಿನೀಷಥ ॥ ೨೨ ॥
ಪಶುಮಾಂಸಕೃತಾಹಾರಾಂ ವಾರುಣೀಪೂರಿತೋದರಾಂ ।
ಜೀವಹಿಂಸಾರತಾಂ ನಿತ್ಯಂ ಕಥಮೇನಾಂ ನಿನೀಷಥ ॥ ೨೩ ॥
ನ ಚ ಪಂಚಾಕ್ಷರೀ ಜಪ್ತಾ ನ ಕೃತಂ ಶಿವಪೂಜನಂ ।
ನ ಧ್ಯಾತೋ ಭಗವಾಂಛಂಭುಃ ಕಥಮೇನಾಂ ನಿನೀಷಥ ॥ ೨೪ ॥
ನೋಪೋಷಿತಾ ಶಿವತಿಥಿರ್ನಕೃತಂ ಶಿವಪೂಜನಂ ।
ಭೂತಸೌಹೃದಂ ನ ಜಾನಾತಿ ನ ಚ ಬಿಲ್ವಶಿವಾಽರ್ಪಣಂ ।
ನೇಷ್ಟಾ ಪೂರ್ತಾದಿಕಂ ವಾಽಪಿ ಕಥಮೇನಾಂ ನಿನೀಷಥ ॥ ೨೫ ॥
ನ ಚ ಸ್ನಾತಾನಿ ತೀರ್ಥಾನಿ ನ ದಾನಾನಿ ಕೃತಾನಿ ಚ ।
ನ ಚ ವ್ರತಾನಿ ಚೀರ್ಣಾನಿ ಕಥಮೇನಾಂ ನಿನೀಷಥ ॥ ೨೬ ॥

---

ಮುದುಕಿಯು ಹೆಣ್ಣುನಾಯಿಯು ಯಜ್ಞವನ್ನು ಪ್ರವೇಶಿಸುವಂತೆ ದಿವ್ಯವಿಮಾನವನ್ನೇರಲು ಹೇಗೆ ಅರ್ಹಳಾಗುವಳು?

೨೧. ಹುಟ್ಟಿದಂದಿನಿಂದ ಅಶುದ್ಧಳೂ, ಪಾಪವುಳ್ಳವಳೂ, ಪಾಪಿಗಳನ್ನನುಸರಿಸಿದವಳೂ, ದುರಾಚಾರಳೂ ಆಗಿರುವ ಇವಳನ್ನು ಶಿವಲೋಕಕ್ಕೆ ಹೇಗೆ ಕರೆದುಕೊಂಡು ಹೋಗಲಪೇಕ್ಷಿಸುವಿರಿ?

೨೨. ಇವಳಲ್ಲಿ ಶಿವಜ್ಞಾನವೂ, ಘೋರತಪಸ್ಸೂ, ಸತ್ಯವೂ, ದಯೆಯೂ ಇರುವುದಿಲ್ಲ.

೨೩. ಇವಳು ಪಶುಮಾಂಸಹಾರವುಳ್ಳವಳೂ, ಹೆಂಡದಿಂದ ತುಂಬಿದ ಹೊಟ್ಟೆಯುಳ್ಳವಳೂ, ಪ್ರಾಣಿಹಿಂಸೆಯಲ್ಲಿ ನಿರತಳೂ ಆಗಿದ್ದಾಳೆ.

೨೪. ಇವಳು ಪಂಚಾಕ್ಷರಿಯನ್ನು ಜಪಿಸಲಿಲ್ಲ; ಶಿವಪೂಜೆಗೈಯಲಿಲ್ಲ; ಶಿವನನ್ನು ಧ್ಯಾನಿಸಲಿಲ್ಲ.

೨೫. ಶಿವರಾತ್ರಿಯ ದಿನ ಉಪವಾಸ ಮಾಡಿ ಶಿವನನ್ನರ್ಚಿಸಲಿಲ್ಲ. ಪ್ರಾಣಿಗಳಲ್ಲಿ ಪ್ರೀತಿಮಾಡುವುದನ್ನೂ, ಬಿಲ್ವಪತ್ರೆಯಿಂದ ಶಿವಪೂಜೆ ಮಾಡುವುದನ್ನೂ ಅರಿತವಳಲ್ಲ. ಯಜ್ಞ, ತಟಾಕ ಮೊದಲಾದವುಗಳನ್ನು ನಿರ್ಮಾಣಮಾಡಲು ತಿಳಿದವಳಲ್ಲ.

೨೬. ತೀರ್ಥಗಳಲ್ಲಿ ಎಂದೂ ಮಿಂದವಳಲ್ಲ. ದಾನಮಾಡಿದವಳಲ್ಲ. ವ್ರತವನ್ನಾಚರಿಸಿದವಳಲ್ಲ. ಇಂಥವಳನ್ನು ಶಿವಲೋಕಕ್ಕೆ ಹೇಗೆ ಕರೆದುಕೊಂಡು ಹೋಗುತ್ತೀರಿ?

CC-0. Jangamwadi Math Collection. Digitized by eGangotri

ಈಕ್ಷಣೇ ಪರಿಹರ್ತವ್ಯಾ ಕಿಮು ಸಂಭಾಷಣಾದಿಷು ।
ಸತ್ಸಂಗರಹಿತಾಂ ಚಂಡಾಂ ಕಥಮೇನಾಂ ನಿನೀಷಥ ॥ ೨೭ ॥
ಜನ್ಮಾಂತರಾರ್ಜಿತಂ ಕಿಂಚಿದಸ್ಯಾಃ ಸುಕೃತಮಸ್ತಿ ವಾ ।
ತತ್ಕಥಂ ಕುಷ್ಟರೋಗೇಣ ಕೃಮಿಭಿಃ ಪರಿಭೂಯತೇ ॥ ೨೮ ॥
ಅಹೋ ಈಶ್ವರ ಚರ್ಯೇಯಂ ದುರ್ವಿಭಾವ್ಯಾ ಶರೀರಿಣಾಂ ।
ಪಾಪಾತ್ಮಾನೋಽಪಿ ನೀಯಂತೇ ಕಾರುಣ್ಯಾತ್ಪರಮಂ ಪದಂ ॥ ೨೯ ॥
ಇತ್ಯುಕ್ತಾಸ್ತೇ ಮಯಾ ದೂತಾ ದೇವದೇವಸ್ಯ ಶೂಲಿನಃ ।
ಪ್ರತ್ಯೂಚುರ್ಮಾಮಥ ಪ್ರೀತ್ಯಾ ಸರ್ವಸಂಶಯಭೇದಿನಃ ॥ ೩೦ ॥

ಶಿವದೂತಾ ಊಚುಃ:—

ಬ್ರಹ್ಮನ್ಸುಮಹದಾಶ್ಚರ್ಯಂ ಶೃಣು ಕೌತೂಹಲಂ ಯದಿ ।
ಇಮಾಮುದ್ದಿಶ್ಯ ಚಾಂಡಾಲೀಂ ಯದುಕ್ತಂ ಭವತಾಽಧುನಾ ॥ ೩೧ ॥
ಆಸೀದಿಯಂ ಪೂರ್ವಭವೇ ಕಾಚಿದ್ಬ್ರಾಹ್ಮಣಕನ್ಯಕಾ ।
ಸುಮಿತ್ರಾನಾಮ ಸಂಪೂರ್ಣಸೋಮಬಿಂಬಸಮಾನನಾ ॥ ೩೨ ॥
ಉತ್ಫುಲ್ಲಮಲ್ಲಿಕಾದಾಮಸುಕುಮಾರಾಂಗಲಕ್ಷಣಾ ।
ಕೈಕೇಯದ್ವಿಜಮುಖ್ಯಸ್ಯ ಕಸ್ಯಚಿತ್ತನಯಾ ಸತೀ ॥ ೩೩ ॥

---

೨೭. ಚಂಡಾಲಸ್ತ್ರೀಯಾದ ಇವಳನ್ನು ನೋಡಕೂಡದು. ಇವಳೊಡನೆ ಮಾತಾಡಲೇಬಾರದು. ಸಜ್ಜನರ ಸಹವಾಸದಿಂದ ಬಹಿಷ್ಕೃತಳಾದ ಇಂತಹಳನ್ನು ಹೇಗೆ ಕರೆದುಕೊಂಡುಹೋಗುತ್ತೀರಿ?

೨೮. ಇವಳು ಜನ್ಮಾಂತರದಲ್ಲಿ ಗಳಿಸಿದ ಪುಣ್ಯವೇನಾದರೂ ಇದೆಯೆ? ಹಾಗಿದ್ದರೆ ಇವಳನ್ನು ಕುಷ್ಠರೋಗದ ಕ್ರಿಮಿಗಳು ಹೇಗೆ ಪೀಡಿಸುತ್ತವೆ?

೨೯. ಈಶ್ವರನ ಕಾರ್ಯವು ಮಾನವರಿಗೆ ತಿಳಿಯಲಾಗದು.. ಅವನು ದಯೆಯಿಂದ ಪಾಪಿಗಳನ್ನೂ ಉತ್ತಮ ಪದವಿಗೇರಿಸುವನು.''

೩೦. ಹೀಗೆ ನಾನು ಹೇಳಲು ಸಕಲ ಸಂಶಯಗಳನ್ನೂ ಪರಿಹರಿಸುವ ಆ ಶಿವದೂತರು ನನ್ನನ್ನು ಕುರಿತು ಇಂತೆಂದರು.

೩೧. ಶಿವದೂತರು ಹೇಳುತ್ತಾರೆ:–'' ಅಯ್ಯಾ ಬ್ರಾಹ್ಮಣನೆ! ಈ ಚಂಡಾಲ ಸ್ತ್ರೀಯನ್ನು ಕುರಿತು ನೀನು ಆಡಿದ ಮಾತು ಆಶ್ಚರ್ಯಕರವಾದುದು. ನಿನಗೆ ತಿಳಿಯಲು ಕುತೂಹಲವಿದ್ದರೆ ಕೇಳು.

೩೨–೩೩. ಇವಳು ಹಿಂದಿನ ಜನ್ಮದಲ್ಲಿ ಪೂರ್ಣಿಮಾಚಂದ್ರನಂತೆ ಮುಖವುಳ್ಳವಳೂ, ಅರಳಿದ ಮಲ್ಲಿಗೆಯ ಹೂವಿನಂತೆ ಕೋಮಲಾಂಗಿಯೂ ಆಗಿ ಕೇಕಯದೇಶದ ಓರ್ವ ಬ್ರಾಹ್ಮಣಶ್ರೇಷ್ಠನಿಗೆ ಸುಮಿತ್ರೆಯೆಂಬ ಕುಮಾರಿಯಾಗಿ ಜನಿಸಿದಳು.

CC-0. Jangamwadi Math Collection. Digitized by eGangotri

ತಾಂ ಸರ್ವಲಕ್ಷಣೋಪೇತಾಂ ರತಿಮೂರ್ತಿಮಿವಾಪರಾಂ ।
ವರ್ಧಮಾನಾಂ ಪಿತುರ್ಗೇಹೇ ವೀಕ್ಷ್ಯಾಸನ್ವಿಸ್ಮಿತಾ ಜನಾಃ ॥ ೩೪ ॥
ದಿನೇ ದಿನೇ ವರ್ಧಮಾನಾ ಬಂಧುಭಿರ್ಲಾಲಿತಾ ಭೃಶಂ ।
ಸಾ ಶನೈರ್ಯೌವನಂ ಭೇಜೇ ಸ್ಮರಸ್ಯೇವ ಮಹಾಧನುಃ ॥ ೩೫ ॥
ಅಥ ಸಾ ಬಂಧುವರ್ಗೈಶ್ಚ ಸಮೇತೇನ ಕುಮಾರಿಕಾ ।
ಪಿತ್ರಾ ಪ್ರದತ್ತಾ ಕಸ್ಮೈಚಿದ್ವಿಧಿನಾ ದ್ವಿಜಸೂನವೇ ॥ ೩೬ ॥
ಸಾ ಭರ್ತಾರಮನುಪ್ರಾಪ್ಯ ನವಯೌವನಶಾಲಿನೀ ।
ಕಂಚಿತ್ಕಾಲಂ ಶುಭಾಚಾರಾ ರೇಮೇ ಬಂಧುಭಿರಾವೃತಾ ॥ ೩೭ ॥
ಅಥ ಕಾಲವಶಾತ್ತಸ್ಯಾಃ ಪತಿಸ್ತೀವ್ರರುಜಾರ್ದಿತಃ ।
ರೂಪಯೌವನಕಾಂತೋಽಪಿ ಪಂಚತ್ವಮುಗಮನ್ಮುನೇ ॥ ೩೮ ॥
ಮೃತೇ ಭರ್ತರಿ ದುಃಖೇನ ವಿದಗ್ಧಹೃದಯಾ ಸತೀ ।
ಉವಾಸ ಕತಿಚಿನ್ಮಾಸಾನ್ಸುಶೀಲಾ ವಿಜಿತೇಂದ್ರಿಯಾ ॥ ೩೯ ॥
ಅಥ ಯೌವನಭಾರೇಣ ಜೃಂಭಮಾಣೇನ ನಿತ್ಯಶಃ ।
ಬಭೂವ ಹೃದಯಂ ತಸ್ಯಾಃ ಕಂದರ್ಪಪರಿಕಂಪಿತಂ ॥ ೪೦ ॥

---

೩೪. ತಂದೆಯ ಮನೆಯಲ್ಲಿ ಸಮಸ್ತ ಲಕ್ಷಣವುಳ್ಳವಳಾಗಿ ಬೆಳೆಯುತ್ತ ರತಿಯ ಮತ್ತೊಂದು ಮೂರ್ತಿಯಂತಿರುವ ಅವಳನ್ನು ಕಂಡು ಜನರು ವಿಸ್ಮಿತರಾದರು.

೩೫. ಬಂಧುಗಳಿಂದ ಲಾಲಿತಳಾಗಿ ದಿನದಿನಕ್ಕೂ ಬೆಳೆಯುತ್ತ ಅವಳು ಮೆಲ್ಲನೆ ಯೌವನವನ್ನು ಹೊಂದಿ ಮನ್ಮಥನ ಬಿಲ್ಲಿನಂತಾದಳು.

೩೬. ಬಳಿಕ ಅವಳ ತಂದೆಯು ಬಂಧುಗಳೊಡನೆ ವಿಧಿಪೂರ್ವಕವಾಗಿ ಒಬ್ಬ ಬ್ರಾಹ್ಮಣ ಕುಮಾರನಿಗೆ ಅವಳನ್ನು ವಿವಾಹಮಾಡಿಕೊಟ್ಟನು.

೩೭. ನವಯೌವನವುಳ್ಳವಳೂ, ಬಂಧುಸಮೇತಳೂ ಆದ ಅವಳು ಪತಿಯೊಡನೆ ಒಳ್ಳೆಯ ನಡತೆಯುಳ್ಳವಳಾಗಿ ಕೆಲವು ಕಾಲ ಸಂಸಾರ ಮಾಡಿದಳು.

೩೮. ಮುನಿಯೆ! ಬಳಿಕ ಕಾಲವಶದಿಂದ ಅವಳ ಗಂಡನು ಕಠಿನ ರೋಗದಿಂದ ಪೀಡಿತನಾಗಿ ಆಕೃತಿ, ಯೌವನಗಳಿಂದ ಸುಂದರನಾಗಿದ್ದಾಗ್ಗೂ ಮೃತನಾದನು.

೩೯. ಪತಿಯು ಮೃತನಾಗಲು ದುಃಖಾಕ್ರಾಂತಳಾದ ಅವಳು ಕೆಲವು ತಿಂಗಳು ಜಿತೇಂದ್ರಿಯಳಾಗಿಯೂ ಒಳ್ಳೆಯ ನಡತೆಯುಳ್ಳವಳಾಗಿಯೂ ಇದ್ದಳು.

೪೦. ತರುವಾಯ ಪ್ರತಿದಿನವೂ ಹೆಚ್ಚುತ್ತಿರುವ ತಾರುಣ್ಯದಿಂದ ಅವಳ ಮನಸ್ಸು ಮನ್ಮಥನಿಂದ ಕಂಪಿತವಾಗಿಹೋಯಿತು.

CC-0. Jangamwadi Math Collection. Digitized by eGangotri

ಸಾ ಗುಪ್ತಾ ಬಂಧುವರ್ಗೇಣ ಶಾಸಿತಾಽಪಿ ಮಹೋತ್ತಮೈಃ ।
ನ ಶಶಾಕ ಮನೋ ರೋದ್ಧುಂ ಮದನಾಕೃಷ್ಟಮಂಗನಾ ॥ ೪೧ ॥
ಸಾ ತೀವ್ರಮನ್ಮಥಾವಿಷ್ಟಾ ರೂಪಯೌವನಶಾಲಿನೀ ।
ವಿಧವಾಽಪಿ ವಿಶೇಷೇಣ ಜಾರಮಾರ್ಗರತಾಽಭವತ್ ॥ ೪೨ ॥
ನ ಜ್ಞಾತಾ ಕೇನಚಿದಪಿ ಜಾರಿಣೀತಿ ವಿಚಕ್ಷಣಾ ।
ಜುಗೂಹಾತ್ಮದುರಾಚಾರಂ ಕಂಚಿತ್ಕಾಲಮಸತ್ತಮಾ ॥ ೪೩ ॥
ತಾಂ ದೋಹದ ಸಮಾಕ್ರಾಂತಾಂ ಘನನೀಲಮುಖಸ್ತನೀಂ ।
ಕಾಲೇನ ಬಂಧುವರ್ಗೋಽಪಿ ಬುಬೋಧವಿಟದೂಷಿತಾಂ ॥ ೪೪ ॥
ಇತಿ ಭೀತೋ ಮಹಾಕ್ಲೇಶಾಚ್ಚಿಂತಾಂ ಲೇಭೇ ದುರತ್ಯಯಾಂ ।
ಸ್ತ್ರಿಯಃ ಕಾಮೇನ ನಶ್ಯಂತಿ ಬ್ರಾಹ್ಮಣಾ ಹೀನಸೇವಯಾ ॥ ೪೫ ॥
ರಾಜಾನೋ ಬ್ರಹ್ಮದಂಡೇನ ಯತಯೋ ಭೋಗಸಂಗ್ರಹಾತ್ ।
ಲೀಢಂ ಶುನಾ ತಥೈವಾಽನ್ನಂ ಸುರಯಾ ವಾರ್ಪಿತಂ ಪಯಃ ॥ ೪೬ ॥
ರೂಪಂ ಕುಷ್ಟರುಜಾವಿಷ್ಟಂ ಕುಲಂ ನಶ್ಯತಿ ಕುಸ್ತ್ರಿಯಾ ।
ಇತಿ ಸರ್ವೇ ಸಮಾಲೋಚ್ಯ ಸಮೇತಾಃ ಪತಿಸೋದರಾಃ ॥ ೪೭ ॥
ತತ್ಯಜುರ್ಗೋತ್ರತೋ ದೂರಂ ಗೃಹೀತ್ವಾ ಸಕಚಗ್ರಹಂ ।
ಸಘಟೋತ್ಸರ್ಗಮುತ್ಸೃಷ್ಟಾ ಸಾ ನಾರೀ ಸರ್ವಬಂಧುಭಿಃ ॥ ೪೮ ॥

---

೪೧. ಬಂಧುಗಳು ಅವಳನ್ನು ರಕ್ಷಿಸಿದರೂ, ದೊಡ್ಡವರು ಶಿಕ್ಷಿಸಿದರೂ ಅವಳು ಮದನಪೀಡಿತಳಾಗಿ ಮನಸ್ಸನ್ನು ತಡೆಯಲು ಸಮರ್ಥಳಾಗಲಿಲ್ಲ.

೪೨. ಸೌಂದರ್ಯಯೌವನಗಳಿಂದ ಕಂಗೊಳಿಸುತ್ತಿರುವ ಅವಳು ಅತ್ಯಂತ ಮನ್ಮಥಪೀಡಿತಳಾಗಿ ವಿಧವೆಯಾದಾಗ್ಗೂ ವ್ಯಭಿಚಾರಿಣಿಯಾದಳು.

೪೩. ಅತಿ ನೀಚಳಾದ ಅವಳು ಯಾರೂ ತನ್ನನ್ನು ವ್ಯಭಿಚಾರಿಣಿಯೆಂದು ತಿಳಿಯದಹಾಗೆ ಬಹು ಜಾಣತನದಿಂದ ಕೆಲವುಕಾಲ ತನ್ನ ದುರ್ನಡತೆಯನ್ನು ಮುಚ್ಚಿಕೊಂಡಿದ್ದಳು.

೪೪–೪೮. ಕೆಲವು ಕಾಲದಮೇಲೆ ಗರ್ಭದ ಚಿಹ್ನೆಯುಳ್ಳವಳೂ, ಅತಿ ನೀಲ ಕುಚಾಗ್ರವುಳ್ಳವಳೂ ಆದ ಅವಳನ್ನು ಕಂಡು ಬಂಧುಗಳು ಜಾರಿಣಿಯಾಗಿದ್ದಾಳೆಂದು ತಿಳಿದರು. ಇದರಿಂದ ಅವಳು ಅತ್ಯಂತವಾಗಿ ಭಯಗೊಂಡು ಬಹಳ ಚಿಂತಾಕ್ರಾಂತಳಾದಳು. ಅವಳ ಗಂಡನ ಸಹೋದರರು, "ಹೆಂಗಸರು ಕಾಮದಿಂದಲೂ, ಬ್ರಾಹ್ಮಣರು ನೀಚರ ಸೇವೆಯಿಂದಲೂ, ರಾಜರು ಬ್ರಾಹ್ಮಣರನ್ನು ಶಿಕ್ಷಿಸುವುದರಿಂದಲೂ, ಸನ್ಯಾಸಿಗಳು ಸುಖಾನುಭವದ ವಸ್ತುಗಳನ್ನು ಸಂಗ್ರಹಿಸುವುದರಿಂದಲೂ, ಅನ್ನವು ನಾಯಿಯು ನೆಕ್ಕುವುದರಿಂದಲೂ, ಹಾಲು ಹೆಂಡದ ಸೇರುವಿಕೆಯಿಂದಲೂ, ಸೌಂದರ್ಯವು ಕುಷ್ಠರೋಗದಿಂದಲೂ, ವಂಶವು ದುಷ್ಟ

CC-0. Jangamwadi Math Collection. Digitized by eGangotri

ವಿಚರಂತೀ ಚ ಶೂದ್ರೇಣ ರಮಮಾಣಾ ರತಿಪ್ರಿಯಾ ।
ಸಾ ಯಯೌ ಸ್ತ್ರೀ ಬಹಿರ್ಗ್ರಾಮಾದ್ದೃಷ್ಟ್ವಾ ಶೂದ್ರೇಣ ಕೇನಚಿತ್ ॥ ೪೯ ॥
ಸ ತಾಂ ದೃಷ್ಟ್ವಾ ವರಾರೋಹಾಂ ಪೀನೋನ್ನತಪಯೋಧರಾಂ ।
ಗೃಹಂ ನಿನಾಯ ಸಾಮ್ನಾಚ ವಿಧವಾಂ ಶೂದ್ರನಾಯಕಃ ।
ಸಾ ನಾರೀ ತಸ್ಯ ಮಹಿಷೀಭೂತ್ವಾ ತೇನ ದಿವಾನಿಶಂ ॥ ೫೦ ॥
ರಮಮಾಣಾ ಕ್ವಚಿದ್ದೇಶೇ ನ್ಯವಸದ್ಗೃಹವಲ್ಲಭಾ ।
ತತ್ರ ಸಾ ಪಿಶಿತಾಹಾರಾ ನಿತ್ಯಮಾಪೀತವಾರುಣೀ ॥ ೫೧ ॥
ಲೇಭೇ ಸುತಂ ಚ ಶೂದ್ರೇಣ ರಮಮಾಣಾ ರತಿಪ್ರಿಯಾ ।
ಕದಾಚಿದ್ಭರ್ತರಿ ಕ್ವಾಽಪಿ ಯಾತೇ ಪೀತಸುರಾ ತು ಸಾ ॥ ೫೨ ॥
ಇಯೇಷ ಪಿಶಿತಾಹಾರಂ ಮದಿರಾಮದವಿಹ್ವಲಾ ।
ಅಥ ಮೇಷೇಷು ಬದ್ಧೇಷು ಗೋಭಿಃ ಸಹ ಬಹಿರ್ವ್ರಜೇ ॥ ೫೩ ॥
ಯಯೌ ಕೃಪಾಣಮಾದಾಯ ಸಾ ತಮೋಽಂಧೇ ನಿಶಾಮುಖೇ ।
ಅವಿಮೃಶ್ಯ ಮದಾವೇಶಾನ್ಮೇಷಬುದ್ಧ್ಯಾಮಿಷಪ್ರಿಯಾ ॥ ೫೪ ॥
ಏಕಂ ಜಘಾನ ಗೋವತ್ಸಂ ಕ್ರೋಶಂತಂ ನಿಶಿ ದುರ್ಭಗಾ ।
ನಿಹತಂ ಗೃಹಮಾನೀಯ ಜ್ಞಾತ್ವಾ ಗೋವತ್ಸಮಂಗನಾ ॥ ೫೫ ॥

---

ಸ್ತ್ರೀಯಿಂದಲೂ ಹಾಳಾಗುವುದೆಂ"ದರಿತು ಎಲ್ಲರೂ ಸೇರಿ ಆಲೋಚಿಸಿ ಅವಳ ಕೂದಲನ್ನು ಹಿಡಿದೆಳೆದು ಘಟಶ್ರಾದ್ಧಪೂರ್ವಕವಾಗಿ ಗೋತ್ರದಿಂದ ತ್ಯಜಿಸಿ ದೂರ ಕರೆದುಕೊಂಡುಹೋಗಿ ಬಿಟ್ಟರು.

೪೯. ಶೂದ್ರನೊಡನೆ ತಿರುಗುತ್ತ ಗ್ರಾಮದ ಹೊರಗೆ ಸಂಚರಿಸುತ್ತಿರುವಾಗ ಅವಳನ್ನು ಒಬ್ಬ ಶೂದ್ರನಾಯಕನು ಕಂಡನು.

೫೦-೬೩. ಆ ಶೂದ್ರರೊಡೆಯನು ಪುಷ್ಟವಾದ ಉನ್ನತ ಕುಚಗಳುಳ್ಳ ಆ ವಿಧವೆಯನ್ನು ಒಪ್ಪಿಸಿ ತನ್ನ ಮನೆಗೆ ಕರೆದುಕೊಂಡುಹೋದನು. ಅಲ್ಲಿ ಅವಳು ಅವನ ರಾಣಿಯಾಗಿ ಹಗಲು ರಾತ್ರಿ ಅವನೊಡನೆ ರಮಿಸುತ್ತ ಅದೇ ಸ್ಥಳದಲ್ಲಿಯೆ ವಾಸಿಸಿದಳು. ಅವಳು ಮಾಂಸವನ್ನು ತಿನ್ನುತ್ತ, ಹೆಂಡವನ್ನು ಕುಡಿಯುತ್ತ ಆ ಶೂದ್ರನಿಂದ ಒಬ್ಬ ಪುತ್ರನನ್ನೂ ಪಡೆದಳು. ಒಂದಾನೊಂದು ದಿನ ಪ್ರಿಯನು ಎಲ್ಲಿಯೊ ಹೋಗಿರಲು ಅವಳು ಹೆಂಡವನ್ನು ಕುಡಿದು ಮತ್ತಳಾಗಿ ಮಾಂಸವನ್ನು ತಿನ್ನಲು ಬಯಸಿದಳು. ಆನಂತರ ಅವಳು ರಾತ್ರಿಯ ಕತ್ತಲೆಯಲ್ಲಿ ಕೊಟ್ಟಿಗೆಯ ಹೊರಗೆ ಗೋವುಗಳೊಡನೆ ಕುರಿಗಳನ್ನು ಕಟ್ಟಿರಲು ಕತ್ತಿಯನ್ನು ತೆಗೆದುಕೊಂಡು ಹೊರಟಳು. ಆ ಮದದ ಆವೇಶದಿಂದ ಆಲೋಚಿಸದೆ ಮಾಂಸಪ್ರಿಯಳಾದ ಅವಳು ಕುರಿಯೆಂದರಿತು ಅರಚುತ್ತಿರುವ ಒಂದು ಹಸುವಿನ

CC-0. Jangamwadi Math Collection. Digitized by eGangotri

ಭೀತಾ ಶಿವಶಿವೇತ್ಯಾಹ ಕೇನಚಿತ್ಪುಣ್ಯಕರ್ಮಣಾ ।
ಸಾ ಮುಹೂರ್ತಮಿತಿ ಧ್ಯಾತ್ವಾ ಪಿಶಿತಾಸವಲಾಲಸಾ ॥ ೫೬ ॥
ಛಿತ್ವಾ ತಮೇವ ಗೋವತ್ಸಂ ಚಕಾರಾಹಾರಮೀಪ್ಸಿತಂ ।
ಗೋವತ್ಸಾರ್ಧಶರೀರೇಣ ಕೃತಾಹಾರಾಽಥ ಸಾ ಪುನಃ ॥ ೫೭ ॥
ತದರ್ಧದೇಹಂ ನಿಕ್ಷಿಪ್ಯ ಬಹಿಶ್ಚುಕ್ರೋಶ ಕೈತವಾತ್ ।
ಅಹೋ ವ್ಯಾಘ್ರೇಣ ಭಗ್ನೋಽಯಂ ಜಗ್ಧೋ ಗೋವತ್ಸಕೋ ವ್ರಜೇ ॥
ಇತಿ ತಸ್ಯಾಃ ಸಮಾಕ್ರಂದಃ ಸರ್ವಗೇಹೇಷು ಶುಶ್ರುವೇ ।
ಅಥ ಸರ್ವೇ ಶೂದ್ರಜನಾಃ ಸಮಾಗಮ್ಯಾಽಂತಿಕೇ ಸ್ಥಿತಾಃ ॥ ೫೯ ॥
ಹತಂ ಗೋವತ್ಸಮಾಲೋಕ್ಯ ವ್ಯಾಘ್ರೇಣೇತಿ ಶುಚಂ ಯಯುಃ ।
ಗತೇಷು ತೇಷು ಸರ್ವೇಷು ವ್ಯುಷ್ಟಾಯಾಂ ಚ ತತೋ ನಿಶಿ ॥ ೬೦ ॥
ತದ್ಭರ್ತಾ ಗೃಹಮಾಗತ್ಯ ದೃಷ್ಟವಾನ್ಗೃಹವಿಡ್ವರಂ ।
ಏವಂ ಬಹುತಿಥೇ ಕಾಲೇ ಗತೇ ಸಾ ಶೂದ್ರವಲ್ಲಭಾ ॥ ೬೧ ॥
ಕಾಲಸ್ಯ ವಶಮಾಪನ್ನಾ ಜಗಾಮ ಯಮಮಂದಿರಂ ।
ಯಮೋಽಪಿ ಧರ್ಮಮಾಲೋಕ್ಯ ತಸ್ಯಾಃ ಕರ್ಮ ಚ ಪೌರ್ವಿಕಂ ॥ ೬೨ ॥
ನಿರ್ವರ್ತ್ಯ ನಿರಯಾವಾಸಾಚ್ಚಕ್ರೇ ಚಂಡಾಲಜಾತಿಕಾಂ ।
ಸಾಽಪಿ ಭ್ರಷ್ಟಾ ಯಮಪುರಾಚ್ಚಾಂಡಾಲೀ ಗರ್ಭಮಾಶ್ರಿತಾ ॥ ೬೩ ॥

---

ಕರುವನ್ನು ಕೊಂದಳು. ಅದನ್ನು ಮನೆಗೆ ತಂದು ಹಸುವಿನ ಕರುವೆಂದು ತಿಳಿದು ಯಾವುದೊ ಒಂದು ಪುಣ್ಯವಶದಿಂದ ಭಯಗೊಂಡು 'ಶಿವ ಶಿವ!' ಎಂದಳು. ಬಳಿಕ ಸ್ವಲ್ಪಹೊತ್ತು ಚಿಂತಿಸಿ ಮಾಂಸದಲ್ಲಿ ಆಶೆಯುಳ್ಳವಳಾಗಿ ಅದೇ ಕರುವನ್ನು ಕತ್ತರಿಸಿ ಇಷ್ಟವಾದ ಆಹಾರವನ್ನು ಮಾಡಿಕೊಂಡಳು. ಅರ್ಧದೇಹದ ಆ ಮಾಂಸವನ್ನು ತಿಂದು ಉಳಿದರ್ಧಭಾಗವನ್ನು ಹೊರಗೆ ಬಿಸಾಡಿ ಕಪಟದಿಂದ, "ಅಯ್ಯೊ! ಹುಲಿಯು ಕೊಟ್ಟಿಗೆಯನ್ನು ಹೊಕ್ಕು ಹಸುವಿನ ಕರುವನ್ನು ತಿಂದಿತೆಂದು ಕೂಗಿಕೊಂಡಳು. ಅವಳ ಆ ಕೂಗು ಅಲ್ಲಿರುವ ಎಲ್ಲ ಮನೆಯವರಿಗೂ ಕೇಳಿಸಿತು. ಬಳಿಕ ಶೂದ್ರರೆಲ್ಲ ಸಮೀಪಕ್ಕೆ ಬಂದು ಕರುವನ್ನು ಕಂಡು ಹುಲಿಯು ತಿಂದಿತೆಂದೇ ದುಃಖಗೊಂಡರು. ಅವರೆಲ್ಲರೂ ಹೊರಟುಹೋಗಲು ಬೆಳಗ್ಗೆ ಅವಳ ಪ್ರಿಯನು ಮನೆಗೆ ಬಂದು ಅದನ್ನು ಕಂಡನು. ಹೀಗೆ ಅನೇಕ ಕಾಲ ಕಳೆಯಲು ಆ ಶೂದ್ರಪ್ರಿಯಳು ಮೃತಳಾಗಿ ಯಮಾಲಯಕ್ಕೆ ತೆರಳಿದಳು. ಯಮನೂ ಅವಳ ಹಿಂದಿನ ಧರ್ಮಕರ್ಮವನ್ನು ನೋಡಿ ನರಕವಾಸದಿಂದ ತಪ್ಪಿಸಿ ಚಂಡಾಲಜಾತಿಯವಳನ್ನಾಗಿ ಮಾಡಿದನು. ಅವಳೂ ಯಮಪುರದಿಂದ ಹಿಂದಿರುಗಿ ಚಾಂಡಾಲಸ್ತ್ರೀಯ ಗರ್ಭವನ್ನು ಸೇರಿದಳು.

CC-0. Jangamwadi Math Collection. Digitized by eGangotri

ತತೋ ಬಭೂವ ಜಾತ್ಯಂಧಾ ಪ್ರಶಾಂತಾಽಂಗಾರಮೇಚಕಾ ।
ತತ್ಪಿತಾ ಕೋಽಪಿ ಚಾಂಡಾಲೋ ದೇಶೇ ಕುತ್ರಚಿದಾಸ್ಥಿತಃ ॥ ೬೪ ॥
ತಾಂ ತಾದೃಶೀಮಪಿ ಸುತಾಂ ಕೃಪಯಾ ಪರ್ಯಪೋಷಯತ್ ।
ಅಭೋಜ್ಯೈನ ಕದನ್ನೇನ ಶುನಾ ಲೀಢೇನ ಪೂತಿನಾ ॥ ೬೫ ॥
ಅಪೇಯೈಶ್ಚ ರಸೈರ್ಮಾತ್ರಾ ಪೋಷಿತಾ ಸಾ ದಿನೇ ದಿನೇ ।
ಜಾತ್ಯಂಧಾ ಸಾಽಪಿ ಕಾಲೇನ ಬಾಲ್ಯೇ ಕುಷ್ಟರುಜಾರ್ದಿತಾ ॥ ೬೬ ॥
ಊಢಾ ನ ಕೇನಚಿದ್ವಾಽಪಿ ಚಾಂಡಾಲೇನಾಽತಿದುರ್ಭಗಾ ।
ಅತೀತಬಾಲ್ಯೇ ಸಾ ಕಾಲೇ ವಿಧ್ವಸ್ತಪಿತೃಮಾತೃಕಾ ॥ ೬೭ ॥
ದುರ್ಭಗೇತಿ ಪರಿತ್ಯಕ್ತಾ ಬಂಧುಭಿಶ್ಚ ಸಹೋದರೈಃ ।
ತತಃ ಕ್ಷುಧಾರ್ದಿತಾಸಾಚ ಶೋಚಂತೀ ವಿಗತೇಕ್ಷಣಾ ॥ ೬೮ ॥
ಗೃಹೀತಯಷ್ಟಿಃ ಕೃಚ್ಛ್ರೇಣ ಸಂಚಚಾಲ ಸಲೋಷ್ಟಿಕಾ ।
ಪತ್ತನೇಷ್ವಪಿ ಸರ್ವೇಷು ಯಾಚಮಾನಾ ದಿನೇ ದಿನೇ ॥ ೬೯ ॥
ಚಂಡಾಲೋಚ್ಛಿಷ್ಟಪಿಂಡೇನ ಜಠರಾಽಗ್ನಿಮತರ್ಪಯತ್ ।
ಏವಂ ಕೃಚ್ಛ್ರೇಣ ಮಹತಾ ನೀತ್ವಾ ಸುಬಹುಲಂ ವಯಃ ॥ ೭೦ ॥
ಜರಯಾ ಗ್ರಸ್ತಸರ್ವಾಂಗೀ ದುಃಖಮಾಪ ದುರತ್ಯಯಂ ।
ನಿರನ್ನಪಾನವಸನಾ ಸಾ ಕದಾಚಿನ್ಮಹಾಜನಾನ್ ॥ ೭೧ ॥

---

೬೪–೬೫. ಅಲ್ಲಿ ಹುಟ್ಟುಕುರುಡಳೂ, ಇದ್ದಿಲಿನಂತೆ ಕರಿಬಣ್ಣದವಳೂ ಆಗಿ ಜನಿಸಿದಳು. ಅವಳ ತಂದೆಯಾದ ಚಾಂಡಾಲನು ಮಗಳು ಅಂತಹವಳಾದರೂ ನಾಯಿ ತಿಂದು ಮಿಕ್ಕ ತಿನ್ನಲಾಗದ ಕದನ್ನದಿಂದ ಅವಳನ್ನು ದಯೆಯಿಂದ ಪೋಷಿಸಿದನು.

೬೬. ಪ್ರತಿದಿನವೂ ಕುಡಿಯಲಾರದ ರಸಗಳನ್ನು ಕುಡಿಸಿ ತಾಯಿಯಿಂದ ಪೋಷಿತಳಾದ ಅವಳು ಬಾಲ್ಯದಲ್ಲಿಯೇ ಕುಷ್ಠರೋಗವುಳ್ಳವಳಾದಳು.

೬೭. ಅವಳನ್ನು ಯಾವ ಚಾಂಡಾಲನೂ ಮದುವೆಮಾಡಿಕೊಳ್ಳಲಿಲ್ಲ. ಅವಳು ಯುವತಿಯಾಗಲು ತಂದೆತಾಯಿಗಳೂ ಮೃತರಾದರು.

೬೮–೬೯. ಸಹೋದರರೂ, ಬಂಧುಗಳೂ ನೀಚಳೆಂದು ಅವಳನ್ನು ತ್ಯಜಿಸಲು, ಹಸಿವುಗೊಂಡ ದೀನಳಾದ ಅವಳು ಅಳುತ್ತ ಕೋಲನ್ನು ಹಿಡಿದು ಪಟ್ಟಣಗಳಲ್ಲಿ ಬಿಕ್ಕೆಬೇಡುತ್ತ ಕಷ್ಟದಿಂದ ಸಂಚರಿಸಿದಳು.

೭೦–೭೧. ಅವಳು ಚಾಂಡಾಲರ ಎಂಜಲನ್ನದಿಂದ ಹೊಟ್ಟೆ ತುಂಬಿಸಿ ಕೊಳ್ಳುತ್ತ ಅತಿ ಕಷ್ಟದಿಂದ ಬಹಳ ವಯಸ್ಸನ್ನು ಕಳೆದು ಮುದುಕಿಯಾಗಿ ಅತ್ಯಂತ ದುಃಖಗೊಂಡಳು. ಅನ್ನ, ನೀರು, ಬಟ್ಟೆಗಳಿಲ್ಲದ ಅವಳು ಒಂದಾನೊಂದು ದಿನ ಶಿವರಾತ್ರಿಗಾಗಿ ಪ್ರಯಾಣಮಾಡಿ ಮುಂದೆ ಬರುತ್ತಿರುವ



CC-0. Jangamwadi Math Collection. Digitized by eGangotri

ಆಯಾಸ್ಯಂತ್ಯಾಂ ಶಿವತಿಥೌ ಗಚ್ಛತೋ ಬುಬುಧೇಽಧ್ವಗಾನ್ ।
ತಸ್ಯಾಂ ತು ದೇವಯಾತ್ರಾಯಾಂ ದೇಶದೇಶಾಂತಯಾಯಿನಾಂ ॥ ೭೨ ॥
ವಿಪ್ರಾಣಾಂ ಸಾಗ್ನಿಹೋತ್ರಾಣಾಂ ಸಸ್ತ್ರೀಕಾಣಾಂ ಮಹಾತ್ಮನಾಂ ।
ರಾಜ್ಞಾಂ ಚ ಸಾವರೋಧಾನಾಂ ಸಹಸ್ತಿರಥವಾಜಿನಾಂ ॥ ೭೩ ॥
ಸಪರೀವಾರಘೋಷಾಣಾಂ ಯಾನಚ್ಛತ್ರಾದಿಶೋಭಿನಾಂ ।
ತಥಾಽನ್ಯೇಷಾಂ ಚ ವಿಟ್ಶೂದ್ರಸಂಕೀರ್ಣಾನಾಂ ಸಹಸ್ರಶಃ ॥ ೭೪ ॥
ಹಸತಾಂ ಗಾಯತಾಂ ಕ್ವಾಽಪಿ ನೃತ್ಯತಾಮಥ ಧಾವತಾಂ ।
ಜಿಘ್ರತಾಂ ಪಿಬತಾಂ ಕಾಮಾದ್ಗಚ್ಛತಾಂ ಪ್ರತಿಗರ್ಜತಾಂ ॥ ೭೫ ॥
ಸಂಪ್ರಯಾಣೇ ಮನುಷ್ಯಾಣಾಂ ಸಂಭ್ರಮಃ ಸುಮಹಾನಭೂತ್ ।
ಇತಿ ಸರ್ವೇಷು ಗಚ್ಛತ್ಸು ಗೋಕರ್ಣಂ ಶಿವಮಂದಿರಂ ॥ ೭೬ ॥
ಪಶ್ಯಂತಿ ದಿವಿಜಾಃ ಸರ್ವೇ ವಿಮಾನಸ್ಥಾಃ ಸ ಕೌತುಕಾಃ ।
ಅಥೇಯಮಪಿ ಚಾಂಡಾಲೀ ವಸನಾಽಶನತೃಷ್ಣಯಾ ॥ ೭೭ ॥
ಮಹಾಜನಾನ್ಯಾಚಯಿತುಂ ಚಚಾಲ ಚ ಶನೈಃ ಶನೈಃ ।
ಕರಾವಲಂಬೇನಾನ್ಯಸ್ಯಾಃ ಪ್ರಾಗ್ಜನ್ಮಾರ್ಜಿತಕರ್ಮಣಾ ।
ದಿನೈಃ ಕತಿಪಯೈರ್ಯಾಂತೀ ಗೋಕರ್ಣಂ ಕ್ಷೇತ್ರಮಾಯಯೌ ॥ ೭೮ ॥
ತತೋ ವಿದೂರೇ ಮಾರ್ಗಸ್ಯ ನಿಷಣ್ಣಾ ವಿವೃತಾಂಜಲಿಃ ।
ಯಾಚಮಾನಾ ಮುಹುಃ ಪಾಂಥಾನ್ಬಭಾಷೇ ಕೃಪಣಂ ವಚಃ ॥ ೭೯ ॥

---

ಜನಸ್ತೋಮವನ್ನು ಕಂಡಳು. ಆ ದೇವಯಾತ್ರೆಯಲ್ಲಿ ದೇಶದೇಶಾಂತರದ ಅಗ್ನಿಹೋತ್ರಿಗಳೂ, ಸ್ತ್ರೀಯರಿಂದ ಸಹಿತರೂ, ಮಹಾತ್ಮರೂ ಆಗಿರುವ ಬ್ರಾಹ್ಮಣರು, ರಾಜರು ಅಂತಃಪುರದ ಸ್ತ್ರೀಯರಿಂದಲೂ, ಆನೆ, ರಥ, ಕುದುರೆಗಳಿಂದಲೂ, ಪರಿವಾರಗಳಿಂದಲೂ ಸಹಿತರಾಗಿಯೂ, ವಾಹನ, ಶ್ವೇತಚ್ಛತ್ರ ಇವುಗಳಿಂದ ಶೋಭಿಸುತ್ತಲೂ, ವೈಶ್ಯ, ಶೂದ್ರ, ಸಂಕರಜಾತಿಯವರು ನಗುತ್ತಲೂ, ಹಾಡುತ್ತಲೂ, ಕುಣಿಯುತ್ತಲೂ, ಓಡುತ್ತಲೂ, ಮೂಸಿನೋಡುತ್ತಲೂ, ಕುಡಿಯುತ್ತಲೂ, ಹೋಗುತ್ತಲೂ, ಗರ್ಜಿಸುತ್ತಲೂ ಇದ್ದರು. ಇವರ ಪ್ರಯಾಣಕಾಲದ ಸಂಭ್ರಮವು ಬಹಳವಾಗಿದ್ದಿತು. ಹೀಗೆ ಎಲ್ಲರೂ ಗೋಕರ್ಣವನ್ನು ಕುರಿತು ಹೋಗುತ್ತಿರುವುದನ್ನು ದೇವತೆಗಳು ವಿಮಾನದಲ್ಲಿ ಸಂಚರಿಸುತ್ತ ಕುತೂಹಲದಿಂದ ನೋಡಿದರು. ಈ ಚಂಡಾಲರ ಮುದುಕಿಯೂ ಅನ್ನ ಬಟ್ಟೆಗಳ ಆಶೆಯಿಂದ ಜನರನ್ನು ಯಾಚಿಸುವುದಕ್ಕಾಗಿ ಮೆಲ್ಲ ಮೆಲ್ಲಗೆ ಹೊರಟಳು. ಹಿಂದಿನ ಜನ್ಮದಲ್ಲಿ ಸಂಪಾದಿಸಿದ ಕರ್ಮವಶದಿಂದ ಮತ್ತೊಬ್ಬಳ ಕೈಯನ್ನು ಹಿಡಿದುಕೊಂಡು ಕೆಲವು ದಿನಗಳಲ್ಲಿಯೆ ಗೋಕರ್ಣಕ್ಕೆ ಸಾಗಿದಳು. ಬಳಿಕ ಅಲ್ಲಿ

CC-0. Jangamwadi Math Collection. Digitized by eGangotri

ಪ್ರಾಗ್ಜನ್ಮಾರ್ಜಿತಪಾಪೌಘೈಃ ಪೀಡಿತಾಯಾಶ್ಚಿರಂ ಮಮ ।
ಆಹಾರಮಾತ್ರದಾನೇನ ದಯಾಂ ಕುರುತ ಭೋ ಜನಾಃ ॥ ೪೦ ॥
ತ್ರಾತಾರಃ ಪರಮಾರ್ತಾನಾಂ ದಾತಾರಃ ಪರಮಾಶಿಷಾಂ ।
ಕರ್ತಾರೋ ಬಹುಪುಣ್ಯಾನಾಂ ದಯಾಂ ಕುರುತ ಭೋ ಜನಾಃ ॥ ೪೧ ॥
ವಸನಾಽಶನಹೀನಾಯಾಂ ಸ್ನಪಿತಾಯಾಂ ಮಹೀತಲೇ ।
ಮಹಾಪಾಂಸುನಿಮಗ್ನಾಯಾಂ ದಯಾಂ ಕುರುತ ಭೋಜನಾಃ ॥ ೪೨ ॥
ಮಹಾಶೀತಾತಪಾರ್ತಾಯಾಂ ಪೀಡಿತಾಯಾಂ ಮಹಾರುಜಾ ।
ಅಂಧಾಯಾಂ ಮಯಿ ವೃದ್ಧಾಯಾಂ ದಯಾಂ ಕುರುತ ಭೋಜನಾಃ॥೪೩॥
ಚಿರೋಪವಾಸದೀಪ್ತಾಯಾಂ ಜಠರಾಗ್ನಿವಿವರ್ಧನೈಃ ।
ಸಂದಹ್ಯಮಾನಸರ್ವಾಂಗ್ಯಾಂ ದಯಾಂ ಕುರುತ ಭೋಜನಾಃ ॥ ೪೪ ॥
ಅನುಪಾರ್ಜಿತಪುಣ್ಯಾಯಾಂ ಜನ್ಮಾಂತರಶತೇಷ್ವಪಿ ।
ಪಾಪಾಯಾಂ ಮಂದಭಾಗ್ಯಾಯಾಂ ದಯಾಂ ಕುರುತ ಭೋ ಜನಾಃ ॥
ಏವಮಭ್ಯರ್ಥಯಂತ್ಯಾಸ್ತು ಚಾಂಡಾಲ್ಯಾಃ ಪ್ರಸೃತೇಂಜಲೌ ।
ಏಕಃ ಪುಣ್ಯತಮಃ ಪಾಂಥಃ ಪ್ರಾಕ್ಷಿಪದ್ಬಿಲ್ವಮಂಜರೀಂ ॥ ೪೬ ॥

---

ದಾರಿಯ ಹತ್ತಿರ ಕುಳಿತುಕೊಂಡು ಮಾರ್ಗಸ್ಥರನ್ನು ಬೇಡುತ್ತ ದೀನವಾಣಿಯಿಂದ ಅವಳು ಹೀಗೆಂದಳು.

೪೦. "ಅಪ್ಪಾ ಜನರೆ! ಹಿಂದಿನಜನ್ಮದ ಪಾಪಫಲವಾಗಿ ಬಹುಕಾಲದಿಂದ ಪೀಡಿತಳಾಗಿರುವ ನನಗೆ ಆಹಾರವನ್ನು ಮಾತ್ರ ಕೊಟ್ಟು ದಯೆಮಾಡಿರಿ.

೪೧. ಅತ್ಯಂತ ದುಃಖಗೊಂಡವರನ್ನು ಕಾಪಾಡುವವರೂ, ಉತ್ತಮಾಶೀರ್ವಾದವನ್ನು ಕೊಡುವವರೂ, ಅತಿಶಯಪುಣ್ಯವನ್ನುಮಾಡುವವರೂ ಆಗಿರುವ ಜನರೆ! ದಯೆಮಾಡಿರಿ.

೪೨. ಅನ್ನವಸ್ತ್ರಗಳಿಲ್ಲದೆ ನೆಲದ ಮೇಲೆ ಧೂಳಿನಲ್ಲಿ ಮುಳುಗಿರುವ ನನ್ನಲ್ಲಿ ದಯೆಮಾಡಿರಿ.

೪೩. ಬಹಳವಾದ ಚಳಿ ಬಿಸಿಲುಗಳಿಂದಲೂ, ಮಹಾರೋಗದಿಂದಲೂ ಪೀಡಿತಳಾಗಿ ಕುರುಡಿಯಾಗಿರುವ ಈ ಮುದುಕಿಯಲ್ಲಿ ದಯೆಮಾಡಿರಿ.

೪೪–೪೫. ಬಹಳಕಾಲದಿಂದ ಉಪವಾಸಮಾಡಿದವಳೂ, ಜಠರಾಗ್ನಿಯು ಹೆಚ್ಚಿದುದರಿಂದ ಸುಡಲ್ಪಡುತ್ತಿರುವ ಸಕಲಾವಯವವುಳ್ಳವಳೂ ಆಗಿರುವ ನನ್ನಲ್ಲಿ ದಯೆತೋರಿರಿ. ಅನೇಕ ಜನ್ಮಗಳನ್ನೆತ್ತಿದ್ದರೂ ಪುಣ್ಯಾರ್ಜನೆ ಮಾಡದಿರುವವಳೂ, ಪಾಪಿಷ್ಠಳೂ, ಅಲ್ಪಭಾಗ್ಯಳೂ ಆಗಿರುವ ನನ್ನಲ್ಲಿ ದಯೆಮಾಡಿರಿ."

೪೬. ಹೀಗೆ ಬೇಡುತ್ತಿರುವ ಆ ಚಾಂಡಾಲಿಯ ಬೊಗಸೆಯಲ್ಲಿ ಪುಣ್ಯವಂತನಾದ ಒಬ್ಬ ದಾರಿಗನು ಬಂದು ಬಿಲ್ವಪತ್ರೆಯ ಗೊಂಚಲನ್ನು ಎಸೆದನು.

CC-0. Jangamwadi Math Collection. Digitized by eGangotri

ತಾಮಂಜಲೌ ನಿಪತಿತಾಂ ಸಾ ವಿಮೃಶ್ಯ ಪುನಃ ಪುನಃ ।
ಅಭಕ್ಷ್ಯೇತ್ಯೇವ ಮತ್ವಾಽಥ ದೂರೇ ಪ್ರಾಕ್ಷಿಪದಾತುರಾ ॥ ೮೭ ॥
ತಸ್ಯಾಃ ಕರೇಣ ನಿರ್ಮುಕ್ತಾ ರಾತ್ರೌ ಸಾ ಬಿಲ್ವಮಂಜರೀ ।
ಪಪಾತ ಕಸ್ಯಚಿದ್ದಿಷ್ಟ್ಯಾ ಶಿವಲಿಂಗಸ್ಯ ಮಸ್ತಕೇ ॥ ೮೮ ॥
ಸೈವಂ ಶಿವಚತುರ್ದಶ್ಯಾಂ ರಾತ್ರೌ ಪಾಂಥಜನಾನ್ಮುಹುಃ ।
ಯಾಚಮಾನಾಽಪಿ ಯತ್ಕಿಂಚಿನ್ನ ಲೇಭೇ ದೈವಯೋಗತಃ ॥ ೮೯ ॥
ತತ್ರೋಷಿತಾಽನಯಾ ರಾತ್ರಿರ್ಭದ್ರಕಾಳ್ಯಾಸ್ತು ಪೃಷ್ಠತಃ ।
ಕಿಂಚಿದುತ್ತರತಃ ಸ್ಥಾನಂ ತದರ್ಧೇನಾಽತಿದೂರತಃ ॥ ೯೦ ॥
ತತಃ ಪ್ರಭಾತೇ ಭ್ರಷ್ಟಾಪಿ ಶಾ ಶೋಕೇನ ಮಹತಾಪ್ಲುತಾ ।
ಶನೈರ್ನಿವವೃತೇ ದೀನಾ ಸ್ವದೇಶಾಯೈವ ಕೇವಲಾ ॥ ೯೧ ॥
ಶ್ರಾಂತಾ ಚಿರೋಪವಾಸೇನ ನಿಪತಂತೀ ಪದೇ ಪದೇ ।
ಕ್ರಂದಂತೀ ಬಹುರೋಗಾರ್ತಾ ವೇಪಮಾನಾ ಭೃಶಾತುರಾ ॥ ೯೨ ॥
ದಹ್ಯಮಾನಾಽರ್ಕತಾಪೇನ ನಗ್ನದೇಹಾ ಸಯಷ್ಟಿಕಾ ।
ಅತೀತ್ಯೈತಾವತೀಂ ಭೂಮಿಂ ನಿಪಪಾತ ವಿಚೇತನಾ ॥ ೯೩ ॥
ಅಥ ವಿಶ್ವೇಶ್ವರಃ ಶಂಭುಃ ಕರುಣಾಽಮೃತವಾರಿಧಿಃ ।
ಏನಾಮಾನಯತೇತ್ಯಸ್ಮಾನ್ಯಯುಜೇ ಸವಿಮಾನಕಾಃ ॥ ೯೪ ॥

---

೮೭. ಆತುರಳಾದ ಅವಳು ಬೊಗಸೆಯಲ್ಲಿ ಬಿದ್ದ ಆ ಮಂಜರಿಯನ್ನು ಬಹಳ ವಿಮರ್ಶಿಸಿನೋಡಿ ತಿನ್ನತಕ್ಕ ವಸ್ತುವಲ್ಲವೆಂದು ದೂರ ಎಸೆದಳು.

೮೮. ರಾತ್ರಿಯಲ್ಲಿ ಅವಳು ಎಸೆದ ಆ ಬಿಲ್ವಮಂಜರಿಯು ಅದೃಷ್ಟವಶದಿಂದ ಒಂದು ಶಿವಲಿಂಗದ ತಲೆಯಲ್ಲಿ ಬಿದ್ದಿತು.

೮೯. ಅವಳು ಹೀಗೆ ಆ ಶಿವರಾತ್ರಿಯ ದಿನ ರಾತ್ರಿ ಮಾರ್ಗಸ್ಥರನ್ನು ಎಷ್ಟು ಬೇಡಿಕೊಂಡರೂ ದೈವವಶದಿಂದ ಏನೂ ಸಿಕ್ಕಲಿಲ್ಲ.

೯೦-೯೧. ಆ ರಾತ್ರಿ ಅವಳು ಗೋಕರ್ಣಕ್ಷೇತ್ರದ ದಕ್ಷಿಣದಲ್ಲಿರುವ ಭದ್ರಕಾಳಿಯ ಹಿಂಭಾಗದಲ್ಲಿ ವಾಸಿಸಿದಳು. ತರುವಾಯದ ಬೆಳಗ್ಗೆ ಭ್ರಷ್ಟಳಾದ ಅವಳು ಅತ್ಯಂತ ದುಃಖಗೊಂಡು ಮೆಲ್ಲನೆ ತನ್ನ ದೇಶಕ್ಕೆ ಹಿಂದಿರುಗಿದಳು.

೯೨-೯೩. ಬಹಳ ದಿನ ಉಪವಾಸಮಾಡಿದುದರಿಂದ ಆಯಾಸಗೊಂಡು ಪ್ರತಿ ಹೆಜ್ಜೆಗೂ ಬೀಳುತ್ತಲೂ, ಅಳುತ್ತಲೂ, ಅತ್ಯಂತ ರೋಗಪೀಡಿತಳಾಗಿ ನಡುಗುತ್ತ, ಬತ್ತಲೆಯಾಗಿ ಸೂರ್ಯನ ತಾಪದಿಂದ ಸುಡಲ್ಪಡುತ್ತ ದಂಡವನ್ನು ಹಿಡಿದು ಇಷ್ಟುದೂರ ನಡೆದುಬಂದು ಜ್ಞಾನತಪ್ಪಿ ಬಿದ್ದಿರುವಳು.

೯೪. ಬಳಿಕ ದಯಾಸಮುದ್ರನಾದ ಶಂಕರನು ವಿಮಾನದಿಂದ ಇವಳನ್ನು ಕರೆತನ್ನಿರಿ ಎಂದು ನಮ್ಮನ್ನು ನೇಮಿಸಿದನು.

CC-0. Jangamwadi Math Collection. Digitized by eGangotri

ಏಷಾ ಪ್ರವೃತ್ತಿಶ್ಚಾಂಡಾಲ್ಯಾಸ್ತವೇಹ ಪರಿಕೀರ್ತಿತಾ ।
ತಥಾ ಸಂದರ್ಶಿತಾ ಶಂಭೋಃ ಕೃಪಣೇಷು ಕೃಪಾಲುತಾ ॥ ೯೫ ॥
ಕರ್ಮಣಃ ಪರಿಪಾಕೋತ್ಥಾಂ ಗತಿಂ ಪಶ್ಯ ಮಹಾಮತೇ ।
ಅಧಮಾಽಪಿ ಪರಂ ಸ್ಥಾನಮಾರೋಹತಿ ನಿರಾಮಯಂ ॥ ೯೬ ॥
ಯದೇತಯಾ ಪೂರ್ವಭವೇ ನಾಽನ್ನದಾನಾದಿಕಂ ಕೃತಂ ।
ಕ್ಷುತ್ಪಿಪಾಸಾದಿಭಿಃ ಕ್ಲೇಶೈಸ್ತಸ್ಮಾದಿಹ ನಿಪೀಡ್ಯತೇ ॥ ೯೭ ॥
ಯದೇಷಾ ಮದವೇಗಾಂಧಾ ಚಕ್ರೇ ಪಾಪಂ ಮಹೋಲ್ಬಣಂ ।
ಕರ್ಮಣಾ ತೇನ ಜಾತ್ಯಂಧಾ ಬಭೂವಾಽತ್ರೈವ ಜನ್ಮನಿ ॥ ೯೮ ॥
ಅಪಿ ವಿಜ್ಞಾಯ ಗೋವತ್ಸಂ ಯದೇಷಾಽಭಕ್ಷಯತ್ಪುರಾ ।
ಕರ್ಮಣಾ ತೇನ ಚಾಂಡಾಲೀ ಬಭೂವೇಹ ವಿಗರ್ಹಿತಾ ॥ ೯೯ ॥
ಯದೇಷಾರ್ಯಪಥಂ ಹಿತ್ವಾ ಜಾರಮಾರ್ಗರತಾ ಪುರಾ ।
ತೇನ ಪಾಪೇನ ಕೇನಾಽಪಿ ದುರ್ವೃತ್ತಾ ದುರ್ಭಗಾಽಪಿ ವಾ ॥ ೧೦೦ ॥
ಯದಾಶ್ಲಿಷ್ಯ ಮದಾವಿಷ್ಟಾ ಜಾರೇಣ ವಿಧವಾ ಪುರಾ ।
ತೇನ ಪಾಪೇನ ಮಹತಾ ಬಹುಕುಷ್ಠವ್ರಣಾನ್ವಿತಾ ॥ ೧೦೧ ॥
ಕಾಮಾರ್ತಾ ಯದಿಯಂ ಸ್ವೈರಂ ಶೂದ್ರೇಣ ರಮಿತಾ ಪುರಾ ।
ಮಹಾಽಸೃಕ್ಪೂಯಕೃಮಿಭಿಃ ಪೀಡ್ಯತೇ ತೇನ ಪಾಪ್ಮನಾ ॥ ೧೦೨ ॥

---

೯೫. ಈ ಚಾಂಡಾಲಸ್ತ್ರೀಯ ವೃತ್ತಾಂತವನ್ನು ನಿನಗೆ ಹೇಳಿದ್ದೇವೆ. ಶಂಕರನು ದೀನದಯಾಳುವೆಂಬುದನ್ನೂ ಈ ಮೂಲಕ ನಿನಗೆ ತೋರಿಸಿದ್ದೇವೆ.

೯೬. ಅಯ್ಯಾ ಪ್ರಾಜ್ಞನೆ! ಕರ್ಮದ ಪರಿಣಾಮಾವಸ್ಥೆಯನ್ನು ನೋಡು. ಶಿವನ ದಯೆಯಿಂದ ನೀಚಳೂ ಶಾಶ್ವತವಾದ ಪದವಿಯನ್ನೇರುವಳು.

೯೭–೯೮. ಇವಳು ಹಿಂದಿನ ಜನ್ಮದಲ್ಲಿ ಅನ್ನದಾನಾದಿಗಳನ್ನು ಮಾಡದಿರುವುದರಿಂದ ಈ ಜನ್ಮದಲ್ಲಿ ಹಸಿವು ಬಾಯಾರಿಕೆ ಮೊದಲಾದುವುಗಳಿಂದ ವ್ಯಥೆಪಡುತ್ತಿದ್ದಾಳೆ. ಇವಳು ಮದಾಂಧಳಾಗಿ ಕ್ರೂರಪಾಪವನ್ನು ಮಾಡಿದುದರಿಂದ ಈ ಜನ್ಮದಲ್ಲಿ ಹುಟ್ಟುಕುರುಡಿಯಾದಳು.

೯೯–೧೦೦. ಹಸುವಿನ ಕರುವೆಂದು ತಿಳಿದ ಮೇಲೆಯೂ ಇವಳು ಅದನ್ನು ತಿಂದುದರಿಂದ ನಿಂದಿತಳಾಗಿ ಚಂಡಾಲಸ್ತ್ರೀಯಾದಳು. ಉತ್ತಮಮಾರ್ಗವನ್ನು ಬಿಟ್ಟು ಜಾರಿಣಿಯಾದುದರಿಂದ ನೀಚಸ್ತ್ರೀಯಾದಳು.

೧೦೧. ವಿಧವೆಯಾದ ಇವಳು ಮತ್ತಳಾಗಿ ಜಾರನನ್ನು ಆಲಿಂಗಿಸಿದ ಮಹಾಪಾಪದಿಂದ ಕುಷ್ಠರೋಗಪೀಡಿತಳಾದಳು.

೧೦೨. ಇವಳು ಕಾಮಾರ್ತಳಾಗಿ ಶೂದ್ರನೊಡನೆ ಸ್ವೇಚ್ಛೆಯಾಗಿ ರಮಿಸಿದುದರಿಂದ ಕೀವು ಕ್ರಿಮಿಗಳಿಂದ ಪೀಡಿತಳಾಗಿರುವಳು.

CC-0. Jangamwadi Math Collection. Digitized by eGangotri

ಸುವ್ರತಾನಿ ನ ಚೀರ್ಣಾನಿ ನೇಷ್ಟಾಪೂರ್ತಾದಿಕಂ ಕೃತಂ ।
ಸರ್ವಭೋಗವಿಹೀನೇಯಂ ದೂಯತೇ ತೇನ ಪಾಪ್ಮನಾ ॥ ೧೦೩ ॥
ಯದೇತಯಾ ಪೂರ್ವಭವೇ ಸುರಾ ಪೀತಾ ವಿಮೂಢಯಾ ।
ಮಹಾಯಕ್ಷ್ಮಾತ್ರಿಹೃಚ್ಛೂಲೈಃ ಪೀಡ್ಯತೇ ತೇನ ಪಾಪ್ಮನಾ ॥ ೧೦೪ ॥
ಅತ್ರೈವ ಸರ್ವಮರ್ತ್ಯೇಷು ಪಾಪಚಿಹ್ನಾನಿ ಕೃತ್ಸ್ನಶಃ ।
ಲಕ್ಷ್ಯಂತೇ ಮುನಿಶಾರ್ದೂಲ ಸವಿವೇಕೈರ್ಮಹಾತ್ಮಭಿಃ ॥ ೧೦೫ ॥
ಅತ್ರ ಯೇ ಬಹುರೋಗಾರ್ತಾ ಯೇ ಪುತ್ರಧನವರ್ಜಿತಾಃ ॥ ೧೦೬ ॥
ಯೇ ಚ ದುರ್ಲಕ್ಷಣಕ್ಲಿಷ್ಟಾ ಯಾಚಕಾ ವಿಗತಹ್ರಿಯಃ ।
ವಾಸೋಽನ್ನಪಾನಶಯನಭೂಷಣಾಭ್ಯಂಜನಾದಿಭಿಃ ॥ ೧೦೭ ॥
ಹೀನಾ ವಿರೂಪಾ ನಿರ್ವಿದ್ಯಾ ವಿಕಲಾಂಗಾಃ ಕುಭೋಜನಾಃ ।
ಯೇ ದುರ್ಭಾಗ್ಯಾ ನಿಂದಿತಾಶ್ಚ ಯೇ ಚಾಽನ್ಯೇ ಪರಸೇವಕಾಃ ॥ ೧೦೮ ॥
ಏತೇ ಪೂರ್ವಭವೇ ಸರ್ವೇ ಸುಮಹತ್ಪಾಪಕಾರಿಣಃ ।
ಏವಂ ವಿಮೃಶ್ಯ ಯತ್ನೇನ ದೃಷ್ಟ್ವಾ ಲೋಕಜನಸ್ಥಿತಿಂ ॥ ೧೦೯ ॥
ಬುಧೋ ನ ಕುರುತೇ ಪಾಪಂ ಯದಿ ಕುರ್ಯಾತ್ಸ ಆತ್ಮಹಾ ।
ದೇಹೋಽಯಂ ಮಾನುಷೋ ಜಂತೋರ್ಬಹುಕರ್ಮೈಕಭಾಜನಂ॥೧೧೦॥

---

೧೦೩. ಒಳ್ಳೆಯ ವ್ರತಗಳನ್ನೂ, ಇಷ್ಟಾಪೂರ್ತಗಳನ್ನೂ ಮಾಡದಿರುವುದರಿಂದ ಈ ಜನ್ಮದಲ್ಲಿವಳು ಸುಖಗಳಿಲ್ಲದೆ ವ್ಯಥೆಪಡುತ್ತಿದ್ದಾಳೆ.

೧೦೪. ಇವಳು ಹಿಂದಿನ ಜನ್ಮದಲ್ಲಿ ಹೆಂಡವನ್ನು ಕುಡಿದುದರಿಂದ ಕ್ಷಯರೋಗದಿಂದಲೂ, ಎದೆ ನೋವಿನಿಂದಲೂ ಬಾಧಿಸಲ್ಪಡುತ್ತಿದ್ದಾಳೆ.

೧೦೫. ಮುನಿವರ್ಯ! ವಿವೇಕಿಗಳಾದ ಮಹಾತ್ಮರು ಈ ಜನ್ಮದಲ್ಲಿರುವ ಚಿಹ್ನೆಗಳಿಂದ ಜನ್ಮಾಂತರದ ಪಾಪವನ್ನು ಊಹಿಸುವರು.

೧೦೬–೧೦೯. ಈ ಜನ್ಮದಲ್ಲಿ ಬಹಳ ರೋಗಪೀಡಿತರಾಗಿ, ಮಕ್ಕಳು, ಧನಗಳಿಲ್ಲದವರೂ, ದುಷ್ಟಲಕ್ಷಣಗಳಿಂದ ಕ್ಲೇಶಗೊಂಡವರೂ, ಬೇಡುವವರೂ, ನಾಚಿಕೆಯಿಲ್ಲದವರೂ, ಬಟ್ಟೆ, ಅನ್ನ, ನೀರು, ಹಾಸಿಗೆ, ಒಡವೆ, ಅಭ್ಯಂಜನ ಇವೇ ಮೊದಲಾದವುಗಳಿಲ್ಲದವರೂ, ಕುರೂಪಿಗಳೂ, ವಿದ್ಯೆಯಿಲ್ಲದವರೂ, ಅಂಗವಿಕಲರೂ, ಕೆಟ್ಟುದನ್ನು ತಿನ್ನುವವರೂ, ಬಡವರೂ, ನಿಂದಾರ್ಹರೂ, ಪರರ ಸೇವೆಯನ್ನು ಮಾಡುವವರೂ ಆದ ಮಾನವರು ಹಿಂದಿನ ಜನ್ಮದಲ್ಲಿ ಮಹಾಪಾಪಗಳನ್ನು ಮಾಡಿದವರು. ಜಾಣನು ಹೀಗೆ ಪ್ರಯತ್ನಪಟ್ಟು ಲೋಕದ ಜನರ ಸ್ಥಿತಿಯನ್ನು ವಿಮರ್ಶಿಸಿ ನೋಡಿದರೆ ಪಾಪ ಮಾಡಲಾರನು. ಅವನು ಹಾಗೆ ಮಾಡಿದರೆ ಆತ್ಮದ್ರೋಹಿಯಾಗುವನು.

೧೧೦. ಮನುಷ್ಯನ ಈ ದೇಹವು ಅನೇಕ ಕರ್ಮಗಳಿಗೆ ಆಶ್ರಯುವಾದುದು.

CC-0. Jangamwadi Math Collection. Digitized by eGangotri

ಸದಾ ಸತ್ಕರ್ಮ ಸೇವೇತ ದುಷ್ಕರ್ಮ ಸತತಂ ತ್ಯಜೇತ್ ।
ಪುಣ್ಯಂ ಸುಖಾರ್ಥೀ ಕುರ್ವೀತ ದುಃಖಾರ್ಥೀ ಪಾಪಮಾಚರೇತ್ ॥೧೧೧॥
ದ್ವಯೋರೇಕತರೇ ಲೋಕೇ ಗೃಹೀತೇ ಕುಶಲೋ ಜನಃ ।
ಇಮಂ ಮಾನುಷಮಾಶ್ರಿತ್ಯ ದೇಹಂ ಪರಮದುರ್ಲಭಂ ॥ ೧೧೨ ॥
ಯ ಆತ್ಮಹಿತವಾನ್ಕಶ್ಚಿದ್ದೇವಮೇಕಂ ಸಮಾಶ್ರಯೇತ್ ।
ಅಥ ಪಾಪಾನಿ ಸರ್ವಾಣಿ ಕುರ್ವನ್ನಪಿ ಸದಾ ನರಃ ॥ ೧೧೩ ॥
ಶಿವಮೇಕಮತಿರ್ಧ್ಯಾಯೇತ್ಸ ಸಂತರತಿ ಪಾತಕಂ ।
ಮೃತಾ ಪೂರ್ವಭವೇ ತ್ವೇಷಾ ಯದಾ ಪ್ರಾಪ್ತಾ ಯಮಾಲಯೇ ॥
ತದಾ ವಿತರ್ಕಃ ಸುಮಹಾನಾಸೀದ್ಯಮಸಭಾಸದಾಂ ।
ಯದ್ಯಪಿ ಬ್ರಾಹ್ಮಣೀ ತ್ವೇಷಾ ಸತ್ಕುಲಾಚಾರದೂಷಿತಾ ॥ ೧೧೫ ॥
ಅತೋಽಸ್ಮಾಭಿರಿಹಾನೀತಾ ನಿರಯಂ ಯಾತು ವಾ ನವಾ ।
ಅನಯಾ ಸಾಧಿತೋ ಬಾಲ್ಯೇ ಪುಣ್ಯಲೇಶೋಽಸ್ತಿವಾ ನವಾ ॥ ೧೧೬ ॥
ಅಥಾಽಪಿ ಸುವಿಮೃಶ್ಯೈವಂ ಧಾರ್ಯೋ ದಂಡೋಽತ್ರ ನಾಽನ್ಯಥಾ ।
ಬಹುಜನ್ಮಸಹಸ್ರೇಷು ಕೃತಪುಣ್ಯವಿಪಾಕತಃ ॥ ೧೧೭ ॥

---

ಯಾವಾಗಲೂ ಸತ್ಕರ್ಮವನ್ನಾಚರಿಸಬೇಕು. ದುಷ್ಕರ್ಮವನ್ನು ಮಾಡಲೇ ಬಾರದು.

೧೧೧-೧೧೨. ಸುಖಾರ್ಥಿಯು ಪುಣ್ಯವನ್ನೂ, ದುಃಖಾರ್ಥಿಯು ಪಾಪವನ್ನೂ ಮಾಡುತ್ತಾನೆ. ಕುಶಲನಾದವನು ಇವುಗಳಲ್ಲಿ ಉತ್ತಮವಾದುದೊಂದನ್ನೇ ಆಚರಿಸುವನು. ತನಗೆ ಹಿತವನ್ನು ಬಯಸುವವನು ಅತಿದುರ್ಲಭವಾದ ಈ ಮನುಷ್ಯದೇಹವನ್ನು ಹೊಂದಿ ಪರಮಾತ್ಮನೊಬ್ಬನನ್ನೇ ಆಶ್ರಯಿಸಬೇಕು.

೧೧೩. ಮಾನವನು ಸಕಲ ಪಾಪಗಳನ್ನು ಮಾಡುವವನಾದರೂ ಒಮ್ಮನಸ್ಸಿನಿಂದ ಶಿವನನ್ನು ಧ್ಯಾನಿಸಿದರೆ ಅವನು ಪಾಪವನ್ನು ಪರಿಹರಿಸುವನು.

೧೧೪. ಈ ಚಾಂಡಾಲಸ್ತ್ರೀಯು ಹಿಂದಿನ ಜನ್ಮದಲ್ಲಿ ಸತ್ತ ಕೂಡಲೆ ಯಮಪುರಿಗೆ ಹೋಗಲು ಅಲ್ಲಿ ಸಭೆಯವರಿಗೆ ದೊಡ್ಡ ಸಂದೇಹವುಂಟಾಯಿತು.

೧೧೫. "ಇವಳೇನೊ ಸತ್ಕುಲದ ಆಚಾರವಿಲ್ಲದ ಬ್ರಾಹ್ಮಣ ಸ್ತ್ರೀಯು. ಆದುದರಿಂದಲೆ ಇವಳನ್ನು ನಾವು ಇಲ್ಲಿಗೆ ಕರೆತಂದೆವು. ಇವಳು ನರಕಕ್ಕೆ ಹೋಗಲರ್ಹಳೊ ಅಲ್ಲವೊ?

೧೧೬. ಇವಳು ಬಾಲ್ಯದಲ್ಲಿ ಪುಣ್ಯಲೇಶವನ್ನು ಮಾಡಿರುವಳೊ ಇಲ್ಲವೊ. ಆದರೂ ನಾವು ಚೆನ್ನಾಗಿ ವಿಮರ್ಶಿಸಿ ಶಿಕ್ಷಿಸಬೇಕು.

೧೧೭. ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಪ್ರಭಾವದಿಂದ ಪ್ರಾಣಿಗಳಿಗೆ ಬ್ರಾಹ್ಮಣ ಜಾತಿಯಲ್ಲಿ ಜನ್ಮವು ದೊರೆಯುವುದು.

CC-0. Jangamwadi Math Collection. Digitized by eGangotri

ನೃಣಾಂ ಬ್ರಹ್ಮಕುಲೇ ಜನ್ಮ ಲಭ್ಯತೇ ಹಿ ಕಥಂಚನ ।
ಅತೋಽಸ್ಯಾಃ ಪೂರ್ವಪೂರ್ವೇಷು ಕೃತಾಽಘಂ ನಾಽಸ್ತಿ ಜನ್ಮಸು ॥೧೧೮॥
ಅನ್ಯಥಾ ಸತ್ಕುಲೇ ಜನ್ಮ ಕಥಮೇಷಾ ಪ್ರಪದ್ಯತೇ ।
ಅತ್ರೈವ ಜನ್ಮನ್ಯನಯಾ ಕೃತಮಂಹೋ ದುರತ್ಯಯಂ ॥ ೧೧೯ ॥
ಅಥಾಽಪಿ ನರಕಾವಾಸಂ ಪ್ರಾಯಶೋ ನೇಯಮರ್ಹತಿ ।
ಕಿಂತು ಗೋವತ್ಸಕಂ ಹತ್ವಾ ವಿಮೃಶ್ಯಾಗತಸಾಧ್ವಸಾ ॥ ೧೨೦ ॥
ಏಷಾ ಶಿವಶಿವೇತ್ಯಾಹ ಪ್ರಾಗ್ಜನ್ಮಾರ್ಜಿತಕರ್ಮಣಾ ।
ಯದೇಷಾ ಪಾಪವಿಚ್ಛಿತ್ಯೈ ಸಕೃದಪ್ಯುರುಮಂಗಲಂ ॥ ೧೨೧ ॥
ಶಿವನಾಮ ವದೇದ್ಭಕ್ತ್ಯಾ ತರ್ಹಿ ಗಚ್ಛೇತ್ಪರಂ ಪದಂ ।
ಏಕಜನ್ಮಕೃತಸ್ಯಾಽಸ್ಯ ದಾರುಣಸ್ಯಾಽಪಿ ಯತ್ಫಲಂ ॥ ೧೨೨ ॥
ಕ್ರಮೇಣಾಽನುಭವತ್ವೇಷಾ ಭೂತ್ವಾ ಚಾಂಡಾಲಜಾತಿಕಾ ।
ಅಸ್ಮಾದನ್ಯತಮಃ ಕೋವಾ ನರಕೋಽಸ್ತಿ ನೃಣಾಮಿಹ ॥ ೧೨೩ ॥
ಅನೇಕಕ್ಲೇಶಸಂಘಾತೈರ್ಯನ್ಮುಹುಃ ಪರಿಪೀಡನಂ ।
ದುಷ್ಕುಲೇ ಜನ್ಮದಾರಿದ್ರ್ಯಂ ಮಹಾವ್ಯಾಧಿರ್ವಿಮೂಢತಾ ॥ ೧೨೪ ॥
ಏಕೈಕ ಏವ ನರಕಃ ಸರ್ವೇ ವಾಚಾಽಥ ಕಿಂ ಪುನಃ ।
ಪ್ರಾಗ್ಜನ್ಮಪುಣ್ಯಭಾರೇಣ ಯನ್ನಾಮವಿವಶಾಽಬ್ರವೀತ್ ॥ ೧೨೫ ॥

---

೧೧೮. ಆದುದರಿಂದ ಇವಳು ಹಿಂದಿನ ಜನ್ಮಗಳಲ್ಲಿ ಪಾಪವನ್ನು ಮಾಡಿದವಳಲ್ಲ. ಹಾಗೆ ಮಾಡಿದ್ದರೆ ಬ್ರಾಹ್ಮಣಕುಲದಲ್ಲಿ ಹುಟ್ಟುತ್ತಿರಲಿಲ್ಲ.

೧೧೯. ಈ ಜನ್ಮದಲ್ಲಿಯೇ ಇವಳು ಪಾಪವನ್ನು ಮಾಡಿರುವಳು. ಆದರೂ ಇವಳು ನರಕದಲ್ಲಿ ವಾಸಿಸಲರ್ಹಳಲ್ಲ.

೧೨೦. ಮತ್ತು ಹಸುವಿನ ಕರುವನ್ನು ಕೊಂದು ಭಯಗೊಂಡವಳಾಗಿ ಹಿಂದಿನ ಜನ್ಮದ ಕರ್ಮವಶದಿಂದ ಇವಳು "ಶಿವ ಶಿವ" ಎಂದಿರುವಳು.

೧೨೧. ಇವಳು ಒಂದು ಸಲವಾದರೂ ಪಾಪನಾಶಕ್ಕಾಗಿ ಮಂಗಳಕರವಾದ ಶಿವನಾಮವನ್ನುಚ್ಚರಿಸಿದುದರಿಂದ ಉತ್ತಮ ಸ್ಥಾನವನ್ನು ಪಡೆದಾಳು.

೧೨೨. ಒಂದು ಜನ್ಮದಲ್ಲೆಸಗಿದ ದಾರುಣವಾದ ಪಾಪಕರ್ಮದ ಫಲವನ್ನು ಇವಳು ಚಾಂಡಾಲಿಯಾಗಿ ಅನುಭವಿಸಲಿ.

೧೨೩-೧೨೪. ಮನುಷ್ಯರಿಗೆ ಇದಕ್ಕಿಂತ ಬೇರೆ ನರಕವಾವುದಿರುವುದು? ಅನೇಕ ಕಷ್ಟಗಳನ್ನನುಭವಿಸುವುದು, ದುಷ್ಕುಲದಲ್ಲಿ ಜನಿಸುವುದು, ಬಡತನ, ಮಹಾವ್ಯಾಧಿ, ಮೂಢತನ, ಇವುಗಳಲ್ಲೊಂದೊಂದೂ ನರಕವೇ. ಎಲ್ಲವೂ ಸೇರಿದರೆ ಇನ್ನೇನು.

೧೨೫. ಇವಳು ಹಿಂದಿನ ಜನ್ಮದ ಪುಣ್ಯಪ್ರಭಾವದಿಂದ ಪರಾಧೀನಳಾಗಿ

CC-0. Jangamwadi Math Collection. Digitized by eGangotri

ತೇನೈಷಾನ್ಯಭವೇ ಭೂರಿ ಪುಣ್ಯಮಂತೇ ಕರಿಷ್ಯತಿ ।
ತೇನ ಪುಣ್ಯೇನ ಮಹತಾ ನಿಸ್ತೀರ್ಯಾಘೌಘಯಾತನಾಃ ॥ ೧೨೬ ॥
ನೀತಾ ತತ್ಪುರುಷೈರಂತೇ ಪ್ರಯಾಸ್ಯತಿ ಪರಂ ಪದಂ ।
ಏತಾದೃಶಾನಾಂ ಮರ್ತ್ಯಾನಾಂ ಶಾಸ್ತಾರೋ ನ ವಯಂ ಕ್ವಚಿತ್ ।
ವಿಚಾರ್ಯ ಸ್ವಯಮೇವೇಶೋ ಯದ್ಯುಕ್ತಂ ತತ್ಕರೋತು ಸಃ ॥ ೧೨೭ ॥
ಏವಂ ವೈವಸ್ವತಪುರೇ ಸರ್ವೈರ್ಯಮಪುರೋಗಮೈಃ ।
ವಿಮೃಶ್ಯ ಚಿತ್ರಗುಪ್ತಾದ್ಯೈರಿಯಂ ಮುಕ್ತಾಽಪತದ್ಭುವಿ ॥ ೧೨೮ ॥

ಅಹೌ ಯದೇಷಾ ಶಿವನಾಮ ನಾರೀ-
ಪ್ರಮಾದತೋಽವಾಪ್ಯಸತೀ ಜಗಾದ ।
ತೇನೇಹ ಭೂಯಃ ಸುಕೃತೇನ ಶಂಭೋ-
ರ್ಬಿಲ್ವಾಂಕುರಾರಾಧನಪುಣ್ಯಮಾಪ ॥ ೧೨೯ ॥

ಶ್ರೀಗೋಕರ್ಣೇ ಶಿವತಿಥಾವುಪೋಷ್ಯ ಶಿವಮಸ್ತಕೇ ।
ಕೃತ್ವಾ ಜಾಗರಣಂ ಹ್ಯೇಷಾ ಚಕ್ರೇ ಬಿಲ್ವಾರ್ಪಣಂ ನಿಶಿ ॥ ೧೩೦ ॥
ಅಕಾಮತಃ ಕೃತಸ್ಯಾಸ್ಯ ಪುಣ್ಯಸ್ಯೈವಚ ಯತ್ಫಲಂ ।
ಅದ್ಯೈವ ಭೋಕ್ಷ್ಯತೇ ಸೇಯಂ ಪಶ್ಯತಸ್ತವ ನೋ ಮೃಷಾ ॥ ೧೩೧ ॥

---

ಶಿವನಾಮೋಚ್ಚಾರಣೆಮಾಡಿದ್ದರಿಂದ ಇತರ ಜನ್ಮಗಳಲ್ಲಿ ಅಧಿಕ ಪುಣ್ಯಗಳನ್ನಾಚರಿಸುವಳು.

೧೨೬. ಇವಳು ಆ ಮಹಾಪುಣ್ಯದಿಂದ ಪಾಪರಾಶಿಗಳ ಬಾಧೆಯನ್ನು ದಾಟಿ ಶಿವದೂತರಿಂದ ಒಯ್ಯಲ್ಪಟ್ಟು ಉತ್ತಮಸ್ಥಾನವನ್ನೂ ಹೊಂದುವಳು.

೧೨೭. ಇಂತಹ ಮನುಷ್ಯರನ್ನು ನಾವು ಶಿಕ್ಷಿಸಲರ್ಹರಲ್ಲ. ಆ ಪರಮೇಶ್ವರನೆ ಆಲೋಚಿಸಿ ಯಾವುದು ಉಚಿತವೊ ಅದನ್ನು ಮಾಡಲಿ."

೧೨೮. ಹೀಗೆ ಯಮಪುರಿಯಲ್ಲಿ ಯಮನೆ ಮೊದಲಾದವರು ಆಲೋಚಿಸಿ ಇವಳನ್ನು ಬಿಟ್ಟುಬಿಡಲು ಇವಳು ಭೂಮಿಯಲ್ಲಿ ಬಿದ್ದಳು.

೧೨೯. ಇವಳು ಮೊದಲು ಅಸಾಧ್ವಿಯಾದರೂ ಪ್ರಮಾದದಿಂದ ಶಿವನಾಮವನ್ನು ಉಚ್ಚರಿಸಿದ ಕಾರಣ ಆ ಪುಣ್ಯದಿಂದ ಮತ್ತೆ ಶಿವನನ್ನು ಬಿಲ್ವಪತ್ರೆಯಿಂದ ಆರಾಧಿಸುವ ಪುಣ್ಯವನ್ನು ಪಡೆದಳು.

೧೩೦. ಇವಳು ಶಿವರಾತ್ರಿಯದಿನ ಗೋಕರ್ಣಕ್ಷೇತ್ರದಲ್ಲಿ ಉಪವಾಸವನ್ನೂ, ರಾತ್ರಿ ಜಾಗರಣವನ್ನೂ ಮಾಡಿ ಶಿವನ ಶಿರಸ್ಸಿನಲ್ಲಿ ಬಿಲ್ವಪತ್ರೆಯನ್ನು ಸಮರ್ಪಿಸಿರುವಳು.

೧೩೧. ಇವಳು ಅಬುದ್ಧಿಪೂರ್ವಕವಾಗಿ ಮಾಡಿದ ಪುಣ್ಯದ ಫಲವನ್ನು ಈಗ ನೀನು ನೋಡುತ್ತಿರುವಾಗಲೆ ನಿಜವಾಗಿಯೂ ಅನುಭವಿಸುವಳು.

CC-0. Jangamwadi Math Collection. Digitized by eGangotri

ಗೌತಮ ಉವಾಚ:—

ಇತ್ಯುಕ್ತ್ವಾ ಶಿವದೂತಾಸ್ತೇ ತಸ್ಯಾಶ್ಚಾಂಡಾಲಯೋನಿತಃ ।
ಜೀವಲೇಶಂ ಸಮಾಕೃಷ್ಯ ಯುಯುಜುರ್ದಿವ್ಯತೇಜಸಾ ॥ ೧೩೨ ॥
ತಾಂ ದಿವ್ಯದೇಹಸಂಕ್ರಾಂತಾಂ ತೇಜೋರಾಶಿಸಮುಜ್ಜ್ವಲಾಂ ।
ವಿಮಾನೇ ಸ್ಥಾಪಯಾಮಾಸುಃ ಪ್ರೀತಾಸ್ತೇ ಶಿವಕಿಂಕರಾಃ ॥ ೧೩೩ ॥
ಅಥ ಸಾ ಪರಮೋದಾರರೂಪಲಾವಣ್ಯಶಾಲಿನೀ ।
ದಿವ್ಯಭೂಷಣದೀಪ್ತಾಂಗೀ ದಿವ್ಯಾಂಬರವಿಧಾರಿಣೀ ॥ ೧೩೪ ॥
ದೇಹೇನ ದಿವ್ಯಗಂಧೇನ ದಿವ್ಯತೇಜೋವಿಕಾಸಿನಾ ।
ದಿವ್ಯಮಾಲ್ಯಾವತಂಸೇನ ವಿರರಾಜ ವಿಮಾನಗಾ ॥ ೧೩೫ ॥
ರತ್ನಚ್ಛತ್ರಪತಾಕಾದ್ಯೈರ್ಗೀತವಾದಿತ್ರನಿಸ್ಸ್ವನೈಃ ।
ಮಧ್ಯೇ ಸಾ ಶಿವದೂತಾನಾಂ ಮೋದಮಾನಾ ವರಾನನಾ ॥ ೧೩೬ ॥
ಅನುಭೂತಾನಿ ಜನ್ಮಾನಿ ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ ।
ಭೀತಾ ತ್ರಸ್ತಾ ದೃಢಾಶ್ಚರ್ಯಂ ದೃಷ್ಟ್ವಾ ಸ್ವಪ್ನಮಿವೋತ್ಥಿತಾ ॥ ೧೩೭ ॥
ಕಾಽಹಂ ಕೇಽಮೀ ಮಹಾಸಿದ್ಧಾಃ ಕೋಽಯಂ ಲೋಕೋ ಮನೋರಮಃ ।
ಕ್ವಗತಂ ಮೇ ವಪುಃ ಕಷ್ಟಂ ಚಂಡಚಾಂಡಾಲಗೋತ್ರಜಂ ॥ ೧೩೮ ॥

---

೧೩೨. ಗೌತಮನು ಹೇಳುತ್ತಾನೆ:—ಶಿವದೂತರು ಹೀಗೆಂದು, ಅವಳ ಜೀವವನ್ನು ಚಾಂಡಾಲ ದೇಹದಿಂದ ಎಳೆದು ದಿವ್ಯ ತೇಜಸ್ಸಿನಿಂದ ಸೇರಿಸಿದರು.

೧೩೩. ಸಂತೋಷಗೊಂಡ ಆ ಶಿವದೂತರು ದಿವ್ಯದೇಹವನ್ನು ಪಡೆದು ತೇಜಃಪುಂಜದಿಂದ ಪ್ರಕಾಶಮಾನಳಾದ ಅವಳನ್ನು ವಿಮಾನದಲ್ಲಿ ಕುಳ್ಳಿರಿಸಿದರು.

೧೩೪–೧೩೫. ಬಳಿಕ ಅವಳು ಉತ್ಕೃಷ್ಟಸೌಂದರ್ಯದಿಂದ ಪ್ರಕಾಶಮಾನಳೂ, ದಿವ್ಯಾಭರಣಗಳಿಂದ ಪ್ರಕಾಶಗೊಂಡ ಅವಯವವುಳ್ಳವಳೂ, ದಿವ್ಯ ವಸ್ತ್ರವನ್ನು ಧರಿಸಿದವಳೂ ಆಗಿ ದಿವ್ಯತೇಜಸ್ಸಿನಿಂದ ಹೊಳೆಯುವ ದಿವ್ಯಮಾಲ್ಯವನ್ನು ಧರಿಸಿ ದಿವ್ಯದೇಹದಿಂದ ವಿಮಾನದಲ್ಲಿ ವಿರಾಜಿಸಿದಳು.

೧೩೬–೧೩೭. ಅವಳು ರತ್ನದ ಛತ್ರಪತಾಕಾದಿಗಳಿಂದಲೂ, ಗೀತ, ವಾದ್ಯಗಳ ಧ್ವನಿಗಳಿಂದಲೂ ಶಿವದೂತರ ಮಧ್ಯದಲ್ಲಿ ಸಂತೋಷಗೊಳ್ಳುತ್ತ ತಾನು ಅನುಭವಿಸಿದ ಜನ್ಮಗಳನ್ನು ಅನೇಕ ಸಾರಿ ಸ್ಮರಿಸಿ ಸ್ಮರಿಸಿ ಭಯಗೊಂಡು ಆಶ್ಚರ್ಯವನ್ನು ಹೊಂದಿ ಸ್ವಪ್ನ ಕಂಡು ಎಚ್ಚರಗೊಂಡವಳಂತಾದಳು.

೧೩೮. "ನಾನು ಯಾರು? ಈ ಮಹಾಸಿದ್ಧರಾರು? ರಮ್ಯವಾದ ಈ ಲೋಕವಾವುದು? ನನ್ನ ಚಂಡಾಲಕುಲದಲ್ಲಿ ಜನಿಸಿದ ಕಷ್ಟತರವಾದ ದೇಹವು ಎಲ್ಲಿಗೆ ಹೋಯಿತು?

CC-0. Jangamwadi Math Collection. Digitized by eGangotri

ಅಹೋ ಸುಮಹದಾಶ್ಚರ್ಯಂ ದೃಷ್ಟಂ ಮಾಯಾವಿಲಾಸಜಂ ।
ಯನ್ಮೇ ಭವಸಹಸ್ರೇಷು ಭ್ರಾಂತಂ ಭ್ರಾಂತಂ ಪುನಃ ಪುನಃ ॥ ೧೩೯ ॥
ಅಹೋ ಈಶ್ವರಪೂಜಾಯಾ ಮಾಹಾತ್ಮ್ಯಂ ವಿಸ್ಮಯಾವಹಂ ।
ಪತ್ರಮಾತ್ರೇಣ ಸಂತುಷ್ಟೋ ಯೋ ದದಾತಿ ಶಿವಂ ಪದಂ ॥ ೧೪೦ ॥
ಇತಿ ತಾಂ ಜಾತನಿರ್ವೇದಾಂ ಸ್ಮರಂತೀಂ ಭಗವತ್ಪದಂ ।
ದಿವ್ಯಂ ವಿಮಾನಮಾರೋಪ್ಯ ತೇ ಮಹೇಶ್ವರಕಿಂಕರಾಃ ॥ ೧೪೧ ॥
ಆಲೋಕಯುತ್ಸು ಸರ್ವೇಷು ಲೋಕೇಷು ಸವಿಸ್ಮಯಂ ।
ಆಮಂತ್ರ್ಯ ತಾಮುಥಾನಿನ್ಯುಃ ಪರಮೇಶ್ವರಸನ್ನಿಧಿಂ ॥ ೧೪೨ ॥
ರಾಜನ್ನುಮಹದಾಶ್ಚರ್ಯಮಾಖ್ಯಾತಂ ಗಿರಿಜಾಪತೇಃ ।
ಮಾಹಾತ್ಮ್ಯಂ ಭಕ್ತಿಲೇಶಸ್ಯ ಸರ್ವಾಘೌಘವಿನಾಶನಂ ॥ ೧೪೩ ॥

ರಾಜೋವಾಚ:—

ಭಗವನ್ಪರಮೇಶಸ್ಯ ಕೀದೃಶೋ ಲೋಕ ಉತ್ತಮಃ ।
ತಸ್ಯ ಮೇ ಲಕ್ಷಣಂ ಬ್ರೂಹಿ ಯದ್ಯಸ್ತಿ ಮಯಿ ತೇ ದಯಾ ॥ ೧೪೪ ॥

ಗೌತಮ ಉವಾಚ:—

ಬ್ರಹ್ಮಾದಿಸುರನಾಥಾನಾಂ ಲೋಕೇಷ್ವಪಿ ಸುದುರ್ಲಭಃ ।
ಯ ಆನಂದಃ ಸದಾ ಯತ್ರ ಸ ಲೋಕಃ ಪಾರಮೇಶ್ವರಃ ॥ ೧೪೫ ॥

---

೧೩೯. ನಾನು ಅನೇಕ ಜನ್ಮಗಳನ್ನೆತ್ತಿ ಮಾಯೆಯ ವಿಲಾಸದಿಂದುಂಟಾದ ಮಹಾಶ್ಚರ್ಯವನ್ನು ಕಂಡೆನು.

೧೪೦. ಪತ್ರಮಾತ್ರದಿಂದ ಪೂಜಿಸಿದರೆ ಸಂತುಷ್ಟನಾಗಿ ತನ್ನ ಸ್ಥಾನವನ್ನು ದಯೆಗೈಯುವ ಮಹೇಶ್ವರನ ಪೂಜೆಯ ಮಾಹಾತ್ಮ್ಯವು ಆಶ್ಚರ್ಯಕರವಾದುದು.''

೧೪೧–೧೪೨. ಹೀಗೆ ವೈರಾಗ್ಯಗೊಂಡು ಪರಮಾತ್ಮನ ಚರಣವನ್ನು ಸ್ಮರಿಸುತ್ತಿರುವ ಅವಳನ್ನು ಆ ಶಿವದೂತರು ದಿವ್ಯ ವಿಮಾನದಲ್ಲಿ ಕುಳ್ಳಿರಿಸಿ ಸಕಲ ಲೋಕಪಾಲಕರೂ ವಿಸ್ಮಯದಿಂದ ನೋಡುತ್ತಿರುವಂತೆಯೆ ಪರಮೇಶ್ವರನ ಸಮೀಪಕ್ಕೆ ಕರೆದುಕೊಂಡುಹೋದರು.

೧೪೩. ಮಹಾರಾಜ! ಸಕಲ ಪಾಪವನ್ನು ನೀಗಿಸುವ ಆಶ್ಚರ್ಯಕರವಾದ ಮಹೇಶ್ವರನ ಭಕ್ತಿಲೇಶದ ಮಾಹಾತ್ಮ್ಯವನ್ನು ಹೇಳಿದ್ದೇನೆ.

೧೪೪. ರಾಜನು ಕೇಳುತ್ತಾನೆ:—ಪೂಜ್ಯರೆ! ನನ್ನಲ್ಲಿ ದಯೆಯಿದ್ದರೆ ಪರಮೇಶ್ವರನ ಉತ್ತಮಲೋಕವು ಹೇಗಿರುವುದು? ಅದರ ಲಕ್ಷಣವೇನು? ಎಂಬುದನ್ನು ತಿಳಿಯಹೇಳಿರಿ.

೧೪೫. ಗೌತಮನು ಹೇಳುತ್ತಾನೆ:—ಬ್ರಹ್ಮಾದಿ ದೇವತೆಗಳ ಲೋಕಗಳಲ್ಲಿ ದುರ್ಲಭವಾದ ಆನಂದವು ಶಿವಲೋಕದಲ್ಲಿ ದೊರಕುವುದು.

CC-0. Jangamwadi Math Collection. Digitized by eGangotri
...SIMHASAN JNANAMA... LIBRARY Jangamawadi Math, Vara... Acc. No. 4852

ಸರ್ವಾತಿಗಮನಂ ಯತ್ರ ಜ್ಯೋತಿರ್ಯತ್ರ ಪ್ರತಿಷ್ಠಿತಂ ।
ಕ್ವಾಪಿ ನಾಽಸ್ತಿ ತಮೋಯೋಗಃ ಸಲೋಕಃ ಪಾರಮೇಶ್ವರಃ ॥ ೧೪೬ ॥
ಗುಣವೃತ್ತಿಂ ವಿನಿಸ್ತೀರ್ಯ ಸಂಪ್ರಾಪ್ತಾ ಯತ್ರ ಯೋಗಿನಃ ।
ನ ಪತೇಯುಃ ಪುನಃ ಸರ್ವೇ ಸಲೋಕಃ ಪಾರಮೇಶ್ವರಃ ॥ ೧೪೭ ॥
ಯತ್ರ ವಾಸಂ ನ ಕುರ್ವಂತಿ ಕ್ರೋಧಲೋಭಮದಾದಯಃ ।
ಯತ್ರಾಽವಸ್ಥಾ ನಜನ್ಮಾದ್ಯಾಃ ಸಲೋಕಃ ಪಾರಮೇಶ್ವರಃ ॥ ೧೪೮ ॥
ಸರ್ವೇಷಾಂ ನಿಗಮಾನಾಂ ಚ ಯದೇಕಂ ಕ್ಷೇತ್ರಮುಚ್ಯತೇ ।
ಯಸ್ಮಾನ್ನಾಽಸ್ತಿಪರಂ ವಿತ್ತಂ ತತ್ಪದಂ ಪಾರಮೇಶ್ವರಂ ॥ ೧೪೯ ॥
ಪ್ರತ್ಯಾಹಾರಾಸನಧ್ಯಾನ ಪ್ರಾಣಸಂಯಮನಾದಿಭಿಃ ।
ಯತ್ರ ಯೋಗಪಥೈಃ ಪ್ರಾಪ್ತುಂ ಯತಂತೇ ಯೋಗಿನಃ ಸದಾ ॥ ೧೫೦ ॥
ಯತ್ರ ದೇವಃ ಸದಾನಂದನಿರ್ಮಲಜ್ಞಾನರೂಪಯಾ ।
ಅಸ್ತಿ ದೇವ್ಯಾಸಹ ಕ್ರೀಡನ್ಸಲೋಕಃ ಪಾರಮೇಶ್ವರಃ ॥ ೧೫೧ ॥
ಜನ್ಮಾಽನೇಕಸಹಸ್ರೇಷು ಸಂಭೃತೈಃ ಪುಣ್ಯರಾಶಿಭಿಃ ।
ಆರೂಢಾಃ ಪುರುಷಾ ನಾರ್ಯಃ ಕ್ರೀಡಂತೇ ಯತ್ರ ಸಂಗತಾಃ ॥ ೧೫೨ ॥
ತೇಜೋರಾಶೌ ಸಮಾಲೀನಾ ದುರ್ವಿಭಾವ್ಯೇ ಮನೋರಮೇ ।
ಅಹೋರಾತ್ರಾದಿ ಸಂಸ್ಥಾನಂ ನ ವಿಂದಂತಿ ಕದಾಚನ ॥ ೧೫೩ ॥

---

೧೪೬. ಸರ್ವವನ್ನೂ ಮೀರಿದ ತೇಜಸ್ಸು ಎಲ್ಲಿರುವುದೊ, ತಮಸ್ಸು ಎಲ್ಲಿಲ್ಲವೊ ಅದೇ ಶಿವಲೋಕವು.

೧೪೭. ಯೋಗಿಗಳು ಯಾವ ಲೋಕವನ್ನು ದಾಟಿ ಸತ್ತ್ವಾದಿ ಗುಣಗಳ ವ್ಯಾಪಾರವನ್ನು ಸೇರಿ ಹಿಂದಿರುಗುವುದಿಲ್ಲವೊ ಅದು ಶಿವಲೋಕವು.

೧೪೮. ಎಲ್ಲಿ ಕ್ರೋಧ, ಲೋಭ, ಮದಾದಿಗಳೂ, ಜನ್ಮಾದ್ಯವಸ್ಥೆಗಳೂ ಇಲ್ಲವೊ, ಅದು ಶಿವಲೋಕವು.

೧೪೯. ಸಕಲವೇದಗಳಿಗೂ ಯಾವುದು ಮುಖ್ಯಾಶ್ರಯವೊ, ಯಾವುದಕ್ಕಿಂತಲೂ ಉತ್ತಮವಾದ ದ್ರವ್ಯವಿಲ್ಲವೊ, ಅದೇ ಶಿವಸ್ಥಾನವು.

೧೫೦–೧೫೧. ಯೋಗಿಗಳು, ಯಾವಾಗಲೂ ಪ್ರತ್ಯಾಹಾರ, ಆಸನ, ಧ್ಯಾನ, ಪ್ರಾಣಾಯಾಮವೇ ಮೊದಲಾದ ಯೋಗಮಾರ್ಗಗಳಿಂದ ಯಾವುದನ್ನು ಪಡೆಯಲು ಯತ್ನಿಸುತ್ತಾರೆಯೊ, ಎಲ್ಲಿ ಪರಮೇಶ್ವರನು ಜ್ಞಾನಾನಂದಸ್ವರೂಪಳಾದ ಮಹಾದೇವಿಯೊಡನೆ ವಿನೋದಪಡುತ್ತಿರುವನೊ ಅದೇ ಶಿವಲೋಕವು.

೧೫೨–೧೫೪. ಮನೋಹರವಾದ ಯಾವ ಸ್ಥಳವನ್ನು ಪುರುಷರೂ, ಸ್ತ್ರೀಯರೂ ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯರಾಶಿಗಳಿಂದ ಹೊಂದಿ ಒಟ್ಟಿಗೆ ವಿನೋದಪಡುತ್ತ ತೇಜಸ್ಸಿನ ರಾಶಿಯಲ್ಲಿ ಅಡಗಿ ಹಗಲು ರಾತ್ರಿಗಳನ್ನು

CC-0. Jangamwadi Math Collection. Digitized by eGangotri

ಸಲೋಕಃ ಪರಮೇಶಸ್ಯ ದುರ್ಲಭೋ ಹಿ ಕುಯೋಗಿನಃ ।
ಏತದ್ಭಕ್ತಿಸುಪೂರ್ಣಾ ಯೇ ತೈರೇವ ಪ್ರತಿಪದ್ಯತೇ ॥ ೧೫೪ ॥
ಯೇ ತತ್ಕಥಾಶ್ರವಣಕೀರ್ತನಜಾತಹರ್ಷಾ
ಯೇ ಸರ್ವಭೂತಸುಹೃದಃ ಪ್ರಶಮೈಕನಿಷ್ಠಾಃ ।
ಸಂಸಾರ ಚಕ್ರಮತಿವಾಹ್ಯ ನಿರಸ್ತಮೋಹಾ
ಸ್ತೇ ಶಾಂಕರಂ ಪದಮವಾಪ್ಯ ಸುಖಂ ರಮಂತೇ॥ ೧೫೫ ॥
ತಥಾ ತ್ವಮಪಿ ರಾಜೇಂದ್ರ ಗೋಕರ್ಣಂ ಗಿರಿಶಾಲಯಂ ।
ಗತ್ವಾ ಪ್ರಶಮಿತಾಽಘೌಘಃ ಕೃತಕೃತ್ಯತ್ವಮಾಪ್ನುಹಿ ॥ ೧೫೬ ॥
ತತ್ರ ಸರ್ವೇಷು ಕಾಲೇಷು ಸ್ನಾತ್ವಾಽಭ್ಯರ್ಚ್ಯ ಮಹಾಬಲಂ ।
ಕೃತ್ವಾ ಶಿವಚತುರ್ದಶ್ಯಾಮುಪವಾಸಂ ಸಮಾಹಿತಃ ॥ ೧೫೭ ॥
ಕೃತ್ವಾ ಜಾಗರಣಂ ರಾತ್ರೌ ಬಿಲ್ವೈರಭ್ಯರ್ಚ್ಯ ಶಂಕರಂ ।
ಸರ್ವಪಾಪವಿನಿರ್ಮುಕ್ತಃ ಶಿವಲೋಕಮವಾಪ್ಸ್ಯಸಿ ॥ ೧೫೮ ॥
ಏಷ ತೇ ವಿಮಲೋ ರಾಜನ್ನುಪದೇಶೋ ಮಯಾ ಕೃತಃ ।
ಸ್ವಸ್ತಿ ತೇಽಸ್ತು ಗಮಿಷ್ಯಾಮಿ ಮಿಥಿಲಾಽಧಿಪತೇಃ ಪುರೀಂ ॥ ೧೫೯ ॥
ಇತ್ಯಾಮಂತ್ರ್ಯ ಮುನಿಃ ಪ್ರೀತ್ಯಾ ಗೌತಮೋ ಮಿಥಿಲಾಂ ಯಯೌ ।
ಸೋಽಪಿ ಹೃಷ್ಟಮನಾ ರಾಜಾ ಗೋಕರ್ಣಂ ಪ್ರತ್ಯಪದ್ಯತ ॥ ೧೬೦ ॥

---

ತಿಳಿಯುವುದಿಲ್ಲವೊ ಆ ಪರಮೇಶ್ವರನ ಲೋಕವು ಕುಯೋಗಿಗಳಿಗೆ ದುರ್ಲಭವಾದುದು. ಪರಮೇಶ್ವರನಲ್ಲಿ ಅತಿಶಯವಾದ ಭಕ್ತಿಯುಳ್ಳವರು ಮಾತ್ರ ಆ ಲೋಕವನ್ನು ಹೊಂದುತ್ತಾರೆ.

೧೫೫. ಶಿವನ ಕಥೆಗಳನ್ನು ಶ್ರವಣಮಾಡುವುದರಿಂದಲೂ, ಹೇಳುವುದರಿಂದಲೂ ಸಂತೋಷವುಳ್ಳವರೂ, ಸಕಲ ಪ್ರಾಣಿಗಳಲ್ಲಿಯೂ ಮೈತ್ರಿಯುಳ್ಳವರಾಗಿ ಶಾಂತರೂ, ಅಜ್ಞಾನವಿಲ್ಲದವರೂ ಸಂಸಾರವೆಂಬ ಚಕ್ರವನ್ನು ದಾಟಿ ಶಂಕರನ ಸ್ಥಾನವನ್ನು ಪಡೆದು ಸುಖಪಡುವರು.

೧೫೬. ಮಹಾರಾಜ! ನೀನೂ ಶಿವನ ನೆಲೆಮನೆಯಾದ ಗೋಕರ್ಣಕ್ಕೆ ಹೋಗಿ ಪಾಪರಹಿತನಾಗು; ಧನ್ಯನಾಗು.

೧೫೭–೧೫೮. ಅಲ್ಲಿ ಶಿವರಾತ್ರಿಯ ದಿನ ಎಲ್ಲ ಕಾಲಗಳಲ್ಲಿಯೂ ಮಹಾಬಲೇಶ್ವರನನ್ನು ಬಿಲ್ವಪತ್ರೆಯಿಂದ ಅರ್ಚಿಸಿ ಉಪವಾಸವನ್ನೂ ರಾತ್ರಿ ಜಾಗರಣವನ್ನೂ ಮಾಡಿ ಸಕಲ ಪಾಪಮುಕ್ತನಾಗಿ ಶಿವಲೋಕವನ್ನು ಸೇರುವೆ.

೧೫೯. ಅರಸ! ನಿನಗೆ ನಾನು ಪವಿತ್ರವಾದ ಉಪದೇಶವನ್ನು ಮಾಡಿದೆನು. ನಿನಗೆ ಮಂಗಳವಾಗಲಿ. ನಾನು ಜನಕನ ಪಟ್ಟಣಕ್ಕೆ ಹೋಗುವೆನು.

೧೬೦. ಗೌತಮನು ಹೀಗೆಂದು ಮಿಥಿಲೆಗೆ ತೆರಳಿದನು. ಆ ರಾಜನೂ ಸಂತೋಷಗೊಂಡು ಗೋಕರ್ಣಕ್ಕೆ ಹೋದನು.

CC-0. Jangamwadi Math Collection. Digitized by eGangotri

ತತ್ರ ದೃಷ್ಟ್ವಾ ಮಹಾದೇವಂ ಸ್ನಾತ್ವಾಽಭ್ಯರ್ಚ್ಯ ಮಹಾಬಲಂ ।
ನಿರ್ಧೂತಾಽಶೇಷಪಾಪೌಘೋ ಲೇಭೇ ಶಂಭೋಃ ಪರಂಪದಂ ॥ ೧೬೧ ॥
ಯ ಇಮಾಂ ಶೃಣುಯಾನ್ನಿತ್ಯಂ ಕಥಾಂ ಶೈವೀಂ ಮನೋಹರಾಂ ।
ಶ್ರಾವಯೇದ್ವಾ ಜನೋ ಭಕ್ತ್ಯಾ ಸ ಯಾತಿ ಪರಮಾಂ ಗತಿಂ ॥ ೧೬೨ ॥
ಶ್ರದ್ದಧಾನಃ ಸಕೃದ್ವಾಽಪಿ ಯ ಇಮಾಂ ಶೃಣುಯಾತ್ಕಥಾಂ ।
ತ್ರಿಃಸಪ್ತಕುಲಜೈಃ ಸಾರ್ಧಂ ಶಿವಲೋಕಮವಾಪ್ನುಯಾತ್ ॥ ೧೬೩ ॥
ಇತಿ ಕಥಿತಮಶೇಷಂ ಶ್ರೇಯಸಾಮಾದಿಬೀಜಂ-
ಭವಶತ ದುರಿತಘ್ನಂ ಧ್ವಸ್ತಮೋಹಾಂಧಕಾರಂ ।
ಚರಿತಮಮರಗೇಯಂ ಮನ್ಮಥಾಽರೇರುದಾರಂ-
ಸತತಮಪಿ ನಿಷೇವ್ಯಂ ಸ್ವಸ್ತಿಮದ್ಭಿಶ್ಚ ಲೋಕೈಃ ॥ ೧೬೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಽಶೀತಿ ಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ ''ಶಿವಚತುರ್ದಶೀ ಗೋಕರ್ಣಮಾಹಾತ್ಮ್ಯವರ್ಣನಂ''ನಾಮ ತೃತೀಯೋಽಧ್ಯಾಯಃ

---

೧೬೧. ಅಲ್ಲಿ ಸ್ನಾನಮಾಡಿ ಮಹಾಬಲೇಶ್ವರನನ್ನು ಕಂಡು ಅವನನ್ನು ಪೂಜಿಸಿ ಸಕಲ ಪಾಪಮುಕ್ತನಾಗಿ ಶಿವನ ಸ್ಥಾನವನ್ನು ಪಡೆದನು.

೧೬೨. ಮನೋಹರವಾದ ಈ ಶಿವಕಥೆಯನ್ನು ಭಕ್ತಿಯಿಂದ ಕೇಳಿದವರೂ ಹೇಳಿದವರೂ ಪರಮಪದವನ್ನು ಸೇರುತ್ತಾರೆ.

೧೬೩. ಶ್ರದ್ಧೆಯಿಂದ ಒಂದುಸಾರಿಯಾದರೂ ಈ ಕಥೆಯನ್ನು ಕೇಳಿದವನು ಇಪ್ಪತ್ತೊಂದು ಕುಲದವರೊಡನೆ ಶಿವಲೋಕಕ್ಕೆ ತೆರಳುವನು.

೧೬೪. ಹೀಗೆ ಶ್ರೇಯಸ್ಸಿಗೆ ಮೂಲಕಾರಣವೂ, ಅನೇಕ ಜನ್ಮಗಳ ಪಾಪವನ್ನು ಪರಿಹರಿಸುವುದೂ, ಅಜ್ಞಾನವೆಂಬ ಕತ್ತಲೆಯನ್ನು ನಿವಾರಿಸುವುದೂ, ದೇವತೆಗಳಿಗೆ ಗಾನಮಾಡಲು ಯೋಗ್ಯವಾದುದೂ, ಜನರಿಂದ ಸೇವಿಸಲರ್ಹವೂ ಆದ ಮಹೇಶ್ವರನ ಉತ್ಕೃಷ್ಟಚರಿತೆಯನ್ನು ಸಂಪೂರ್ಣವಾಗಿ ಹೇಳಿರುತ್ತೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ ''ಶಿವಚತುರ್ದಶೀ ಗೋಕರ್ಣಮಾಹಾತ್ಮ್ಯವರ್ಣನ''ವೆಂಬ ಮೂರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಚತುರ್ದಶೀಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಭೂಯೋಽಪಿ ಶಿವಮಾಹಾತ್ಮ್ಯಂ ವಕ್ಷ್ಯಾಮಿ ಪರಮಾದ್ಭುತಂ ।
ಶೃಣ್ವತಾಂ ಸರ್ವಪಾಪಘ್ನಂ ಭವಪಾಶವಿಮೋಚನಂ ॥ ೧ ॥
ದುಸ್ತರೇ ದುರಿತಾಂಭೋಧೌ ಮಜ್ಜತಾಂ ವಿಷಯಾತ್ಮನಾಂ ।
ಶಿವಪೂಜಾಂ ವಿನಾ ಕಶ್ಚಿತ್ಪ್ಲವೋ ನಾಽಸ್ತಿ ನಿರೂಪಿತಃ ॥ ೨ ॥
ಶಿವಪೂಜಾಂ ಸದಾಕುರ್ಯಾದ್ಬುದ್ಧಿಮಾನಿಹ ಮಾನವಃ ।
ಅಶಕ್ತಶ್ಚೇತ್ಕೃತಾಂ ಪೂಜಾಂ ಪಶ್ಯೇದ್ಭಕ್ತಿವಿನಮ್ರಧೀಃ ॥ ೩ ॥
ಅಶ್ರದ್ಧಯಾಽಪಿ ಯಃ ಕುರ್ಯಾಚ್ಛಿವಪೂಜಾಂ ವಿಮುಕ್ತಿದಾಂ ।
ಪಶ್ಯೇದ್ವಾ ಸೋಽಪಿ ಕಾಲೇನ ಪ್ರಯಾತಿ ಪರಮಂ ಪದಂ ॥ ೪ ॥
ಆಸೀತ್ಕಿರಾತದೇಶೇಷು ನಾಮ್ನಾ ರಾಜಾ ವಿಮರ್ದನಃ ।
ಶೂರಃ ಪರಮದುರ್ಧರ್ಷೋ ಜಿತಶತ್ರುಃ ಪ್ರತಾಪವಾನ್ ॥ ೫ ॥

---

### ಕನ್ನಡದ ಅನುವಾದ

### ಚತುರ್ದಶೀಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಅತ್ಯಾಶ್ಚರ್ಯಕರವಾದುದೂ, ಕೇಳುವವರ ಪಾಪವನ್ನು ನೀಗಿಸುವುದೂ, ಸಂಸಾರಬಂಧನವನ್ನು ಬಿಡಿಸುವುದೂ ಆದ ಶಿವನ ಮಾಹಾತ್ಮ್ಯವನ್ನು ಮತ್ತೂ ಹೇಳುವೆನು ; ಕೇಳು.

೨. ದಾಟಲಾಗದ ಪಾಪವೆಂಬ ಸಾಗರದಲ್ಲಿ ಮುಳುಗುತ್ತಿರುವ ಸಂಸಾರಿಗಳಿಗೆ ಶಿವಪೂಜೆಯನ್ನು ಬಿಟ್ಟರೆ ಯಾವ ದೋಣಿಯೂ ಇರುವುದಿಲ್ಲ.

೩. ಜಾಣನಾದ ಮನುಜನು ಯಾವಾಗಲೂ ಶಿವಪೂಜೆಯನ್ನು ಮಾಡಬೇಕು. ಪೂಜಿಸಲಶಕ್ತನಾದರೆ ಮತ್ತೊಬ್ಬನು ಮಾಡಿದ ಪೂಜೆಯನ್ನಾದರೂ ಭಕ್ತಿಯಿಂದ ವಿಧೇಯನಾಗಿ ನೋಡಬೇಕು.

೪. ಶ್ರದ್ಧೆಯಿಲ್ಲದೆ ಮೋಕ್ಷದಾಯಕವಾದ ಶಿವಪೂಜೆಯನ್ನು ಮಾಡಿದವನು, ಅಥವಾ ನೋಡಿದವನು ಕಾಲಾಂತರದಲ್ಲಿ ಉತ್ತಮಸ್ಥಾನವನ್ನು ಪಡೆಯುವನು.

೫–೬. ಕಿರಾತದೇಶದಲ್ಲಿ ಶೂರನೂ, ತಿರಸ್ಕರಿಸಲಶಕ್ಯನೂ, ಶತ್ರುಗಳನ್ನು ಜಯಿಸಿದವನೂ, ಪ್ರತಾಪವುಳ್ಳವನೂ ಯಾವಾಗಲೂ ಬೇಟೆಯಾಡುವವನೂ, ನಿರ್ದಯನೂ, ಬಲಿಷ್ಠನೂ, ಸಕಲ ಮೃಗಗಳ ಮಾಂಸಗಳನ್ನೂ ತಿನ್ನುವವನೂ,

CC-0. Jangamwadi Math Collection. Digitized by eGangotri

ಸರ್ವದಾ ಮೃಗಯಾಸಕ್ತಃ ಕೃಪಣೋ ನಿರ್ಘೃಣೋ ಬಲೀ ।
ಸರ್ವಮಾಂಸಾಽಶನಃ ಕ್ರೂರಃ ಸರ್ವವರ್ಣಾಙ್ಗನಾವೃತಃ ॥ ೬ ॥
ತಥಾಽಪಿ ಕುರುತೇ ಶಂಭೋಃ ಪೂಜಾಂ ನಿತ್ಯಮತಂದ್ರಿತಃ ।
ಚತುರ್ದಶ್ಯಾಂ ವಿಶೇಷೇಣ ಪಕ್ಷಯೋಃ ಶುಕ್ಲಕೃಷ್ಣಯೋಃ ॥ ೭ ॥
ಮಹಾವಿಭವಸಂಪನ್ನಾಂ ಪೂಜಾಂ ಕೃತ್ವಾ ಸಮೋದತೇ ।
ಹರ್ಷೇಣ ಮಹತಾವಿಷ್ಟೋ ನೃತ್ಯತಿ ಸ್ತೌತಿ ಗಾಯತಿ ॥ ೮ ॥
ತಸ್ಯೈವಂ ವರ್ತಮಾನಸ್ಯ ನೃಪತೇಃ ಸರ್ವಭಕ್ಷಿಣಃ ।
ದುರಾಚಾರಸ್ಯ ಮಹಿಷೀ ಚೇಷ್ಟಿತೇನಾಽನ್ವತಪ್ಯತ ॥ ೯ ॥
ಸಾ ವೈ ಕುಮುದ್ವತೀನಾಮ ರಾಜ್ಞೀ ಶೀಲಗುಣಾನ್ವಿತಾ ।
ಏಕದಾ ಪತಿಮಾಸಾದ್ಯ ರಹಸ್ಯೇ ತದಪೃಚ್ಛತ ॥ ೧೦ ॥
ಏತತ್ತೇ ಚರಿತಂ ರಾಜನ್ಮಹದಾಶ್ಚರ್ಯಕಾರಣಂ ।
ಕ್ವ ತೇ ಮಹಾನ್ದುರಾಚಾರಃ ಕ್ವ ಭಕ್ತಿಃ ಪರಮೇಶ್ವರೇ ॥ ೧೧ ॥
ಸರ್ವದಾ ಸರ್ವಭಕ್ಷಸ್ತ್ವಂ ಸರ್ವಸ್ತ್ರೀಜನಲಾಲಸಃ ।
ಸರ್ವಹಿಂಸಾಪರಃ ಕ್ರೂರಃ ಕಥಂ ಭಕ್ತಿಸ್ತವೇಶ್ವರೇ ॥ ೧೨ ॥
ಇತಿ ಪೃಷ್ಟಃ ಸ ಭೂಪಾಲೋ ವಿಮೃಶ್ಯ ಸುಚಿರಂ ತತಃ ।
ತ್ರಿಕಾಲಜ್ಞಃ ಪ್ರಹಸ್ಯೈನಾಂ ಪ್ರೋವಾಚ ಸುಕುತೂಹಲಃ ॥ ೧೩ ॥

---

ಸಮಸ್ತ ಜಾತಿಯ ಹೆಂಗಸರಿಂದ ಕೂಡಿದವನೂ, ಕ್ರೂರನೂ ಆದ ವಿಮರ್ದನನೆಂಬ ದೊರೆಯಿದ್ದನು.

೭. ಹಾಗಿದ್ದರೂ ಅವನು ನಿತ್ಯವೂ ಶಿವನನ್ನು ಪೂಜಿಸುತ್ತಿದ್ದನು. ಶುಕ್ಲಕೃಷ್ಣಪಕ್ಷಗಳ ಚತುರ್ದಶಿಯ ದಿನ ವಿಶೇಷವಾಗಿ ಶಿವಪೂಜೆ ಮಾಡುತ್ತಿದ್ದನು.

೮. ಅವನು ಅತಿವೈಭವದಿಂದ ಶಿವನನ್ನು ಪೂಜಿಸಿ ಅತ್ಯಂತ ಸಂತೋಷಗೊಂಡು ಕುಣಿಯುತ್ತಲೂ, ಸ್ತುತಿಸುತ್ತಲೂ, ಗಾನಮಾಡುತ್ತಲೂ ಇದ್ದನು.

೯–೧೦. ಸರ್ವಭಕ್ಷಕನೂ, ದುರಾಚಾರಿಯೂ ಆದ ಅವನ ರಾಣಿಯು ಆ ದುರ್ನಡತೆಯಿಂದ ಬಹಳ ವ್ಯಥೆಗೊಂಡಳು. ಶೀಲ, ಗುಣಗಳುಳ್ಳ ಕುಮುದ್ವತಿಯೆಂಬ ಅವಳು ಒಂದು ದಿನ ಪತಿಯನ್ನು ಗುಟ್ಟಾಗಿ ಹೀಗೆ ಕೇಳಿದಳು.

೧೧. "ಮಹಾರಾಜ! ನಿನ್ನ ನಡತೆಯು ಬಹಳ ಆಶ್ಚರ್ಯಕರವಾಗಿದೆ. ನಿನ್ನ ದುರಾಚಾರವೆಲ್ಲಿ, ಪರಮೇಶ್ವರನಲ್ಲಿ ನಿನಗಿರುವ ಭಕ್ತಿಯೆಲ್ಲಿ.

೧೨. ನೀನು ಯಾವಾಗಲೂ ಎಲ್ಲವನ್ನೂ ತಿನ್ನುವವನೂ, ಸಕಲ ಸ್ತ್ರೀಯರಲ್ಲಿಯೂ ಆಸಕ್ತನೂ, ಸಕಲ ಹಿಂಸೆಗಳಲ್ಲಿಯೂ ನಿರತನೂ, ಕ್ರೂರನೂ ಆಗಿರುವೆ. ಇಂತಹ ನಿನಗೆ ಈಶ್ವರನಲ್ಲಿ ಭಕ್ತಿಯು ಹೇಗೆ ಉಂಟಾಯಿತು?"

೧೩. ಹೀಗೆ ಪತ್ನಿಯು ಕೇಳಲು ತ್ರಿಕಾಲಜ್ಞನಾದ ಆ ರಾಜನು ಬಹಳ ಹೊತ್ತು ಆಲೋಚಿಸಿ ಕುತೂಹಲದಿಂದ ಅವಳನ್ನು ಕುರಿತು ಇಂತೆಂದನು.

CC-0. Jangamwadi Math Collection. Digitized by eGangotri

ರಾಜೋವಾಚ :—

ಅಹಂ ಪೂರ್ವಭವೇ ಕಶ್ಚಿತ್ಸಾರಮೇಯೋ ವರಾನನೇ ।
ಪಂಪಾನಗರಮಾಶ್ರಿತ್ಯ ಪರ್ಯಟಾಮಿ ಸಮಂತತಃ ॥ ೧೪ ॥
ಏತಂ ಕಾಲೇಷು ಗಚ್ಛತ್ಸು ತತ್ರೈವ ನಗರೋತ್ತಮೇ ।
ಕದಾಚಿದಾಗತಃ ಸೋಽಹಂ ಮನೋಜ್ಞಂ ಶಿವಮಂದಿರಂ ॥ ೧೫ ॥
ಪೂಜಾಯಾಂ ವರ್ತಮಾನಾಯಾಂ ಚತುರ್ದಶ್ಯಾಂ ಮಹಾತಿಥೌ ।
ಅಪಶ್ಯಮುತ್ಸವಂ ದೂರಾದ್ಬಹಿರ್ದ್ವಾರಂ ಸಮಾಶ್ರಿತಃ ॥ ೧೬ ॥
ಅಥಾಽಹಂ ಪರಮಕ್ರುದ್ಧೈರ್ದಂಡಹಸ್ತೈಃ ಪ್ರಧಾವಿತಃ ।
ತಸ್ಮಾದ್ದೇಶಾದಪಕ್ರಾಂತಃ ಪ್ರಾಣರಕ್ಷಾಪರಾಯಣಃ ॥ ೧೭ ॥
ತತಃ ಪ್ರದಕ್ಷಿಣೀಕೃತ್ಯ ಮನೋಜ್ಞಂ ಶಿವಮಂದಿರಂ ।
ದ್ವಾರದೇಶಂ ಪುನಃಪ್ರಾಪ್ಯ ಪುನಶ್ಚೈವ ನಿವಾರಿತಃ ॥ ೧೮ ॥
ಪುನಃಪ್ರದಕ್ಷಿಣೀಕೃತ್ಯ ತದೇವ ಶಿವಮಂದಿರಂ ।
ಬಲಿಪಿಡಾದಿಲೋಭೇನ ಪುನರ್ದ್ವಾರಮುಪಾಗತಃ ॥ ೧೯ ॥
ಏವಂ ಪುನಃಪುನಸ್ತತ್ರ ಕೃತ್ವಾ ಕೃತ್ವಾ ಪ್ರದಕ್ಷಿಣಂ ।
ದ್ವಾರದೇಶೇ ಸಮಾಸೀನಂ ನಿಜಘ್ನುರ್ನಿಶಿತೈಃ ಶರೈಃ ॥ ೨೦ ॥
ಸ ವಿದ್ಧಗಾತ್ರಃ ಸಹಸಾ ಶಿವದ್ವಾರಿ ಗತಾಽಸುಕಃ ।
ಜಾತೋಽಸ್ಮ್ಯಹಂ ಕುಲೇ ರಾಜ್ಞಾಂ ಪ್ರಭಾವಾಚ್ಛಿವಸನ್ನಿಧೇಃ ॥ ೨೧ ॥

---

೧೪–೧೫. ರಾಜನು ಹೇಳುತ್ತಾನೆ:–ಸುಂದರಿ! ನಾನು ಹಿಂದಿನ ಜನ್ಮದಲ್ಲಿ ಒಂದು ನಾಯಿಯಾಗಿ ಪಂಪಾನಗರದಲ್ಲಿ ವಾಸಿಸುತ್ತ ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಿದ್ದೆನು. ಹೀಗೆಯೇ ಕಾಲವು ಕಳೆಯುತ್ತಿರಲು ಅದೇ ಪಟ್ಟಣದಲ್ಲಿ ನಾನು ಒಂದಾನೊಂದು ದಿನ ರಮ್ಯವಾದ ಶಿವಮಂದಿರಕ್ಕೆ ಬಂದೆನು.

೧೬–೧೮. ಅಲ್ಲಿ ಬಾಗಿಲ ಹೊರಗೆ ನಿಂತು ಚತುರ್ದಶಿಯ ದಿನ ನಡೆಯುವ ಪೂಜೆಯ ಉತ್ಸವವನ್ನು ದೂರದಿಂದ ಕಂಡೆನು. ತರುವಾಯ ನಾನು ಅತ್ಯಂತ ಕೋಪಿಷ್ಠರಾದ ದಂಡಧಾರಿಗಳಿಂದ ಓಡಿಸಲ್ಪಟ್ಟು ಪ್ರಾಣರಕ್ಷಣೆಯಲ್ಲಿ ನಿರತನಾಗಿ ಆ ಸ್ಥಳದಿಂದ ಹೊರಟೆನು. ಅನಂತರ ರಮ್ಯವಾದ ಶಿವಾಲಯಕ್ಕೆ ಪ್ರದಕ್ಷಿಣೆಮಾಡಿ ಬಾಗಿಲಿನಹತ್ತಿರ ಬರಲು ತಿರುಗಿಯೂ ಓಡಿಸಿದರು.

೧೯. ಬಳಿಕ ಅದೇ ಶಿವಾಲಯಕ್ಕೆ ಪ್ರದಕ್ಷಿಣೆಮಾಡಿ ಅನ್ನ ಸಿಕ್ಕಬಹುದೆಂಬ ಆಶೆಯಿಂದ ಬಾಗಿಲಿನ ಹತ್ತಿರ ಬಂದೆನು.

೨೦. ಹೀಗೆ ಅನೇಕಬಾರಿ ಪ್ರದಕ್ಷಿಣೆಮಾಡಿ ಬಾಗಿಲಿನಲ್ಲಿ ಮಲಗಿರುವ ನನ್ನನ್ನು ಸೇವಕರು ಹರಿತವಾದ ಬಾಣಗಳಿಂದ ಹೊಡೆದರು.

೨೧. ನಾನು ಬಾಣಗಳಿಂದ ಹೊಡೆಯಲ್ಪಟ್ಟಕೂಡಲೆ ಶಿವಾಲಯದ

CC-0. Jangamwadi Math Collection. Digitized by eGangotri

ದೃಷ್ಟ್ವಾ ಚತುರ್ದಶೀಪೂಜಾಂ ದೀಪಮಾಲಾ ವಿಲೋಕಿತಾಃ ।
ತೇನ ಪುಣ್ಯೇನ ಮಹತಾ ತ್ರಿಕಾಲಜ್ಞೋಽಸ್ಮಿ ಭಾಮಿನಿ ॥ ೨೨ ॥
ಪ್ರಾಗ್ಜನ್ಮವಾಸನಾಭಿಶ್ಚ ಸರ್ವಭಕ್ಷ್ಯೋಽಸ್ಮಿ ನಿರ್ಘೃಣಃ ।
ವಿದುಷಾಮಪಿ ದುರ್ಲಂಘ್ಯಾ ಪ್ರಕೃತಿರ್ವಾಸನಾಮಯೀ ॥ ೨೩ ॥
ಅತೋಽಹಮರ್ಚಯಾಮೀಶಂ ಚತುರ್ದಶ್ಯಾಂ ಜಗದ್ಗುರುಂ ।
ತ್ವಮಪಿ ಶ್ರದ್ಧಯಾ ಭದ್ರೇ ಭಜ ದೇವಂ ಪಿನಾಕಿನಂ ॥ ೨೪ ॥

ರಾಜ್ಞ್ಯುವಾಚ:—

ತ್ರಿಕಾಲಜ್ಞೋಽಸಿ ರಾಜೇಂದ್ರ ಪ್ರಸಾದಾದ್ಗಿರಿಜಾಪತೇಃ ।
ಮತ್ಪೂರ್ವಜನ್ಮಚರಿತಂ ವಕ್ತುಮರ್ಹಸಿ ತತ್ತ್ವತಃ ॥ ೨೫ ॥

ರಾಜೋವಾಚ:—

ತ್ವಂ ತು ಪೂರ್ವಭವೇ ಕಾಚಿತ್ಕಪೋತೀ ವ್ಯೋಮಚಾರಿಣೀ ।
ಕ್ವಾಽಪಿ ಲಬ್ಧವತೀ ಕಿಂಚಿನ್ಮಾಂಸಪಿಂಡಂ ಯದೃಚ್ಛಯಾ ॥ ೨೬ ॥
ತ್ವದ್ಗೃಹೀತಮಥಾಲೋಕ್ಯ ಗೃಧ್ರಃ ಕೋಽಪ್ಯಾಮಿಷಂ ಬಲೀ ।
ನಿರಾಮಿಷಃ ಸ್ವಯಂ ವೇಗಾದಭಿದುದ್ರಾವ ಭೀಷಣಃ ॥ ೨೭ ॥

---

ಬಾಗಿಲಿನಲ್ಲಿ ಮೃತನಾಗಿ ಶಿವನ ಸಾನ್ನಿಧ್ಯದ ಮಾಹಾತ್ಮ್ಯೆಯಿಂದ ರಾಜರ ವಂಶದಲ್ಲಿ ಜನಿಸಿದೆನು.

೨೨. ಪ್ರಿಯಳೆ! ಚತುರ್ದಶೀಪೂಜೆಯನ್ನೂ, ದೀಪಗಳ ಸಾಲುಗಳನ್ನೂ ನೋಡಿದುದರಿಂದುಂಟಾದ ಪುಣ್ಯಪ್ರಭಾವದಿಂದ ತ್ರಿಕಾಲಜ್ಞನಾಗಿದ್ದೇನೆ.

೨೩. ಹಿಂದಿನ ಜನ್ಮದ ಸಂಸ್ಕಾರವಶದಿಂದ ನಿರ್ದಯನಾಗಿ ನಾನು ಸರ್ವಭಕ್ಷಕನಾದೆನು. ಜನ್ಮಾಂತರ ಸಂಸ್ಕಾರವನ್ನು ವಿದ್ವಾಂಸರೂ ಮೀರಲಾರರು.

೨೪. ಇದರಿಂದಲೇ ನಾನು ಚತುರ್ದಶಿಯ ದಿನ ಜಗದ್ಗುರುವಾದ ಮಹೇಶ್ವರನನ್ನು ಆರಾಧಿಸುವೆನು, ನೀನೂ ಶ್ರದ್ಧೆಯಿಂದ ಆ ಶಿವನನ್ನು ಸೇವಿಸು.

೨೫. ರಾಣಿಯು ಕೇಳುತ್ತಾಳೆ:—ಮಹಾರಾಜ! ನೀನು ಮಹೇಶ್ವರನ ಅನುಗ್ರಹದಿಂದ ತ್ರಿಕಾಲಜ್ಞನಾಗಿರುವೆ. ನನ್ನ ಹಿಂದಿನ ಜನ್ಮದ ಚರಿತ್ರೆಯನ್ನೂ ಯಥಾರ್ಥವಾಗಿ ಹೇಳು.

೨೬. ರಾಜನು ಹೇಳುತ್ತಾನೆ:—ಪ್ರಿಯಳೆ! ನೀನು ಹಿಂದಿನ ಜನ್ಮದಲ್ಲಿ ಆಕಾಶದಲ್ಲಿ ಸಂಚರಿಸುವ ಹೆಣ್ಣು ಪಾರಿವಾಳವಾಗಿ ಎಲ್ಲಿಯೊ ಒಂದು ಮಾಂಸದ ತುಂಡನ್ನು ಆಕಸ್ಮಿಕವಾಗಿ ಹೊಂದಿದೆ.

೨೭. ನಿನ್ನ ಬಾಯಲ್ಲಿರುವ ಮಾಂಸದ ತುಂಡನ್ನು ಮಾಂಸವನ್ನು ಪಡೆಯದ ಭಯಂಕರವಾದ ಒಂದು ಗಿಡಗವು ನೋಡಿ ಬೇಗನೆ ಅಟ್ಟಿಸಿಕೊಂಡು ಬಂದಿತು.

CC-0. Jangamwadi Math Collection. Digitized by eGangotri

ತತಸ್ತಂ ವೀಕ್ಷ್ಯ ವಿತ್ರಸ್ತಾ ವಿದ್ರುತಾಽಸಿ ವರಾನನೇ ।
ತೇನಾನುಯಾತಾ ಘೋರೇಣ ಮಾಂಸಪಿಂಡಜಿಘೃಕ್ಷಯಾ ॥ ೨೮ ॥
ದಿಷ್ಟ್ಯಾ ಶ್ರೀಗಿರಿಮಾಸಾದ್ಯ ಶ್ರಾಂತಾ ತತ್ರ ಶಿವಾಲಯಂ ।
ಪ್ರದಕ್ಷಿಣಂ ಪರಿಕ್ರಮ್ಯ ಧ್ವಜಾಗ್ರೇ ಸಮುಪಸ್ಥಿತಾ ॥ ೨೯ ॥
ಅಥಾನುಸೃತ್ಯ ಸಹಸಾ ತೀಕ್ಷ್ಣತುಂಡೋ ವಿಹಂಗಮಃ ।
ತ್ವಾಂ ನಿಹತ್ಯ ನಿಪಾತ್ಯಾಧೋ ಮಾಂಸಮಾದಾಯ ಜಗ್ಮಿವಾನ್ ॥ ೩೦ ॥
ಪ್ರದಕ್ಷಿಣಪ್ರಕ್ರಮಣಾದ್ದೇವದೇವಸ್ಯ ಶೂಲಿನಃ ।
ತಸ್ಯಾಗ್ರೇ ಮರಣಾಚ್ಚೈವ ಜಾತಾಸೀಹ ನೃಪಾಂಗನಾ ॥ ೩೧ ॥

ರಾಜ್ಞ್ಯುವಾಚ :—

ಶ್ರುತಂ ಸರ್ವಮಶೇಷೇಣ ಪ್ರಾಗ್ಜನ್ಮಚರಿತಂ ಮಯಾ
ಜಾತಂ ಚ ಮಹದಾಶ್ಚರ್ಯಂ ಭಕ್ತಿಶ್ಚ ಮಮ ಚೇತಸಿ ।
ಅಥಾನ್ಯಚ್ಛ್ರೋತುಮಿಚ್ಛಾಮಿ ತ್ರಿಕಾಲಜ್ಞ ಮಹಾಮತೇ
ಇದಂ ಶರೀರಮುತ್ಸೃಜ್ಯ ಯಾಸ್ಯಾವಃ ಕಾಂ ಗತಿಂ ಪುನಃ ॥ ೩೨ ॥

ರಾಜೋವಾಚ :—

ಅತೋ ಭವೇ ಜನಿಷ್ಯೇಹಂ ದ್ವಿತೀಯೇ ಸೈಂಧವೋ ನೃಪಃ ।
ಸೃಂಜಯೇಶಸುತಾ ತ್ವಂ ಹಿ ಮಾಮೇವ ಪ್ರತಿಪತ್ಸ್ಯಸೇ ॥ ೩೩ ॥

---

೨೮. ಅದು ಹೀಗೆ ಮಾಂಸದ ತುಂಡನ್ನು ಪಡೆಯಲೋಸುಗ ನಿನ್ನನ್ನು ಹಿಂಬಾಲಿಸಲು ನೀನು ಅದನ್ನು ನೋಡಿ ಭಯದಿಂದ ಓಡಿದೆ.

೨೯–೩೧. ಅದೃಷ್ಟವಶದಿಂದ ಶ್ರೀಗಿರಿಯಲ್ಲಿರುವ ಶಿವಾಲಯವನ್ನು ಸೇರಿ ಪ್ರದಕ್ಷಿಣೆಮಾಡಿ ಬಳಲಿ ಧ್ವಜದ ಮೇಲೆ ಕುಳಿತುಕೊಂಡೆ. ಬಳಿಕ ಹರಿತವಾದ ಕೊಕ್ಕುಳ್ಳ ಆ ಗಿಡಗವು ಕೂಡಲೆ ನಿನ್ನನ್ನು ಕೊಂದು ಕೆಳಗೆ ಕೆಡವಿ ಮಾಂಸವನ್ನು ತೆಗೆದುಕೊಂಡು ಹೊರಟು ಹೋಯಿತು. ಮಹೇಶನಿಗೆ ಪ್ರದಕ್ಷಿಣೆಮಾಡಿದುದರಿಂದಲೂ, ಅವನ ಮುಂದೆ ಮೃತಳಾದುದರಿಂದಲೂ ನೀನು ರಾಜಸ್ತ್ರೀಯಾಗಿ ಹುಟ್ಟಿರುವೆ.

೩೨. ರಾಣಿಯು ಕೇಳುತ್ತಾಳೆ:—ಪ್ರಿಯನೆ! ನಾನು ಹಿಂದಿನ ಜನ್ಮದ ಚರಿತ್ರೆಯನ್ನೆಲ್ಲ ಸಂಪೂರ್ಣವಾಗಿ ಕೇಳಿದೆನು. ನನಗೆ ಮನಸ್ಸಿನಲ್ಲಿ ಅತ್ಯಂತ ಆಶ್ಚರ್ಯವೂ, ಭಕ್ತಿಯೂ ಉಂಟಾಯಿತು. ಎಲೈ ತ್ರಿಕಾಲಜ್ಞಾನಿಯೆ! ಇನ್ನೊಂದನ್ನು ಕೇಳಬಯಸುವೆನು. ನಾವು ಈ ಶರೀರವನ್ನು ತ್ಯಜಿಸಿ ಯಾವ ಗತಿಯನ್ನು ಹೊಂದುವೆವು? ಹೇಳು.

೩೩. ರಾಜನು ಹೇಳುತ್ತಾನೆ:—ಪ್ರಿಯಳೆ! ನಾನು ಎರಡನೆಯ ಜನ್ಮದಲ್ಲಿ ಸೈಂಧವರಾಜನಾಗುವೆನು. ನೀನು ಸೃಂಜಯೇಶನ ಮಗಳಾಗಿ ನನ್ನನ್ನೇ ವರಿಸುವೆ.

CC-0. Jangamwadi Math Collection. Digitized by eGangotri

ತೃತೀಯೇತು ಭವೇ ರಾಜಾ ಸೌರಾಷ್ಟ್ರೇ ಭಾವಿತಾಽಸ್ಮ್ಯಹಂ ।
ಕಲಿಂಗರಾಜತನಯಾ ತ್ವಂ ಮೇ ಪತ್ನೀ ಭವಿಷ್ಯಸಿ ॥ ೩೪ ॥
ಚತುರ್ಥೇತು ಭವಿಷ್ಯಾಮಿ ಭವೇ ಗಾಂಧಾರಭೂಮಿಪಃ ।
ಮಾಗಧೀ ರಾಜತನಯಾ ತತ್ರ ತ್ವಂ ಮಮ ಗೇಹಿನೀ ॥ ೩೫ ॥
ಪಂಚಮೇಽವಂತಿನಾಥೋಽಹಂ ಭವಿಷ್ಯಾಮಿ ಭವಾಂತರೇ ।
ದಾಶಾರ್ಹರಾಜತನಯಾ ತ್ವಮೇವ ಮಮ ವಲ್ಲಭಾ ॥ ೩೬ ॥
ಅಸ್ಮಾಜ್ಜನ್ಮನಿ ಷಷ್ಠೇಽಹಮಾನರ್ತೇ ಭವಿತಾ ನೃಪಃ ।
ಯಯಾತಿವಂಶಜಾ ಕನ್ಯಾ ಭೂತ್ವಾ ಮಾಮೇವ ಯಾಸ್ಯಸಿ ॥ ೩೭ ॥
ಪಾಂಡ್ಯರಾಜಕುಮಾರೋಽಹಂ ಸಪ್ತಮೇ ಭವಿತಾ ಭವೇ ॥ ೩೮ ॥
ತತ್ರ ಮತ್ಸದೃಶೋ ನಾಽನ್ಯೋ ರೂಪೌದಾರ್ಯಗುಣಾದಿಭಿಃ ।
ಸರ್ವಶಾಸ್ತ್ರಾರ್ಥತತ್ವಜ್ಞೋ ಬಲವಾನ್ದೃಢವಿಕ್ರಮಃ ॥ ೩೯ ॥
ಸರ್ವಲಕ್ಷಣಸಂಪನ್ನಃ ಸರ್ವಲೋಕಮನೋರಮಃ ।
ಪದ್ಮವರ್ಣ ಇತಿ ಖ್ಯಾತಃ ಪದ್ಮಮಿತ್ರಸಮದ್ಯುತಿಃ ॥ ೪೦ ॥
ಭವಿತಾ ತ್ವಂ ಚ ವೈದರ್ಭೀ ರೂಪೇಣಾಽಪ್ರತಿಮಾ ಭುವಿ ।
ನಾಮ್ನಾ ವಸುಮತೀ ಖ್ಯಾತಾ ರೂಪಾಽವಯವಶೋಭಿನೀ ॥ ೪೧ ॥

---

೩೪. ಮೂರನೆಯ ಜನ್ಮದಲ್ಲಿ ನಾನು ಸೌರಾಷ್ಟ್ರರಾಜನಾಗುವೆನು. ನೀನು ಕಲಿಂಗಭೂಪನ ಮಗಳಾಗಿ ಜನಿಸಿ ನನ್ನ ಪತ್ನಿಯಾಗುವೆ.

೩೫. ನಾಲ್ಕನೆಯ ಜನ್ಮದಲ್ಲಿ ನಾನು ಗಾಂಧಾರನೃಪನಾಗುವೆನು. ನೀನು ಮಗಧೇಶನ ಮಗಳಾಗಿ ನನ್ನ ಸತಿಯಾಗುವೆ.

೩೬. ಐದನೆಯ ಜನ್ಮದಲ್ಲಿ ನಾನು ಅವಂತಿನಾಥನಾಗುವೆನು. ನೀನು ದಾಶಾರ್ಹನೃಪನ ತನಯಳಾಗಿ ಹುಟ್ಟಿ ನನ್ನ ಪ್ರಿಯಳಾಗುವೆ.

೩೭. ಆರನೆಯ ಜನ್ಮದಲ್ಲಿ ನಾನು ಆನರ್ತರಾಜನಾಗುವೆನು. ನೀನು ಯಯಾತಿವಂಶದಲ್ಲಿ ಹುಟ್ಟಿ ನನ್ನನ್ನು ಸೇರುವೆ.

೩೮. ಏಳನೆಯ ಜನ್ಮದಲ್ಲಿ ನಾನು ಪಾಂಡ್ಯರಾಜನ ಕುಮಾರನಾಗುವೆನು.

೩೯–೪೦. ಅಲ್ಲಿ ರೂಪೌದಾರ್ಯಾದಿ ಗುಣಗಳಿಂದ ಸಮಾನರಿಲ್ಲದವನೂ, ಸಕಲಶಾಸ್ತ್ರಗಳ ತತ್ವವನ್ನರಿತವನೂ, ಪರಾಕ್ರಮಶಾಲಿಯೂ, ಸಕಲ ಲಕ್ಷಣಗಳುಳ್ಳವನೂ, ಸಕಲ ಲೋಕಗಳಲ್ಲಿಯೂ ಮನೋಹರನೂ, ಸೂರ್ಯನಂತೆ ಕಾಂತಿಯುಳ್ಳವನೂ ಆಗಿ ಪದ್ಮವರ್ಣನೆಂದು ನಾನು ಪ್ರಸಿದ್ಧಿಹೊಂದುವೆನು.

೪೧–೪೪. ನೀನು ಸುಂದರಿಯಾದ ವಿದರ್ಭೇಶನ ಮಗಳಾಗಿ ವಸುಮತಿಯೆಂದು ಪ್ರಸಿದ್ಧಿಗೊಂಡು ಸಕಲ ರಾಜಕುಮಾರರ ಮನಸ್ಸು ಮತ್ತು ಕಣ್ಣು

CC-0. Jangamwadi Math Collection. Digitized by eGangotri

ಸರ್ವರಾಜಕುಮಾರಾಣಾಂ ಮನೋನಯನನಂದಿನೀ ।
ಸಾ ತ್ವಂ ಸ್ವಯಂವರೇ ಸರ್ವಾನ್ವಿಹಾಯ ನೃಪನಂದನಾನ್ ॥ ೪೨ ॥
ವರಂ ಪ್ರಾಪ್ಸ್ಯಸಿ ಮಾಮೇವ ದಮಯಂತೀವ ನೈಷಧಂ ।
ಸೋಽಹಂ ಜಿತ್ವಾ ನೃಪಾನ್ಸರ್ವಾನ್ಪ್ರಾಪ್ಯ ತ್ವಾಂ ವರವರ್ಣಿನೀಂ ॥ ೪೩ ॥
ಸ್ವರಾಷ್ಟ್ರಸ್ಥೋಽಖಿಲಾನ್ಭೋಗಾನ್ಭೋಕ್ಷ್ಯೇವರ್ಷಗಣಾನ್ಬಹೂನ್ ।
ಇಷ್ಟ್ವಾಚ ವಿವಿಧೈರ್ಯಜ್ಞೈರ್ವಾಜಿಮೇಧಾದಿಭಿಃ ಶುಭೈಃ ॥ ೪೪ ॥
ಸಂತರ್ಪ್ಯ ಪಿತೃದೇವರ್ಷೀನ್ದಾನೈಶ್ಚ ದ್ವಿಜಸತ್ತಮಾನ್ ।
ಸಂಪೂಜ್ಯ ದೇವದೇವೇಶಂ ಶಂಕರಂ ಲೋಕಶಂಕರಂ ॥ ೪೫ ॥
ಪುತ್ರೇ ರಾಜ್ಯಧುರಂ ನ್ಯಸ್ಯ ಗಂತಾಽಸ್ಮಿ ತಪಸೇ ವನಂ ।
ತತ್ರಾಽಽಗಸ್ತ್ಯಾನ್ಮುನಿವರಾದ್ಬ್ರಹ್ಮಜ್ಞಾನಮವಾಪ್ಯಚ ॥ ೪೬ ॥
ತ್ವಯಾ ಸಹ ಗಮಿಷ್ಯಾಮಿ ಶಿವಸ್ಯ ಪರಮಂ ಪದಂ ।
ಚತುರ್ದಶ್ಯಾಂ ಚತುರ್ದಶ್ಯಾಮೇವಂ ಸಂಪೂಜ್ಯ ಶಂಕರಂ ॥ ೪೭ ॥
ಸಪ್ತಜನ್ಮಸು ರಾಜ್ಞೀ ತ್ವಂ ಭವಿಷ್ಯತಿ ವರಾನನೇ ।
ಇತ್ಯೇತತ್ಸುಕೃತಂಲಬ್ಧಂ ಪೂಜಾದರ್ಶನಮಾತ್ರತಃ ।
ಕ್ವ ಸಾರಮೇಯೋ ದುಷ್ಟಾತ್ಮಾ ಕ್ವೇದೃಶೀ ಬತ ಸದ್ಗತಿಃ ॥ ೪೮ ॥
ಇತ್ಯುಕ್ತಾ ನಿಜನಾಥೇನ ಸಾ ರಾಜ್ಞೀ ಶುಭಲಕ್ಷಣಾ ॥ ೪೯ ॥

---

ಗಳನ್ನು ಸಂತೋಷಗೊಳಿಸುತ್ತ ಸ್ವಯಂವರದಲ್ಲಿ ಸಮಸ್ತ ರಾಜಕುಮಾರರನ್ನೂ ತ್ಯಜಿಸಿ ದಮಯಂತಿಯು ನಳನನ್ನು ವರಿಸಿದಂತೆ ನನ್ನನ್ನೇ ವರನನ್ನಾಗಿ ಪಡೆಯುವೆ. ನಾನು ಸಮಸ್ತಭೂಪತಿಗಳನ್ನೂ ಗೆದ್ದು ನಿನ್ನನ್ನು ಹೊಂದಿ ನನ್ನ ದೇಶದಲ್ಲಿ ಅನೇಕ ವರ್ಷಗಳ ಕಾಲ ಸಕಲ ಭೋಗಗಳನ್ನೂ ಅನುಭವಿಸುವೆನು. ಅಶ್ವಮೇಧವೇ ಮೊದಲಾದ ಯಾಗಗಳನ್ನೆಸಗಿ ಪಿತೃಗಳನ್ನೂ, ದೇವತೆಗಳನ್ನೂ, ಋಷಿಗಳನ್ನೂ, ಬ್ರಾಹ್ಮಣವರ್ಯರನ್ನೂ ಸಂತೋಷಗೊಳಿಸುವೆನು. ಸಮಸ್ತಲೋಕಕ್ಕೂ ಮಂಗಳ ವನ್ನೀಯುವ ಮಹಾದೇವನನ್ನು ಆರಾಧಿಸಿ ಪುತ್ರನಿಗೆ ರಾಜ್ಯಭಾರವನ್ನೊಪ್ಪಿಸಿ ತಪಸ್ಸಿಗಾಗಿ ಕಾಡಿಗೆ ಹೋಗುವೆನು. ಅಲ್ಲಿ ಅಗಸ್ತ್ಯಮುನಿವರ್ಯನಿಂದ ಬ್ರಹ್ಮ ಜ್ಞಾನವನ್ನು ಪಡೆದು ನಿನ್ನೊಡನೆ ಶಿವಸ್ಥಾನವನ್ನು ಸೇರುವೆನು. ಪ್ರತಿಚತುರ್ದಶಿ ಯಲ್ಲಿಯೂ ಹೀಗೆಯೇ ಶಂಕರನನ್ನು ಪೂಜಿಸಿ ಏಳು ಜನ್ಮಗಳಲ್ಲಿಯೂ ರಾಜ ನಾಗುವೆನು. ಶಿವನ ಪೂಜೆಯ ದರ್ಶನದಿಂದಲೆ ಈ ಪುಣ್ಯವು ಲಭಿಸಿತು. ಆ ಕೆಟ್ಟ ನಾಯಿಯ ಜನ್ಮವೆಲ್ಲಿ? ಇಂತಹ ಸದ್ಗತಿಯೆಲ್ಲಿ!

೪೯—೫೧. ಸೂತನು ಹೇಳುತ್ತಾನೆ:—ಪ್ರಿಯನು ಹೀಗೆ ಹೇಳಲು ಸರ್ವಲಕ್ಷಣ ಸಂಪನ್ನೆಯಾದ ಆ ರಾಣಿಯು ಅತ್ಯಾಶ್ಚರ್ಯಗೊಂಡು ಅವನನ್ನು ಸಂತೋಷ

CC-0. Jangamwadi Math Collection. Digitized by eGangotri

ಪರಂ ವಿಸ್ಮಯಮಾಪನ್ನಾ ಪೂಜಯಾಮಾಸ ತಂ ಮುದಾ ।
ಸೋಽಪಿ ರಾಜಾ ತಯಾ ಸಾರ್ಧಂ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ॥೫೦॥
ಜಗಾಮ ಸಪ್ತಜನ್ಮಾಂತೇ ಶಂಭೋಸ್ತತ್ಪರಮಂ ಪದಂ ।
ಯ ಏತಚ್ಛಿವಪೂಜಾಯಾ ಮಾಹಾತ್ಮ್ಯಂ ಪರಮಾದ್ಭುತಂ ।
ಶೃಣುಯಾತ್ಕೀರ್ತಯೇದ್ವಾಽಪಿ ಸ ಗಚ್ಛೇತ್ಪರಮಂ ಪದಂ ॥ ೫೧ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಚತುರ್ದಶೀಮಾಹಾತ್ಮ್ಯ ವರ್ಣನಂ" ನಾಮ ಚತುರ್ಥೋಽಧ್ಯಾಯಃ

---

ದಿಂದ ಪೂಜಿಸಿದಳು. ಆ ರಾಜನೂ ಅವಳೊಡನೆ ಯಥೇಚ್ಛವಾಗಿ ಭೋಗಗಳನ್ನನುಭವಿಸಿ ಏಳನೆಯ ಜನ್ಮದ ಕೊನೆಯಲ್ಲಿ ಶಂಕರನ ಉತ್ತಮಸ್ಥಾನವನ್ನು ಸೇರಿದನು. ಶಿವಪೂಜೆಯ ಅದ್ಭುತವಾದ ಈ ಮಾಹಾತ್ಮ್ಯವನ್ನು ಕೇಳಿದವನೂ, ಹೇಳಿದವನೂ ಉತ್ತಮಗತಿಯನ್ನು ಪಡೆಯುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಚತುರ್ದಶೀಮಾಹಾತ್ಮ್ಯವರ್ಣನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

## ಗೋಪಕುಮಾರ ಚರಿತವರ್ಣನಂ

ಸೂತ ಉವಾಚ :—

ಶಿವೋ ಗುರುಃ ಶಿವೋ ದೇವಃ ಶಿವೋ ಬಂಧುಃ ಶರೀರಿಣಾಂ ।
ಶಿವ ಆತ್ಮಾ ಶಿವೋ ಜೀವಃ ಶಿವಾದನ್ಯನ್ನ ಕಿಂಚನ ॥ ೧ ॥
ಶಿವಮುದ್ದಿಶ್ಯ ಯತ್ಕಿಂಚಿದ್ದತ್ತಂ ಜಪ್ತಂ ಹುತಂ ಕೃತಂ ।
ತದನಂತಫಲಂ ಪ್ರೋಕ್ತಂ ಸರ್ವಾಗಮವಿನಿಶ್ಚಿತಂ ॥ ೨ ॥
ಭಕ್ತ್ಯಾ ನಿವೇದಿತಂ ಶಂಭೋಃ ಪತ್ರಂ ಪುಷ್ಪಂ ಫಲಂ ಜಲಂ ।
ಅಲ್ಪಾದಲ್ಪತರಂ ವಾಽಪಿ ತದಾನಂತ್ಯಾಯ ಕಲ್ಪತೇ ॥ ೩ ॥
ವಿಹಾಯ ಸಕಲಾನ್ಧರ್ಮಾನ್ಸಕಲಾಗಮನಿಶ್ಚಿತಾನ್ ।
ಶಿವಮೇಕಂ ಭಜೇದ್ಯಸ್ತು ಮುಚ್ಯತೇ ಸರ್ವಬಂಧನಾತ್ ॥ ೪ ॥
ಯಾ ಪ್ರೀತಿರಾತ್ಮನಃ ಪುತ್ರೇ ಯಾ ಕಲತ್ರೇ ಧನೇಽಪಿ ಸಾ ।
ಕೃತಾ ಚೇಚ್ಛಿವಪೂಜಾಯಾಂ ತ್ರಾಯತೀತಿ ಕಿಮದ್ಭುತಂ ॥ ೫ ॥
ತಸ್ಮಾತ್ಕೇಚಿನ್ಮಹಾತ್ಮಾನಃ ಸಕಲಾನ್ವಿಷಯಾಸವಾನ್ ।
ತ್ಯಜಂತಿ ಶಿವಪೂಜಾರ್ಥೇ ಸ್ವದೇಹಮಪಿ ದುಸ್ತ್ಯಜಂ ॥ ೬ ॥

---

## ಕನ್ನಡದ ಅನುವಾದ

### ಗೋಪಕುಮಾರ ಚರಿತವರ್ಣನ

೧. ಸೂತನು ಹೇಳುತ್ತಾನೆ:—ಪ್ರಾಣಿಗಳಿಗೆ ಶಿವನೇ ಗುರು, ದೇವತೆ, ಬಂಧು, ಮನಸ್ಸು, ಜೀವವೂ ಆಗಿರುವನು. ಶಿವನನ್ನು ಬಿಟ್ಟು ಬೇರೊಂದಿಲ್ಲ.

೨. ಶಿವನನ್ನುದ್ದೇಶಿಸಿ ಮಾಡಿದ ದಾನವೂ, ಜಪವೂ, ಹೋಮವೂ ಅನಂತ ಫಲಗಳನ್ನೀಯುವುವೆಂಬುದು ಸಕಲ ಶಾಸ್ತ್ರಗಳ ಸಿದ್ಧಾಂತವಾಗಿರುವುದು.

೩. ಶಿವನಿಗೆ ಭಕ್ತಿಯಿಂದ ಸಮರ್ಪಿಸಿದ ಪತ್ರ, ಪುಷ್ಪ, ಫಲ, ಜಲ ಇವುಗಳು ಅತ್ಯಲ್ಪವಾದುವುಗಳಾದರೂ ಅನಂತವಾಗುವುವು.

೪. ಮಾನವನು ಸಮಸ್ತಶಾಸ್ತ್ರಗಳಲ್ಲಿಯೂ ನಿರ್ಣೀತವಾದ ಎಲ್ಲಾ ಧರ್ಮಗಳನ್ನೂ ತ್ಯಜಿಸಿ ಶಿವನೊಬ್ಬನನ್ನೇ ಭಜಿಸಿದರೆ ಸಕಲ ಬಂಧಮುಕ್ತನಾಗುವನು.

೫. ತನ್ನ ಪುತ್ರನಲ್ಲಿಯೂ, ಹೆಂಡತಿಯಲ್ಲಿಯೂ, ಧನದಲ್ಲಿಯೂ ಇರುವ ಪ್ರೀತಿಯನ್ನು ಶಿವಪೂಜೆಯಲ್ಲಿ ಮಾಡಿದರೆ ಶಿವನು ಕಾಪಾಡುತ್ತಾನೆಂಬುದು ಆಶ್ಚರ್ಯವಲ್ಲ.

೬. ಆದುದರಿಂದ ಕೆಲವು ಮಂದಿ ಮಹಾತ್ಮರು ಸಮಸ್ತ ವಿಷಯಗಳನ್ನೂ, ಬಿಡಲಾಗದ ತಮ್ಮ ದೇಹವನ್ನೂ ಶಿವಪೂಜೆಗಾಗಿ ತ್ಯಜಿಸುತ್ತಾರೆ.

CC-0. Jangamwadi Math Collection. Digitized by eGangotri

ಸಾ ಜಿಹ್ವಾ ಯಾ ಶಿವಂ ಸ್ತೌತಿ ತನ್ಮನೋ ಧ್ಯಾಯತೇ ಶಿವಂ ।
ತೌ ಕರ್ಣೌ ತತ್ಕಥಾಲೋಲೌ ತೌ ಹಸ್ತೌ ತಸ್ಯ ಪೂಜಕೌ ॥ ೭ ॥
ತೇ ನೇತ್ರೇ ಪಶ್ಯತಃ ಪೂಜಾಂ ತಚ್ಛಿರಃ ಪ್ರಣತಂ ಶಿವೇ ।
ತೌ ಪಾದೌ ಯೌ ಶಿವಕ್ಷೇತ್ರಂ ಭಕ್ತ್ಯಾ ಪರ್ಯಟತಃ ಸದಾ ॥ ೮ ॥
ಯಸ್ಯೇಂದ್ರಿಯಾಣಿ ಸರ್ವಾಣಿ ವರ್ತಂತೇ ಶಿವಕರ್ಮಸು ।
ಸ ನಿಸ್ತರತಿ ಸಂಸಾರಂ ಭುಕ್ತಿಂ ಮುಕ್ತಿಂ ಚ ವಿಂದತಿ ॥ ೯ ॥
ಶಿವಭಕ್ತಿಯುತೋ ಮರ್ತ್ಯಶ್ಚಾಂಡಾಲಃ ಪುಲ್ಕಸೋಽಪಿ ಚ ।
ನಾರೀ ನರೋ ವಾ ಷಂಢೋವಾ ಸದ್ಯೋ ಮುಚ್ಯೇತ ಸಂಸೃತೇಃ ॥ ೧೦ ॥
ಕಿಂ ಕುಲೇನ ಕಿಮಾಚಾರೈಃ ಕಿಂ ಶೀಲೇನ ಗುಣೇನ ವಾ ।
ಭಕ್ತಿಲೇಶಯುತಃ ಶಂಭೋಃ ಸವಂದ್ಯಃ ಸರ್ವದೇಹಿನಾಂ ॥ ೧೧ ॥
ಉಜ್ಜಯಿನ್ಯಾಮಭೂದ್ರಾಜಾ ಚಂದ್ರಸೇನ ಸಮಾಹ್ವಯಃ ।
ಜಾತೋ ಮಾನವರೂಪೇಣ ದ್ವಿತೀಯ ಇವ ವಾಸವಃ ॥ ೧೨ ॥
ತಸ್ಮಿನ್ಪುರೇ ಮಹಾಕಾಲಂ ವಸಂತಂ ಪರಮೇಶ್ವರಂ ।
ಸಂಪೂಜಯತ್ಯಸೌ ಭಕ್ತ್ಯಾ ಚಂದ್ರಸೇನೋ ನೃಪೋತ್ತಮಃ ॥ ೧೩ ॥

---

೭. ಶಿವನನ್ನು ಸ್ತುತಿಸುವ ನಾಲಿಗೆಯೆ ನಾಲಿಗೆ; ಅವನನ್ನು ಧ್ಯಾನಿಸುವ ಮನಸ್ಸೇ ಮನಸ್ಸು, ಅವನ ಕಥೆಯನ್ನು ಕೇಳುವ ಕಿವಿಗಳೇ ಕಿವಿಗಳು, ಅವನನ್ನು ಪೂಜಿಸುವ ಕೈಗಳೇ ಕೈಗಳು.

೮. ಅವನ ಪೂಜೆಯನ್ನು ನೋಡುವ ಕಣ್ಣುಗಳೇ ಕಣ್ಣುಗಳು, ಅವನನ್ನು ನಮಸ್ಕರಿಸುವ ತಲೆಯೇ ತಲೆಯು, ಯಾವಾಗಲೂ ಶಿವಕ್ಷೇತ್ರದಲ್ಲಿ ಸಂಚರಿಸುವ ಕಾಲುಗಳೇ ಕಾಲುಗಳು.

೯. ಸಕಲೇಂದ್ರಿಯಗಳನ್ನೂ ಶಿವೋದ್ದೇಶ್ಯಕವಾದ ಕರ್ಮಗಳಲ್ಲಿ ಉಪಯೋಗಿಸುವವನು ಸಂಸಾರವನ್ನು ದಾಟಿ ಭುಕ್ತಿ ಮುಕ್ತಿಗಳನ್ನು ಹೊಂದುತ್ತಾನೆ.

೧೦. ಹೊಲೆಯನಾಗಲಿ, ಮಾದಿಗನಾಗಲಿ, ಹೆಂಗಸಾಗಲಿ, ಗಂಡಸಾಗಲಿ, ನಪುಂಸಕನಾಗಲಿ ಮಾನವನು ಶಿವನಲ್ಲಿ ಭಕ್ತಿಯಿಟ್ಟರೆ ಸಂಸಾರಬಂಧನದಿಂದ ಬಿಡುಗಡೆಯನ್ನು ಹೊಂದುವನು.

೧೧. ಕುಲ, ಆಚಾರ, ನಡತೆ, ಗುಣ ಇವುಗಳಿಂದೇನು ಪ್ರಯೋಜನ? ಶಿವಭಕ್ತಿಯೊಂದರಿಂದಲೆ ಮಾನವನು ಸಕಲರಿಗೂ ವಂದ್ಯನಾಗುವನು.

೧೨. ಉಜ್ಜಯಿನಿಯಲ್ಲಿ ಮನುಷ್ಯರೂಪದಿಂದವತರಿಸಿದ ದೇವೇಂದ್ರನಂತಿರುವ ಚಂದ್ರಸೇನನೆಂಬ ದೊರೆಯಿದ್ದನು.

೧೩. ಈ ರಾಜನು ಆ ಪಟ್ಟಣದಲ್ಲಿ ನೆಲೆಸಿರುವ ಮಹಾಕಾಲನೆಂಬ ಪರಮೇಶ್ವರನನ್ನು ಭಕ್ತಿಯಿಂದ ಪೂಜಿಸುತ್ತಿದ್ದನು.

CC-0. Jangamwadi Math Collection. Digitized by eGangotri

ತಸ್ಯಾಽಭವತ್ಸಖಾ ರಾಜ್ಞಃ ಶಿವಪಾರಿಷದಾಗ್ರಣೀಃ ।
ಮಣಿಭದ್ರೋ ಜಿತಾಭದ್ರಃ ಸರ್ವಲೋಕನಮಸ್ಕೃತಃ ॥ ೧೪ ॥
ತಸ್ಯೈಕದಾ ಮಹೀಭರ್ತುಃ ಪ್ರಸನ್ನಃ ಶಂಕರಾನುಗಃ ।
ಚಿಂತಾಮಣಿಂ ದದೌ ದಿವ್ಯಂ ಮಣಿಭದ್ರೋ ಮಹಾಮತಿಃ ॥ ೧೫ ॥
ಸ ಮಣಿಃ ಕೌಸ್ತುಭ ಇವ ದ್ಯೋತಮಾನೋಽರ್ಕಸನ್ನಿಭಃ ।
ದೃಷ್ಟಃ ಶ್ರುತೋ ವಾ ಧ್ಯಾತೋ ವಾ ನೃಣಾಂ ಯಚ್ಛತಿ ಚಿಂತಿತಂ ॥ ೧೬ ॥
ತಸ್ಯ ಕಾಂತಿಲವಸ್ಪೃಷ್ಟಂ ಕಾಂಸ್ಯಂ ತಾಮ್ರಮಯಸ್ತ್ರಪು ।
ಪಾಷಾಣಾದಿಕಮನ್ಯದ್ವಾ ಸದ್ಯೋ ಭವತಿ ಕಾಂಚನಂ ॥ ೧೭ ॥
ಸ ತಂ ಚಿಂತಾಮಣಿಂ ಕಂಠೇ ಬಿಭ್ರದ್ರಾಜಾಸನಂ ಗತಃ ।
ರರಾಜ ರಾಜಾ ದೇವಾನಾಂ ಮಧ್ಯೇ ಭಾನುರಿವ ಸ್ವಯಂ ॥ ೧೮ ॥
ಸದಾ ಚಿಂತಾಮಣಿಗ್ರೀವಂ ತಂ ಶ್ರುತ್ವಾ ರಾಜಸತ್ತಮಂ ।
ಪ್ರವೃದ್ಧತರ್ಷಾ ರಾಜಾನಃ ಸರ್ವೇ ಕ್ಷುಬ್ಧಹೃದೋಽಭವನ್ ॥ ೧೯ ॥
ಸ್ನೇಹಾತ್ಕೇಚಿದಯಾಚಂತ ಧಾರ್ಷ್ಟ್ಯಾತ್ಕೇಚನ ದುರ್ಮದಾಃ ।
ದೈವಲಬ್ಧಮಜಾನಂತೋ ಮಣಿಂ ಮತ್ಸರಿಣೋ ನೃಪಾಃ ॥ ೨೦ ॥

---

೧೪. ಇವನಿಗೆ ಶಿವನ ಪ್ರಮಥಗಣಗಳಲ್ಲಿ ಶ್ರೇಷ್ಠನೂ, ಶುಭಕರನೂ, ಸಕಲಲೋಕವಂದಿತನೂ ಆದ ಮಣಿಭದ್ರನು ಮಿತ್ರನಾಗಿದ್ದನು.

೧೫. ಆ ಮಣಿಭದ್ರನು ಒಂದಾನೊಂದು ವೇಳೆ ಆ ರಾಜನಲ್ಲಿ ಪ್ರಸನ್ನನಾಗಿ ದಿವ್ಯವಾದ ಚಿಂತಾಮಣಿಯನ್ನಿತ್ತನು.

೧೬. ಕೌಸ್ತುಭರತ್ನದಂತಿರುವ ಆ ಮಣಿಯು ಪ್ರಕಾಶಿಸುವ ಸೂರ್ಯನಿಗೆ ಸಮಾನವಾಗಿ ದರ್ಶನಮಾಡಿದ, ಕೇಳಿದ ಮತ್ತು ಧ್ಯಾನಿಸಿದ ಮನುಷ್ಯರಿಗೆ ಇಷ್ಟಾರ್ಥವನ್ನು ಕೊಡುವುದು.

೧೭. ಕಂಚು, ತಾಮ್ರ, ಕಬ್ಬಿಣ, ಸೀಸ, ಕಲ್ಲು ಮೊದಲಾದುವುಗಳು ಅದರ ಕಾಂತಿಯ ಸ್ಪರ್ಶಮಾತ್ರದಿಂದಲೇ ಚಿನ್ನವಾಗುತ್ತಿದ್ದುವು.

೧೮. ಆ ಚಿಂತಾಮಣಿಯನ್ನು ಕಂಠದಲ್ಲಿ ಧರಿಸಿ ಸಿಂಹಾಸನದಲ್ಲಿ ಕುಳಿತ ಆ ರಾಜನು ದೇವತೆಗಳ ಮಧ್ಯದಲ್ಲಿರುವ ಸೂರ್ಯನಂತೆ ವಿರಾಜಿಸಿದನು.

೧೯. ಯಾವಾಗಲೂ ಚಿಂತಾಮಣಿಯನ್ನು ಕುತ್ತಿಗೆಯಲ್ಲಿ ಧರಿಸಿದ ಆ ರಾಜನನ್ನು ಕಂಡು ಇತರ ರಾಜರು ಆಶೆಯಿಂದ ಚಪಲಚಿತ್ತರಾದರು.

೨೦. ಆ ಮಣಿಯು ದೇವತೆಯಿಂದ ಲಬ್ಧವಾದುದೆಂಬುದನ್ನರಿಯದ ಆ ರಾಜರಲ್ಲಿ ಕೆಲವರು ಪ್ರೀತಿಯಿಂದ ಅದನ್ನು ಬೇಡಿದರು. ಕೆಲವು ಮದಾಂಧರು ಧಾರ್ಷ್ಟ್ಯದಿಂದ ಮಣಿಯನ್ನು ಕೇಳಿದರು.


CC-0. Jangamwadi Math Collection. Digitized by eGangotri

ಸರ್ವೇಷಾಂ ಭೂಭೃತಾಂ ಯಾಞ್ಛಾ ಯದಾ ವ್ಯರ್ಥೀಕೃತಾಮುನಾ ।
ರಾಜಾನಃ ಸರ್ವದೇಶಾನಾಂ ಸಂರಂಭಂ ಚಕ್ರಿರೇ ತದಾ ॥ ೨೧ ॥
ಸೌರಾಷ್ಟ್ರಾಃ ಕೈಕಯಾಃ ಶಾಲ್ವಾಃ ಕಲಿಂಗಶಕಮದ್ರಕಾಃ ।
ಪಾಂಚಾಲಾಽವಂತಿಸೌವೀರಾ ಮಾಗಧಾ ಮತ್ಸ್ಯಸೃಂಜಯಾಃ ॥ ೨೨ ॥
ಏತೇ ಚಾಽನ್ಯೇ ಚ ರಾಜಾನಃ ಸಹಾಽಶ್ವರಥಕುಂಜರಾಃ ।
ಚಂದ್ರಸೇನಂ ಮೃಧೇ ಜೇತುಮುದ್ಯಮಂ ಚಕ್ರಿರೋಜಸಾ ॥ ೨೩ ॥
ತೇ ತು ಸರ್ವೇ ಸುಸಂರಬ್ಧಾಃ ಕಂಪಯಂತೋ ವಸುಂಧರಾಂ ।
ಉಜ್ಜಯಿನ್ಯಾಶ್ಚತುರ್ದ್ವಾರಂ ರುರುಧುರ್ಬಹುಸೈನಿಕಾಃ ॥ ೨೪ ॥
ಸಂರುಧ್ಯಮಾನಾಂ ಸ್ವಪುರೀಂ ದೃಷ್ಟ್ವಾ ರಾಜಭಿರುದ್ಧತೈಃ ।
ಚಂದ್ರಸೇನೋ ಮಹಾಕಾಲಂ ತಮೇವ ಶರಣಂ ಯಯೌ ॥ ೨೫ ॥
ನಿರ್ವಿಕಲ್ಪೋ ನಿರಾಹಾರಃ ಸ ರಾಜಾ ದೃಢನಿಶ್ಚಯಃ ।
ಅರ್ಚಯಾಮಾಸ ಗೌರೀಶಂ ದಿವಾನಕ್ತಮನನ್ಯಧೀಃ ॥ ೨೬ ॥
ಏತಸ್ಮಿನ್ನಂತರೇ ಗೋಪೀ ಕಾಚಿತ್ತತ್ಪುರವಾಸಿನೀ ।
ಏಕಪುತ್ರಾ ಭರ್ತೃಹೀನಾ ತತ್ರೈವಾಸೀಚ್ಚಿರಂತನಾ ॥ ೨೭ ॥
ಸಾ ಪಂಚಹಾಯನಂ ಬಾಲಂ ವಹಂತೀ ಗತಭರ್ತೃಕಾ ।
ರಾಜ್ಞಾ ಕೃತಾಂ ಮಹಾಪೂಜಾಂ ದದರ್ಶ ಗಿರಿಜಾಪತೇಃ ॥ ೨೮ ॥

---

೨೧. ಎಲ್ಲರ ಬೇಡಿಕೆಯೂ ವ್ಯರ್ಥವಾಗಲು ಆ ಸಕಲದೇಶದ ರಾಜರೂ ಕುಪಿತರಾದರು.

೨೨–೨೪. ಸೌರಾಷ್ಟ್ರ, ಕೇಕಯ, ಶಾಲ್ವ, ಕಲಿಂಗ, ಶಕ, ಮದ್ರ, ಪಾಂಚಾಲ, ಅವಂತಿ, ಸೌವೀರ, ಮಗಧ, ಮತ್ಸ್ಯ, ಸೃಂಜಯ ಈ ದೇಶಗಳ ರಾಜರೂ ಇನ್ನೂ ಇತರ ದೇಶದ ದೊರೆಗಳೂ ಕುದುರೆ, ರಥ, ಆನೆ ಇವುಗಳೊಡನೆ ಯುದ್ಧದಲ್ಲಿ ಪರಾಕ್ರಮದಿಂದ ಈ ಚಂದ್ರಸೇನನನ್ನು ಜಯಿಸಲು ಉದ್ಯುಕ್ತ ರಾದರು. ಅವರೆಲ್ಲರೂ ಅತಿ ಕೋಪದಿಂದ ಬಹಳ ಸೈನ್ಯಗಳೊಡನೆ ಭೂಮಿಯನ್ನು ನಡುಗಿಸುತ್ತ ಉಜ್ಜಯಿನಿಯ ನಾಲ್ಕು ಬಾಗಿಲುಗಳನ್ನೂ ತಡೆದರು.

೨೫. ಚಂದ್ರಸೇನನು ಉದ್ಧತರಾಜರು ತನ್ನ ಪಟ್ಟಣವನ್ನು ಮುತ್ತುತ್ತಿರುವುದನ್ನು ಕಂಡು ಆ ಮಹಾಕಾಲೇಶ್ವರನನ್ನೇ ಮರೆಹೊಕ್ಕನು.

೨೬. ಅವನು ಹಗಲು ರಾತ್ರಿ ಬೇರೆ ವಿಚಾರವಿಲ್ಲದೆಯೂ, ಆಹಾರವಿಲ್ಲದೆಯೂ ದೃಢನಿಶ್ಚಯವುಳ್ಳವನಾಗಿ ಮಹೇಶ್ವರನನ್ನು ಪೂಜಿಸಿದನು.

೨೭. ಈ ಮಧ್ಯದಲ್ಲಿ ಅವನ ಪಟ್ಟಣದಲ್ಲಿ ಏಕಪುತ್ರಳಾದ ಗಂಡನಿಲ್ಲದ ಒಬ್ಬ ಗೋಪಾಂಗನೆಯು ಇದ್ದಳು.

೨೮. ಆ ವಿಧವೆಯು ಐದು ವರ್ಷದ ಬಾಲಕನನ್ನು ಎತ್ತಿಕೊಂಡುಬಂದು ಮಹೇಶ್ವರನಿಗೆ ರಾಜನು ಮಾಡಿದ ಪೂಜೆಯನ್ನು ಕಂಡಳು.

CC-0. Jangamwadi Math Collection. Digitized by eGangotri

ಸಾ ದೃಷ್ಟ್ವಾ ಸರ್ವಮಾಶ್ಚರ್ಯಂ ಶಿವಪೂಜಾಮಹೋದಯಂ ।
ಪ್ರಣಿಪತ್ಯ ಸ್ವಶಿಬಿರಂ ಪುನರೇವಾಽಭ್ಯಪದ್ಯತ ॥ ೨೯ ॥
ಏತತ್ಸರ್ವಮಶೇಷೇಣ ಸ ದೃಷ್ಟ್ವಾ ಬಲ್ಲವೀಸುತಃ ।
ಕುತೂಹಲೇನ ವಿದಧೇ ಶಿವಪೂಜಾಂ ವಿರಕ್ತಿದಾಂ ॥ ೩೦ ॥
ಆನೀಯ ಹೃದ್ಯಂ ಪಾಷಾಣಂ ಶೂನ್ಯೇ ತು ಶಿಬಿರೋತ್ತಮೇ ।
ನಾಽತಿದೂರೇ ಸ್ವಶಿಬಿರಾಚ್ಛಿವಲಿಂಗಮಕಲ್ಪಯತ್ ॥ ೩೧ ॥
ಯಾನಿ ಕಾನಿ ಚ ಪುಷ್ಪಾಣಿ ಹಸ್ತಲಭ್ಯಾನಿ ಚಾತ್ಮನಃ ।
ಆನೀಯ ಸ್ನಾಪ್ಯ ತಲ್ಲಿಂಗಂ ಪೂಜಯಾಮಾಸ ಭಕ್ತಿತಃ ॥ ೩೨ ॥
ಗಂಧಾಽಲಂಕಾರವಾಸಾಂಸಿ ಧೂಪದೀಪಾಽಕ್ಷತಾದಿಕಂ ।
ವಿಧಾಯ ಕೃತ್ರಿಮೈರ್ದಿವ್ಯೈರ್ನೈವೇದ್ಯಂ ಚಾಽಪ್ಯಕಲ್ಪಯತ್ ॥ ೩೩ ॥
ಭೂಯೋ ಭೂಯಃ ಸಮಭ್ಯರ್ಚ್ಯ ಪತ್ರೈಃ ಪುಷ್ಪೈರ್ಮನೋರಮೈಃ ।
ನೃತ್ಯಂ ಚ ವಿವಿಧಂ ಕೃತ್ವಾ ಪ್ರಣನಾಮ ಪುನಃಪುನಃ ॥ ೩೪ ॥
ಏವಂ ಪೂಜಾಂ ಪ್ರಕುರ್ವಾಣಂ ಶಿವಸ್ಯಾಽನನ್ಯಮಾನಸಂ ।
ಸಾ ಪುತ್ರಂ ಪ್ರಣಯಾದ್ಗೋಪೀ ಭೋಜನಾಯ ಸಮಾಹ್ವಯತ್ ॥ ೩೫ ॥
ಮಾತ್ರಾಹೂತೋಽಪಿ ಬಹುಶಃ ಸ ಪೂಜಾಸಕ್ತಮಾನಸಃ ।
ಬಾಲೋಽಪಿ ಭೋಜನಂ ನೇಚ್ಛತ್ತದಾ ಮಾತಾ ಸ್ವಯಂ ಯಯೌ॥ ೩೬ ॥

---

೨೯. ಅವಳು ಆಶ್ಚರ್ಯಕರವಾದ ಶಿವಪೂಜೆಯನ್ನು ಕಂಡು ನಮಸ್ಕರಿಸಿ ತನ್ನ ಶಿಬಿರಕ್ಕೆ ತೆರಳಿದಳು.

೩೦. ಆ ಗೊಲ್ಲರ ಹುಡುಗನಾದರೊ ಇದನ್ನೆಲ್ಲ ನೋಡಿ ಕುತೂಹಲದಿಂದ ತಾನೂ ವಿರಕ್ತಿಯನ್ನೀಯುವ ಶಿವಪೂಜೆಯನ್ನು ಮಾಡಿದನು.

೩೧–೩೨. ಶೂನ್ಯವಾದ ಒಂದು ಗುಡಿಸಿಲಿನಲ್ಲಿ ರಮ್ಯವಾದ ಕಲ್ಲನ್ನು ತಂದು ಶಿವಲಿಂಗವನ್ನು ಪ್ರತಿಷ್ಠಾಪಿಸಿದನು. ತನ್ನ ಕೈಗೆ ಸಿಕ್ಕ ಹೂವುಗಳನ್ನೆಲ್ಲ ತಂದು ಆ ಲಿಂಗಕ್ಕೆ ಅಭಿಷೇಕಮಾಡಿ ಭಕ್ತಿಯಿಂದ ಪೂಜಿಸಿದನು.

೩೩. ಕೃತ್ರಿಮ ವಸ್ತುಗಳಿಂದ ಗಂಧ, ಅಲಂಕಾರ, ವಸ್ತ್ರ, ಧೂಪ, ದೀಪ, ಅಕ್ಷತೆ, ನೈವೇದ್ಯಾದಿಗಳನ್ನು ಕಲ್ಪಿಸಿದನು.

೩೪. ಮನೋಹರಗಳಾದ ಪತ್ರ, ಪುಷ್ಪಗಳಿಂದ ಬಾರಿಬಾರಿಗೂ ಪೂಜಿಸಿ ವಿವಿಧನೃತ್ಯವನ್ನು ಮಾಡಿ ನಮಸ್ಕರಿಸಿದನು.

೩೫. ಆ ಗೊಲ್ಲರ ಹೆಂಗಸು ಹೀಗೆ ಒಮ್ಮನಸ್ಸಿನಿಂದ ಶಿವನನ್ನು ಆರಾಧಿಸುತ್ತಿರುವ ಮಗನನ್ನು ಪ್ರೀತಿಯಿಂದ ಊಟಕ್ಕೆ ಕರೆದಳು.

೩೬. ತಾಯಿಯು ಅನೇಕ ಸಾರಿ ಕರೆದರೂ ಪೂಜೆಯಲ್ಲಿ ನೆಟ್ಟಮನಸ್ಸುಳ್ಳ ಬಾಲಕನು ಊಟಕ್ಕೆ ಬಾರದಿರಲು ಅವಳೇ ಅಲ್ಲಿಗೆ ಹೋದಳು.

CC-0. Jangamwadi Math Collection. Digitized by eGangotri

ತಂ ವಿಲೋಕ್ಯ ಶಿವಸ್ಯಾಗ್ರೇ ನಿಷಣ್ಣಂ ಮೀಲಿತೇಕ್ಷಣಂ ।
ಚಕರ್ಷ ಪಾಣಿಂ ಸಂಗೃಹ್ಯ ಕೋಪೇನ ಸಮತಾಡಯತ್ ॥ ೩೭ ॥
ಆಕೃಷ್ಟಸ್ತಾಡಿತೋ ವಾಽಪಿ ನಾಽಗಚ್ಛತ್ಸ್ವಸುತೋ ಯದಾ ।
ತಾಂ ಪೂಜಾಂ ನಾಶಯಾಮಾಸ ಕ್ಷಿಪ್ತ್ವಾ ಲಿಂಗಂ ವಿದೂರತಃ ॥ ೩೮ ॥
ಹಾಹೇತಿ ರುದಮಾನಂ ತಂ ನಿರ್ಭರ್ತ್ಸ್ಯ ಸ್ವಸುತಂ ತದಾ ।
ಪುನರ್ವಿವೇಶ ಸ್ವಗೃಹಂ ಗೋಪೀ ರೋಷಸಮನ್ವಿತಾ ॥ ೩೯ ॥
ಮಾತ್ರಾ ವಿನಾಶಿತಾಂ ಪೂಜಾಂ ದೃಷ್ಟ್ವಾ ದೇವಸ್ಯ ಶೂಲಿನಃ ।
ದೇವದೇವೇತಿ ಚುಕ್ರೋಶ ನಿಪಪಾತ ಸ ಬಾಲಕಃ ॥ ೪೦ ॥
ಪ್ರಣಷ್ಟಸಂಜ್ಞಃ ಸಹಸಾ ಬಾಷ್ಪಪೂರಪರಿಪ್ಲುತಃ ।
ಲಬ್ಧಸಂಜ್ಞೋ ಮುಹೂರ್ತೇನ ಚಕ್ಷುಷೀ ಉದಮೀಲಯತ್ ॥ ೪೧ ॥

ತತೋ ಮಣಿಸ್ತಂಭವಿರಾಜಮಾನಂ-
ಹಿರಣ್ಮಯದ್ವಾರಕಪಾಟತೋರಣಂ ।
ಮಹಾರ್ಹನೀಲಾಽಮಲವಜ್ರವೇದಿಕಂ
ತದೇವ ಜಾತಂ ಶಿಬಿರಂ ಶಿವಾಲಯಂ ॥ ೪೨ ॥
ಸಂತಪ್ತಹೇಮಕಲಶೈರ್ಬಹುಭಿರ್ವಿಚಿತ್ರೈಃ-
ಪ್ರೋದ್ಭಾಸಿತಸ್ಫಟಿಕಸೌಧತಲಾಭಿರಾಮಂ ।
ರಮ್ಯಂ ಚ ತಚ್ಛಿವಪುರಂ ವರಪೀಠಮಧ್ಯೇ
ಲಿಂಗಂ ಚ ರತ್ನಸಹಿತಂ ಸ ದದರ್ಶ ಬಾಲಃ ॥ ೪೩ ॥

---

೩೭. ಶಿವನ ಮುಂದೆ ಕಣ್ಣುಗಳನ್ನು ಮುಚ್ಚಿಕೊಂಡು ಕುಳಿತುಕೊಂಡಿರುವ ಆ ಬಾಲಕನನ್ನು ನೋಡಿ ಸಿಟ್ಟನಿಂದ ಕೈಯನ್ನು ಹಿಡಿದೆಳೆದು ಹೊಡೆದಳು.

೩೮. ಎಳೆದು ಹೊಡೆದರೂ ಬಾಲಕನು ಬಾರದಿರಲು ಅವಳು ಲಿಂಗವನ್ನು ದೂರ ಎಸೆದು ಪೂಜೆಯನ್ನು ಹಾಳುಮಾಡಿದಳು.

೩೯. "ಅಯ್ಯೋ!" ಎಂದು ಅಳುತ್ತಿರುವ ಆ ಬಾಲಕನನ್ನು ಹೆದರಿಸಿ ಗೊಲ್ಲತಿಯು ಕೋಪದಿಂದ ಮನೆಗೆ ಹೋದಳು.

೪೦. ತಾಯಿಯು ಶಿವನ ಪೂಜೆಯನ್ನು ಹಾಳುಮಾಡಿದುದನ್ನು ಕಂಡು ಆ ಬಾಲಕನು 'ದೇವ!' ಎಂದು ಕೂಗಿ ಕೆಳಗೆ ಬಿದ್ದನು.

೪೧. ಕೂಡಲೆ ಕಣ್ಣೀರನ್ನು ತುಂಬಿಕೊಂಡು ಮೂರ್ಛೆಗೊಂಡನು. ಕ್ಷಣ ಕಾಲದಲ್ಲಿಯೇ ಎಚ್ಚರಗೊಂಡು ಕಣ್ಣುಗಳನ್ನು ತೆರೆದನು.

೪೨. ಬಳಿಕ ಆ ಗುಡಿಸಲು ರತ್ನದ ಕಂಬಗಳಿಂದ ಪ್ರಕಾಶಮಾನವಾದುದೂ, ಚಿನ್ನದ ಬಾಗಿಲು, ತೋರಣಗಳುಳ್ಳುದೂ, ಅಮೂಲ್ಯವಾದ ನೀಲಮಣಿಯ ಜಗಲಿಯುಳ್ಳದೂ ಆದ ಶಿವಾಲಯವಾಯಿತು.

೪೩. ಆ ಹುಡುಗನು ವಿಚಿತ್ರವಾದ ಅನೇಕ ಚಿನ್ನದ ಕಲಶಗಳಿಂದ

CC-0. Jangamwadi Math Collection. Digitized by eGangotri

ಸ ದೃಷ್ಟ್ವಾ ಸಹಸೋತ್ಥಾಯ ಭೀತವಿಸ್ಮಿತಮಾನಸಃ ।
ನಿಮಗ್ನ ಇವ ಸಂತೋಷಾತ್ಪರಮಾನಂದಸಾಗರೇ ॥ ೪೪ ॥
ವಿಜ್ಞಾಯ ಶಿವಪೂಜಾಯಾ ಮಾಹಾತ್ಮ್ಯಂ ತತ್ಪ್ರಭಾವತಃ ।
ನನಾಮ ದಂಡವದ್ಭೂಮೌ ಸ್ವಮಾತುರಘಶಾಂತಯೇ ॥ ೪೫ ॥
ದೇವ ಕ್ಷಮಸ್ವ ದುರಿತಂ ಮಮ ಮಾತುರುಮಾಪತೇ ।
ಮೂಢಾಯಾಸ್ತ್ವಮಜಾನಂತ್ಯಾಃ ಪ್ರಸನ್ನೋ ಭವ ಶಂಕರ ॥ ೪೬ ॥
ಯದಸ್ತಿ ಮಯಿ ಯತ್ಕಿಂಚಿತ್ಪುಣ್ಯಂ ತ್ವದ್ಭಕ್ತಿಸಂಭವಂ ।
ತೇನಾಽಪಿ ಶಿವ ಮೇ ಮಾತಾ ತವ ಕಾರುಣ್ಯಮಾಪ್ನುಯಾತ್ ॥ ೪೭ ॥
ಇತಿ ಪ್ರಸಾದ್ಯ ಗಿರಿಶಂ ಭೂಯೋ ಭೂಯಃ ಪ್ರಣಮ್ಯ ಚ ।
ಸೂರ್ಯೇಽಚಾಽಸ್ತಂಗತೇ ಬಾಲೋ ನಿರ್ಜಗಾಮ ಶಿವಾಲಯಾತ್॥ ೪೮ ॥
ಅಥಾಽಪಶ್ಯತ್ಸ್ವಶಿಬಿರಂ ಪುರಂದರಪುರೋಪಮಂ ।
ಸದ್ಯೋ ಹಿರಣ್ಮಯೀಭೂತಂ ವಿಚಿತ್ರವಿಭವೋಜ್ವಲಂ ॥ ೪೯ ॥
ಸೋಂತಃ ಪ್ರವಿಶ್ಯ ಭವನಂ ಮೋದಮಾನೋ ನಿಶಾಮುಖೇ ।
ಮಹಾಮಣಿಗಣಾಕೀರ್ಣಂ ಹೇಮರಾಶಿಸಮುಜ್ವಲಂ ॥ ೫೦ ॥
ತತ್ರಾಽಪಶ್ಯತ್ಸ್ವಜನನೀಂ ಸ್ಮರಂತೀಮಕುತೋಭಯಾಂ ।
ಮಹಾರ್ಹರತ್ನಪರ್ಯಂಕೇ ಸಿತಶಯ್ಯಾಮಧಿಶ್ರಿತಾಂ ॥ ೫೧ ॥

---

ಪ್ರಕಾಶಗೊಂಡ ಸ್ಫಟಿಕ ಸೌಧಗಳಿಂದ ಮನೋಹರವಾದ ಆ ಶಿವಾಲಯದಲ್ಲಿ ಉತ್ತಮಪೀಠದ ಮಧ್ಯದಲ್ಲಿ ರತ್ನಮಯವಾದ ಲಿಂಗವನ್ನು ಕಂಡನು.

೪೪–೪೫. ಅವನು ಕೂಡಲೆ ಎದ್ದು ಆಶ್ಚರ್ಯ ಭಯಗಳಿಂದ ಕೂಡಿ ಸಂತೋಷಸಾಗರದಲ್ಲಿ ಮುಳುಗಿದವನಾಗಿ ಶಿವಪೂಜೆಯ ಮಾಹಾತ್ಮ್ಯೆಯನ್ನರಿತು ತನ್ನ ತಾಯಿಯ ಪಾಪದ ಶಾಂತಿಗಾಗಿ ಸಾಷ್ಟಾಂಗಪ್ರಣಾಮಗೈದನು.

೪೬–೪೭. "ಶಂಕರ! ನಿನ್ನನ್ನರಿಯದ ಮೂಢಳಾದ ನನ್ನ ತಾಯಿ ಮಾಡಿದ ತಪ್ಪನ್ನು ಕ್ಷಮಿಸು. ಪ್ರಸನ್ನನಾಗು. ನಿನ್ನಲ್ಲಿ ನನಗೆ ಮೂಡಿದ ಭಕ್ತಿಯಿಂದುಂಟಾದ ಪುಣ್ಯಲೇಶವು ನನ್ನಲ್ಲಿದ್ದರೆ ನನ್ನ ತಾಯಿಯು ನಿನ್ನ ದಯೆಗೆ ಪಾತ್ರಳಾಗಲಿ."

೪೮. ಬಾಲಕನು ಹೀಗೆ ಶಿವನನ್ನು ಪ್ರಸನ್ನನಾಗಿಸಿ ಬಾರಿಬಾರಿಗೂ ನಮಸ್ಕರಿಸಿ ಸೂರ್ಯನು ಮುಳುಗಲು ಶಿವಾಲಯದಿಂದ ಹೊರಟನು.

೪೯. ಬಳಿಕ ಅಮರಾವತಿಯಂತೆ ನಾನಾ ವೈಭವಗಳಿಂದ ಉಜ್ಜ್ವಲವಾದ ಆಗಲೆ ಸುವರ್ಣಮಯವಾಗಿರುವ ತನ್ನ ಗುಡಿಸಲು ಭವ್ಯಭವನವಾಗಿರುವುದನ್ನು ಕಂಡನು.

೫೦–೫೧. ಅವನು ರತ್ನಗಳ ಸಮೂಹದಿಂದ ವ್ಯಾಪ್ತವಾದುದೂ, ಚಿನ್ನದ ರಾಶಿಯಿಂದ ಪ್ರಕಾಶಮಾನವಾದುದೂ ಆಗಿರುವ ಆ ಅರಮನೆಯನ್ನು ಹೊಕ್ಕು ಅಲ್ಲಿ ನಿರ್ಭಯಳಾಗಿ ನಗುತ್ತಿರುವವಳೂ, ಅಮೂಲ್ಯರತ್ನಗಳ ಮಂಚದ ಮೇಲೆ

CC-0. Jangamwadi Math Collection. Digitized by eGangotri

ರತ್ನಾಽಲಂಕಾರದೀಪ್ತಾಂಗೀಂ ದಿವ್ಯಾಂಬರವಿರಾಜಿನೀಂ ।
ದಿವ್ಯಲಕ್ಷಣಸಂಪನ್ನಾಂ ಸಾಕ್ಷಾತ್ಸುರವಧೂಮಿವ ॥ ೫೨ ॥
ಜವೇನೋತ್ಥಾಪಯಾಮಾಸ ಸಂಭ್ರಮೋತ್ಫುಲ್ಲಲೋಚನಃ ।
ಅಂಬ ಜಾಗೃಹಿ ಭದ್ರಂ ತೇ ಪಶ್ಯೇದಂ ಮಹದದ್ಭುತಂ ॥ ೫೩ ॥
ಇತಿ ಪ್ರಬೋಧಿತಾ ಗೋಪೀ ಸ್ವಪುತ್ರೇಣ ಮಹಾತ್ಮನಾ ।
ತತೋಽಪಶ್ಯತ್ಸ್ವಜನನೀ ಸ್ಮಯಂತೀ ಮುಕುಟೋಜ್ವಲಾ ॥ ೫೪ ॥
ಸಸಂಭ್ರಮಂ ಸಮುತ್ಥಾಯ ತತ್ಸರ್ವಂ ಪ್ರತ್ಯವೈಕ್ಷತ ।
ಅಪೂರ್ವಮಿವ ಚಾತ್ಮಾನಮಪೂರ್ವಮಿವ ಬಾಲಕಂ ॥ ೫೫ ॥
ಅಪೂರ್ವಂ ಚ ಸ್ವಸದನಂ ದೃಷ್ಟ್ವಾಽಸೀತ್ಸುಖವಿಹ್ವಲಾ ।
ಶ್ರುತ್ವಾ ಪುತ್ರಮುಖಾತ್ಸರ್ವಂ ಪ್ರಸಾದಂ ಗಿರಿಜಾಪತೇಃ ॥ ೫೬ ॥
ರಾಜ್ಞೇ ವಿಜ್ಞಾಪಯಾಮಾಸ ಯೋಽಭಜತ್ಯನಿಶಂ ಶಿವಂ ।
ಸ ರಾಜಾ ಸಹಸಾಗತ್ಯ ಸಮಾಪ್ತನಿಯಮೋ ನಿಶಿ ॥ ೫೭ ॥
ದದರ್ಶ ಗೋಪಿಕಾಸೂನೋಃ ಪ್ರಭಾವಂ ಶಿವತೋಷಜಂ ।
ಹಿರಣ್ಮಯಂ ಶಿವಸ್ಥಾನಂ ಲಿಂಗಂ ಮಣಿಮಯಂ ತಥಾ ॥ ೫೮ ॥
ಗೋಪವಧ್ವಾಶ್ಚ ಸದನಂ ಮಾಣಿಕ್ಯವರಕೋಜ್ವಲಂ ।
ದೃಷ್ಟ್ವಾ ಮಹೀಪತಿಃ ಸರ್ವಂ ಸಾಽಮಾತ್ಯಃ ಸಪುರೋಹಿತಃ ॥ ೫೯ ॥

---

ಬಿಳಿ ಹಾಸಿಗೆಯಲ್ಲಿ ಮಲಗಿರುವವಳೂ, ರತ್ನಗಳ ಒಡವೆಗಳಿಂದ ಪ್ರಕಾಶಿಸುವ ಅವಯವಗಳುಳ್ಳವಳೂ, ಮನೋಹರವಾದ ವಸ್ತ್ರದಿಂದ ವಿರಾಜಮಾನಳೂ ಆಗಿ ದಿವ್ಯ ಲಕ್ಷಣಗಳುಳ್ಳ ಸುರಾಂಗನೆಯಂತಿರುವ ತನ್ನ ತಾಯಿಯನ್ನು ಕಂಡನು.

೫೩. ಸಂಭ್ರಮದಿಂದ ಅರಳಿದ ಕಣ್ಣುಳ್ಳವನಾಗಿ, "ಅಮ್ಮಾ! ಏಳು. ನಿನಗೆ ಮಂಗಳವಾಗಲಿ. ಈ ಆಶ್ಚರ್ಯವನ್ನು ನೋಡು" ಎಂದು ವೇಗದಿಂದ ಎಬ್ಬಿಸಿದನು.

೫೪–೬೦. ಮಗನು ಹೀಗೆ ಎಬ್ಬಿಸಲು ಕಿರೀಟದಿಂದ ಪ್ರಕಾಶಮಾನಳಾದ ಅವಳು ನಗುತ್ತ ಬೇಗನೆ ಎದ್ದು ಅದನ್ನೆಲ್ಲ ನೋಡಿದಳು. ತಾನು, ಬಾಲಕನು, ಮನೆ ಎಲ್ಲ ಹೊಸದಾಗಿರುವುದನ್ನು ಕಂಡು ಸಂತೋಷಗೊಂಡು ಅದೆಲ್ಲ ಶಿವನ ಪ್ರಸಾದದಿಂದಾಗಿರುವುದೆಂದು ತನ್ನ ಮಗನಿಂದಲೇ ತಿಳಿದಳು. ತರುವಾಯ ಯಾವಾಗಲೂ ಶಿವನನ್ನು ಭಜಿಸುತ್ತಿರುವ ದೊರೆಗೆ ಇದನ್ನು ಆ ಗೋಪಿಯು ವಿಜ್ಞಾಪಿಸಿದಳು. ರಾಜನು ರಾತ್ರಿವ್ರತವನ್ನು ಪೂರೈಸಿ ಕೂಡಲೆ ಬಂದು ಗೋಪಾಲ ಬಾಲಕನಿಗೆ ಶಿವನ ಪ್ರಸಾದದಿಂದುಂಟಾದ ಸಾಮರ್ಥ್ಯವನ್ನು ನೋಡಿದನು. ಹಾಗೆಯೇ ಸುವರ್ಣಮಯವಾದ ಶಿವಾಲಯವನ್ನೂ, ರತ್ನಮಯವಾದ ಲಿಂಗವನ್ನೂ, ಮಾಣಿಕ್ಯಗಳಿಂದ ಪ್ರಕಾಶಮಾನವಾದ ಗೊಲ್ಲತಿಯ ಮನೆಯನ್ನೂ

CC-0. Jangamwadi Math Collection. Digitized by eGangotri

ಮುಹೂರ್ತಂ ನಿಸ್ಮಿತಧೃತಿಃ ಪರಮಾನಂದನಿರ್ಭರಃ ।
ಪ್ರೇಮ್ಣಾ ಬಾಷ್ಪಜಲಂ ಮುಂಚನ್ಪರಿರೇಭೇ ತನುರ್ಭಕಂ ॥ ೬೦ ॥
ಏವಮತ್ಯದ್ಭುತಾಕಾರಾಚ್ಛಿವಮಾಹಾತ್ಮ್ಯಕೀರ್ತನಾತ್ ।
ಪೌರಾಣಾಂ ಸಂಭ್ರಮಾಚ್ಚೈವ ಸಾ ರಾತ್ರಿಃ ಕ್ಷಣತಾಮಗಾತ್ ॥ ೬೧ ॥
ಅಥ ಪ್ರಭಾತೇ ಯುದ್ಧಾಯ ಪುರಂ ಸಂರುಧ್ಯ ಸಂಸ್ಥಿತಾಃ ।
ರಾಜಾನಶ್ಚಾರವಕ್ತ್ರೇಭ್ಯಃ ಶುಶ್ರುವುಃ ಪರಮಾದ್ಭುತಂ ॥ ೬೨ ॥
ತೇ ತ್ಯಕ್ತವೈರಾಃ ಸಹಸಾ ರಾಜಾನಶ್ಚಕಿತಾ ಭೃಶಂ ।
ನ್ಯಸ್ತಶಸ್ತ್ರಾ ನಿವಿವಿಶುಶ್ಚಂದ್ರಸೇನಾಽನುಮೋದಿತಾಃ ॥ ೬೩ ॥
ತಾಂ ಪ್ರವಿಶ್ಯ ಪುರೀಂ ರಮ್ಯಾಂ ಮಹಾಕಾಲಂ ಪ್ರಣಮ್ಯ ಚ ।
ತದ್ಗೋಪವನಿತಾಗೇಹಮಾಜಗ್ಮುಃ ಸರ್ವಭೂಭೃತಃ ॥ ೬೪ ॥
ತೇ ತತ್ರ ಚಂದ್ರಸೇನೇನ ಪ್ರತ್ಯುದ್ಗಮ್ಯಾಽಭಿಪೂಜಿತಾಃ ।
ಮಹಾರ್ಹವಿಷ್ಟರಗತಾಃ ಪ್ರೀತ್ಯಾನಂದಸುವಿಸ್ಮಿತಾಃ ॥ ೬೫ ॥
ಗೋಪಸೂನೋಃ ಪ್ರಸಾದಾಯ ಪ್ರಾದುರ್ಭೂತಂ ಶಿವಾಲಯಂ ।
ಲಿಂಗಂ ಚ ವೀಕ್ಷ್ಯ ಸುಮಹಚ್ಛಿವೇ ಚಕ್ರುಃ ಪರಾಂ ಮತಿಂ ॥ ೬೬ ॥

---

ಮಂತ್ರಿ ಪುರೋಹಿತರಿಂದ ಸಹಿತನಾದ ರಾಜನು ನೋಡಿ ಸ್ವಲ್ಪಹೊತ್ತು ಆಶ್ಚರ್ಯಗೊಂಡು ಅತ್ಯಾನಂದದಿಂದ ಕಣ್ಣೀರನ್ನು ಸುರಿಸುತ್ತ ಪ್ರೀತಿಯಿಂದ ಆ ಬಾಲಕನನ್ನು ತಬ್ಬಿಕೊಂಡನು.

೬೧. ಹೀಗೆ ಅತ್ಯಾಶ್ಚರ್ಯಕರವಾದ ಶಿವನ ಮಾಹಾತ್ಮ್ಯವನ್ನು ಹೇಳುವುದರಿಂದಲೂ, ಪಟ್ಟಣಿಗರ ಸಂಭ್ರಮದಿಂದಲೂ ಆ ರಾತ್ರಿಯು ಕ್ಷಣಕಾಲದಂತಾಯಿತು.

೬೨. ಅನಂತರ ಬೆಳಗ್ಗೆ ಯುದ್ಧಕ್ಕಾಗಿ ಪಟ್ಟಣವನ್ನು ತಡೆದು ನಿಂತಿರುವ ರಾಜರು ದೂತರಿಂದ ಈ ಅದ್ಭುತ ವಿಷಯವನ್ನು ಕೇಳಿದರು.

೬೩. ಅವರು ಕೂಡಲೇ ವೈರವನ್ನು ತ್ಯಜಿಸಿ ಭಯಗೊಂಡು ಶಸ್ತ್ರತ್ಯಾಗ ಮಾಡಿ ಚಂದ್ರಸೇನನ ಅನುಮತಿಯಿಂದ ಪಟ್ಟಣವನ್ನು ಹೊಕ್ಕರು.

೬೪. ಆ ರಾಜರೆಲ್ಲರೂ ಪಟ್ಟಣವನ್ನು ಪ್ರವೇಶಿದ ಕೂಡಲೆ ಮಹಾಕಾಲೇಶ್ವರನನ್ನು ವಂದಿಸಿ ಆ ಗೊಲ್ಲತಿಯ ಮನೆಗೆ ಬಂದರು.

೬೫. ಅಲ್ಲಿ ಅವರನ್ನು ಚಂದ್ರಸೇನನು ಎದುರುಗೊಂಡು ಪೂಜಿಸಿ ಪ್ರೀತಿಯಿಂದ ಉತ್ತಮಾಸನಗಳಲ್ಲಿ ಕುಳ್ಳಿರಿಸಲು ಅವರು ವಿಸ್ಮಿತರಾಗಿ ಸಂತೋಷಗೊಂಡರು.

೬೬. ಗೋಪಬಾಲಕನ ಅನುಗ್ರಹಕ್ಕಾಗಿ ಉದ್ಭವಿಸಿದ ಶಿವಾಲಯವನ್ನೂ, ಮಹಾಲಿಂಗವನ್ನೂ ಕಂಡು ಮಹೇಶ್ವರನಲ್ಲಿ ಅತಿಶಯ ಭಕ್ತಿಯನ್ನು ಮಾಡಿದರು.

CC-0. Jangamwadi Math Collection. Digitized by eGangotri

ತಸ್ಮೈ ಗೋಪಕುಮಾರಾಯ ಪ್ರೀತಾಸ್ತೇ ಸರ್ವಭೂಭುಜಃ ।
ವಾಸೋಹಿರಣ್ಯರತ್ನಾನಿ ಗೋಮಹಿಷ್ಯಾದಿಕಂ ಧನಂ ॥ ೬೭ ॥
ಗಜಾನಶ್ವಾನ್ರಥಾನ್ರೌಕ್ಮಾಂಶ್ಛತ್ರಯಾನಪರಿಚ್ಛದಾನ್ ।
ದಾಸಾನ್ದಾಸೀರನೇಕಾಶ್ಚ ದದುಃ ಶಿವಕೃಪಾರ್ಥಿನಃ ॥ ೬೮ ॥
ಯೇ ಯೇ ಸರ್ವೇಷು ದೇಶೇಷು ಗೋಪಾಸ್ತಿಷ್ಠಂತಿ ಭೂರಿಶಃ ।
ತೇಷಾಂ ತಮೇವ ರಾಜಾನಂ ಚಕ್ರಿರೇ ಸರ್ವಪಾರ್ಥಿವಾಃ ॥ ೬೯ ॥
ಅಥಾಽಸ್ಮಿನ್ನಂತರೇ ಸರ್ವೈಸ್ತ್ರಿದಶೈರಭಿಪೂಜಿತಃ ।
ಪ್ರಾದುರ್ಬಭೂವ ತೇಜಸ್ವೀ ಹನೂಮಾನ್ವಾನರೇಶ್ವರಃ ॥ ೭೦ ॥
ತಸ್ಯಾಽಭಿಗಮನಾದೇವ ರಾಜಾನೋ ಜಾತಸಂಭ್ರಮಾಃ ।
ಪ್ರತ್ಯುತ್ಥಾಯ ನಮಶ್ಚಕ್ರುರ್ಭಕ್ತಿನಮ್ರಾತ್ಮಮೂರ್ತಯಃ ॥ ೭೧ ॥
ತೇಷಾಂ ಮಧ್ಯೇ ಸಮಾಸೀನಃ ಪೂಜಿತಃ ಪ್ಲವಗೇಶ್ವರಃ ।
ಗೋಪಾತ್ಮಜಂ ಸಮಾಶ್ಲಿಷ್ಯ ರಾಜ್ಞೋ ವೀಕ್ಷ್ಯೇದಮಬ್ರವೀತ್ ॥ ೭೨ ॥
ಸರ್ವೇ ಶೃಣುತ ಭದ್ರಂ ವೋ ರಾಜಾನೋ ಯೇ ಚ ದೇಹಿನಃ ।
ಶಿವಪೂಜಾಮೃತೇ ನಾಽನ್ಯಾ ಗತಿರಸ್ತಿ ಶರೀರಿಣಾಂ ॥ ೭೩ ॥
ಏಷ ಗೋಪಸುತೋ ದಿಷ್ಟ್ಯಾ ಪ್ರದೋಷೇ ಮಂದವಾಸರೇ ।
ಅಮಂತ್ರೇಣಾಽಪಿ ಸಂಪೂಜ್ಯ ಶಿವಂ ಶಿವಮವಾಪ್ತವಾನ್ ॥ ೭೪ ॥

---

೬೭–೬೮. ಅವರು ಆ ಗೋಪಾಲಬಾಲಕನಲ್ಲಿ ಪ್ರೀತಿಗೊಂಡು ಬಟ್ಟೆ, ಚಿನ್ನ, ರತ್ನ, ಗೋವು, ಎಮ್ಮೆ, ಹಣ, ಆನೆ, ಕುದುರೆ, ರಥ, ಸುವರ್ಣ, ಛತ್ರ ಮೊದಲಾದುವುಗಳನ್ನೂ, ಸೇವಕರನ್ನೂ, ದಾಸಿಯರನ್ನೂ ಮಹೇಶನ ದಯೆಯನ್ನು ಬಯಸುವವರಾಗಿ ಕೊಟ್ಟರು.

೬೯–೭೧. ಆ ರಾಜರು ಸಕಲ ದೇಶದ ಗೋಪಾಲಕರಿಗೆ ಆ ಬಾಲಕನನ್ನು ದೊರೆಯಾಗಿ ನೇಮಿಸಿದರು. ಈ ಮಧ್ಯದಲ್ಲಿ ಸಕಲ ದೇವತೆಗಳಿಂದಲೂ ಪೂಜಿತನಾದ ಹನುಮಂತನು ಅಲ್ಲಿಗೆ ಬಂದನು. ಅವನು ಬಂದ ಕೂಡಲೆ ರಾಜರೆಲ್ಲರೂ ಸಂಭ್ರಮದಿಂದ ಎದ್ದು ಭಕ್ತಿಯಿಂದ ಬಾಗಿ ನಮಸ್ಕಾರ ಮಾಡಿದರು.

೭೨. ಅವರ ಮಧ್ಯದಲ್ಲಿ ಕುಳಿತುಕೊಂಡ ಹನುಮಂತನು ಆ ಗೋಪಬಾಲಕನನ್ನು ಆಲಿಂಗಿಸಿ ರಾಜರನ್ನು ನೋಡಿ ಈ ಮಾತನ್ನಾಡಿದನು.

೭೩. "ಅಯ್ಯಾ ಜನರೆ! ನಿಮಗೆಲ್ಲ ಕ್ಷೇಮವಾಗಲಿ. ಲೋಕದಲ್ಲಿ ಪ್ರಾಣಿಗಳಿಗೆ ಶಿವನ ಪೂಜೆಯನ್ನು ಬಿಟ್ಟು ಬೇರೆ ಶುಭಮಾರ್ಗವಿಲ್ಲ.

೭೪. ಈ ಗೊಲ್ಲರ ಹುಡುಗನು ಅದೃಷ್ಟವಶದಿಂದ ಶನಿವಾರ ಪ್ರದೋಷ ಕಾಲದಲ್ಲಿ ಮಹೇಶ್ವರನನ್ನು ಮಂತ್ರವಿಲ್ಲದೆ ಪೂಜಿಸಿದರೂ ಮಂಗಳವನ್ನು ಪಡೆದನು.

CC-0. Jangamwadi Math Collection. Digitized by eGangotri

ಮಂದವಾರೇ ಪ್ರದೋಷೋಽಯಂ ದುರ್ಲಭಃ ಸರ್ವದೇಹಿನಾಂ ।
ತತ್ರಾಽಪಿ ದುರ್ಲಭತರಃ ಕೃಷ್ಣಪಕ್ಷೇ ಸಮಾಗತೇ ॥ ೭೫ ॥
ಏಷ ಪುಣ್ಯತಮೋ ಲೋಕೇ ಗೋಪಾನಾಂ ಕೀರ್ತಿವರ್ಧನಃ ।
ಅಸ್ಯ ವಂಶೇಽಷ್ಟಮೋ ಭಾವಿ ನಂದೋನಾಮ ಮಹಾಯಶಾಃ ।
ಪ್ರಾಪ್ಸ್ಯತೇ ತಸ್ಯ ಪುತ್ರತ್ವಂ ಕೃಷ್ಣೋ ನಾರಾಯಣಃ ಸ್ವಯಂ ॥ ೭೬ ॥
ಅದ್ಯಪ್ರಭೃತಿ ಲೋಕೇಽಸ್ಮಿನ್ನೇಷ ಗೋಪಾಲನಂದನಃ ।
ನಾಮ್ನಾ ಶ್ರೀಕರ ಇತ್ಯುಚ್ಚೈರ್ಲೋಕೇ ಖ್ಯಾತಿಂ ಗಮಿಷ್ಯತಿ ॥ ೭೭ ॥

ಸೂತ ಉವಾಚ :—

ಏವಮುಕ್ತ್ವಾಂಜನೀಸೂನುಸ್ತಸ್ಮೈ ಗೋಪಕಸೂನವೇ ।
ಉಪದಿಶ್ಯ ಶಿವಾಚಾರಂ ತತ್ರೈವಾಂತರಧೀಯತ ॥ ೭೮ ॥
ತೇ ಚ ಸರ್ವೇ ಮಹೀಪಾಲಾಃ ಸಂಹೃಷ್ಟಾಃ ಪ್ರತಿಪೂಜಿತಾಃ ।
ಚಂದ್ರಸೇನಂ ಸಮಾಮಂತ್ರ್ಯ ಪ್ರತಿಜಗ್ಮುರ್ಯಥಾಗತಂ ॥ ೭೯ ॥
ಶ್ರೀಕರೋಽಪಿ ಮಹಾತೇಜಾ ಉಪದಿಷ್ಟೋ ಹನೂಮತಾ ।
ಬ್ರಾಹ್ಮಣೈಃ ಸಹ ಧರ್ಮಜ್ಞೈಶ್ಚಕ್ರೇ ಶಂಭೋಃ ಸಮರ್ಹಣಂ ॥ ೮೦ ॥
ಕಾಲೇನ ಶ್ರೀಕರಃ ಸೋಽಪಿ ಚಂದ್ರಸೇನಶ್ಚ ಭೂಪತಿಃ ।
ಸಮಾರಾಧ್ಯ ಶಿವಂ ಭಕ್ತ್ಯಾ ಪ್ರಾಪತುಃ ಪರಮಂ ಪದಂ ॥ ೮೧ ॥

---

೭೫. ಶನಿವಾರ ಪ್ರದೋಷವು ಸೇರುವುದು ದುರ್ಲಭವು. ಆದರಲ್ಲಿಯೂ ಕೃಷ್ಣಪಕ್ಷದಲ್ಲಿ ಶನಿವಾರ ಪ್ರದೋಷಗಳು ಸೇರುವುದು ದುರ್ಲಭ.

೭೬–೭೭. ಪುಣ್ಯವಂತನಾದ ಇವನು ಲೋಕದಲ್ಲಿ ಗೊಲ್ಲರ ಕೀರ್ತಿಯನ್ನು ಹೆಚ್ಚಿಸುವನು. ಇವನ ವಂಶದಲ್ಲಿ ಅತಿಶಯ ಕೀರ್ತಿಯುಳ್ಳ ನಂದನೆಂಬವನು ಎಂಟನೆಯವನಾಗಿ ಹುಟ್ಟುವನು. ಶ್ರೀಮನ್ನಾರಾಯಣನು ಕೃಷ್ಣರೂಪದಿಂದ ಇವನಿಗೆ ಮಗನಾಗುವನು. ಈ ದಿನ ಮೊದಲ್ಗೊಂಡು ಈ ಗೊಲ್ಲರ ಬಾಲಕನು ಲೋಕದಲ್ಲಿ ಶ್ರೀಕರ ಎಂಬ ಹೆಸರಿನಿಂದ ಅತ್ಯಂತ ಪ್ರಸಿದ್ಧನಾಗುವನು.''

೭೮. ಸೂತನು ಹೇಳುತ್ತಾನೆ:—ಆಂಜನೇಯನು ಹೀಗೆಂದು ಆ ಬಾಲಕನಿಗೆ ಶಿವಾಚಾರವನ್ನು ಉಪದೇಶಿಸಿ ಅಲ್ಲಿಯೇ ಮಾಯವಾದನು.

೭೯. ಆ ರಾಜರೆಲ್ಲರೂ ಸಂತೋಷಗೊಂಡು ತಿರುಗಿ ಪೂಜೆಯನ್ನು ಸ್ವೀಕರಿಸಿ ಚಂದ್ರಸೇನನಿಗೆ ತಿಳಿಸಿ ತಮ್ಮ ಸ್ಥಳಗಳಿಗೆ ಹೊರಟುಹೋದರು.

೮೦. ಹನುಮಂತನಿಂದ ಉಪದೇಶಗೊಂಡ ಶ್ರೀಕರನು ಧರ್ಮಜ್ಞರಾದ ಬ್ರಾಹ್ಮಣರೊಡನೆ ಶಿವನನ್ನು ಪೂಜಿಸಿದನು.

೮೧. ಹೀಗೆ ಕಾಲವು ಕಳೆಯಲು ಶ್ರೀಕರನೂ, ಚಂದ್ರಸೇನರಾಜನೂ ಶಿವನನ್ನು ಭಕ್ತಿಯಿಂದ ಪೂಜಿಸಿ ಉತ್ತಮ ಪದವಿಯನ್ನು ಪಡೆದರು.



CC-0. Jangamwadi Math Collection. Digitized by eGangotri

ಇದಂ ರಹಸ್ಯಂ ಪರಮಂ ಪವಿತ್ರಂ
ಯಶಸ್ಕರಂ ಪುಣ್ಯಮಹರ್ಧಿವರ್ಧನಂ ।
ಆಖ್ಯಾನಮಾಖ್ಯಾತಮಘೌಘನಾಶನಂ
ಗೌರೀಶಪಾದಾಽಂಬುಜಭಕ್ತಿವರ್ಧನಂ ॥ ೮೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಗೋಪಕುಮಾರಚರಿತ ವರ್ಣನಂ" ನಾಮ ಪಂಚಮೋಽಧ್ಯಾಯಃ

---

೮೨. ಅತಿ ಪವಿತ್ರವೂ, ಕೀರ್ತಿದಾಯಕವೂ, ಪುಣ್ಯವರ್ಧಕವೂ, ಪಾಪ ನಾಶಕವೂ, ಶಿವನಲ್ಲಿ ಭಕ್ತಿಯನ್ನು ಹೆಚ್ಚಿಸುವುದೂ ಆಗಿರುವ ಈ ಆಖ್ಯಾನವನ್ನು ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಗೋಪಕುಮಾರಚರಿತವರ್ಣನ"ವೆಂಬ ಐದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ಪ್ರದೋಷಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಯದುಕ್ತಂ ಭವತಾ ಸೂತ ಮಹದಾಖ್ಯಾನಮದ್ಭುತಂ ।
ಶಂಭೋರ್ಮಾಹಾತ್ಮ್ಯಕಥನಮಶೇಷಾಘಹರಂ ಪರಂ ॥ ೧ ॥
ಭೂಯೋಽಪಿ ಶ್ರೋತುಮಿಚ್ಛಾಮಸ್ತದೇವ ಸುಸಮಾಹಿತಾಃ ।
ಪ್ರದೋಷೇ ಭಗವಾಂಛಂಭುಃ ಪೂಜಿತಸ್ತು ಮಹಾತ್ಮಭಿಃ ॥ ೨ ॥
ಸಂಪ್ರಯಚ್ಛತಿ ಕಾಂ ಸಿದ್ಧಿಮೇತನ್ನೋ ಬ್ರೂಹಿ ಸುವ್ರತ ।
ಶ್ರುತಮಪ್ಯಸಕೃತ್ತೂತ ಭೂಯಸ್ತೃಷ್ಣಾ ಪ್ರವರ್ಧತೇ ॥ ೩ ॥

ಸೂತ ಉವಾಚ :—

ಸಾಧು ಪೃಷ್ಟಂ ಮಹಾಪ್ರಾಜ್ಞಾ ಭವದ್ಭಿರ್ಲೋಕವಿಶ್ರುತೈಃ ।
ಅತೋಽಹಂ ಸಂಪ್ರವಕ್ಷ್ಯಾಮಿ ಶಿವಪೂಜಾಫಲಂ ಮಹತ್ ॥ ೪ ॥
ತ್ರಯೋದಶ್ಯಾಂ ತಿಥೌ ಸಾಯಂ ಪ್ರದೋಷಃ ಪರಿಕೀರ್ತಿತಃ ।
ತತ್ರ ಪೂಜ್ಯೋ ಮಹಾದೇವೋ ನಾಽನ್ಯೋ ದೇವಃ ಫಲಾರ್ಥಿಭಿಃ ॥ ೫ ॥

---

### ಕನ್ನಡದ ಅನುವಾದ

### ಪ್ರದೋಷಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಎಲೈ ಸೂತನೆ! ನೀನು ಮಹೇಶ್ವರನ ಮಾಹಾತ್ಮ್ಯವನ್ನು ತಿಳಿಸುವಂಥದೂ, ಸಕಲ ಪಾಪಗಳನ್ನು ಪರಿಹಾರಮಾಡುವುದೂ ಆದ ಒಂದು ಉಪಾಖ್ಯಾನವನ್ನು ಹೇಳಿರುವೆ.

೨–೩. ತಿರುಗಿಯೂ ಅದನ್ನೇ ಒಮ್ಮನಸ್ಸಿನಿಂದ ಕೇಳಲು ಬಯಸುತ್ತೇವೆ. ಪ್ರದೋಷ ಕಾಲದಲ್ಲಿ ಮಹಾತ್ಮರು ಪೂಜಿಸಲು ಪೂಜ್ಯನಾದ ಶಿವನು ಯಾವ ಸಿದ್ಧಿಯನ್ನೀಯುವನು? ಅನೇಕ ಬಾರಿ ಕೇಳಿದರೂ ತಿರುಗಿ ಕೇಳಲು ಆಸೆಯುಂಟಾಗುವುದು.

೪. ಸೂತನು ಹೇಳುತ್ತಾನೆ:—ಪ್ರಾಜ್ಞರೆ! ಪ್ರಪಂಚದಲ್ಲಿ ಪ್ರಸಿದ್ಧರಾದ ನೀವು ಚೆನ್ನಾಗಿ ಕೇಳಿದಿರಿ. ಆದುದರಿಂದ ನಾನು ನಿಮಗೆ ಶಿವಪೂಜೆಯ ಮಹಾಫಲವನ್ನು ತಿಳಿಸುವೆನು.

೫. ತ್ರಯೋದಶಿಯ ಸಾಯಂಕಾಲವೇ ಪ್ರದೋಷವೆನಿಸಿಕೊಳ್ಳುವುದು. ಆ ಪ್ರದೋಷಕಾಲದಲ್ಲಿ ಫಲವನ್ನಪೇಕ್ಷಿಸುವವರು ಇತರ ದೇವತೆಗಳನ್ನು ಪೂಜಿಸದೆ ಆ ಶಿವನನ್ನೇ ಆರಾಧಿಸಬೇಕು.

CC-0. Jangamwadi Math Collection. Digitized by eGangotri

ಪ್ರದೋಷಪೂಜಾಮಾಹಾತ್ಮ್ಯಂ ಕೋ ನು ವರ್ಣಯಿತುಂ ಕ್ಷಮಃ ।
ಯತ್ರ ಸರ್ವೇಽಪಿ ವಿಬುಧಾಸ್ತಿಷ್ಠಂತಿ ಗಿರಿಶಾಂತಿಕೇ ॥ ೬ ॥
ಪ್ರದೋಷಸಮಯೇ ದೇವಃ ಕೈಲಾಸೇ ರಜತಾಲಯೇ ।
ಕರೋತಿ ನೃತ್ಯಂ ವಿಬುಧೈರಭಿಷ್ಟುತಗುಣೋದಯಃ ॥ ೭ ॥
ಅತಃ ಪೂಜಾ ಜಪೋ ಹೋಮಸ್ತತ್ಕಥಾಸ್ತದ್ಗುಣಸ್ತವಃ ।
ಕರ್ತವ್ಯೋ ನಿಯತಂ ಮರ್ತ್ಯೈಶ್ಚತುರ್ವರ್ಗಫಲಾರ್ಥಿಭಿಃ ॥ ೮ ॥
ದಾರಿದ್ರ್ಯತಿಮಿರಾಂಧಾನಾಂ ಮರ್ತ್ಯಾನಾಂ ಭವಭೀರುಣಾಂ ।
ಭವಸಾಗರಮಗ್ನಾನಾಂ ಪ್ಲವೋಽಯಂ ಪಾರದರ್ಶನಃ ॥ ೯ ॥
ದುಃಖಶೋಕಭಯಾರ್ತಾನಾಂ ಕ್ಲೇಶನಿರ್ವಾಣಮಿಚ್ಛತಾಂ ।
ಪ್ರದೋಷೇ ಪಾರ್ವತೀಶಸ್ಯ ಪೂಜನಂ ಮಂಗಲಾಯನಂ ॥ ೧೦ ॥
ದುರ್ಬುದ್ಧಿರಪಿ ನೀಚೋಽಪಿ ಮಂದಭಾಗ್ಯಃ ಶಠೋಽಪಿ ವಾ ।
ಪ್ರದೋಷೇ ಪೂಜ್ಯ ದೇವೇಶಂ ವಿಪದ್ಭ್ಯಃ ಸ ಪ್ರಮುಚ್ಯತೇ ॥ ೧೧ ॥
ಶತ್ರುಭಿರ್ಹನ್ಯಮಾನೋಽಪಿ ದಶ್ಯಮಾನೋಽಪಿ ಪನ್ನಗೈಃ ।
ಶೈಲೈರಾಕ್ರಮ್ಯಮಾಣೋಽಪಿ ಪತಿತೋಽಪಿ ಮಹಾಂಬುಧೌ ॥ ೧೨ ॥

---

೬–೭. ಈ ಪ್ರದೋಷಪೂಜೆಯ ಮಾಹಾತ್ಮ್ಯವನ್ನು ವರ್ಣಿಸಲು ಯಾರು ಶಕ್ತರು? ಪ್ರದೋಷಕಾಲದಲ್ಲಿ ಸಕಲ ದೇವತೆಗಳೂ ಈಶ್ವರನ ಸಮೀಪದಲ್ಲಿಯೇ ಇರುವರು. ಪ್ರದೋಷಕಾಲದಲ್ಲಿ ಶಿವನು ಕೈಲಾಸಾದ್ರಿಯಲ್ಲಿ ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟು ನರ್ತಿಸುವನು.

೮. ಆದುದರಿಂದ ಧರ್ಮಾದಿ ಪುರುಷಾರ್ಥಗಳನ್ನಪೇಕ್ಷಿಸುವ ಮರ್ತ್ಯರು ಆ ಕಾಲದಲ್ಲಿ ಪೂಜೆ, ಜಪ, ಹೋಮ, ಕಥೆ, ಸ್ತೋತ್ರ ಇವುಗಳನ್ನು ಮಾಡಬೇಕು.

೯. ದಾರಿದ್ರ್ಯವೆಂಬ ಕಣ್ಣುಬೇನೆಯಿಂದ ಕುರುಡರೂ, ಸಂಸಾರದಿಂದ ಭಯಗೊಂಡವರೂ, ಭವಸಾಗರದಲ್ಲಿ ಮುಳುಗಿದವರೂ ಆಗಿರುವ ಜನರಿಗೆ ಈ ಮಹೇಶ್ವರನು ಪಾರಗಾಣಿಸುವವನಾಗುವನು.

೧೦. ಪ್ರದೋಷಕಾಲದಲ್ಲಿ ಮಾಡಿದ ಶಿವಪೂಜೆಯು ದುಃಖ, ಭಯಾದಿಗಳಿಂದ ಪೀಡಿತರೂ, ಕ್ಲೇಶದ ಪರಿಹಾರವನ್ನು ಇಚ್ಛಿಸುವವರೂ ಆಗಿರುವ ಭಕ್ತರಿಗೆ ಮಂಗಳವನ್ನೀಯುವುದು.

೧೧. ದುಷ್ಟಬುದ್ಧಿಯುಳ್ಳವನೂ, ನೀಚನೂ, ಅಲ್ಪಪುಣ್ಯವುಳ್ಳವನೂ, ಮೂರ್ಖನೂ ಯಾರೇ ಆಗಲಿ ಪ್ರದೋಷಕಾಲದಲ್ಲಿ ಶಿವನನ್ನು ಆರಾಧಿಸಿದರೆ ಆಪತ್ತುಗಳಿಂದ ಬಿಡುಗಡೆಯನ್ನು ಹೊಂದುವರು.

೧೨–೧೩. ಶತ್ರುಗಳು ಹೊಡೆಯುತ್ತಿದ್ದರೂ, ಹಾವುಗಳು ಕಚ್ಚುತ್ತಿದ್ದರೂ, ಪರ್ವತಗಳು ಮೇಲೆ ಬೀಳುತ್ತಿದ್ದರೂ, ಸಮುದ್ರದಲ್ಲಿ ಬಿದ್ದಿದ್ದರೂ, ಯಮ

CC-0. Jangamwadi Math Collection. Digitized by eGangotri

ಅವಿದ್ಧಕಾಲದಂಡೋಽಪಿ ನಾನಾರೋಗಹತೋಽಪಿ ವಾ ।
ನ ವಿನಶ್ಯತಿ ಮರ್ತ್ಯೋಽಸೌ ಪ್ರದೋಷೇ ಗಿರಿಶಾಽರ್ಚನಾತ್ ॥ ೧೩ ॥
ದಾರಿದ್ರ್ಯಂ ಮರಣಂ ದುಃಖಮೃಣಭಾರಂ ನಗೋಪಮಂ ।
ಸದ್ಯೋ ವಿಧೂಯ ಸಂಪದ್ಭಿಃ ಪೂಜ್ಯತೇ ಶಿವಪೂಜನಾತ್ ॥ ೧೪ ॥
ಅತ್ರ ವಕ್ಷ್ಯೇ ಮಹಾಪುಣ್ಯಮಿತಿಹಾಸಂ ಪುರಾತನಂ ।
ಯಂ ಶ್ರುತ್ವಾ ಮನುಜಾಃ ಸರ್ವೇ ಪ್ರಯಾಂತಿ ಕೃತಕೃತ್ಯತಾಂ ॥ ೧೫ ॥
ಆಸೀದ್ವಿದರ್ಭವಿಷಯೇ ನಾಮ್ನಾ ಸತ್ಯರಥೋ ನೃಪಃ ।
ಸರ್ವಧರ್ಮರತೋ ಧೀರಃ ಸುಶೀಲಃ ಸತ್ಯಸಂಗರಃ ॥ ೧೬ ॥
ತಸ್ಯ ಪಾಲಯತೋ ಭೂಮಿಂ ಧರ್ಮೇಣ ಮುನಿಪುಂಗವಾಃ ।
ವ್ಯತೀಯಾಯ ಮಹಾನ್ಕಾಲಃ ಸುಖೇನೈವ ಮಹಾಮತೇಃ ॥ ೧೭ ॥
ಅಥ ತಸ್ಯ ಮಹೀಭರ್ತುರ್ಬಭೂವುಃ ಶಾಲ್ವಭೂಭುಜಃ ।
ಶತ್ರವಶ್ಚೋದ್ಧತಬಲಾ ದುರ್ಮರ್ಷಣಪುರೋಗಮಾಃ ॥ ೧೮ ॥
ಕದಾಚಿದಥ ತೇ ಶಾಲ್ವಾಃ ಸನ್ನದ್ಧಬಹುಸೈನಿಕಾಃ ।
ವಿದರ್ಭನಗರೀಂ ಪ್ರಾಪ್ಯ ರುರುಧುರ್ವಿಜಿಗೀಷವಃ ॥ ೧೯ ॥
ದೃಷ್ಟ್ವಾ ನಿರುಧ್ಯಮಾನಾಂ ತಾಂ ವಿದರ್ಭಾಽಧಿಪತಿಃ ಪುರೀಂ ।
ಯೋದ್ಧುಮಭ್ಯಾಯಯೌ ತೂರ್ಣಂ ಬಲೇನ ಮಹತಾವೃತಃ ॥ ೨೦ ॥

---

ದಂಡದಿಂದ ಹೊಡೆಯಲ್ಪಟ್ಟರೂ, ಅನೇಕ ರೋಗಗಳು ಪೀಡಿಸಿದರೂ ಮನುಷ್ಯನು ಪ್ರದೋಷಕಾಲದಲ್ಲಿ ಶಿವನನ್ನು ಅರ್ಚಿಸಿದರೆ ಸಾಯುವುದಿಲ್ಲ.

೧೪–೧೫. ಈ ಶಿವಪೂಜೆಯಿಂದ ನರನು ಬಡತನ, ಮರಣ, ದುಃಖ, ಬೆಟ್ಟದಂತಹ ಸಾಲದ ಹೊರೆ ಇವುಗಳನ್ನು ಪರಿಹರಿಸಿಕೊಂಡು ಐಶ್ವರ್ಯವಂತನಾಗುವನು. ಈ ವಿಷಯದಲ್ಲಿ ಮಾನವರನ್ನು ಕೃತಕೃತ್ಯರನ್ನಾಗಿಸುವ ಅತಿ ಪುಣ್ಯಕರವಾದ ಪುರಾತನೇತಿಹಾಸವೊಂದನ್ನು ಹೇಳುವೆನು.

೧೬. ವಿದರ್ಭದೇಶದಲ್ಲಿ ಸಕಲಧರ್ಮನಿರತನೂ, ಧೈರ್ಯವುಳ್ಳವನೂ, ಸುಶೀಲನೂ, ಸತ್ಯಪ್ರತಿಜ್ಞೆಯುಳ್ಳವನೂ ಆದ ಸತ್ಯರಥನೆಂಬ ರಾಜನಿದ್ದನು.

೧೭–೧೮. ಎಲೈ ಮುನಿಗಳೆ! ಆ ಸತ್ಯರಥನು ಧರ್ಮದಿಂದ ರಾಜ್ಯವನ್ನು ಆಳುತ್ತಿರಲು ಸುಖದಿಂದ ಬಹಳಕಾಲವು ಕಳೆಯಿತು. ಆ ರಾಜನಿಗೆ ಬಲಿಷ್ಠರಾದ ದುರ್ಮರ್ಷಣ ಮೊದಲಾದ ಶಾಲ್ವದೇಶದ ದೊರೆಗಳು ಶತ್ರುಗಳಾಗಿದ್ದರು.

೧೯. ಅವರು ಒಂದಾನೊಂದು ವೇಳೆ ಅವನನ್ನು ಜಯಿಸಲಪೇಕ್ಷೆಯಿಂದ ಅನೇಕ ಸೈನಿಕರನ್ನು ಸಿದ್ಧಪಡಿಸಿಕೊಂಡು ವಿದರ್ಭನಗರವನ್ನು ಮುತ್ತಿದರು.

೨೦. ಆ ಸತ್ಯರಥನು ಶತ್ರುಗಳು ಪಟ್ಟಣವನ್ನು ಮುತ್ತುತ್ತಿರುವುದನ್ನು ಕಂಡು ಬಹಳ ಸೈನ್ಯದೊಡನೆ ಯುದ್ಧಕ್ಕೆ ನಿಂತನು.

CC-0. Jangamwadi Math Collection. Digitized by eGangotri

ತಸ್ಯ ತೈರಭವದ್ಯುದ್ಧಂ ಶಾಲ್ವೈರಪಿ ಬಲೋದ್ಧತೈಃ ।
ಪಾತಾಲೇ ಪನ್ನಗೇಂದ್ರಸ್ಯ ಗಂಧರ್ವೈರಿವ ದುರ್ಮದೈಃ ॥ ೨೧ ॥
ವಿದರ್ಭನೃಪತಿಃ ಸೋಽಥ ಕೃತ್ವಾ ಯುದ್ಧಂ ಸುದಾರುಣಂ ।
ಪ್ರಣಷ್ಟೋರುಬಲೈಃ ಶಾಲ್ವೈರ್ನಿಹತೋ ರಣಮೂರ್ಧನಿ ॥ ೨೨ ॥
ತಸ್ಮಿನ್ಮಹಾರಥೇ ವೀರೇ ನಿಹತೇ ಮಂತ್ರಿಭಿಃ ಸಹ ।
ದುದ್ರುವುಃ ಸಮರೇ ಭಗ್ನಾ ಹತಶೇಷಾಶ್ಚ ಸೈನಿಕಾಃ ॥ ೨೩ ॥
ಅಥ ಯುದ್ಧೇಽಭಿವಿರತೇ ನಂದತ್ಸು ರಿಪುಮಂತ್ರಿಷು ।
ನಗರ್ಯಾಂ ಯುಧ್ಯಮಾನಾಯಾಂ ಜಾತೇ ಕೋಲಾಹಲೇ ರವೇ ॥ ೨೪ ॥
ತಸ್ಯ ಸತ್ಯರಥಸ್ಯೈಕಾ ವಿದರ್ಭಾಽಧಿಪತೇಃ ಸತೀ ।
ಭೂರಿಶೋಕಸಮಾವಿಷ್ಟಾ ಕ್ವಚಿದ್ಯತ್ನಾದ್ವಿನಿರ್ಯಯೌ ॥ ೨೫ ॥
ಸಾ ನಿಶಾಸಮಯೇ ಯತ್ನಾದಂತರ್ವತ್ನೀ ನೃಪಾಂಗನಾ ।
ನಿರ್ಗತಾ ಶೋಕಸಂತಪ್ತಾ ಪ್ರತೀಚೀಂ ಪ್ರಯಯೌ ದಿಶಂ ॥ ೨೬ ॥
ಅಥ ಪ್ರಭಾತೇ ಮಾರ್ಗೇಣ ಗಚ್ಛಂತೀ ಶನಕೈಃ ಸತೀ ।
ಅತೀತ್ಯ ದೂರಮಧ್ವಾನಂ ದದರ್ಶ ವಿಮಲಂ ಸರಃ ॥ ೨೭ ॥
ತತ್ರಾಗತ್ಯ ವರಾರೋಹಾ ತಪ್ತಾ ತಾಪೇನ ಭೂಯಸಾ ।
ವಿಲಸಂತಂ ಸರಸ್ತೀರೇ ಛಾಯಾವೃಕ್ಷಂ ಸಮಾಶ್ರಯತ್ ॥ ೨೮ ॥

---

೨೧–೨೨. ಆ ಸತ್ಯರಥನಿಗೆ ಬಲದಿಂದ ಉದ್ಧತರಾದ ಸಾಲ್ವರೊಡನೆ ಪಾತಾಳದಲ್ಲಿ ಮದೋದ್ಧತರಾದ ಗಂಧರ್ವರೊಡನೆ ನಾಗರಾಜನಿಗಾದಂತೆ ಘೋರ ಯುದ್ಧವು ನಡೆಯಿತು. ಆ ವಿದರ್ಭರಾಜನು ಭಯಂಕರವಾಗಿ ಕಾಳಗಮಾಡಿ ನಷ್ಟಗೊಂಡ ಬಲವುಳ್ಳವನಾಗಿ ಸಾಲ್ವರಾಜರಿಂದ ಹತನಾದನು.

೨೩–೨೫. ಮಹಾರಥಿಕನಾದ ಆ ವೀರರಾಜನು ಮಂತ್ರಿಗಳೊಡನೆ ಮಡಿಯಲು ಯುದ್ಧದಲ್ಲಿ ಕೈಕಾಲುಗಳನ್ನುಮುರಿದುಕೊಂಡ ಹತಶೇಷರಾದ ಸೈನಿಕರು ಓಡಿದರು. ಬಳಿಕ ಯುದ್ಧವು ಶಾಂತವಾಗಲು ಪಟ್ಟಣದಲ್ಲಿ ಶತ್ರು ಮಂತ್ರಿಗಳು ಕೂಗುತ್ತಿರಲು, ಬಹಳ ಗದ್ದಲವಾಗುತ್ತಿರಲು ಆ ವಿದರ್ಭೇಶನ ಸತಿಯು ಬಹು ದುಃಖಗೊಂಡು ಪ್ರಯತ್ನಪಟ್ಟು ಒಂದೆಡೆಯಿಂದ ಹೊರಟಳು.

೨೬. ಗರ್ಭಿಣಿಯಾದ ಆ ನೃಪಾಂಗನೆಯು ರಾತ್ರಿಯ ವೇಳೆ ದುಃಖದಿಂದ ಪಶ್ಚಿಮದಿಕ್ಕನ್ನು ಕುರಿತು ಹೊರಟಳು.

೨೭. ಅವಳು ಮೆಲ್ಲನೆ ನಡೆದು ಹಗಲಿನಲ್ಲಿ ದೂರವಾದ ಮಾರ್ಗವನ್ನು ದಾಟಿ ಒಂದು ನಿರ್ಮಲವಾದ ಕೊಳವನ್ನು ಕಂಡಳು.

೨೮. ಅತ್ಯಂತ ಬಿಸಿಲಿನಿಂದ ಸಂತಾಪಗೊಂಡ ಅವಳು ಆ ಸರೋವರದ ಹತ್ತಿರ ಬಂದು ಅದರ ದಡದಲ್ಲಿರುವ ಒಂದು ನೆರಳಿನ ಮರವನ್ನು ಆಶ್ರಯಿಸಿದಳು.

CC-0. Jangamwadi Math Collection. Digitized by eGangotri

ತತ್ರ ದೈವವಶಾದ್ರಾಜ್ಞೀ ವಿಜನೇ ತರುಕುಟ್ಟಮೇ ।
ಅಸೂತ ತನಯಂ ಸಾಧ್ವೀ ಮುಹೂರ್ತೇ ಸದ್ಗುಣಾನ್ವಿತೇ ॥ ೨೯ ॥
ಅಥ ಸಾ ರಾಜಮಹಿಷೀ ಪಿಪಾಸಾಽಭಿಹತಾ ಭೃಶಂ ।
ಸರೋಽವತೀರ್ಣಾ ಚಾರ್ವಂಗೀ ಗ್ರಸ್ತಾ ಗ್ರಾಹೇಣ ಭೂಯಸಾ ॥ ೩೦ ॥
ಜಾತಮಾತ್ರಃ ಕುಮಾರೋಽಪಿ ವಿನಷ್ಟಪಿತೃಮಾತೃಕಃ ।
ರುರೋದೋಚ್ಚೈಃ ಸರಸ್ತೀರೇ ಕ್ಷುತ್ಪಿಪಾಸಾರ್ದಿತೋಽಬಲಃ ॥ ೩೧ ॥
ತಸ್ಮಿನ್ನೇವಂ ಕ್ರಂದಮಾನೇ ಜಾತಮಾತ್ರೇ ಕುಮಾರಕೇ ।
ಕಾಚಿದಭ್ಯಾಯಯೌ ಶೀಘ್ರಂ ದಿಷ್ಟ್ಯಾ ವಿಪ್ರವರಾಂಗನಾ ॥ ೩೨ ॥
ಸಾಽಪ್ಯೇಕಹಾಯನಂ ಬಾಲಮುದ್ವಹಂತೀ ದ್ವಿಜಾತ್ಮಜಂ ।
ಅಧನಾ ಭರ್ತೃರಹಿತಾ ಯಾಚಮಾನಾ ಗೃಹೇ ಗೃಹೇ ॥ ೩೩ ॥
ಏಕಾತ್ಮಜಾ ಬಂಧುಹೀನಾ ಯಾಞ್ಞಾವರ್ಗವಶಂ ಗತಾ ।
ಉಮಾನಾಮ ದ್ವಿಜಸತೀ ದದರ್ಶ ನೃಪನಂದನಂ ॥ ೩೪ ॥
ಸಾ ದೃಷ್ಟ್ವಾ ರಾಜತನಯಂ ಸೂರ್ಯಬಿಂಬಮಿವ ಚ್ಯುತಂ ।
ಅನಾಥಮೇನಂ ಕ್ರಂದಂತಂ ಚಿಂತಯಾಮಾಸ ಭೂರಿಶಃ ॥ ೩೫ ॥
ಅಹೋ ಸುಮಹದಾಶ್ಚರ್ಯಮಿದಂ ದೃಷ್ಟಂ ಮಯಾಽಧುನಾ ।
ಅಚ್ಛಿನ್ನನಾಭಿಸೂತ್ರೋಽಯಂ ಶಿಶುರ್ಮಾತಾ ಕ್ವ ವಾ ಗತಾ ॥ ೩೬ ॥

---

೨೯. ಆ ಸಾಧ್ವಿಯು ನಿರ್ಜನವಾದ ಆ ಮರದ ಬುಡದಲ್ಲಿ ಶುಭಮುಹೂರ್ತದಲ್ಲಿ ದೈವೇಚ್ಛೆಯಿಂದ ಪುತ್ರನನ್ನು ಪ್ರಸವಿಸಿದಳು.

೩೦. ಬಳಿಕ ಸುಂದರಿಯಾದ ಆ ರಾಣಿಯು ಅತ್ಯಂತ ಬಾಯಾರಿಕೆಗೊಂಡು ನೀರನ್ನು ಕುಡಿಯಲು ಸರೋವರಕ್ಕಿಳಿಯಲು ಒಂದು ದೊಡ್ಡ ಮೊಸಳೆಯು ಅವಳನ್ನು ಹಿಡಿಯಿತು.

೩೧–೩೨. ಹುಟ್ಟಿದಕೂಡಲೆ ತಾಯಿತಂದೆಗಳನ್ನು ಕಳೆದುಕೊಂಡು ತಬ್ಬಲಿಯಾದ ಆ ಬಾಲನು ಸರಸ್ಸಿನ ದಡದಲ್ಲಿ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಗಟ್ಟಿಯಾಗಿ ಅತ್ತನು. ಆ ಶಿಶುವು ಹೀಗೆ ಅಳುತ್ತಿರಲು ಅದೃಷ್ಟವಶದಿಂದ ಓರ್ವ ಬ್ರಾಹ್ಮಣ ಸ್ತ್ರೀಯು ಶೀಘ್ರವಾಗಿ ಅಲ್ಲಿಗೆ ಬಂದಳು.

೩೩–೩೪. ಒಂದು ವರ್ಷದ ತನ್ನ ಬಾಲಕನನ್ನು ಎತ್ತಿಕೊಂಡು ಮನೆಮನೆಗಳಲ್ಲಿ ಭಿಕ್ಷೆ ಬೇಡುತ್ತಿರುವವಳೂ, ನಿರ್ಧನಳೂ, ವಿಧವೆಯೂ, ಬಂಧುರಹಿತಳೂ ಆದ ಉಮೆ ಎಂಬ ದ್ವಿಜಸತಿಯು ರಾಜನ ಶಿಶುವನ್ನು ಕಂಡಳು.

೩೫. ಅವಳು ಆಕಾಶದಿಂದ ಕೆಳಗೆ ಬಿದ್ದ ಸೂರ್ಯಬಿಂಬದಂತೆ ಶೋಭಿಸುತ್ತ ಅನಾಥನಾಗಿ ಅಳುತ್ತಿರುವ ಆ ರಾಜಶಿಶುವನ್ನು ನೋಡಿ ಬಹುವಾಗಿ ಚಿಂತಿಸಿದಳು.

೩೬. "ನಾನೀಗ ಬಹಳ ಆಶ್ಚರ್ಯವನ್ನು ಕಂಡೆನು. ಈ ಶಿಶುವಿಗೆ ಇನ್ನೂ ನಾಭಿಸೂತ್ರವು ಬಿದ್ದಿಲ್ಲ. ಇವನ ತಾಯಿಯು ಎಲ್ಲಿಗೆ ಹೋದಳು?

CC-0. Jangamwadi Math Collection. Digitized by eGangotri

ಪಿತಾ ನಾಽಸ್ತಿ ನ ಚಾಽನ್ಯೋಽಸ್ತಿ ನಾಽಸ್ತಿ ಬಂಧುಜನೋಽಪಿ ವಾ ।
ಅನಾಥಃ ಕೃಪಣೋ ಬಾಲಃ ಶೇತೇ ಕೇವಲಭೂತಲೇ ॥ ೩೭ ॥
ಏಷ ಚಾಂಡಾಲಜೋ ವಾಽಪಿ ಶೂದ್ರಜೋ ವೈಶ್ಯಜೋಽಪಿ ವಾ ।
ವಿಪ್ರಾತ್ಮಜೋ ವಾ ನೃಪಜೋ ಜ್ಞಾಯತೇ ಕಥಮರ್ಭಕಃ ॥ ೩೮ ॥
ಶಿಶುಮೇನಂ ಸಮುದ್ಧೃತ್ಯ ಪುಷ್ಣಾಮ್ಯೌರಸವದ್ಧ್ರುವಂ ।
ಕಿಂ ತ್ವವಿಜ್ಞಾತಕುಲಜಂ ನೋತ್ಸಹೇ ಸ್ಪ್ರಷ್ಟುಮುತ್ತಮಂ ॥ ೩೯ ॥
ಇತಿ ಮೀಮಾಂಸಮಾನಾಯಾಂ ಸತ್ಯಾಂ ವಿಪ್ರವರಸ್ತ್ರಿಯಾಂ ।
ಕಶ್ಚಿತ್ಸಮಾಯಯೌ ಭಿಕ್ಷುಃ ಸಾಕ್ಷಾದ್ದೇವಃ ಶಿವಃ ಸ್ವಯಂ ॥ ೪೦ ॥
ತಾಮಾಹ ಭಿಕ್ಷುವರ್ಯೋಽಥ ವಿಪ್ರಭಾಮಿನಿ ಮಾ ಖಿದಃ ।
ರಕ್ಷೈನಂ ಬಾಲಕಂ ಸುಭ್ರೂರ್ವಿಸೃಜ್ಯ ಹೃದಿ ಸಂಶಯಂ ॥ ೪೧ ॥
ಅನೇನ ಪರಮಂ ಶ್ರೇಯಃ ಪ್ರಾಪ್ಸ್ಯಸೇ ಹ್ಯಚಿರಾದಿಹ ।
ಏತಾವದುಕ್ತ್ವಾ ತ್ವರಿತೋ ಭಿಕ್ಷುಃ ಕಾರುಣಿಕೋ ಯಯೌ ॥ ೪೨ ॥
ಅಥ ತಸ್ಮಿನ್ಗತೇ ಭಿಕ್ಷೌ ವಿಸ್ರಬ್ಧಾ ವಿಪ್ರಭಾಮಿನೀ ।
ತಮರ್ಭಕಂ ಸಮಾದಾಯ ನಿಜಮೇವ ಗೃಹಂ ಯಯೌ ॥ ೪೩ ॥
ಭಿಕ್ಷುವಾಕ್ಯೇನ ವಿಸ್ರಬ್ಧಾ ಸಾ ರಾಜತನಯಂ ಸತೀ ।
ಆತ್ಮಪುತ್ರೇಣ ಸದೃಶಂ ಕೃಪಯಾ ಪರ್ಯಪೋಷಯತ್ ॥ ೪೪ ॥

---

೩೭. ತಂದೆಯೂ, ಇತರ ಬಂಧುಜನಗಳೂ ಯಾರೂ ಇಲ್ಲ. ಅನಾಥನಾದ ಈ ದೀನಬಾಲಕನು ಕೇವಲ ನೆಲದಲ್ಲಿ ಮಲಗಿದ್ದಾನೆ.

೩೮–೩೯. ಈ ಬಾಲಕನು ಚಾಂಡಾಲಸುತನೊ? ಶೂದ್ರಪುತ್ರನೊ? ವೈಶ್ಯತನಯನೊ? ಬ್ರಾಹ್ಮಣನ ಮಗನೊ? ರಾಜನಂದನನೊ? ಇದನ್ನು ಹೇಗೆ ತಿಳಿಯುವುದು? ಈ ಮಗುವನ್ನು ಎತ್ತಿಕೊಂಡು ನನ್ನ ಮಗನಂತೆ ಕಾಪಾಡುವೆನು. ಆದರೆ ಇವನ ಕುಲಗೋತ್ರವನ್ನರಿಯದೆ ಇವನನ್ನು ಹೇಗೆ ಮುಟ್ಟಲಿ?''

೪೦. ಹೀಗೆ ಆ ಬ್ರಾಹ್ಮಣಸ್ತ್ರೀಯು ಆಲೋಚಿಸುತ್ತಿರಲು ಶಿವನು ಸನ್ಯಾಸಿಯಾಗಿ ಅಲ್ಲಿಗೆ ಬಂದನು.

೪೧–೪೨. ಅವನು ''ಎಲೌ ದ್ವಿಜಾಂಗನೆಯೇ! ವ್ಯಥೆಪಡಬೇಡ. ಸಂಶಯವನ್ನು ಬಿಟ್ಟು ಈ ಬಾಲಕನನ್ನು ಕಾಪಾಡು. ಇವನಿಂದ ನೀನು ಕೆಲವು ಕಾಲದಲ್ಲಿಯೇ ಶ್ರೇಯಸ್ಸನ್ನು ಪಡೆಯುವೆ.''

೪೩–೪೪. ದಯಾಳುವಾದ ಸನ್ಯಾಸಿಯು ಹೀಗೆ ಹೇಳಿ ಕೂಡಲೆ ಹೊರಟು ಹೋದನು. ತರುವಾಯ ಆ ವಿಪ್ರಾಂಗನೆಯು ನಂಬಿಕೆಗೊಂಡು ಆ ಬಾಲಕನನ್ನು ಎತ್ತಿಕೊಂಡು ತನ್ನ ಮನೆಗೆ ಹೋದಳು. ಅವಳು ಸನ್ಯಾಸಿಯ ಮಾತಿನಂತೆ ಆ ರಾಜಪುತ್ರನನ್ನು ತನ್ನ ಮಗನಂತೆಯೇ ದಯೆಯಿಂದ ಪೋಷಿಸಿದಳು.

CC-0. Jangamwadi Math Collection. Digitized by eGangotri

ಏಕಚಕ್ರಾಹ್ವಯೇ ರಮ್ಯೇ ಗ್ರಾಮೇ ಕೃತನಿಕೇತನಾ ।
ಸ್ವಪುತ್ರಂ ರಾಜಪುತ್ರಂ ಚ ಭಿಕ್ಷಾಽನ್ನೇನ ವ್ಯವರ್ಧಯತ್ ॥ ೪೫ ॥
ಬ್ರಾಹ್ಮಣೀತನಯಶ್ಚೈವ ಸ ರಾಜತನಯಸ್ತಥಾ ।
ಬ್ರಾಹ್ಮಣೈಃ ಕೃತಸಂಸ್ಕಾರೌ ವವೃಧಾತೇ ಸುಪೂಜಿತೌ ॥ ೪೬ ॥
ಕೃತೋಪನಯನೌ ಕಾಲೇ ಬಾಲಕೌ ನಿಯಮೇ ಸ್ಥಿತೌ ।
ಭಿಕ್ಷಾರ್ಥಂ ಚೇರತುಸ್ತತ್ರ ಮಾತ್ರಾ ಸಹ ದಿನೇ ದಿನೇ ॥ ೪೭ ॥
ತಾಭ್ಯಾಂ ಕದಾಚಿದ್ಬಾಲಾಭ್ಯಾಂ ಸಾ ವಿಪ್ರವನಿತಾ ಸಹ ।
ಭೈಕ್ಷ್ಯಂ ಚರಂತೀ ದೈವೇನ ಪ್ರವಿಷ್ಟಾ ದೇವತಾಲಯಂ ॥ ೪೮ ॥
ತತ್ರ ವೃದ್ಧೈಃ ಸಮಾಕೀರ್ಣೇ ಮುನಿಭಿರ್ದೇವತಾಲಯೇ ।
ತೌ ದೃಷ್ಟ್ವಾ ಬಾಲಕೌ ಧೀಮಾಂಛಾಂಡಿಲ್ಯೋ ಮುನಿರಬ್ರವೀತ್ ॥ ೪೯ ॥
ಅಹೋ ದೈವಬಲಂ ಚಿತ್ರಮಹೋ ಕರ್ಮ ದುರತ್ಯಯಂ ।
ಏಷ ಬಾಲೋಽನ್ಯಜನನೀಂ ಶ್ರಿತೋಽಭೈಕ್ಷ್ಯೇಣ ಜೀವತಿ ॥ ೫೦ ॥
ಇಮಾಮೇವ ದ್ವಿಜವಧೂಂ ಪ್ರಾಪ್ಯ ಮಾತರಮುತ್ತಮಾಂ ।
ಸಹೈವ ದ್ವಿಜಪುತ್ರೇಣ ದ್ವಿಜಭಾವಂ ಸಮಾಶ್ರಿತಃ ॥ ೫೧ ॥
ಇತಿ ಶ್ರುತ್ವಾ ಮುನೇರ್ವಾಕ್ಯಂ ಶಾಂಡಿಲ್ಯಸ್ಯ ದ್ವಿಜಾಂಗನಾ ॥ ೫೨ ॥

---

೪೫. ಅವಳು ಏಕಚಕ್ರವೆಂಬ ಗ್ರಾಮದಲ್ಲಿ ಮನೆಮಾಡಿಕೊಂಡು ತನ್ನ ತನಯನನ್ನೂ ರಾಜನ ಮಗನನ್ನೂ ಭಿಕ್ಷಾನ್ನದಿಂದ ಬೆಳೆಸಿದಳು.

೪೬–೪೭. ಬ್ರಾಹ್ಮಣರು ಆ ಇಬ್ಬರು ಬಾಲಕರಿಗೂ ಉಪನಯನಾದಿ ಸಂಸ್ಕಾರಗಳನ್ನು ಸಕಾಲದಲ್ಲಿ ಮಾಡಲು ಅವರಿಬ್ಬರೂ ನಿಯಮಾನುಷ್ಠಾನ ಮಾಡುತ್ತ ಪೂಜ್ಯರಾಗಿ ತಾಯಿಯೊಡನೆ ಭಿಕ್ಷಾಟನೆ ಮಾಡಿದರು.

೪೮. ಆ ಬ್ರಾಹ್ಮಣಸ್ತ್ರೀಯು ಒಂದಾನೊಂದುದಿನ ಆ ಬಾಲಕರೊಡನೆ ಭಿಕ್ಷೆಬೇಡುತ್ತ ದೈವವಶದಿಂದ ದೇವಾಲಯವನ್ನು ಹೊಕ್ಕಳು.

೪೯. ವೃದ್ಧರಾದ ಮುನಿಗಳಿಂದ ತುಂಬಿರುವ ಆ ದೇವಾಲಯದಲ್ಲಿ ಶಾಂಡಿಲ್ಯನೆಂಬ ಮುನಿಯು ಆ ಬಾಲಕರನ್ನು ಕಂಡು ಇಂತೆಂದನು.

೫೦. "ದೈವಬಲವು ಆಶ್ಚರ್ಯಕರವಾದುದು. ಕರ್ಮವು ಮೀರಲಸಾಧ್ಯವಾದುದು. ಈ ಕ್ಷತ್ರಿಯಬಾಲಕನು ಮತ್ತೊಬ್ಬರನ್ನು ಆಶ್ರಯಿಸಿ ಭಿಕ್ಷಾನ್ನದಿಂದ ಜೀವಿಸುತ್ತಿದ್ದಾನೆ.

೫೧. ಈ ಬ್ರಾಹ್ಮಣಸ್ತ್ರೀಯನ್ನು ಉತ್ತಮ ತಾಯಿಯನ್ನಾಗಿ ಹೊಂದಿ ಬ್ರಾಹ್ಮಣ ಬಾಲಕನೊಡನೆ ಬ್ರಾಹ್ಮಣ್ಯವನ್ನು ಪಡೆದನು.

೫೨–೫೫. ಆ ದ್ವಿಜಾಂಗನೆಯು ಶಾಂಡಿಲ್ಯನ ಈ ಮಾತನ್ನುಕೇಳಿ ಆಶ್ಚರ್ಯ

CC-0. Jangamwadi Math Collection. Digitized by eGangotri

ಸಾ ಪ್ರಣಮ್ಯ ಸಭಾಮಧ್ಯೇ ಪರ್ಯಪೃಚ್ಛತ್ಸವಿಸ್ಮಯಾ ।
ಬ್ರಹ್ಮನ್ನೇಷೋಽರ್ಭಕೋ ನೀತೋ ಮಯಾ ಭಿಕ್ಷೋರ್ಗಿರಾ ಗೃಹಂ ॥
ಅವಿಜ್ಞಾತಕುಲೋಽದ್ಯಾಪಿ ಸುತವತ್ಪರಿಪೋಷ್ಯತೇ ।
ಕಸ್ಮಿನ್ಕುಲೇ ಪ್ರಸೂತೋಽಯಂ ಕಾ ಮಾತಾ ಜನಕೋಽಸ್ಯ ಕಃ ॥ ೫೪ ॥
ಸರ್ವಂ ವಿಜ್ಞಾತುಮಿಚ್ಛಾಮಿ ಭವತೋ ಜ್ಞಾನಚಕ್ಷುಷಃ ॥ ೫೫ ॥
ಇತಿ ಪೃಷ್ಟೋ ಮುನಿಃ ಸೋಽಥ ಜ್ಞಾನದೃಷ್ಟಿರ್ದ್ವಿಜಸ್ತ್ರಿಯಾ ।
ಆಚಖ್ಯೌ ತಸ್ಯ ಬಾಲಸ್ಯ ಜನ್ಮ ಕರ್ಮ ಚ ಪೌರ್ವಿಕಂ ॥ ೫೬ ॥
ವಿದರ್ಭರಾಜಪುತ್ರಸ್ತು ತತ್ಪಿತುಃ ಸಮರೇ ಮೃತಿಂ ।
ತನ್ಮಾತುರ್ನಕ್ರಹರಣಂ ಸಾಕಲ್ಯೇನ ನ್ಯವೇದಯತ್ ॥ ೫೭ ॥
ಅಥ ಸಾ ವಿಸ್ಮಿತಾ ನಾರೀ ಪುನಃ ಪಪ್ರಚ್ಛ ತಂ ಮುನಿಂ ।
ಸ ರಾಜಾ ಸಕಲಾನ್ಭೋಗಾನ್ಹಿತ್ವಾ ಯುದ್ಧೇ ಕಥಂ ಮೃತಃ ॥ ೫೮ ॥
ದಾರಿದ್ರ್ಯಮಸ್ಯ ಬಾಲಸ್ಯ ಕಥಂ ಪ್ರಾಪ್ತಂ ಮಹಾಮುನೇ ।
ದಾರಿದ್ರ್ಯಂ ಪುನರುದ್ಧೂಯ ಕಥಂ ರಾಜ್ಯಮವಾಪ್ಸ್ಯತಿ ॥ ೫೯ ॥
ಅಸ್ಯಾಽಪಿ ಮಮ ಪುತ್ರಸ್ಯ ಭಿಕ್ಷಾಽನ್ನೇನೈವ ಜೀವತಃ ।
ದಾರಿದ್ರ್ಯಶಮನೋಪಾಯಮುಪದೇಷ್ಟುಂ ತ್ವಮರ್ಹಸಿ ॥ ೬೦ ॥

---

ಗೊಂಡು ಸಭೆಯ ನಡುವೆ ಅವನನ್ನು ಹೀಗೆ ಕೇಳಿದಳು. ದ್ವಿಜವರ! ನಾನು ಸನ್ಯಾಸಿಯ ಮಾತಿನಿಂದ ಕುಲಗೋತ್ರವನ್ನರಿಯದ ಈ ಬಾಲಕನನ್ನು ಮನೆಗೆ ತಂದು ನನ್ನ ಮಗನಂತೆ ಕಾಪಾಡುತ್ತಿದ್ದೇನೆ. ಇವನ ವಂಶವಾವುದು? ತಾಯಿಯಾರು? ತಂದೆಯಾರು? ಜ್ಞಾನದೃಷ್ಟಿಯುಳ್ಳ ನಿನ್ನಿಂದ ಎಲ್ಲವನ್ನೂ ತಿಳಿಯಲು ಬಯಸುವೆನು.

೫೬. ಆ ಬ್ರಾಹ್ಮಣಸ್ತ್ರೀಯು ಹೀಗೆ ಕೇಳಲು ಜ್ಞಾನದೃಷ್ಟಿಯುಳ್ಳ ಆ ಮುನಿಯು ಆ ಬಾಲಕನ ಹಿಂದಿನ ಜನ್ಮ, ಕರ್ಮ ಇವುಗಳನ್ನು ಹೇಳಿದನು.

೫೭–೫೮. "ಬಾಲಕನ ತಂದೆಯು ವಿದರ್ಭರಾಜನು. ಅವನು ಯುದ್ಧದಲ್ಲಿ ಮಡಿದನು. ತಾಯಿಯನ್ನು ಮೊಸಳೆಯು ತಿಂದಿತು." ಎಂದು ಎಲ್ಲವನ್ನೂ ಸಂಪೂರ್ಣವಾಗಿ ತಿಳಿಸಿದನು. ತರುವಾಯ ಅವಳು ಆಶ್ಚರ್ಯಗೊಂಡು ತಿರುಗಿ ಆ ಮುನಿಯನ್ನು ಕುರಿತು, "ಆ ವಿದರ್ಭರಾಜನು ಸಮಸ್ತ ಭೋಗಗಳನ್ನು ತ್ಯಜಿಸಿ ಯುದ್ಧದಲ್ಲಿ ಹೇಗೆ ಮಡಿದನು?

೫೯–೬೦. ಈ ಬಾಲಕನು ಹೇಗೆ ಬಡವನಾದನು? ಇವನು ದಾರಿದ್ರ್ಯವನ್ನು ಹೋಗಲಾಡಿಸಿಕೊಂಡು ಹೇಗೆ ರಾಜ್ಯವನ್ನು ಪಡೆಯುವನು? ಭಿಕ್ಷಾನ್ನದಿಂದ ಜೀವಿಸುತ್ತಿರುವ ನನ್ನ ಮಗನ ದಾರಿದ್ರ್ಯವು ಹೋಗಲು ಉಪಾಯವಾವುದು? ಅದನ್ನೆಲ್ಲ ನನಗೆ ತಿಳಿಸು" ಎಂದು ಕೇಳಿಕೊಂಡಳು.

CC-0. Jangamwadi Math Collection. Digitized by eGangotri

ಶಾಂಡಿಲ್ಯ ಉವಾಚ :—

ಅಮುಷ್ಯ ಬಾಲಸ್ಯ ಪಿತಾ ಸ ವಿದರ್ಭಮಹೀಪತಿಃ ।
ಪೂರ್ವಜನ್ಮನಿ ಪಾಂಡ್ಯೇಶೋ ಬಭೂವ ನೃಪಸತ್ತಮಃ ॥ ೬೧ ॥
ಸ ರಾಜಾ ಸರ್ವಧರ್ಮಜ್ಞಃ ಪಾಲಯನ್ಸಕಲಾಂ ಮಹೀಂ ।
ಪ್ರದೋಷಸಮಯೇ ಶಂಭುಂ ಕದಾಚಿತ್ಪ್ರತ್ಯಪೂಜಯತ್ ॥ ೬೨ ॥
ತಸ್ಯ ಪೂಜಯತೋ ಭಕ್ತ್ಯಾ ದೇವಂ ತ್ರಿಭುವನೇಶ್ವರಂ ।
ಆಸೀತ್ಕಲಕಲಾರಾವಃ ಸರ್ವತ್ರ ನಗರೇ ಮಹಾನ್ ॥ ೬೩ ॥
ಶ್ರುತ್ವಾ ತಮುತ್ಕಟಂ ಶಬ್ದಂ ರಾಜಾ ತ್ಯಕ್ತಶಿವಾರ್ಚನಃ ।
ನಿರ್ಯಯೌ ರಾಜಭವನಾನ್ನಗರಕ್ಷೋಭಶಂಕಯಾ ॥ ೬೪ ॥
ಏತಸ್ಮಿನ್ನೇವ ಸಮಯೇ ತಸ್ಯಾಽಮಾತ್ಯೋ ಮಹಾಬಲಃ ।
ಶತ್ರುಂ ಗೃಹೀತ್ವಾ ಸಾಮಂತಂ ರಾಜಾಂತಿಕಮುಪಾಗಮತ್ ॥ ೬೫ ॥
ಅಮಾತ್ಯೇನ ಸಮಾನೀತಂ ಶತ್ರುಂ ಸಾಮಂತಮುದ್ಧತಂ ।
ದೃಷ್ಟ್ವಾ ಕ್ರೋಧೇನ ನೃಪತಿಃ ಶಿರಚ್ಛೇದಮಕಾರಯತ್ ॥ ೬೬ ॥
ಸ ತಥೈವ ಮಹೀಪಾಲೋ ವಿಸೃಜ್ಯ ಶಿವಪೂಜನಂ ।
ಅಸಮಾಪ್ತಾತ್ಮನಿಯಮಶ್ಚಕಾರ ನಿಶಿ ಭೋಜನಂ ॥ ೬೭ ॥
ತತ್ಪುತ್ರೋಽಪಿ ತಥಾ ಚಕ್ರೇ ಪ್ರದೋಷಸಮಯೇ ಶಿವಂ ।
ಅನರ್ಚಯಿತ್ವಾ ಮೂಢಾತ್ಮಾ ಭುಕ್ತ್ವಾ ಸುಷ್ವಾಪ ದುರ್ಮದಃ ॥ ೬೮ ॥

---

೬೧. ಶಾಂಡಿಲ್ಯನು ಹೇಳುತ್ತಾನೆ:—ಇವನ ತಂದೆಯಾದ ವಿದರ್ಭ ರಾಜನು ಹಿಂದಿನ ಜನ್ಮದಲ್ಲಿ ಪಾಂಡ್ಯ ರಾಜನಾಗಿದ್ದನು.

೬೨. ಸಕಲ ಧರ್ಮವನ್ನರಿತ ಅವನು ಸಮಸ್ತ ಭೂಮಿಯನ್ನೂ ಪಾಲಿಸುತ್ತ ಒಂದಾನೊಂದುದಿನ ಪ್ರದೋಷಕಾಲದಲ್ಲಿ ಶಂಕರನನ್ನು ಪೂಜಿಸಿದನು.

೬೩. ಮಹೇಶ್ವರನನ್ನು ಭಕ್ತಿಯಿಂದ ಪೂಜಿಸುತ್ತಿರುವಾಗ ಪಟ್ಟಣದ ಎಲ್ಲ ಕಡೆಯಲ್ಲಿಯೂ ಗದ್ದಲವುಂಟಾಯಿತು.

೬೪. ರಾಜನು ಆ ಭಯಂಕರ ಶಬ್ದವನ್ನು ಕೇಳಿ ಶಿವಾರ್ಚನೆಯನ್ನು ತ್ಯಜಿಸಿ ಪಟ್ಟಣವು ಸೂರೆಯಾಗುತ್ತಿರುವುದೆಂದು ಶಂಕಿಸಿ ಅರಮನೆಯಿಂದ ಹೊರಟನು.

೬೫. ಈ ಸಮಯದಲ್ಲಿ ಅತಿ ಬಲಶಾಲಿಯಾದ ಅವನ ಮಂತ್ರಿಯು ಶತ್ರುವಾದ ಆ ಸಾಮಂತರಾಜನನ್ನು ಸೆರೆಹಿಡಿದು ರಾಜನ ಬಳಿಗೆ ಕರೆತಂದನು.

೬೬–೬೭. ಮಂತ್ರಿಯು ಹಿಡಿದುಕೊಂಡುಬಂದ ಉದ್ಧತನಾದ ಸಾಮಂತ ರಾಜನನ್ನು ದೊರೆಯು ಕಂಡು ಕೋಪದಿಂದ ಅವನ ತಲೆಯನ್ನು ಕತ್ತರಿಸಲಾಜ್ಞಾಪಿಸಿದನು. ಆ ರಾಜನು ಹಾಗೆಯೇ ಶಿವಪೂಜೆಯನ್ನು ಬಿಟ್ಟು ತನ್ನ ವ್ರತವನ್ನು ಮುಗಿಸದೆ ರಾತ್ರಿ ಭುಜಿಸಿದನು.

೬೮. ಮತ್ತನೂ, ಮೂಢನೂ ಆದ ಅವನ ಮಗನೂ ಪ್ರದೋಷಸಮಯದಲ್ಲಿ ತಂದೆಯಂತೆಯೇ ಶಿವನನ್ನರ್ಚಿಸದೆ ಭೋಜನಮಾಡಿ ನಿದ್ರಿಸಿದನು.

CC-0. Jangamwadi Math Collection. Digitized by eGangotri

ಜನ್ಮಾಂತರೇ ಸ ನೃಪತಿರ್ವಿದರ್ಭಕ್ಷ್ಮಿತಿಪೋಽಭವತ್ ।
ಶಿವಾರ್ಚನಾಂತರಾಯೇಣ ಪರೈರ್ಭೋಗಾಂತರೇ ಹತಃ ॥ ೧೯ ॥
ತತ್ಪುತ್ರೋ ಯಃ ಪೂರ್ವಭವೇ ಸೋಽಸ್ಮಿನ್ ಜನ್ಮನಿ ತತ್ಸುತಃ ।
ಭೂತ್ವಾ ದಾರಿದ್ರ್ಯಮಾಪನ್ನಃ ಶಿವಪೂಜಾವ್ಯತಿಕ್ರಮಾತ್ ॥ ೨೦ ॥
ಅಸ್ಯ ಮಾತಾ ಪೂರ್ವಭವೇ ಸಪತ್ನೀಂ ಛದ್ಮನಾಽಹನತ್ ।
ತೇನ ಪಾಪೇನ ಮಹತಾ ಗ್ರಾಹೇಣಾಽಸ್ಮಿನ್ಭವೇ ಹತಾ ॥ ೨೧ ॥
ಏಷಾ ಪವೃತ್ತಿರೇತೇಷಾಂ ಭವತ್ಯೈ ಸಮುದಾಹೃತಾ ।
ಅನರ್ಚಿತಶಿವಾ ಮರ್ತ್ಯಾಃ ಪ್ರಾಪ್ನುವಂತಿ ದರಿದ್ರತಾಂ ॥ ೨೨ ॥

ಸತ್ಯಂ ಬ್ರವೀಮಿ ಪರಲೋಕಹಿತಂ ಬ್ರವೀಮಿ
ಸಾರಂ ಬ್ರವೀಮ್ಯುಪನಿಷದ್ಧೃದಯಂ ಬ್ರವೀಮಿ ।
ಸಂಸಾರಮುಲ್ಬಣಮಸಾರಮವಾಪ್ಯ ಜಂತೋಃ
ಸಾರೋಽಯಮೀಶ್ವರಪದಾಂಬುರುಹಸ್ಯ ಸೇವಾ ॥ ೨೩ ॥
ಯೇ ನಾರ್ಚಯಂತಿ ಗಿರಿಶಂ ಸಮಯೇ ಪ್ರದೋಷೇ
ಯೇ ನಾರ್ಚಿತಂ ಶಿವಮಪಿ ಪ್ರಣಮಂತಿ ಚಾಽನ್ಯೇ ।
ಏತತ್ಕಥಾ ಶ್ರುತಿಪುಟೈರ್ನಪಿಬಂತಿ ಮೂಢಾ
ಸ್ತೇ ಜನ್ಮಜನ್ಮಸು ಭವಂತಿ ನರಾ ದರಿದ್ರಾಃ ॥ ೨೪ ॥

---

೧೯. ಆ ರಾಜನು ಅದರ ಮುಂದಿನ ಜನ್ಮದಲ್ಲಿ ವಿದರ್ಭರಾಜನಾಗಿ ಶಿವಾರ್ಚನೆಯನ್ನು ಮುಗಿಸದ ಪಾಪದಿಂದ ಶತ್ರುಗಳಿಂದ ಹತನಾದನು.

೨೦. ಹಿಂದಿನ ಜನ್ಮದ ಮಗನೇ ಈ ಜನ್ಮದಲ್ಲಿಯೂ ಮಗನಾಗಿ ಶಿವಪೂಜೆಯನ್ನು ಮಾಡದಿರುವ ತಪ್ಪಿನಿಂದ ಬಡವನಾದನು.

೨೧. ಇವನ ತಾಯಿಯು ಹಿಂದಿನ ಜನ್ಮದಲ್ಲಿ ಸವತಿಯನ್ನು ಕಪಟದಿಂದ ಕೊಂದಿರುವುದರಿಂದ ಆ ಮಹಾಪಾತಕದಿಂದ ಈ ಜನ್ಮದಲ್ಲಿ ಮೊಸಳೆಯಿಂದ ಮಡಿದಳು.

೨೨. ಇವರ ವೃತ್ತಾಂತವನ್ನು ನಿನಗೆ ಹೇಳಿದೆನು. ಲೋಕದಲ್ಲಿ ಶಿವನನ್ನಾರಾಧಿಸದವರು ಬಡವರಾಗುವರು.

೨೩. ಸತ್ಯವನ್ನು ಹೇಳುವೆನು. ಆಮುಷ್ಮಿಕ ಹಿತಕ್ಕೆ ಸಾಧನವನ್ನು ಹೇಳುವೆನು. ವೇದಸಾರವನ್ನು ತಿಳಿಸುವೆನು. ಉಪನಿಷತ್ತುಗಳ ಅಭಿಪ್ರಾಯವನ್ನು ಹೇಳುವೆನು. ಘೋರವೂ ನಿಸ್ಸಾರವೂ ಆದ ಸಂಸಾರದಲ್ಲಿ ಬಿದ್ದಿರುವ ಜೀವನಿಗೆ ಮಹೇಶ್ವರನ ಪಾದಕಮಲಗಳ ಸೇವೆಯೊಂದೇ ಪರಮಕರ್ತವ್ಯವು.

೨೪. ಯಾರು ಪ್ರದೋಷಕಾಲದಲ್ಲಿ ಶಿವನನ್ನು ಪೂಜಿಸುವುದಿಲ್ಲವೊ, ಪೂಜಿತನಾದ ಶಿವನಿಗೆ ನಮಸ್ಕರಿಸುವುದಿಲ್ಲವೊ, ಯಾವ ಮೂಢರು ಶಿವಕಥೆ

CC-0. Jangamwadi Math Collection. Digitized by eGangotri

ಯೇ ವೈ ಪ್ರದೋಷಸಮಯೇ ಪರಮೇಶ್ವರಸ್ಯ
ಕುರ್ವಂತ್ಯನನ್ಯಮನಸೋಽಂಘ್ರಿ ಸರೋಜಪೂಜಾಂ ।
ನಿತ್ಯಂ ಪ್ರವೃದ್ಧಧನಧಾನ್ಯಕಲತ್ರಪುತ್ರ
ಸೌಭಾಗ್ಯಸಂಪದಧಿಕಾಸ್ತ ಇಹೈವ ಲೋಕೇ ॥ ೭೫ ॥
ಕೈಲಾಸಶೈಲಭವನೇ ತ್ರಿಜಗಜ್ಜನಿತ್ರೀಂ
ಗೌರೀಂ ನಿವೇಶ್ಯ ಕನಕಾಂಚಿತರತ್ನಪೀಠೇ ।
ನೃತ್ಯಂ ವಿಧಾತುಮಭಿವಾಂಛತಿ ಶೂಲಪಾಣೌ
ದೇವಾಃ ಪ್ರದೋಷಸಮಯೇಽನು ಭಜಂತಿ ಸರ್ವೇ ॥೭೬॥
ವಾಗ್ದೇವೀ ಧೃತವಲ್ಲಕೀ ಶತಮಖೋ ವೇಣುಂ ದಧತ್ಪದ್ಮಜ
ಸ್ತಾಲೋನ್ನಿದ್ರಕರೋ ರಮಾ ಭಗವತೀ ಗೇಯಪ್ರಯೋಗಾನ್ವಿತಾ ।
ವಿಷ್ಣುಃ ಸಾಂದ್ರಮೃದಂಗವಾದನಪಟುರ್ದೇವಾಃ ಸಮಂತಾತ್ಸ್ಥಿತಾಃ
ಸೇವಂತೇ ತಮನು ಪ್ರದೋಷಸಮಯೇ ದೇವಂ ಮೃಡಾನೀಪತಿಂ॥೭೭॥
ಗಂಧರ್ವಯಕ್ಷಪತಗೋರಗಸಿದ್ಧಸಾಧ್ಯಾ
ವಿದ್ಯಾಧರಾಮರವರಾಪ್ಸರಸಾಂ ಗಣಾಶ್ಚ ।
ಯೇಽನ್ಯೇ ತ್ರಿಲೋಕನಿಲಯಾಃ ಸಹಭೂತವರ್ಗಾಃ
ಪ್ರಾಪ್ತೇ ಪ್ರದೋಷಸಮಯೇ ಹರಪಾರ್ಶ್ವಸಂಸ್ಥಾಃ॥ ೭೮ ॥

---

ಗಳನ್ನು ಕಿವಿಗಳಲ್ಲಿ ಕೇಳುವುದಿಲ್ಲವೋ, ಅವರು ಜನ್ಮಜನ್ಮಾಂತರಗಳಲ್ಲಿಯೂ ದರಿದ್ರರಾಗಿಯೇ ಹುಟ್ಟುತ್ತಿರುವರು.

೭೫. ಯಾರು ತದೇಕಮನಸ್ಕರಾಗಿ ಪ್ರದೋಷ ಕಾಲದಲ್ಲಿ ಪರಮೇಶ್ವರನ ಪಾದಕಮಲಗಳ ಪೂಜೆಯನ್ನು ಮಾಡುವರೊ, ಅವರು ದಿನದಿನಕೂ ಅಭಿವೃದ್ಧಿಯನ್ನು ಪಡೆಯುತ್ತಿರುವ ಧನ, ಧಾನ್ಯ, ಪತ್ನಿ, ಪುತ್ರ, ಸೌಭಾಗ್ಯ, ಐಶ್ವರ್ಯಗಳಿಂದ ಕೂಡಿ ಲೋಕದಲ್ಲಿ ಸುಖಿಸುವರು.

೭೬. ಪ್ರದೋಷಕಾಲದಲ್ಲಿ ಮಹೇಶ್ವರನು ಕೈಲಾಸಶೈಲಭವನದಲ್ಲಿ ರತ್ನಗಳು ಕೆತ್ತಿದ ಚಿನ್ನದ ಪೀಠದ ಮೇಲೆ ತ್ರೈಲೋಕ್ಯಮಾತೆಯಾದ ಗೌರೀದೇವಿಯನ್ನು ಕುಳ್ಳಿರಿಸಿ ಕುಣಿಯಲಪೇಕ್ಷಿಸಲು ಸಕಲದೇವತೆಗಳೂ ಅವನನ್ನು ಸೇವಿಸುತ್ತಾರೆ.

೭೭. ಪ್ರದೋಷ ಸಮಯದಲ್ಲಿ ಮಹೇಶ್ವರನನ್ನು ಸರಸ್ವತಿಯು ವೀಣೆಯನ್ನು ನುಡಿಸುತ್ತಲೂ, ದೇವೇಂದ್ರನು ಕೊಳಲನ್ನೂದುತ್ತಲೂ, ಬ್ರಹ್ಮನು ತಾಳವನ್ನು ಹಾಕುತ್ತಲೂ, ಲಕ್ಷ್ಮಿಯು ಗಾನಮಾಡುತ್ತಲೂ, ವಿಷ್ಣುವು ಮೃದಂಗವನ್ನು ಬಾರಿಸುತ್ತಲೂ ಸೇವಿಸುತ್ತಾರೆ.

೭೮. ಪ್ರದೋಷಕಾಲದಲ್ಲಿ ಗಂಧರ್ವರು, ಯಕ್ಷರು, ಪಕ್ಷಿಗಳು,

CC-0. Jangamwadi Math Collection. Digitized by eGangotri

ಅತಃ ಪ್ರದೋಷೇ ಶಿವ ಏಕ ಏವ
ಪೂಜ್ಯೋಽಥ ನಾಽನ್ಯೇ ಹರಿಪದ್ಮಜಾದ್ಯಾಃ ।
ತಸ್ಮಿನ್ಮಹೇಶೇ ವಿಧಿನೇಜ್ಯಮಾನೇ
ಸರ್ವೇ ಪ್ರಸೀದಂತಿ ಸುರಾಽಧಿನಾಥಾಃ ॥ ೭೯ ॥
ಏಷ ತೇ ತನಯಃ ಪೂರ್ವಜನ್ಮನಿ ಬ್ರಾಹ್ಮಣೋತ್ತಮಃ ।
ಪ್ರತಿಗ್ರಹೈರ್ವಯೋ ನಿನ್ಯೇ ನ ಯಜ್ಞಾದ್ಯೈಃ ಸುಕರ್ಮಭಿಃ ॥ ೮೦ ॥
ಅತೋ ದಾರಿದ್ರ್ಯಮಾಪನ್ನಃ ಪುತ್ರಸ್ತೇ ದ್ವಿಜಭಾಮಿನಿ ।
ತದ್ದೋಷಪರಿಹಾರಾರ್ಥಂ ಶರಣಂ ಯಾತು ಶಂಕರಂ ॥ ೮೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಪ್ರದೋಷಮಾಹಾತ್ಮ್ಯ ವರ್ಣನಂ"ನಾಮ ಷಷ್ಠೋಽಧ್ಯಾಯಃ

---

ನಾಗಗಳು, ಸಿದ್ಧರು, ಸಾಧ್ಯರು, ವಿದ್ಯಾಧರರು, ದೇವೋತ್ತಮರು, ಅಪ್ಸರರು, ಮೂರುಲೋಕದ ಇತರ ಪ್ರಾಣಿಗಳು ಇವರೆಲ್ಲರೂ ಶಿವನ ಪಾರ್ಶ್ವದಲ್ಲಿರುವರು.

೭೯. ಆದುದರಿಂದ ಪ್ರದೋಷಕಾಲದಲ್ಲಿ ಶಿವನೊಬ್ಬನನ್ನೇ ಪೂಜಿಸಬೇಕು. ವಿಷ್ಣು, ಬ್ರಹ್ಮರೇ ಮೊದಲಾದ ದಿವಿಜರನ್ನು ಪೂಜಿಸಕೂಡದು. ಆ ಶಿವನನ್ನು ಶಾಸ್ತ್ರಕ್ರಮದಿಂದ ಪೂಜಿಸಿದರೆ ಸಕಲ ದೇವತೆಗಳೂ ಸಂತುಷ್ಟರಾಗುತ್ತಾರೆ.

೮೦. ಈ ನಿನ್ನ ಮಗನು ಹಿಂದಿನ ಜನ್ಮದಲ್ಲಿ ಬ್ರಾಹ್ಮಣಶ್ರೇಷ್ಠನಾಗಿ ದಾನ ಗಳನ್ನು ಸ್ವೀಕರಿಸುತ್ತ ವಯಸ್ಸನ್ನು ಕಳೆದನು. ಯಜ್ಞಾದಿ ಸತ್ಕರ್ಮಗಳನ್ನಾ ಚರಿಸಲಿಲ್ಲ.

೮೧. ಆದರಿಂದ ನಿನ್ನ ಮಗನೂ ಬಡವನಾಗಿದ್ದಾನೆ. ಆ ದೋಷವನ್ನು ಹೋಗಲಾಡಿಸಲೋಸುಗ ಶಂಕರನನ್ನು ಮರೆಹೋಗಲಿ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಪ್ರದೋಷಮಾಹಾತ್ಮ್ಯವರ್ಣನ"ವೆಂಬ ಆರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ಪ್ರದೋಷಮಹಿಮಾನುವರ್ಣನಂ

ಸೂತ ಉವಾಚ :—

ಇತ್ಯುಕ್ತ್ವಾ ಮುನಿನಾ ಸಾಧ್ವೀ ಸಾ ವಿಪ್ರವನಿತಾ ಪುನಃ ।
ತಂ ಪ್ರಣಮ್ಯಾಽಥ ಪಪ್ರಚ್ಛ ಶಿವಪೂಜಾವಿಧೇಃ ಕ್ರಮಂ ॥ ೧ ॥

ಶಾಂಡಿಲ್ಯ ಉವಾಚ :—

ಪಕ್ಷದ್ವಯೇ ತ್ರಯೋದಶ್ಯಾಂ ನಿರಾಹಾರೋ ಭವೇದ್ಯದಾ ।
ಘಟೀತ್ರಯಾದಸ್ತಮಯಾತ್ಪೂರ್ವಂ ಸ್ನಾನಂ ಸಮಾಚರೇತ್ ॥ ೨ ॥
ಶುಕ್ಲಾಂಬರಧರೋ ಧೀರೋ ವಾಗ್ಯತೋ ನಿಯಮಾನ್ವಿತಃ ।
ಕೃತಸಂಧ್ಯಾಜಪವಿಧಿಃ ಶಿವಪೂಜಾಂ ಸಮಾರಭೇತ್ ॥ ೩ ॥
ದೇವಸ್ಯ ಪುರತಃ ಸಮ್ಯಗುಪಲಿಪ್ಯ ನವಾಂಭಸಾ ।
ವಿಧಾಯ ಮಂಡಲಂ ರಮ್ಯಂ ಧೌತವಸ್ತ್ರಾದಿಭಿರ್ಬುಧಃ ॥ ೪ ॥
ವಿತಾನಾದ್ಯೈರಲಂಕೃತ್ಯ ಫಲಪುಷ್ಪನವಾಂಕುರೈಃ ।
ವಿಚಿತ್ರಪದ್ಮಮುದ್ಧೃತ್ಯ ವರ್ಣಪಂಚಕಸಂಯುತಂ ॥ ೫ ॥
ತತ್ರೋಪವಿಶ್ಯ ಸುಶುಭೇ ಭಕ್ತಿಯುಕ್ತಃ ಸ್ಥಿರಾಸನೇ ।
ಸಮ್ಯಕ್ಸಂಪಾದಿತಾಽಶೇಷಪೂಜೋಪಕರಣಃ ಶುಚಿಃ ॥ ೬ ॥

---

### ಕನ್ನಡದ ಅನುವಾದ

#### ಪ್ರದೋಷಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ:—ಶಾಂಡಿಲ್ಯನು ಹೀಗೆನ್ನಲು ಪತಿವ್ರತೆಯಾದ ಆ ವಿಪ್ರಾಂಗನೆಯು ಅವನನ್ನು ವಂದಿಸಿ ಶಿವಪೂಜೆಯ ಕ್ರಮವನ್ನು ಕೇಳಿದಳು.

೨. ಶಾಂಡಿಲ್ಯನು ಹೇಳುತ್ತಾನೆ:—ಮಾನವನು ಶುಕ್ಲ ಕೃಷ್ಣಪಕ್ಷಗಳ ತ್ರಯೋದಶಿಯ ದಿನ ಉಪವಾಸಮಾಡಿ ಸೂರ್ಯಾಸ್ತಮಯಕ್ಕಿಂತ ಮೂರು ಘಳಿಗೆಗಳ ಮುಂಚೆ ಸ್ನಾನಮಾಡಬೇಕು.

೩. ಬಿಳಿ ಬಟ್ಟೆಯನ್ನುಟ್ಟು ಮೌನವಾಗಿ ನಿಯಮದಿಂದ ಸಂಧ್ಯಾವಂದನೆ ಮಾಡಿ ಶಿವಪೂಜೆಯನ್ನಾರಂಭಿಸಬೇಕು.

೪–೯. ಶಿವನ ಮುಂದೆ ಹೊಸ ನೀರಿನಿಂದ ಚೆನ್ನಾಗಿ ಸಾರಿಸಿ ರಮ್ಯವಾದ ಮಂಡಲವನ್ನು ಮಾಡಿ ಒಗೆದ ಬಟ್ಟೆಗಳ ಮೇಲ್ಕಟ್ಟುಗಳಿಂದಲೂ ಫಲ, ಪುಷ್ಪ, ಚಿಗುರು ಇವುಗಳಿಂದಲೂ ಅಲಂಕರಿಸಿ ಐದು ಬಣ್ಣಗಳಿಂದೊಪ್ಪುವ ವಿಚಿತ್ರಪದ್ಮವನ್ನು ರಚಿಸಿ ಅಲ್ಲಿ ಶುಭವಾದ ಸ್ಥಿರಾಸನದಲ್ಲಿ ಭಕ್ತಿಯಿಂದ ಕುಳಿತು ಸಮಸ್ತ

CC-0. Jangamwadi Math Collection. Digitized by eGangotri

ಆಗಮೋಕ್ತೇನ ಮಂತ್ರೇಣ ಪೀಠಮಾಮಂತ್ರಯೇತ್ಸುಧೀಃ ।
ತತಃ ಕೃತ್ವಾತ್ಮಶುದ್ಧಿಂ ಚ ಭೂತಶುದ್ಧ್ಯಾದಿಕಂ ಕ್ರಮಾತ್ ॥ ೭ ॥
ಪ್ರಾಣಾಯಾಮತ್ರಯಂ ಕೃತ್ವಾ ಬೀಜವರ್ಣೈಃ ಸಬಿಂದುಕೈಃ ।
ಮಾತೃಕಾನ್ಯಸ್ಯ ವಿಧಿವದ್ಧ್ಯಾತ್ವಾ ತಾಂ ದೇವತಾಂ ಪರಾಂ ॥ ೮ ॥
ಸಮಾಪ್ಯ ಮಾತೃಕಾ ಭೂಯೋ ಧ್ಯಾತ್ವಾ ಚೈವ ಪರಂ ಶಿವಂ ।
ವಾಮಭಾಗೇ ಗುರುಂ ನತ್ವಾ ದಕ್ಷಿಣೇ ಗಣಪಂ ನಮೇತ್ ॥ ೯ ॥
ಅಂಸೋರುಯುಗ್ಮೇ ಧರ್ಮಾದೀನ್ನ್ಯಸ್ಯ ನಾಭೌ ಚ ಪಾರ್ಶ್ವಯೋಃ ।
ಅಧರ್ಮಾದೀನನಂತಾದೀನ್ಹೃದಿ ಪೀಠೇ ಮನುಂ ನ್ಯಸೇತ್ ॥ ೧೦ ॥
ಆಧಾರಶಕ್ತಿಮಾರಭ್ಯ ಜ್ಞಾನಾತ್ಮಾನಮನುಕ್ರಮಾತ್ ।
ಉಕ್ತಕ್ರಮೇಣ ವಿನ್ಯಸ್ಯ ಹೃತ್ಪದ್ಮೇ ಸಾಧುಭಾವಿತೇ ॥ ೧೧ ॥
ನವಶಕ್ತಿಮಯೇ ರಮ್ಯೇ ಧ್ಯಾಯೇದ್ದೇವಮುಮಾಪತಿಂ ।
ಚಂದ್ರಕೋಟಿಪ್ರತೀಕಾಶಂ ತ್ರಿನೇತ್ರಂ ಚಂದ್ರಶೇಖರಂ ॥ ೧೨ ॥
ಆಪಿಂಗಲಜಟಾಜೂಟಂ ರತ್ನಮೌಲಿವಿರಾಜಿತಂ ।
ನೀಲಗ್ರೀವಮುದಾರಾಂಗಂ ನಾಗಹಾರೋಪಶೋಭಿತಂ ॥ ೧೩ ॥

---

ಪೂಜಾಸಾಮಗ್ರಿಗಳನ್ನು ಸಿದ್ಧಮಾಡಿಕೊಂಡು ಆಗಮೋಕ್ತಮಂತ್ರದಿಂದ ಪೀಠಪೂಜೆಮಾಡಬೇಕು. ತರುವಾಯ ಆತ್ಮಶುದ್ಧಿಯನ್ನೂ ಭೂತಶುದ್ಧಿಯನ್ನೂ ಕ್ರಮದಿಂದ ಮಾಡಿ ಬಿಂದುಸಹಿತವಾದ ಬೀಜವರ್ಣಗಳಿಂದ ಮೂರು ಪ್ರಾಣಾಯಾಮಗೈದು ಮಾತೃಕಾನ್ಯಾಸಪೂರ್ವಕವಾಗಿ ಆ ದೇವತೆಯನ್ನು ಧ್ಯಾನಿಸಿ ಮಾತೃಕಾಧ್ಯಾನವನ್ನು ಮುಗಿಸಿ ಪರಮೇಶ್ವರನನ್ನು ಧ್ಯಾನಮಾಡಿ ಎಡಭಾಗದಲ್ಲಿ ಗುರುವನ್ನೂ, ಬಲಭಾಗದಲ್ಲಿ ಗಣನಾಥನನ್ನೂ ವಂದಿಸಬೇಕು.

೧೦. ಹೆಗಲು ತೊಡೆಗಳಲ್ಲಿ ಧರ್ಮಾದಿಗಳನ್ನೂ, ನಾಭಿಯಲ್ಲಿಯೂ ಪಾರ್ಶ್ವಗಳಲ್ಲಿಯೂ ಅಧರ್ಮಾದಿಗಳನ್ನೂ, ಹೃದಯದಲ್ಲಿ ಅನಂತಾದಿಗಳನ್ನೂ, ಪೀಠದಲ್ಲಿ ಮನುವನ್ನೂ ವಿನ್ಯಾಸಮಾಡಬೇಕು.

೧೧–೨೧. ಆಧಾರಶಕ್ತಿಯಿಂದಾರಂಭಿಸಿ ಜ್ಞಾನಾತ್ಮನನ್ನು ಕ್ರಮವಾಗಿ ನವಶಕ್ತಿಮಯವಾದ ಹೃತ್ಕಮಲದಲ್ಲಿ ವಿನ್ಯಾಸಮಾಡಿ ಕೋಟಿ ಚಂದ್ರರಂತಿರುವವನೂ, ಮುಕ್ಕಣ್ಣನೂ, ಚಂದ್ರಮೌಳಿಯೂ, ಸ್ವಲ್ಪಹಳದಿಯಾದ ಜಟೆಯುಳ್ಳವನೂ, ರತ್ನಕಿರೀಟದಿಂದ ವಿರಾಜಿತನೂ, ನೀಲಕಂಠನೂ, ಉತ್ಕೃಷ್ಟಾವಯವಗಳುಳ್ಳವನೂ, ನಾಗಹಾರದಿಂದ ಭೂಷಿತನೂ, ವರದಾಭಯಹಸ್ತಗಳುಳ್ಳವನೂ, ಪರಶುಧಾರಿಯೂ, ನಾಗವಲಯನೂ, ಕೇಯೂರಧಾರಿಯೂ ವ್ಯಾಘ್ರಚರ್ಮವನ್ನು ತೊಟ್ಟವನೂ, ರತ್ನಸಿಂಹಾಸನದಲ್ಲಿ ಕುಳಿತವನೂ ಆಗಿರುವ ಮಹೇಶ್ವರನನ್ನು ಧ್ಯಾನಿಸಿ ಅವನ ಎಡಭಾಗದಲ್ಲಿ ಹೊಳೆಯುವ ದಾಸವಾಳ

CC-0. Jangamwadi Math Collection. Digitized by eGangotri

ವರದಾಭಯಹಸ್ತಂ ಚ ಧಾರಿಣಂ ಚ ಪರಶ್ವಥಂ ।
ದಧಾನಂ ನಾಗವಲಯಕೇಯೂರಾಂಗದಮುದ್ರಿಕಂ ॥ ೧೪ ॥
ವ್ಯಾಘ್ರಚರ್ಮಪರೀಧಾನಂ ರತ್ನಸಿಂಹಾಸನೇ ಸ್ಥಿತಂ ।
ಧ್ಯಾತ್ವಾ ತದ್ವಾಮಭಾಗೇ ಚ ಚಿಂತಯೇದ್ಗಿರಿಕನ್ಯಕಾಂ ॥ ೧೫ ॥
ಭಾಸ್ವಜ್ಜಪಾಪ್ರಸೂನಾಭಾಮುದಯಾರ್ಕಸಮಪ್ರಭಾಂ ।
ವಿದ್ಯುತ್ಪುಂಜನಿಭಾಂ ತನ್ವೀಂ ಮನೋನಯನನಂದಿನೀಂ ॥ ೧೬ ॥
ಬಾಲೇಂದುಶೇಖರಾಂ ಸ್ನಿಗ್ಧಾಂ ನೀಲಕುಂಚಿತಕುಂತಲಾಂ ।
ಭೃಂಗಸಂಘಾತರುಚಿರಾಂ ನೀಲಾಽಲಕವಿರಾಜಿತಾಂ ॥ ೧೭ ॥
ಮಣಿಕುಂಡಲವಿದ್ಯೋತನ್ಮುಖಮಂಡಲವಿಭ್ರಮಾಂ ।
ನವಕುಂಕುಮಪಂಕಾಂಕಕಪೋಲದಲದರ್ಪಣಾಂ ॥ ೧೮ ॥
ಮಧುರಸ್ಮಿತಬಿಭ್ರಾಜದರುಣಾಽಧರಪಲ್ಲವಾಂ ।
ಕಂಬುಕಂಠೀಂ ಶಿವಾಮುದ್ವತ್ಪುಕಚಪಂಕಜಕುಟ್ಮಲಾಂ ॥ ೧೯ ॥
ಪಾಶಾಂಽಕುಶಾಽಭಯಾಽಭೀಷ್ಟವಿಲಸತ್ಸುಚತುರ್ಭುಜಾಂ ।
ಅನೇಕರತ್ನವಿಲಸತ್ಕಂಕಣಾಂಕಿತಮುದ್ರಿಕಾಂ ॥ ೨೦ ॥
ವಲಿತ್ರಯೇಣ ವಿಲಸದ್ಧೇಮಕಾಂಚೀಗುಣಾನ್ವಿತಾಂ ।
ರಕ್ತಮಾಲ್ಯಾಂಬರಧರಾಂ ದಿವ್ಯಚಂದನಚರ್ಚಿತಾಂ ॥ ೨೧ ॥

---

ಹೂವಿನಂತೆ ಕಾಂತಿಯುಳ್ಳವಳೂ, ಉದಯಿಸುತ್ತಿರುವ ಸೂರ್ಯನಂತೆ ತೇಜಸ್ಸುಳ್ಳವಳೂ, ಮಿಂಚಿನ ರಾಶಿಯಂತಿರುವವಳೂ, ಕೃಶಾಂಗಿಯೂ, ಮನಸ್ಸು, ಕಣ್ಣುಗಳನ್ನು ಸಂತೋಷಪಡಿಸುವವಳೂ, ಬಾಲಚಂದ್ರಶೇಖರಳೂ, ಕರಿ ಬಣ್ಣದ ಭ್ರಮರಸಮೂಹದಂತೆ ಮನೋಹರಗಳಾದ ಕುಂತಳಗಳುಳ್ಳವಳೂ, ರತ್ನದೋಲೆಗಳಿಂದ ಹೊಳೆಯುವ ಮುಖವಿಲಾಸವುಳ್ಳವಳೂ, ಕುಂಕುಮಾಂಕಿತವಾದ ಕಪೋಲವೆಂಬ ಕನ್ನಡಿಯುಳ್ಳವಳೂ, ಮನೋಹರವಾದ ಮಂದಹಾಸದಿಂದ ಹೊಳೆಯುವ ಕೆಂದುಟಿಯುಳ್ಳವಳೂ, ಶಂಖದಂತೆ ಕಂಠವುಳ್ಳವಳೂ, ಕಮಲದ ಮೊಗ್ಗಿನಂತಿರುವ ಕುಚಗಳುಳ್ಳವಳೂ, ಪಾಶ, ಅಂಕುಶ, ಅಭಯ ಅಭೀಷ್ಟ ಚಿಹ್ನೆಗಳು ಇವುಗಳನ್ನು ಧರಿಸಿದ ನಾಲ್ಕು ಭುಜಗಳುಳ್ಳವಳೂ, ಅನೇಕ ರತ್ನಗಳಿಂದ ಕೆತ್ತಿದ ಕಂಕಣ, ಉಂಗುರಗಳುಳ್ಳವಳೂ, ತ್ರಿವಳಿಯುಳ್ಳವಳೂ, ಸುವರ್ಣದ ಡಾಬುಳ್ಳವಳೂ, ಕೆಂಬಣ್ಣದ ಮಾಲೆ, ಬಟ್ಟೆಗಳನ್ನು ಧರಿಸಿದವಳೂ, ದಿವ್ಯಗಂಧಲಿಪ್ತಳೂ, ದಿಕ್ಪಾಲಕರ ಪತ್ನಿಯರಿಂದ ವಂದಿತವಾದ ಚರಣಕಮಲವುಳ್ಳವಳೂ, ರತ್ನಸಿಂಹಾಸನದಲ್ಲಿ ಕುಳಿತವಳೂ, ಸರ್ಪರಾಜನಿಂದ ಅಲಂಕೃತಳೂ ಆಗಿರುವ ಗಿರಿಜೆಯನ್ನೂ ಧ್ಯಾನಿಸಬೇಕು.

CC-0. Jangamwadi Math Collection. Digitized by eGangotri

ದಿಕ್ಪಾಲವನಿತಾಮೌಳಿಸನ್ನತಾಽಂಘ್ರಿಸರೋರುಹಾಂ ।
ರತ್ನಸಿಂಹಾಸನಾರೂಢಾಂ ಸರ್ಪರಾಜಪರಿಚ್ಛದಾಂ ॥ ೨೨ ॥
ಏವಂ ಧ್ಯಾತ್ವಾ ಮಹಾದೇವಂ ದೇವೀಂ ಚ ಗಿರಿಕನ್ಯಕಾಂ ।
ನ್ಯಾಸಕ್ರಮೇಣ ಸಂಪೂಜ್ಯ ದೇವಂ ಗಂಧಾದಿಭಿಃ ಕ್ರಮಾತ್ ॥ ೨೩ ॥
ಪಂಚಭಿರ್ಬ್ರಹ್ಮಭಿಃ ಕುರ್ಯಾತ್ಪ್ರೋಕ್ತಸ್ಥಾನೇಷು ವಾ ಹೃದಿ ।
ಪೃಥಕ್ಪುಷ್ಪಾಂಜಲಿಂ ದೇಹೇ ಮೂಲೇನ ಚ ಹೃದಿ ತ್ರಿಧಾ ॥ ೨೪ ॥
ಪುನಃ ಸ್ವಯಂ ಶಿವೋ ಭೂತ್ವಾ ಮೂಲಮಂತ್ರೇಣ ಸಾಧಕಃ ।
ತತಃ ಸಂಪೂಜಯೇದ್ದೇವಂ ಬಾಹ್ಯಪೀಠೇ ಪುನಃ ಕ್ರಮಾತ್ ॥ ೨೫ ॥
ಸಂಕಲ್ಪಂ ಪ್ರವದೇತ್ತತ್ರ ಪೂಜಾರಂಭೇ ಸಮಾಹಿತಃ ।
ಕೃತಾಂಜಲಿಪುಟೋ ಭೂತ್ವಾ ಚಿಂತಯೇದ್ಧೃದಿ ಶಂಕರಂ ॥ ೨೬ ॥
ಋಣಪಾತಕದೌರ್ಭಾಗ್ಯದಾರಿದ್ರ್ಯವಿನಿವೃತ್ತಯೇ ।
ಅಶೇಷಾಘವಿನಾಶಾಯ ಪ್ರಸೀದ ಮಮ ಶಂಕರ ॥ ೨೭ ॥
ದುಃಖಶೋಕಾಗ್ನಿಸಂತಪ್ತಂ ಸಂಸಾರಭಯಪೀಡಿತಂ ।
ಬಹುರೋಗಾಕುಲಂ ದೀನಂ ತ್ರಾಹಿ ಮಾಂ ವೃಷವಾಹನ ॥ ೨೮ ॥
ಆಗಚ್ಛ ದೇವದೇವೇಶ ಮಹಾದೇವಾಽಭಯಂಕರ ।
ಗೃಹಾಣ ಸಹ ಪಾರ್ವತ್ಯಾ ತವ ಪೂಜಾಂ ಮಯಾ ಕೃತಾಂ ॥ ೨೯ ॥

---

೨೨–೨೫. ಹೀಗೆ ಮಹಾದೇವನನ್ನೂ ಗಿರಿಜೆಯನ್ನೂ ನ್ಯಾಸಕ್ರಮದಿಂದ ಧ್ಯಾನಿಸಿ, ಗಂಧಾದಿಗಳಿಂದ ಪೂಜಿಸಿ, ಉಕ್ತಸ್ಥಾನಗಳಲ್ಲಾಗಲಿ, ಹೃದಯದಲ್ಲಾಗಲಿ ಪಂಚಮಂತ್ರಗಳಿಂದ ಪುಷ್ಪಾಂಜಲಿಯನ್ನು ಮಾಡಿ ದೇಹದಲ್ಲಿಯೂ, ಹೃದಯದಲ್ಲಿಯೂ ಮೂರಾವೃತ್ತಿ ಮೂಲಮಂತ್ರದಿಂದ ಪುಷ್ಪಾಂಜಲಿಗೈದು ಶಿವೈಕ್ಯವನ್ನು ಭಾವಿಸಿ ಬಾಹ್ಯಪೀಠದಲ್ಲಿ ಶಿವನನ್ನು ಮೂಲಮಂತ್ರದಿಂದ ಕ್ರಮವಾಗಿ ಪೂಜಿಸಬೇಕು.

೨೬. ಆ ಬಾಹ್ಯಪೂಜೆಯ ಆರಂಭದಲ್ಲಿ ಸಂಕಲ್ಪವನ್ನು ಹೇಳಬೇಕು. ಕೈ ಮುಗಿದುಕೊಂಡು ಹೃದಯದಲ್ಲಿ ಶಂಕರನನ್ನು ಧ್ಯಾನಿಸಬೇಕು.

೨೭. "ಶಂಕರ! ಪ್ರಸನ್ನನಾಗಿ ಋಣವೆಂಬ ಪಾಪ, ದುರದೃಷ್ಟ, ದಾರಿದ್ರ್ಯ, ಸಕಲಪಾಪಗಳ ಸಮೂಹ ಇವುಗಳನ್ನು ನಾಶಗೊಳಿಸು.

೨೮. ವೃಷಭವಾಹನನಾದ ಓ ಶಂಕರನೆ! ದುಃಖಾಗ್ನಿಸಂತಪ್ತನೂ, ಸಂಸಾರದ ಭಯದಿಂದ ಪೀಡಿತನೂ, ಅನೇಕ ರೋಗಗಳಿಂದ ವ್ಯಾಕುಲಗೊಂಡವನೂ, ದೀನನೂ ಆದ ನನ್ನನ್ನು ಕಾಪಾಡು.

೨೯. ಮಹಾದೇವ! ಅಭಯದಾತನಾದ ನೀನು ಪಾರ್ವತಿಯೊಡನೆ ನಾನು ಮಾಡಿದ ಪೂಜೆಯನ್ನು ಪರಿಗ್ರಹಿಸು."

CC-0. Jangamwadi Math Collection. Digitized by eGangotri

ಇತಿ ಸಂಕಲ್ಪ್ಯ ವಿಧಿವದ್ಬಾಹ್ಯಪೂಜಾಂ ಸಮಾಚರೇತ್ ।
ಗುರುಂ ಗಣಪತಿಂ ಚೈವ ಯಜೇತ್ಸವ್ಯಾಪಸವ್ಯಯೋಃ ॥ ೩೦ ॥
ಕ್ಷೇತ್ರೇಶಮೀಶಕೋಣೇ ತು ಯಜೇದ್ವಾಸ್ತೋಷ್ಪತಿಂ ಕ್ರಮಾತ್ ।
ವಾಗ್ದೇವೀಂ ಚ ಯಜೇತ್ತತ್ರ ತತಃ ಕಾತ್ಯಾಯನೀಂ ಯಜೇತ್ ॥ ೩೧ ॥
ಧರ್ಮಂ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚ ನಮೋಂತಕೈಃ ।
ಸ್ವರೈರೀಶಾದಿಕೋಣೇಷು ಪೀಠಪಾದಾನನುಕ್ರಮಾತ್ ।
ಆಭ್ಯಾಂ ಬಿಂದುವಿಸರ್ಗಾಭ್ಯಾಮಧರ್ಮಾದೀನ್ಪ್ರಪೂಜಯೇತ್ ॥ ೩೨ ॥
ಸತ್ವರೂಪೈಶ್ಚತುರ್ದಿಕ್ಷು ಮಧ್ಯೇಽನಂತಂ ಸತಾರಕಂ ।
ಸತ್ವಾದೀಂಸ್ತ್ರಿಗುಣಾಂಸ್ತಂತುರೂಪಾನ್ಪೀಠೇಷು ವಿನ್ಯಸೇತ್ ॥ ೩೩ ॥
ಅತ ಊರ್ಧ್ವಚ್ಛದೇ ಮಾಯಾಂ ಸಹ ಲಕ್ಷ್ಮ್ಯಾ ಶಿವೇನ ಚ ॥ ೩೪ ॥
ತದಂತೇ ಚಾಂಬುಜಂ ಭೂಯಃ ಸಕಲಂ ಮಂಡಲತ್ರಯಂ ।
ಪತ್ರಕೇಸರಕಿಂಜಲ್ಕವ್ಯಾಪ್ತಂ ತಾರಾಕ್ಷರೈಃ ಕೃತಂ ॥ ೩೫ ॥
ಪದ್ಮತ್ರಯಂ ತಥಾಽಭ್ಯರ್ಚ್ಯ ಮಧ್ಯೇ ಮಂಡಲಮಾದರಾತ್ ।
ವಾಮಾಂ ಜ್ಯೇಷ್ಠಾಂ ಚ ರೌದ್ರೀಂ ಚ ಭಾಗಾದ್ಯೈರ್ದಿಕ್ಷು ಪೂಜಯೇತ್ ॥
ವಾಮಾದ್ಯಾ ನವಶಕ್ತೀಶ್ಚ ನವಸ್ವರಯುತಾ ಯಜೇತ್ ।
ಹೃದಿ ಬೀಜತ್ರಯಾದ್ಯೇನ ಪೀಠಮಂತ್ರೇಣ ಚಾಽರ್ಚಯೇತ್ ॥ ೩೬ ॥

---

೩೦. ಹೀಗೆ ಸಂಕಲ್ಪಮಾಡಿ ವಿಧಿಯಂತೆ ಬಾಹ್ಯಪೂಜೆಮಾಡಬೇಕು. ಎಡಬಲಗಡೆಗಳಲ್ಲಿ ಗುರು, ಗಣಪತಿಗಳನ್ನು ಆರಾಧಿಸಬೇಕು.

೩೧. ಈಶಾನ್ಯಮೂಲೆಯಲ್ಲಿ ಕ್ಷೇತ್ರಪಾಲಕನನ್ನೂ, ವಾಸ್ತೋಷ್ಪತಿಯನ್ನೂ, ವಾಗ್ದೇವಿಯನ್ನೂ, ಕಾತ್ಯಾಯನಿಯನ್ನೂ ಕ್ರಮವಾಗಿ ಪೂಜಿಸಬೇಕು.

೩೨. ಈಶಾನ್ಯಾದಿ ನಾಲ್ಕು ಮೂಲೆಗಳಲ್ಲಿ ಪೀಠಪಾದಗಳನ್ನು ಕ್ರಮವಾಗಿ ನಮಶ್ಶಬ್ದ ಶಿರಸ್ಕವಾದ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಪದಗಳಿಂದ ಪೂಜಿಸಿ ಬಿಂದುವಿಸರ್ಗಗಳಿಂದ ಕೂಡಿ ಅಧರ್ಮಾದಿಗಳನ್ನರ್ಚಿಸಬೇಕು.

೩೩. ಪೀಠಗಳಲ್ಲಿ ನಾಲ್ಕು ದಿಕ್ಕುಗಳಲ್ಲಿ ಸತ್ತ್ವರೂಪಗಳನ್ನೂ, ಮಧ್ಯದಲ್ಲಿ ತಾರಕಮಂತ್ರಸಹಿತನಾದ ಅನಂತನನ್ನೂ, ಸತ್ತ್ವಾದಿ ಗುಣತ್ರಯಗಳನ್ನೂ ವಿನ್ಯಾಸಮಾಡಬೇಕು.

೩೪–೩೬. ಮೇಲಿನ ದಳದಲ್ಲಿ ಲಕ್ಷ್ಮಿ, ಶಿವಸಹಿತಳಾದ ಮಾಯೆಯನ್ನೂ, ಅದರ ಕೊನೆಯಲ್ಲಿ ಪತ್ರ, ಕೇಸರ, ಕಿಂಜಲ್ಕಗಳುಳ್ಳ ಪದ್ಮತ್ರಯಗಳನ್ನೂ ತಾರಾಕ್ಷರಗಳಿಂದ ಪೂಜಿಸಿ ಮಂಡಲ ಮಧ್ಯದಲ್ಲಿ ವಾಮಾ, ಜ್ಯೇಷ್ಠಾ, ರೌದ್ರೀ ದೇವಿಯರನ್ನೂ, ದಿಕ್ಕುಗಳಲ್ಲಿ ನವಸ್ವರದಿಂದ ಕೂಡಿದ ವಾಮಾದಿ ನವಶಕ್ತಿಗಳನ್ನೂ ಅರ್ಚಿಸಿ ಹೃದಯದಲ್ಲಿ ಪೀಠಮಂತ್ರದಿಂದ ಪೂಜಿಸಬೇಕು.

CC-0. Jangamwadi Math Collection. Digitized by eGangotri

ಆವೃತ್ತ್ಯೈಃ ಪ್ರಥಮಾಂಗ್ಯೈಶ್ಚ ಪಂಚಭಿರ್ಮೂರ್ತಿಶಕ್ತಿಭಿಃ ।
ತ್ರಿಶಕ್ತಿಮೂರ್ತಿಭಿಶ್ಚಾಽನ್ಯೈರ್ನಿಧಿದ್ವಯಸಮನ್ವಿತೈಃ ॥ ೩೮ ॥
ಅನಂತಾದ್ಯೈಃ ಪರೀತಾಶ್ಚ ಮಾತೃಭಿಶ್ಚ ವೃಷಾದಿಭಿಃ ।
ಸಿದ್ಧಿಭಿಶ್ಚಾಽಣಿಮಾದ್ಯಾಭಿರಿಂದ್ರಾದ್ಯೈಶ್ಚ ಸಹಾಯುಧೈಃ ॥ ೩೯ ॥
ವೃಷಭಕ್ಷೇತ್ರಚಂಡೇಶದುರ್ಗಾಶ್ಚ ಸ್ಕಂದನಂದಿನೌ ।
ಗಣೇಶಃ ಸೈನ್ಯಪಶ್ಚೈವ ಸ್ವಸ್ವಲಕ್ಷಣಲಕ್ಷಿತಾಃ ॥ ೪೦ ॥
ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।
ಈಶಿತ್ವಂ ಚ ವಶಿತ್ವಂ ಚ ಪ್ರಾಪ್ತಿಃ ಪ್ರಾಕಾಮ್ಯಮೇವ ಚ ॥ ೪೧ ॥
ಅಷ್ಟೈಶ್ವರ್ಯಾಣಿ ಚೋಕ್ತಾನಿ ತೇಜೋರೂಪಾಣಿ ಕೇವಲಂ ।
ಪಂಚಭಿರ್ಬ್ರಹ್ಮಭಿಃ ಪೂರ್ವಂ ಹೃಲ್ಲೇಖಾದ್ಯಾದಿಭಿಃ ಕ್ರಮಾತ್ ॥ ೪೨ ॥
ಅಂಗೈರುಮಾದ್ಯೈರಿಂದ್ರಾದ್ಯೈಃ ಪೂಜೋಕ್ತಾ ಮುನಿಭಿಸ್ತ್ವತೈಃ ।
ಉಮಾಚಂಡೇಶ್ವರಾದೀಂಶ್ಚ ಪೂಜಯೇದುತ್ತರಾದಿತಃ ॥ ೪೩ ॥
ಏವಮಾವರಣೈರ್ಯುಕ್ತಂ ತೇಜೋರೂಪಂ ಸದಾಶಿವಂ ।
ಉಮಯಾ ಸಹಿತಂ ದೇವಮುಪಚಾರೈಃ ಪ್ರಪೂಜಯೇತ್ ॥ ೪೪ ॥
ಸುಪ್ರತಿಷ್ಠಿತಶಂಖಸ್ಯ ತೀರ್ಥೈಃ ಪಂಚಾಮೃತೈರಪಿ ।
ಅಭಿಷಿಚ್ಯ ಮಹಾದೇವಂ ರುದ್ರಸೂಕ್ತೈಃ ಸಮಾಹಿತಃ ॥ ೪೫ ॥
ಕಲ್ಪಯೇದ್ವಿವಿಧೈರ್ಮಂತ್ರೈರಾಸನಾದ್ಯುಪಚಾರಕಾನ್ ।
ಆಸನಂ ಕಲ್ಪಯೇದ್ಧೈಮಂ ದಿವ್ಯವಸ್ತ್ರಸಮನ್ವಿತಂ ॥ ೪೬ ॥
ಅರ್ಘ್ಯಮಷ್ಟಗುಣೋಪೇತಂ ಪಾದ್ಯಂ ಶುದ್ಧೋದಕೇನ ಚ ।
ತೇನೈವಾಚಮನಂ ದದ್ಯಾನ್ಮಧುಪರ್ಕಂ ಮಧೂತ್ತರಂ ॥ ೪೭ ॥

---

೩೮-೪೪. ಹೀಗೆ ಅನಂತ, ಮಾತೃದೇವತೆ ಮೊದಲಾದವರಿಂದ ಕೂಡಿದ ನವಶಕ್ತಿಗಳನ್ನೂ ಅಣಿಮಾದ್ಯಷ್ಟೈಶ್ವರ್ಯಗಳನ್ನೂ, ಇಂದ್ರಾದಿ ದೇವತೆಗಳನ್ನೂ, ವೃಷಭ, ಕ್ಷೇತ್ರಪಾಲ, ಚಂಡೇಶ, ದುರ್ಗಾ, ಸ್ಕಂದ, ನಂದಿ, ಗಣೇಶ, ಮೊದಲಾದ ಪರಿವಾರ ದೇವತೆಗಳನ್ನೂ ಅರ್ಚಿಸಿ ಆವರಣ ಪೂಜೆಯನ್ನು ಸಾಂಗಗೊಳಿಸಬೇಕು. ಹೀಗೆ ಆವರಣಗಳಿಂದ ಸಹಿತನಾದ ತೇಜೋರೂಪನಾದ ಮಹಾದೇವನನ್ನು ಪಾರ್ವತಿಯೊಡನೆ ಷೋಡಶೋಪಚಾರಗಳಿಂದ ಪೂಜಿಸಬೇಕು.

೪೫-೪೭. ಶಂಖದಿಂದ ಮಹಾದೇವನನ್ನು ತೀರ್ಥಗಳಿಂದಲೂ, ಪಂಚಾಮೃತಗಳಿಂದಲೂ ರುದ್ರಸೂಕ್ತವನ್ನು ಪಠಿಸುತ್ತ ಅಭಿಷೇಚಿಸಿ ವಿವಿಧ ಮಂತ್ರಗಳಿಂದ ಆಸನಾದ್ಯುಪಚಾರಗಳನ್ನು ಮಾಡಬೇಕು. ದಿವ್ಯವಸ್ತ್ರವುಳ್ಳ ಸುವರ್ಣಾಸನವನ್ನು ಕಲ್ಪಿಸಿ ಶುದ್ಧೋದಕದಿಂದ ಅಷ್ಟಗುಣಗಳುಳ್ಳ ಅರ್ಘ್ಯವನ್ನೂ, ಪಾದ್ಯವನ್ನೂ, ಆಚಮನವನ್ನೂ ಕೊಟ್ಟು ಮಧುಪರ್ಕವನ್ನರ್ಪಿಸಬೇಕು.

CC-0. Jangamwadi Math Collection. Digitized by eGangotri

ಪುನರಾಚಮನಂ ದತ್ವಾ ಸ್ನಾನಂ ಮಂತ್ರೈಃ ಪ್ರಕಲ್ಪಯೇತ್ ।
ಉಪವೀತಂ ತಥಾ ವಾಸೋ ಭೂಷಣಾನಿ ನಿವೇದಯೇತ್ ।
ಗಂಧಮಷ್ಟಾಂಗಸಂಯುಕ್ತಂ ಸುಪೂತಂ ವಿನಿವೇದಯೇತ್ ॥ ೪೮ ॥
ತತಶ್ಚ ಬಿಲ್ವಮಂದಾರಕಲ್ಹಾರಸರಸೀರುಹಂ ।
ಧತ್ತೂರಕಂ ಕರ್ಣಿಕಾರಂ ಶಣಪುಷ್ಪಂ ಚ ಮಲ್ಲಿಕಾಂ ॥ ೪೯ ॥
ಕುಶಾಽಪಾಮಾರ್ಗತುಲಸೀಮಾಧವೀಚಂಪಕಾದಿಕಂ ।
ಬೃಹತೀಕರವೀರಾಣಿ ಯಥಾಲಬ್ಧಾನಿ ಸಾಧಕಃ ॥ ೫೦ ॥
ನಿವೇದಯೇತ್ಸುಗಂಧೀನಿ ಮಾಲ್ಯಾನಿ ವಿವಿಧಾನಿ ಚ ।
ಧೂಪಂ ಕಾಲಾಽಗರೂತ್ಪನ್ನಂ ದೀಪಂ ಚ ವಿಮಲಂ ಶುಭಂ ॥ ೫೧ ॥

॥ ವಿಶೇಷಕಂ ॥

ಅಥ ಪಾಯಸನೈವೇದ್ಯಂ ಸಘೃತಂ ಸೋಪದಂಶಕಂ ।
ಮೋದಕಾಽಪೂಪಸಂಯುಕ್ತಂ ಶರ್ಕರಾಗುಡಸಂಯುತಂ ॥ ೫೨ ॥
ಮಧುನಾಕ್ತಂ ದಧಿಯುತಂ ಜಲಪಾನಸಮನ್ವಿತಂ ।
ತೇನೈವ ಹವಿಷಾ ವಹ್ನೌ ಜುಹುಯಾನ್ಮಂತ್ರಭಾವಿತೇ ॥ ೫೩ ॥
ಆಗಮೋಕ್ತೇನ ವಿಧಿನಾ ಗುರುವಾಕ್ಯನಿಯಂತ್ರಿತಃ ।
ನೈವೇದ್ಯಂ ಶಂಭವೇ ಭೂಯೋ ದತ್ವಾ ತಾಂಬೂಲಮುತ್ತಮಂ ॥ ೫೪ ॥
ಧೂಪಂ ನೀರಾಜನಂ ರಮ್ಯಂ ಛತ್ರಂ ದರ್ಪಣಮುತ್ತಮಂ ।
ಸಮರ್ಪಯಿತ್ವಾ ವಿಧಿವನ್ಮಂತ್ರೈರ್ವೈದಿಕತಾಂತ್ರಿಕೈಃ ॥ ೫೫ ॥

---

೪೮. ಪುನರಾಚಮನವನ್ನು ಕೊಟ್ಟು ಮಂತ್ರಗಳಿಂದ ಸ್ನಾನವನ್ನು ಕಲ್ಪಿಸಿ ಯಜ್ಞೋಪವೀತ, ವಸ್ತ್ರ, ಭೂಷಣಗಳನ್ನು ಸಮರ್ಪಿಸಿ ಪವಿತ್ರಗಂಧವನ್ನರ್ಪಿಸ ಬೇಕು.

೪೯–೫೧. ಬಳಿಕ ಬಿಲ್ವಪತ್ರೆ, ಮಂದಾರ, ಕಲ್ಹಾರ, ಕಮಲ, ಧತ್ತೂರ, ಬೆಟ್ಟದಾವರೆ, ಶಣಪುಷ್ಪ, ಮಲ್ಲಿಗೆ ಮುಂತಾದ ಹೂವುಗಳನ್ನೂ, ದರ್ಭೆ, ಅಮೃತ ಬಳ್ಳಿ, ತುಲಸೀದಳಗಳನ್ನೂ, ಇರುವಂತಿಗೆ, ಸಂಪಿಗೆ, ಬೃಹತೀ, ಕಣಿಗಲೆ ಹೂವು ಗಳನ್ನೂ, ಸುವಾಸನೆಯಾದ ವಿವಿಧಪುಷ್ಪಮಾಲೆಗಳನ್ನೂ, ಕೃಷ್ಣಾಗುರುಧೂಪ ವನ್ನೂ, ನಿರ್ಮಲವಾದ ದೀಪವನ್ನೂ ಸಮರ್ಪಿಸಬೇಕು.

೫೨–೫೫. ತರುವಾಯ ಪಾಯಸ, ತುಪ್ಪ, ವ್ಯಂಜನ, ಮೋದಕ, ಅಪೂಪ, ಸಕ್ಕರೆ, ಬೆಲ್ಲ, ಜೇನುತುಪ್ಪ, ಮೊಸರು, ನೀರುಗಳನ್ನೂ ನೈವೇದ್ಯ ಮಾಡಿ ಇವುಗಳನ್ನೇ ಅಗ್ನಿಯಲ್ಲಿ ಗುರುವಾಕ್ಯದಂತೆ ಆಗಮೋಕ್ತಕ್ರಮದಿಂದ ಹೋಮಮಾಡಿ ಮತ್ತೆ ತಾಂಬೂಲವನ್ನು ನಿವೇದಿಸಿ ಧೂಪ, ಮಂಗಳಾರತಿ, ಛತ್ರ, ದರ್ಪಣಗಳನ್ನು ವೈದಿಕತಾಂತ್ರಿಕ ಕ್ರಮಗಳಿಂದ ಸಮರ್ಪಿಸಬೇಕು.

CC-0. Jangamwadi Math Collection. Digitized by eGangotri

ಯದ್ಯಶಕ್ತಃ ಸ್ವಯಂ ನಿಃಸ್ವೋ ಯಥಾಽನುಭವಮರ್ಚಯೇತ್ ।
ಭಕ್ತ್ಯಾ ದತ್ತೇನ ಗೌರೀಶಃ ಪುಷ್ಪಮಾತ್ರೇಣ ತುಷ್ಯತಿ ॥ ೫೬ ॥
ಅಥಾಂಗಭೂತಾನ್ಸಕಲಾನ್ಗಣೇಶಾದೀನ್ಪ್ರಪೂಜಯೇತ್ ।
ಸ್ತವೈರ್ನಾನಾವಿಧೈಃ ಸ್ತುತ್ವಾ ಸಾಷ್ಟಾಂಗಂ ಪ್ರಣಮೇದ್ಬುಧಃ ॥ ೫೭ ॥
ತತಃ ಪ್ರದಕ್ಷಿಣೀಕೃತ್ಯ ವೃಷಚಂಡೇಶ್ವರಾದಿಕಾನ್ ।
ಪೂಜಾಂ ಸಮರ್ಪ್ಯ ವಿಧಿವತ್ಪ್ರಾರ್ಥಯೇದ್ಗಿರಿಜಾಪತಿಂ ॥ ೫೮ ॥
ಜಯ ದೇವ ಜಗನ್ನಾಥ ಜಯ ಶಂಕರ ಶಾಶ್ವತ ।
ಜಯ ಸರ್ವಸುರಾಧ್ಯಕ್ಷ ಜಯ ಸರ್ವಸುರಾರ್ಚಿತ ॥ ೫೯ ॥
ಜಯ ಸರ್ವಗುಣಾತೀತ ಜಯ ಸರ್ವವರಪ್ರದ ।
ಜಯ ನಿತ್ಯ ನಿರಾಧಾರ ಜಯ ವಿಶ್ವಂಭರಾಽವ್ಯಯ ॥ ೬೦ ॥
ಜಯ ವಿಶ್ವೈಕವೇದ್ಯೇಶ ಜಯ ನಾಗೇಂದ್ರಭೂಷಣ ।
ಜಯ ಗೌರೀಪತೇ ಶಂಭೋ ಜಯ ಚಂದ್ರಾರ್ಧಶೇಖರ ॥ ೬೧ ॥
ಜಯ ಕೋಟ್ಯರ್ಕಸಂಕಾಶ ಜಯಾಽನಂತಗುಣಾಶ್ರಯ ॥ ೬೨ ॥

---

೫೬. ಬಡವನು ಹೀಗೆ ಪೂಜಿಸಲಶಕ್ತನಾದರೆ ಅವನು ತನ್ನ ಶಕ್ತ್ಯನುಸಾರ ಅರ್ಚಿಸಬೇಕು. ಶಂಕರನು ಭಕ್ತಿಯಿಂದಿತ್ತ ಪುಷ್ಪಮಾತ್ರದಿಂದಲೇ ತೃಪ್ತನಾಗುತ್ತಾನೆ.

೫೭. ಅನಂತರ ಗಣೇಶನೇ ಮೊದಲಾದ ಅಂಗದೇವತೆಗಳನ್ನೆಲ್ಲ ಪೂಜಿಸಿ, ನಾನಾವಿಧ ಸ್ತೋತ್ರಗಳಿಂದ ಸ್ತುತಿಸಿ ಸಾಷ್ಟಾಂಗಪ್ರಣಾಮಗೈಯ್ಯಬೇಕು.

೫೮. ಬಳಿಕ ವೃಷಭ ಚಂಡೇಶ್ವರರನ್ನು ಪೂಜಿಸಿ ಪ್ರದಕ್ಷಿಣೆಮಾಡಿ ಮಹೇಶ್ವರನನ್ನು ಹೀಗೆ ಪ್ರಾರ್ಥಿಸಬೇಕು.

೫೯. "ಜಗದೊಡೆಯನೂ, ಶಾಶ್ವತನೂ, ಸಮಸ್ತದೇವತೆಗಳಿಗೂ ಅಧಿಪತಿಯೂ, ಸಮಸ್ತದೇವತೆಗಳಿಂದ ಪೂಜಿಸಲ್ಪಟ್ಟವನೂ ಆದ ಶಂಕರನೆ! ನಿನಗೆ ಜಯವಾಗಲಿ.

೬೦. ಸಕಲಗುಣಾತೀತನೂ, ಸಕಲ ವರಗಳನ್ನೀಯುವನೂ, ಇತರಾಶ್ರಯವಿಲ್ಲದವನೂ, ಪ್ರಪಂಚಪಾಲಕನೂ, ವಿಕಾರರಹಿತನೂ ಆದ ಮಹೇಶ್ವರ! ನಿನಗೆ ಜಯವಾಗಲಿ.

೬೧. ಸಮಸ್ತರಿಗೂ ಮುಖ್ಯವೇದ್ಯನೂ, ನಾಗೇಂದ್ರಭೂಷಣನೂ, ಗೌರೀಭರ್ತನೂ, ಚಂದ್ರಮೌಳಿಯೂ ಆಗಿರುವ ನಿನಗೆ ಜಯವಾಗಲಿ.

೬೨. ಕೋಟಿಸೂರ್ಯರಂತಿರುವವನೂ, ಅನಂತಗುಣಾಶ್ರಯನೂ ಆದ ನಿನಗೆ ಜಯವಾಗಲಿ.

CC-0. Jangamwadi Math Collection. Digitized by eGangotri

ಜಯ ರುದ್ರ ವಿರೂಪಾಕ್ಷ ಜಯಾಽಚಿಂತ್ಯ ನಿರಂಜನ ।
ಜಯ ನಾಥ ಕೃಪಾಸಿಂಧೋ ಜಯ ಭಕ್ತಾರ್ತಿಭಂಜನ ।
ಜಯ ದುಸ್ತರಸಂಸಾರಸಾಗರೋತ್ತಾರಣ ಪ್ರಭೋ ॥ ೬೩ ॥
ಪ್ರಸೀದ ಮೇ ಮಹಾದೇವ ಸಂಸಾರಾರ್ತಸ್ಯ ಖಿದ್ಯತಃ ।
ಸರ್ವಪಾಪಭಯಂ ಹೃತ್ವಾ ರಕ್ಷ ಮಾಂ ಪರಮೇಶ್ವರ ॥ ೬೪ ॥
ಮಹಾದಾರಿದ್ರ್ಯಮಗ್ನಸ್ಯ ಮಹಾಪಾಪಹತಸ್ಯ ಚ ।
ಮಹಾಶೋಕವಿನಷ್ಟಸ್ಯ ಮಹಾರೋಗಾತುರಸ್ಯ ಚ ॥ ೬೫ ॥
ಋಣಭಾರಪರೀತಸ್ಯ ದಹ್ಯಮಾನಸ್ಯ ಕರ್ಮಭಿಃ ।
ಗ್ರಹೈಃ ಪ್ರಪೀಡ್ಯಮಾನಸ್ಯ ಪ್ರಸೀದ ಮಮ ಶಂಕರ ॥ ೬೬ ॥
ದರಿದ್ರಃ ಪಾರ್ಥಯೇದೇವಂ ಪೂಜಾಂತೇ ಗಿರಿಜಾಪತಿಂ ।
ಅರ್ಥಾಢ್ಯೋ ವಾಽಪಿ ರಾಜಾ ವಾ ಪ್ರಾರ್ಥಯೇದ್ದೇವಮೀಶ್ವರಂ ॥ ೬೭ ॥
ದೀರ್ಘಮಾಯುಃ ಸದಾರೋಗ್ಯಂ ಕೋಶವೃದ್ಧಿರ್ಬಲೋನ್ನತಿಃ ।
ಮಮಾಸ್ತು ನಿತ್ಯಮಾನಂದಃ ಪ್ರಸಾದಾತ್ತವ ಶಂಕರ ॥ ೬೮ ॥
ಶತ್ರವಃ ಸಂಕ್ಷಯಂ ಯಾಂತು ಪ್ರಸೀದಂತು ಮಮ ಗ್ರಹಾಃ ।
ನಶ್ಯಂತು ದಸ್ಯವೋ ರಾಷ್ಟ್ರೇ ಜನಾಃ ಸಂತು ನಿರಾಪದಃ ॥ ೬೯ ॥

---

೬೩. ತ್ರಿನೇತ್ರನೂ, ಚಿಂತಸಲಶಕ್ಯನೂ, ನಿರ್ದುಷ್ಟನೂ, ದಯಾಳುವೂ, ಭಕ್ತರ ದುಃಖನಾಶಕನೂ, ದಾಟಲಾಗದ ಸಂಸಾರ ಸಾಗರವನ್ನು ದಾಟಿಸುವವನೂ ಆದ ಪ್ರಭುವೆ! ನಿನಗೆ ಜಯವಾಗಲಿ.

೬೪. ಮಹಾದೇವ! ಸಂಸಾರದುಃಖದಿಂದ ವ್ಯಥೆಪಡುತ್ತಿರುವ ನನ್ನ ಸಕಲ ಪಾಪಭಯವನ್ನು ನೀಗಿಸಿ ಕಾಪಾಡು.

೬೫–೬೭. ಶಂಕರ! ಅತ್ಯಂತ ಬಡತನದಲ್ಲಿ ಮುಳುಗಿದವನೂ, ಅತಿಶಯ ಪಾಪಗಳಿಂದ ಪೀಡಿತನೂ, ಅತ್ಯಂತ ಶೋಕದಿಂದ ನಷ್ಟನೂ, ಮಹಾರೋಗದಿಂದ ನರಳುವವನೂ, ಸಾಲದ ಹೊರೆ ಹೊತ್ತವನೂ, ಪಾಪಕರ್ಮಗಳಿಂದ ಸುಡುತ್ತಿರುವವನೂ, ಗ್ರಹಗಳಿಂದ ಬಾಧಿಸಲ್ಪಡುತ್ತಿರುವವನೂ, ಆದ ನನಗೆ ಪ್ರಸನ್ನನಾಗು." ಪೂಜೆಯ ಅವಸಾನದಲ್ಲಿ ಬಡವನು ಶಂಕರನನ್ನು ಹೀಗೆ ಪ್ರಾರ್ಥಿಸಬೇಕು. ಹಣಗಾರನಾಗಲಿ, ರಾಜನಾಗಲಿ ಈಶ್ವರನನ್ನು ಪೂಜೆಮಾಡಿ ಈ ರೀತಿ ಪ್ರಾರ್ಥಿಸಬೇಕು.

೬೮–೬೯. "ಶಂಕರ! ನಿನ್ನ ಅನುಗ್ರಹದಿಂದ ನನಗೆ ದೀರ್ಘಾಯುಷ್ಯವೂ, ಆರೋಗ್ಯವೂ, ಬೊಕ್ಕಸದ ವೃದ್ಧಿಯೂ, ಅಧಿಕಬಲವೂ, ಯಾವಾಗಲೂ ಆನಂದವೂ ಉಂಟಾಗಲಿ. ನನ್ನ ಶತ್ರುಗಳು ನಾಶವಾಗಲಿ, ಗ್ರಹಗಳು ಪ್ರಸನ್ನರಾಗಲಿ. ಕಳ್ಳರು ಹಾಳಾಗಲಿ. ದೇಶದಲ್ಲಿ ಜನರು ಆಪತ್ತಿಲ್ಲದವರಾಗಲಿ.

CC-0. Jangamwadi Math Collection. Digitized by eGangotri

ದುರ್ಭಿಕ್ಷಮಾರೀಸಂತಾಪಾಃ ಶಮಂ ಯಾಂತು ಮಹೀತಲೇ ।
ಸರ್ವಸಸ್ಯಸಮೃದ್ಧಿಶ್ಚ ಭೂಯಾತ್ಸುಖಮಯಾ ದಿಶಃ ॥ ೭೦ ॥
ಏವಮಾರಾಧಯೇದ್ದೇವಂ ಪ್ರದೋಷೇ ಗಿರಿಜಾಪತಿಂ ।
ಬ್ರಾಹ್ಮಣಾನ್ಭೋಜಯೇತ್ಪಶ್ಚಾದ್ದಕ್ಷಿಣಾಭಿಶ್ಚ ತೋಷಯೇತ್ ॥ ೭೧ ॥
ಸರ್ವಪಾಪಕ್ಷಯಕರೀ ಸರ್ವದಾರಿದ್ರ್ಯನಾಶಿನೀ ।
ಶಿವಪೂಜಾ ಮಯಾ ಖ್ಯಾತಾ ಸರ್ವಾಽಭೀಷ್ಟವರಪ್ರದಾ ॥ ೭೨ ॥
ಮಹಾಪಾತಕಸಂಘಾತಮಧಿಕಂ ಚೋಪಪಾತಕಂ ।
ಶಿವದ್ರವ್ಯಾಽಪಹರಣಾದನ್ಯತ್ಸರ್ವಂ ನಿವಾರಯೇತ್ ॥ ೭೩ ॥
ಬ್ರಹ್ಮಹತ್ಯಾದಿಪಾಪಾನಾಂ ಪುರಾಣೇಷು ಸ್ಮೃತಿಷ್ವಪಿ ।
ಪ್ರಾಯಶ್ಚಿತ್ತಾನಿ ದೃಷ್ಟಾನಿ ನ ಶಿವದ್ರವ್ಯಹಾರಿಣಾಂ ॥ ೭೪ ॥
ಬಹುನಾಽತ್ರ ಕಿಮುಕ್ತೇನ ಶ್ಲೋಕಾರ್ಧೇನ ಬ್ರವೀಮ್ಯಹಂ ।
ಬ್ರಹ್ಮಹತ್ಯಾಶತಂ ವಾಽಪಿ ಶಿವಪೂಜಾ ವಿನಾಶಯೇತ್ ॥ ೭೫ ॥
ಮಯಾ ಕಥಿತಮೇತತ್ತೇ ಪ್ರದೋಷೇ ಶಿವಪೂಜನಂ ।
ರಹಸ್ಯಂ ಸರ್ವಜಂತೂನಾಮತ್ರ ನಾಽಸ್ತ್ಯೇವ ಸಂಶಯಃ ॥ ೭೬ ॥

---

೭೦. ದುರ್ಭಿಕ್ಷ, ಮಾರೀ ಉಪದ್ರವಗಳು ಶಾಂತವಾಗಲಿ. ಸಮಸ್ತ ಸಸ್ಯಗಳೂ ಸಮೃದ್ಧವಾಗಲಿ. ದಿಕ್ಕುಗಳು ಸುಖಕರವಾಗಲಿ.

೭೧. ಪ್ರದೋಷಕಾಲದಲ್ಲಿ ಹೀಗೆ ಶಿವನನ್ನು ಆರಾಧಿಸಿ ಬ್ರಾಹ್ಮಣರನ್ನು ಭೋಜನಮಾಡಿಸಿ, ದಕ್ಷಿಣೆಯನ್ನಿತ್ತು ಸಂತೋಷಗೊಳಿಸಬೇಕು.

೭೨. ಸರ್ವಪಾಪಗಳನ್ನು ನಾಶಗೊಳಿಸುವುದೂ, ಬಡತನವನ್ನೆಲ್ಲ ಪರಿಹರಿಸುವುದೂ, ಸಕಲೇಷ್ಟಾರ್ಥಗಳನ್ನೀಯುವುದೂ ಆಗಿರುವ ಶಿವಪೂಜೆಯ ಕ್ರಮವನ್ನು ಹೇಳಿರುವೆನು.

೭೩. ಇದು ಮಹಾ ಪಾಪಗಳನ್ನೂ, ಉಪಪಾತಕಗಳನ್ನೂ ನಾಶಗೊಳಿಸುವುದು. ಆದರೆ ಶಿವನ ದ್ರವ್ಯಾಪಹಾರದೋಷವನ್ನು ಪರಿಹರಿಸಲಾಗದು.

೭೪. ಪುರಾಣ ಮತ್ತು ಸ್ಮೃತಿಗಳಲ್ಲಿ ಬ್ರಹ್ಮಹತ್ಯಾದಿಪಾಪಗಳಿಗೂ ಪ್ರಾಯಶ್ಚಿತ್ತಗಳು ಕಾಣುತ್ತವೆ. ಶಿವದ್ರವ್ಯಾಪಹಾರವನ್ನು ಮಾಡಿದವರಿಗೆ ಪ್ರಾಯಶ್ಚಿತ್ತವು ಕಾಣುವುದಿಲ್ಲ.

೭೫. ಸುಮ್ಮನೆ ಬಹಳವಾಗಿ ಹೇಳಿ ಪ್ರಯೋಜನವೇನು? ಅರ್ಧಶ್ಲೋಕದಿಂದಲೇ ನಾನು ಹೇಳುತ್ತೇನೆ. ನೂರು ಬ್ರಹ್ಮಹತ್ಯಾದೋಷಗಳನ್ನೂ ಒಂದು ಶಿವಪೂಜೆಯು ಹೋಗಲಾಡಿಸೀತು.

೭೬. ನಾನು ನಿನಗೆ ಪ್ರದೋಷದಲ್ಲಿ ಶಿವಪೂಜೆಮಾಡುವ ಕ್ರಮವನ್ನು ಹೇಳಿದೆನು. ಇಲ್ಲಿ ಸಕಲ ಜಂತುಗಳಿಗೆ ರಹಸ್ಯವಾದುದು ಏನೂ ಇಲ್ಲ.

CC-0. Jangamwadi Math Collection. Digitized by eGangotri

ಏತಾಭ್ಯಾಮಪಿ ಬಾಲಾಭ್ಯಾಮೇವಂ ಪೂಜಾ ವಿಧೀಯತಾಂ ।
ಅತಃ ಸಂವತ್ಸರಾದೇವ ಪರಾಂ ಸಿದ್ಧಿಮವಾಪ್ಸ್ಯಥ ॥ ೭೭ ॥
ಇತಿ ಶಾಂಡಿಲ್ಯವಚನಮಾಕರ್ಣ್ಯ ದ್ವಿಜಭಾಮಿನೀ ।
ತಾಭ್ಯಾಂ ತು ಸಹ ಬಾಲಾಭ್ಯಾಂ ಪ್ರಣನಾಮ ಮುನೇಃ ಪದಂ ॥ ೭೮ ॥

ವಿಪ್ರಸ್ತ್ರ್ಯುವಾಚ :—

ಅಹಮದ್ಯ ಕೃತಾರ್ಥಾಽಸ್ಮಿ ತವದರ್ಶನಮಾತ್ರತಃ ।
ಏತೌ ಕುಮಾರೌ ಭಗವಂಸ್ತ್ವಾಮೇವ ಶರಣಂ ಗತೌ ॥ ೭೯ ॥
ಏಷ ಮೇ ತನಯೋ ಬ್ರಹ್ಮಂಛುಚಿವ್ರತ ಇತೀರಿತಃ ।
ಏಷ ರಾಜಸುತೋ ನಾಮ್ನಾ ಧರ್ಮಗುಪ್ತಃ ಕೃತೋ ಮಯಾ ॥ ೮೦ ॥
ಏತಾವಹಂ ಚ ಭಗವನ್ಭವಚ್ಚರಣಕಿಂಕರಾಃ ।
ಸಮುದ್ಧರಾಽಸ್ಮಿನ್ಪತಿತಾನ್ಘೋರೇ ದಾರಿದ್ರ್ಯಸಾಗರೇ ॥ ೮೧ ॥

ಇತಿ ಪ್ರಪನ್ನಾಂ ಶರಣಂ ದ್ವಿಜಾಂಗನಾ
ಮಾಶ್ವಾಸ್ಯ ವಾಕ್ಯೈರಮೃತೋಪಮಾನೈಃ ।
ಉಪಾದಿದೇಶಾಽಥ ತಯೋಃ ಕುಮಾರಯೋ
ರ್ಮುನಿಃ ಶಿವಾರಾಧನಮಂತ್ರವಿದ್ಯಾಂ ॥ ೮೨ ॥

---

೭೭. ಈ ಇಬ್ಬರು ಹುಡುಗರೂ ಶಿವಪೂಜೆಯನ್ನು ಮಾಡಲಿ. ಇವರು ಒಂದು ವರ್ಷದಲ್ಲಿಯೇ ಉತ್ತಮ ಸಿದ್ಧಿಯನ್ನು ಪಡೆಯುವರು.

೭೮. ಶಾಂಡಿಲ್ಯನ ಈ ಮಾತನ್ನು ಕೇಳಿ ಆ ಬ್ರಾಹ್ಮಣಸ್ತ್ರೀಯು ಇಬ್ಬರು ಹುಡುಗರೊಡನೆಯೂ ಮುನಿಯ ಕಾಲಿಗೆರಗಿದಳು.

೭೯. ಬ್ರಾಹ್ಮಣಸ್ತ್ರೀಯು ಹೇಳುತ್ತಾಳೆ:—ಎಲೈ ಮುನಿವರ್ಯನೆ! ನಾನೀಗ ನಿನ್ನ ದರ್ಶನದಿಂದ ಕೃತಾರ್ಥಳಾದೆನು. ಈ ಇಬ್ಬರು ಬಾಲಕರು ನಿನ್ನನ್ನೆ ಮರೆಹೊಕ್ಕಿರುವರು.

೮೦. ಈ ನನ್ನ ಕುಮಾರನಿಗೆ ಶುಚಿವ್ರತನೆಂದು ಹೆಸರು. ಈ ರಾಜ ಕುಮಾರನಿಗೆ ನಾನು ಧರ್ಮಗುಪ್ತನೆಂದು ಹೆಸರಿಟ್ಟಿರುವೆನು.

೮೧. ಈಗ ಈ ಕುಮಾರರೂ, ನಾನೂ ನಿನ್ನ ಸೇವಕರಾಗಿದ್ದೇವೆ. ಘೋರವಾದ ಬಡತನವೆಂಬ ಈ ಸಮುದ್ರದಲ್ಲಿ ಬಿದ್ದಿರುವ ನಮ್ಮನ್ನು ಉದ್ಧಾರ ಮಾಡು.

೮೨. ಹೀಗೆ ಶರಣಾಗತಳಾದ ದ್ವಿಜಾಂಗನೆಯನ್ನು ಅಮೃತಸಮಾನವಾದ ಮಾತಿನಿಂದ ಸಮಾಧಾನಗೊಳಿಸಿ ಆ ಮುನಿಯು ಆ ಕುಮಾರರಿಗೆ ಶಿವಪೂಜೆಯ ಮಂತ್ರವಿದ್ಯೆಯನ್ನು ಉಪದೇಶಮಾಡಿದನು.



CC-0. Jangamwadi Math Collection. Digitized by eGangotri

ಅಥೋಪದಿಷ್ಟೌ ಮುನಿನಾ ಕುಮಾರೌ ಬ್ರಾಹ್ಮಣೀ ಚ ಸಾ ।
ತಂ ಪ್ರಣಮ್ಯ ಸಮಾಮಂತ್ರ್ಯ ಜಗ್ಮುಸ್ತೇ ಶಿವಮಂದಿರಾತ್ ॥ ೮೩ ॥
ತತಃ ಪ್ರಭೃತಿ ತೌ ಬಾಲೌ ಮುನಿವರ್ಯೋಪದೇಶತಃ ।
ಪ್ರದೋಷೇ ಪಾರ್ವತೀಶಸ್ಯ ಪೂಜಾಂ ಚಕ್ರತುರಂಜಸಾ ॥ ೮೪ ॥
ಏವಂ ಪೂಜಯತೋರ್ದೇವಂ ದ್ವಿಜರಾಜಕುಮಾರಯೋಃ ।
ಸುಖೇನೈವ ವ್ಯತೀಯಾಯ ತಯೋರ್ಮಾಸಚತುಷ್ಟಯಂ ॥ ೮೫ ॥
ಕದಾಚಿದ್ರಾಜಪುತ್ರೇಣ ವಿನಾಽಸೌ ದ್ವಿಜನಂದನಃ ।
ಸ್ನಾತುಂ ಗತೋ ನದೀತೀರೇ ಚಚಾರ ಬಹುಲೀಲಯಾ ॥ ೮೬ ॥
ತತ್ರ ನಿರ್ಝರನಿರ್ಘಾತನಿರ್ಭಿನ್ನೇ ವಪ್ರಕುಟ್ಟಿಮೇ ।
ನಿಧಾನಕಲಶಂ ಸ್ಥೂಲಂ ಪ್ರಸ್ಫುರಂತಂ ದದರ್ಶ ಹ ॥ ೮೭ ॥
ತಂ ದೃಷ್ಟ್ವಾ ಸಹಸಾಽಽಗತ್ಯ ಹರ್ಷಕೌತುಕವಿಹ್ವಲಃ ।
ದೈವೋಪಪನ್ನಂ ಮನ್ವಾನೋ ಗೃಹೀತ್ವಾ ಶಿರಸಾ ಯಯೌ ॥ ೮೮ ॥
ಸಸಂಭ್ರಮಂ ಸಮಾನೀಯ ನಿಧಾಯ ಕಲಶಂ ಬಲಾತ್ ।
ನಿಧಾಯ ಭವನಸ್ಯಾಂತೇ ಮಾತರಂ ಸಮಭಾಷತ ॥ ೮೯ ॥

---

೮೩. ಅನಂತರ ಮುನಿಯಿಂದ ಉಪದೇಶಪಡೆದ ಆ ಕುಮಾರರೂ, ಬ್ರಾಹ್ಮಣ ಸ್ತ್ರೀಯೂ ಅವನನ್ನು ವಂದಿಸಿ ಕೇಳಿಕೊಂಡು ಶಿವಮಂದಿರದಿಂದ ಹೊರಟುಹೋದರು.

೮೪. ಅದು ಮೊದಲ್ಗೊಂಡು ಆ ಇಬ್ಬರು ಬಾಲಕರೂ ಆ ಮುನಿವರ್ಯನ ಉಪದೇಶದಿಂದ ಪ್ರದೋಷಕಾಲದಲ್ಲಿ ಮಹೇಶ್ವರನ ಪೂಜೆಯನ್ನು ಮಾಡಿದರು.

೮೫. ಹೀಗೆ ಆ ಇಬ್ಬರು ಬಾಲಕರೂ ಪೂಜಿಸುತ್ತಿರಲು ನಾಲ್ಕು ತಿಂಗಳು ಸುಖವಾಗಿ ಕಳೆಯಿತು.

೮೬. ಒಂದಾನೊಂದು ವೇಳೆ ಬ್ರಾಹ್ಮಣಕುಮಾರನು ರಾಜಕುಮಾರನನ್ನು ಬಿಟ್ಟು ತಾನೊಬ್ಬನೆ ಸ್ನಾನಕ್ಕೆ ಹೋಗಿ ನದೀತೀರದಲ್ಲಿ ಆಡುತ್ತ ಸಂಚರಿಸುತ್ತಿದ್ದನು.

೮೭. ಅಲ್ಲಿ ಅವನು ಪ್ರವಾಹದ ಹೊಡೆತದಿಂದ ಒಡೆದ ದಡದಲ್ಲಿ ಒಂದು ದೊಡ್ಡ ನಿಧಿಯ ಕಲಶವನ್ನು ಕಂಡನು.

೮೮. ಅದನ್ನು ನೋಡಿ ಸಂತೋಷಗೊಂಡವನಾಗಿ ಅದು ದೈವದತ್ತವಾದುದೆಂದು ತಿಳಿದು ತಲೆಯಿಂದ ಹೊತ್ತುಕೊಂಡು ಹೊರಟುಹೋದನು.

೮೯. ಬೇಗನೆ ಮನೆಗೆ ಬಂದು ಅದನ್ನು ಒಳಗಿಟ್ಟು ತಾಯಿಯನ್ನು ಕುರಿತು ಇಂತೆಂದನು.

CC-0. Jangamwadi Math Collection. Digitized by eGangotri

ಮಾತರ್ಮಾತರಿಮಂ ಪಶ್ಯ ಪ್ರಸಾದಂ ಗಿರಿಜಾಪತೇಃ ।
ನಿಧಾನಂ ಕುಂಭರೂಪೇಣ ದರ್ಶಿತಂ ಕರುಣಾತ್ಮನಾ ॥ ೯೦ ॥
ಅಥ ಸಾ ವಿಸ್ಮಿತಾ ಸಾಧ್ವೀ ಸಮಾಹೂಯ ನೃಪಾತ್ಮಜಂ ।
ಸ್ವಪುತ್ರಂ ಪ್ರತಿನಂದ್ಯಾಹ ಮಾನಯಂತೀ ಶಿವಾರ್ಚನಂ ॥ ೯೧ ॥
ಶೃಣುತಂ ಮೇ ವಚಃ ಪುತ್ರೌ ನಿಧಾನಕಲಶೀಮಿಮಾಂ ।
ಸಮಂ ವಿಭಜ್ಯ ಗೃಹ್ಣೀತಂ ಮಮಶಾಸನಗೌರವಾತ್ ॥ ೯೨ ॥
ಇತಿ ಮಾತುರ್ವಚಃ ಶ್ರುತ್ವಾ ತುತೋಷ ದ್ವಿಜನಂದನಃ ।
ಪ್ರತ್ಯಾಹ ರಾಜಪುತ್ರಸ್ತಾಂ ವಿಸ್ರಬ್ಧಃ ಶಂಕರಾರ್ಚನೇ ॥ ೯೩ ॥
ಮಾತಸ್ತವ ಸುತಸ್ಯೈವ ಸುಕೃತೇನ ಸಮಾಗತಂ ।
ನಾಽಹಂ ಗ್ರಹೀತುಮಿಚ್ಛಾಮಿ ವಿಭಕ್ತಂ ಧನಸಂಚಯಂ ॥ ೯೪ ॥
ಆತ್ಮನಃ ಸುಕೃತಾಲ್ಲಬ್ಧಂ ಸ್ವಯಮೇವ ಭುನಕ್ತ್ವಸೌ ।
ಸ ಏವ ಭಗವಾನೀಶಃ ಕರಿಷ್ಯತಿ ಕೃಪಾಂ ಮಯಿ ॥ ೯೫ ॥
ಏವಮರ್ಚಯತೋಃ ಶಂಭುಂ ಭೂಯೋಽಪಿ ಪರಯಾ ಮುದಾ ।
ಸಂವತ್ಸರೋ ವ್ಯತೀಯಾಯ ತಸ್ಮಿನ್ನೇವ ಗೃಹೇ ತಯೋಃ ॥ ೯೬ ॥
ಅಥೈಕದಾ ರಾಜಸೂನುಃ ಸಹ ತೇನ ದ್ವಿಜನ್ಮನಾ ।
ವಸಂತಸಮಯೇ ಪ್ರಾಪ್ತೇ ವಿಜಹಾರ ವನಾಂತರೇ ॥ ೯೭ ॥

---

೯೦. "ಅಮ್ಮಾ! ಗಿರಿಜಾರಮಣನ ಈ ಅನುಗ್ರಹವನ್ನು ನೋಡು. ದಯಾಳುವಾದ ಅವನು ಅನುಗ್ರಹವನ್ನು ನಿಧಿಯರೂಪದಿಂದ ತೋರಿಸಿರುವನು."

೯೧-೯೨. ಬಳಿಕ ಪತಿವ್ರತೆಯಾದ ಆ ಸ್ತ್ರೀಯು ಆಶ್ಚರ್ಯಗೊಂಡು ರಾಜಕುಮಾರನನ್ನು ಕರೆದು ತನ್ನ ಮಗನನ್ನು ಸಂತೋಷಗೊಳಿಸಿ ಶಿವಪೂಜೆಯನ್ನು ಗೌರವಿಸುತ್ತ, "ಪುತ್ರರೆ! ನನ್ನ ಮಾತನ್ನು ಕೇಳಿರಿ. ಈ ನಿಧಿಕಲಶವನ್ನು ನನ್ನ ಅಪ್ಪಣೆಯನ್ನು ಮನ್ನಿಸಿ ಸಮಭಾಗಮಾಡಿ ತೆಗೆದುಕೊಳ್ಳಿರಿ."

೯೩. ದ್ವಿಜಕುಮಾರನು ತಾಯಿಯ ಈ ಮಾತನ್ನು ಕೇಳಿ ಆನಂದಗೊಂಡನು. ರಾಜಕುಮಾರನು ಶಿವಪೂಜೆಯಲ್ಲಿ ವಿಶ್ವಾಸಗೊಂಡವನಾಗಿ ಅವಳನ್ನು ಕುರಿತು ಹೀಗೆಂದನು.

೯೪-೯೬. "ಅಮ್ಮಾ! ನಿನ್ನ ತನಯನ ಪುಣ್ಯದಿಂದ ಲಭಿಸಿದ ಧನವನ್ನು ಪಾಲುಮಾಡಿ ನಾನು ತೆಗದುಕೊಳ್ಳಲು ಇಷ್ಟಪಡುವುದಿಲ್ಲ. ಇವನು ತನ್ನ ಪುಣ್ಯದಿಂದ ಲಭಿಸಿದುದನ್ನು ತಾನೇ ಅನುಭವಿಸಲಿ. ಅದೇ ಈಶ್ವರನು ನನ್ನಲ್ಲಿಯೂ ದಯೆಮಾಡುವನು. ಹೀಗೆ ಅವರಿಬ್ಬರೂ ಅದೇ ಮನೆಯಲ್ಲಿ ತಿರುಗಿಯೂ ಶಿವನನ್ನು ಸಂತೋಷದಿಂದ ಆರಾಧಿಸುತ್ತಿರಲು ಒಂದು ವರ್ಷವು ಕಳೆಯಿತು.

೯೭. ತರುವಾಯ ವಸಂತಕಾಲವು ಬರಲು ಒಂದಾನೊಂದು ದಿನ ಆ ರಾಜಕುಮಾರನು ಆ ಬ್ರಾಹ್ಮಣಬಾಲಕನೊಡನೆ ಕಾಡಿನ ಮಧ್ಯದಲ್ಲಿ ವಿಹರಿಸಿದನು.

CC-0. Jangamwadi Math Collection. Digitized by eGangotri

ಅಥ ದೂರಂ ಗತೌ ಕ್ವಾಽಪಿ ವನೇ ದ್ವಿಜನೃಪಾತ್ಮಜೌ ।
ಗಂಧರ್ವಕನ್ಯಾಃ ಕ್ರೀಡಂತೀಃ ಶತಶಸ್ತಾತ್ರ ಅಪಶ್ಯತಾಂ ॥ ೯೮ ॥
ತಾಃ ಸರ್ವಾಶ್ಚಾರುಸರ್ವಾಂಗ್ಯೋ ವಿಹರಂತ್ಯೋ ಮನೋಹರಂ ।
ದೃಷ್ಟ್ವಾ ದ್ವಿಜಾತ್ಮಜೋ ದೂರಾದುವಾಚ ನೃಪನಂದನಂ ॥ ೯೯ ॥
ಇತಃ ಪುರೋ ನ ಗಂತವ್ಯಂ ವಿಹರಂತ್ಯಗ್ರತಃ ಸ್ತ್ರಿಯಃ ।
ಸ್ತ್ರೀಸನ್ನಿಧಾನಂ ವಿಬುಧಾಸ್ತ್ಯಜಂತಿ ವಿಮಲಾಶಯಾಃ ॥ ೧೦೦ ॥
ಏತಾಃ ಕೈತವಕಾರಿಣ್ಯೋ ಘನಯೌವನದುರ್ಮದಾಃ ।
ಮೋಹಯಂತ್ಯೋ ಜನಂ ದೃಷ್ಟ್ವಾ ವಾಚಾಽನುನಯಕೋವಿದಾಃ॥೧೦೧॥
ಅತಃ ಪರಿತ್ಯಜೇತ್ಸ್ತ್ರೀಣಾಂ ಸನ್ನಿಧಿಂ ಸಹಭಾಷಣಂ ।
ನಿಜಧರ್ಮರತೋ ವಿದ್ವಾನ್ಬ್ರಹ್ಮಚಾರೀ ವಿಶೇಷತಃ ॥ ೧೦೨ ॥
ಅತೋಽಹಂ ನೋತ್ಸಹೇ ಗಂತುಂ ಕ್ರೀಡಾಸ್ಥಾನಂ ಮೃಗೀದೃಶಾಂ ।
ಇತ್ಯುಕ್ತ್ವಾ ದ್ವಿಜಪುತ್ರಸ್ತು ನಿವೃತ್ತೋ ದೂರತಃ ಸ್ಥಿತಃ ॥ ೧೦೩ ॥
ಅಥಾಽಸೌ ರಾಜಪುತ್ರಸ್ತು ಕೌತುಕಾವಿಷ್ಟಮಾನಸಃ ।
ತಾಸಾಂ ವಿಹಾರಪದವೀಮೇಕ ಏವಾಽಭಯೋ ಯಯೌ ॥ ೧೦೪ ॥

---

೯೮. ಆ ಇಬ್ಬರು ಕುಮಾರರು ಕಾಡಿನಲ್ಲಿ ದೂರ ಹೋಗಿ ಒಂದೆಡೆಯಲ್ಲಿ ವಿಹರಿಸುತ್ತಿರುವ ನೂರಾರು ಗಂಧರ್ವಕನ್ಯೆಯರನ್ನು ಕಂಡರು.

೯೯. ದ್ವಿಜಕುಮಾರನು ರಮ್ಯವಾಗಿ ವಿಹರಿಸುತ್ತಿರುವ ಆ ಸುಂದರಿಯರನ್ನು ದೂರದಿಂದ ನೋಡಿ ರಾಜಕುಮಾರನನ್ನು ಕುರಿತು ಹೀಗೆಂದನು.

೧೦೦. "ಇನ್ನುಮುಂದೆ ಹೋಗಬಾರದು. ಮುಂಭಾಗದಲ್ಲಿ ಹೆಂಗಸರು ವಿಹರಿಸುತ್ತಿದ್ದಾರೆ. ಶುದ್ಧಭಾವನೆಯುಳ್ಳ ಪ್ರಾಜ್ಞರು ಸ್ತ್ರೀಯರ ಸಾಮೀಪ್ಯವನ್ನು ತ್ಯಜಿಸುವರು.

೧೦೧. ಕಪಟವುಳ್ಳವರೂ, ಅತ್ಯಂತ ಯೌವನದಿಂದ ಮತ್ತರೂ, ಮಾತಿನಿಂದ ಅನುನಯಮಾಡಲು ಚತುರರೂ ಆಗಿರುವ ಈ ರಮಣಿಯರು ಪುರುಷನನ್ನು ಮೋಹಗೊಳಿಸುವರು.

೧೦೨. ಆದುದರಿಂದ ಸ್ವಧರ್ಮಾಸಕ್ತನಾಗಿ ಬ್ರಹ್ಮಚರ್ಯವುಳ್ಳ ವಿದ್ವಾಂಸನು ಸ್ತ್ರೀಯರ ಸಾನ್ನಿಧ್ಯವನ್ನೂ, ಸಂಭಾಷಣೆಯನ್ನೂ ಬಿಡಬೇಕು.

೧೦೩. ಆದುದರಿಂದ ನಾನು ಈ ಮೃಗಾಕ್ಷಿಯರ ವಿಹಾರದ ಸ್ಥಾನಕ್ಕೆ ಹೋಗಲು ಬಯಸುವುದಿಲ್ಲ." ಹೀಗೆಂದು ಆ ದ್ವಿಜಕುಮಾರನು ದೂರದಿಂದಲೇ ಹಿಂದಿರುಗಿದನು.

೧೦೪. ತರುವಾಯ ರಾಜಕುಮಾರನು ಕುತೂಹಲದಿಂದ ಆ ಅಂಗನೆಯರ ವಿಹಾರಸ್ಥಾನಕ್ಕೆ ನಿರ್ಭಯನಾಗಿ ಹೋದನು.

CC-0. Jangamwadi Math Collection. Digitized by eGangotri

ತತ್ರ ಗಂಧರ್ವಕನ್ಯಾನಾಂ ಮಧ್ಯೇ ತ್ವೇಕಾ ವರಾನನಾ ।
ದೃಷ್ಟ್ವಾಽಽಯಾಂತಂ ರಾಜಪುತ್ರಂ ಚಿಂತಯಾಮಾಸ ಚೇತಸಾ ॥ ೧೦೫ ॥
ಅಹೋ ಕೋಽಯಮುದಾರಾಂಗೋ ಯುವಾ ಸರ್ವಾಂಗಸುಂದರಃ ।
ಮತ್ತಮಾತಂಗಗಮನೋ ಲಾವಣ್ಯಾಽಮೃತವಾರಿಧಿಃ ॥ ೧೦೬ ॥
ಲೀಲಾಲೋಲವಿಶಾಲಾಕ್ಷೋ ಮಧುರಸ್ಮಿತಪೇಶಲಃ ।
ಮದನೋಪಮರೂಪಶ್ರೀಃ ಸುಕುಮಾರಾಂಗಲಕ್ಷಣಃ ॥ ೧೦೭ ॥
ಇತ್ಯಾಶ್ಚರ್ಯಯುತಾ ಬಾಲಾ ದೂರಾದ್ದೃಷ್ಟ್ವಾ ನೃಪಾತ್ಮಜಂ ।
ಸರ್ವಾಃ ಸಖೀಃ ಸಮಾಲೋಕ್ಯ ವಚನಂ ಚೇದಮಬ್ರವೀತ್ ॥ ೧೦೮ ॥
ಇತೋ ವಿದೂರೇ ಹೇ ಸಖ್ಯೋ ವನಮಸ್ತ್ಯೇಕಮುತ್ತಮಂ ।
ವಿಚಿತ್ರಚಂಪಕಾಽಶೋಕಪುನ್ನಾಗಬಕುಲೈರ್ಯುತಂ ॥ ೧೦೯ ॥
ತತ್ರ ಗತ್ವಾ ವನಂ ಸರ್ವಾಃ ಸಂಚೀಯ ಕುಸುಮೋತ್ಕರಂ ।
ಭವತ್ಯಃ ಪುನರಾಯಾಂತು ತಾವತ್ತಿಷ್ಠಾಮ್ಯಹಂ ತ್ವಿಹ ॥ ೧೧೦ ॥
ಇತ್ಯಾದಿಷ್ಟಃ ಸಖೀವರ್ಗೋ ಜಗಾಮ ವಿಪಿನಾಂತರಂ ।
ಸಾಽಪಿ ಗಂಧರ್ವಜಾ ತಸ್ಥೌ ನ್ಯಸ್ತದೃಷ್ಟಿರ್ನೃಪಾತ್ಮಜೇ ॥ ೧೧೧ ॥
ತಾಂ ಸಮಾಲೋಕ್ಯ ತನ್ವಂಗೀಂ ನವಯೌವನಶಾಲಿನೀಂ ।
ಬಾಲಾಂ ಸ್ವರೂಪಸಂಪತ್ತ್ಯಾ ಪರಿಭೂತತಿಲೋತ್ತಮಾಂ ॥ ೧೧೨ ॥

---

೧೦೫. ಅಲ್ಲಿ ಗಂಧರ್ವಕನ್ಯೆಯರ ನಡುವೆ ಓರ್ವ ಸುಂದರಿಯು ಬರುತ್ತಿರುವ ರಾಜಕುಮಾರನನ್ನು ಕಂಡು ಹೀಗೆ ಆಲೋಚಿಸಿದಳು.

೧೦೬–೧೦೭. "ಉತ್ಕೃಷ್ಟವಾದ ಅವಯವಗಳುಳ್ಳವನೂ, ಸರ್ವಾಂಗ ಸುಂದರನೂ, ಮದ್ದಾನೆಯಂತೆ ಗಮನವುಳ್ಳವನೂ, ಲಾವಣ್ಯವೆಂಬ ಅಮೃತದ ಸಮುದ್ರನೂ, ವಿಶಾಲನೇತ್ರನೂ, ಮಂದಹಾಸದಿಂದ ಮನೋಹರನೂ, ಮನ್ಮಥನಂತೆ ಕಾಂತಿಯುಳ್ಳವನೂ, ಕೋಮಲವಾದ ಅವಯವಗಳ ಲಕ್ಷಣಗಳುಳ್ಳವನೂ ಆದ ಈ ಯುವಕನಾರು?"

೧೦೮. ದೂರದಿಂದಲೇ ಆ ರಾಜತನಯನನ್ನು ನೋಡಿ ಹೀಗೆ ಆಶ್ಚರ್ಯಗೊಂಡ ಆ ಕನ್ಯೆಯು ಸಮಸ್ತ ಸಖಿಯರನ್ನೂ ಕುರಿತು ಇಂತೆಂದಳು.

೧೦೯. "ಸಖಿಯರೆ! ಇಲ್ಲಿಂದ ಸ್ವಲ್ಪ ದೂರದಲ್ಲಿ ಸಂಪಿಗೆ, ಅಶೋಕ, ಸುರಗಿ, ಬಕುಲ ವೃಕ್ಷಗಳಿಂದ ಶೋಭಿತವಾದ ಉತ್ತಮ ವನವೊಂದಿರುವುದು.

೧೧೦. ನೀವೆಲ್ಲರೂ ಅಲ್ಲಿಗೆ ಹೋಗಿ ಹೂವುಗಳನ್ನು ಸಂಗ್ರಹಿಸಿಕೊಂಡು ಇಲ್ಲಿಗೆ ತಿರುಗಿ ಬನ್ನಿರಿ. ಅಲ್ಲಿಯವರೆಗೆ ನಾನಿಲ್ಲಿರುವೆನು."

೧೧೧. ಅವಳು ಹೀಗೆ ಆಜ್ಞಾಪಿಸಲು ಸಖಿಯರೆಲ್ಲರೂ ಬೇರೆ ವನಕ್ಕೆ ತೆರಳಿದರು. ಆ ಗಂಧರ್ವಕನ್ಯೆಯಾದರೊ ಆ ರಾಜಕುಮಾರನನ್ನೇ ಈಕ್ಷಿಸುತ್ತ ನಿಂತಳು.

೧೧೨–೧೧೩. ರಾಜಕುಮಾರನು ಕೃಶಾಂಗಿಯೂ, ನವಯೌವನದಿಂದ

JNANAMANDIR
LIBRARY.
Jangamwadi Math, VARANASI.
Acc. No. 4852 1540
CC-0. Jangamwadi Math Collection. Digitized by eGangotri

ರಾಜಪುತ್ರಃ ಸಮಾಗಮ್ಯ ಕೌತುಕೋತ್ಫುಲ್ಲಲೋಚನಃ ।
ಅವಾಪ ದೈವಯೋಗೇನ ಮದನಸ್ಯ ಶರವ್ಯಥಾಂ ॥ ೧೧೩ ॥
ಗಂಧರ್ವತನಯಾ ಸಾಽಪಿ ಪ್ರಾಪ್ತಾಯ ನೃಪಸೂನವೇ ।
ಉತ್ಥಾಯ ತರಸಾ ತಸ್ಮೈ ಪ್ರದದೌ ಪಲ್ಲವಾಸನಂ ॥ ೧೧೪ ॥
ಕೃತೋಪಚಾರಮಾಸೀನಂ ತಮಾಸಾದ್ಯ ಸುಮಧ್ಯಮಾ ।
ಪಪ್ರಚ್ಛ ತದ್ರೂಪಗುಣೈರ್ಧೈರ್ಯಸ್ತಧೈರ್ಯಾಕುಲೇಂದ್ರಿಯಾ ॥ ೧೧೫ ॥
ಕಸ್ತ್ವಂ ಕಮಲಪತ್ರಾಕ್ಷ ಕಸ್ಮಾದ್ದೇಶಾದಿಹಾಗತಃ ।
ಕಸ್ಯ ಪುತ್ರ ಇತಿ ಪ್ರೇಮ್ಣಾ ಪೃಷ್ಟಃ ಸರ್ವಂ ನ್ಯವೇದಯತ್ ॥ ೧೧೬ ॥
ವಿದರ್ಭರಾಜತನಯಂ ವಿಧ್ವಸ್ತಪಿತೃಮಾತೃಕಂ ।
ಶತ್ರುಭಿಶ್ಚ ಹೃತಸ್ಥಾನಮಾತ್ಮಾನಂ ಪರರಾಷ್ಟ್ರಕಂ ॥ ೧೧೭ ॥
ಸರ್ವಮಾವೇದ್ಯ ಭೂಯಸ್ತಾಂ ಪಪ್ರಚ್ಛ ನೃಪನಂದನಃ ।
ಕಾ ತ್ವಂ ವಾಮೋರು ಕಿಂಚಾಽತ್ರ ಕಾರ್ಯಂ ತೇ ಕಸ್ಯ ಚಾತ್ಮಜಾ ॥೧೧೮॥
ಕಿಮುವಧ್ಯಾಯಸಿ ಹೃದಾ ಕಿಂ ವಾ ವಕ್ತುಮಿಹೇಚ್ಛಸಿ ।
ಇತ್ಯುಕ್ತಾ ಸಾ ಪುನಃ ಪ್ರಾಹ ಶೃಣು ರಾಜೇಂದ್ರಸತ್ತಮ ॥ ೧೧೯ ॥

---

ಕಂಗೊಳಿಸುವವಳೂ, ಸೌಂದರ್ಯದಿಂದ ತಿಲೋತ್ತಮೆಯನ್ನು ಮೀರಿಸಿರುವವಳೂ ಆದ ಆ ಗಂಧರ್ವಕುಮಾರಿಯನ್ನು ಸಮೀಪಿಸಿ ಕುತೂಹಲದಿಂದ ಕೂಡಿದ ನಯನಗಳುಳ್ಳವನಾಗಿ ದೈವವಶದಿಂದ ಮನ್ಮಥನ ಬಾಣಕ್ಕೀಡಾದನು.

೧೧೪. ಆ ಗಂಧರ್ವಕನ್ಯೆಯೂ ಎದ್ದು ಹತ್ತಿರಕ್ಕೆ ಬಂದ ಆ ರಾಜಕುಮಾರನಿಗೆ ಕೂಡಲೆ ಚಿಗುರಿನ ಆಸನವನ್ನಿತ್ತಳು.

೧೧೫. ಉಪಚಾರವನ್ನು ಕೈಗೊಂಡು ಕುಳಿತುಕೊಂಡ ಅವನನ್ನು ಸಮೀಪಿಸಿ ಆ ಗಂಧರ್ವಕನ್ಯೆಯು ಆ ಕುಮಾರನ ಸೌಂದರ್ಯ, ಗುಣಗಳಿಂದ ಅಧೀರಳಾಗಿ ಮನಸೋತು ಹೀಗೆ ಕೇಳಿದಳು.

೧೧೬. "ಕಮಲಾಕ್ಷನಾದ ಕುಮಾರನೆ! ನೀನಾರು? ಎಲ್ಲಿಂದ ಬಂದಿರುವೆ? ನೀನು ಯಾರ ಮಗನು?" ಎಂದು ಪ್ರೀತಿಯಿಂದ ಕೇಳಲು ಅವನು ಹೀಗೆ ತಿಳಿಸಿದನು.

೧೧೭. "ನಾನು ವಿದರ್ಭರಾಜನ ಮಗನು. ನನ್ನ ತಂದೆತಾಯಿಗಳು ಮೃತರಾಗಿರುವರು. ಶತ್ರುಗಳು ನಮ್ಮ ದೇಶವನ್ನು ಅಪಹರಿಸಿದುದರಿಂದ ನಾನು ಪರದೇಶದಲ್ಲಿರುವೆನು."

೧೧೮–೧೧೯. ರಾಜಕುಮಾರನು ಹೀಗೆ ಎಲ್ಲವನ್ನೂ ತಿಳಿಸಿ ತಿರುಗಿ ಅವಳನ್ನು ಕುರಿತು, "ಸುಂದರಿ! ನೀನಾರು? ಯಾವ ಕೆಲಸಕ್ಕಾಗಿ ಇಲ್ಲಿಗೆ ಬಂದಿರುವೆ? ಯಾರ ಮಗಳು? ಮನಸ್ಸಿನಲ್ಲಿ ಏನನ್ನು ಆಲೋಚಿಸುತ್ತಿರುವೆ? ಏನನ್ನು ಹೇಳಲು ಬಯಸುವೆ?" ಹೀಗೆಂದು ಕೇಳಲು ಅವಳು ಇಂತೆಂದಳು.

CC-0. Jangamwadi Math Collection. Digitized by eGangotri

ಅಸ್ತ್ಯೇಕೋ ದ್ರವಿಕೋನಾಮ ಗಂಧರ್ವಾಣಾಂ ಕುಲಾಗ್ರಣೀಃ ।
ತಸ್ಯಾಽಹಮಸ್ಮಿ ತನಯಾ ನಾಮ್ನಾ ಚಾಂಶುಮತೀ ಸ್ಮೃತಾ ॥ ೧೨೦ ॥
ತ್ವಾಮಾಯಾಂತಂ ವಿಲೋಕ್ಯಾಽಹಂ ತ್ವತ್ಸಂಭಾಷಣಲಾಲಸಾ ।
ತ್ಯಕ್ತ್ವಾ ಸಖೀಜನಂ ಸರ್ವಮೇಕೈವಾಽಸ್ಮಿ ಮಹಾಮತೇ ॥ ೧೨೧ ॥
ಸರ್ವಸಂಗೀತವಿದ್ಯಾಸು ನ ಮತ್ತೋಽನ್ಯಾಽಸ್ತಿ ಕಾಚನ ।
ಮಮ ಯೋಗೇನ ತುಷ್ಯಂತಿ ಸರ್ವಾ ಅಪಿ ಸುರಸ್ತ್ರಿಯಃ ॥ ೧೨೨ ॥
ಸಾಽಹಂ ಸರ್ವಕಲಾಽಭಿಜ್ಞಾ ಜ್ಞಾತಸರ್ವಜನೇಂಗಿತಾ ।
ತವಾಽಹಮೀಪ್ಸಿತಂ ವೇದ್ಮಿ ಮಯಿ ತೇ ಸಂಗತಂ ಮನಃ ॥ ೧೨೩ ॥
ತಥಾ ಮಮಾಽಪಿ ಚೌತ್ಸುಕ್ಯಂ ದೈವೇನ ಪ್ರತಿಪಾದಿತಂ ।
ಆವಯೋಃ ಸ್ನೇಹಭೇದೋಽತ್ರ ನಾಽಭಿಭೂಯಾದಿತಃ ಪರಂ ॥ ೧೨೪ ॥
ಇತಿ ಸಂಭಾಷ್ಯ ತೇನಾಶು ಪ್ರೇಮ್ಣಾ ಗಂಧರ್ವನಂದನೀ ।
ಮುಕ್ತಾಹಾರಂ ದದೌ ತಸ್ಮೈ ಸ್ವಕುಚಾಂತರಭೂಷಣಂ ॥ ೧೨೫ ॥
ತಮಾದಾಯಾದ್ಭುತಂ ಹಾರಂ ಸ ತಸ್ಯಾಃ ಪ್ರಣಯಾಕುಲಃ ।
ಗಾಢಹರ್ಷಭರೋತ್ಸಿಕ್ತಾಮಿದಮಾಹ ನೃಪಾತ್ಮಜಃ ॥ ೧೨೬ ॥
ಸತ್ಯಮುಕ್ತಂ ತ್ವಯಾ ಭೀರು ತಥಾಪ್ಯೇಕಂ ವದಾಮ್ಯಹಂ ।
ತ್ಯಕ್ತರಾಜ್ಯಸ್ಯ ನಿಃಸ್ವಸ್ಯ ಕಥಂ ಮೇ ಭವಸಿ ಪ್ರಿಯಾ ॥ ೧೨೭ ॥

---

೧೨೦. "ರಾಜಕುಮಾರ! ದ್ರವಿಕನೆಂಬ ಓರ್ವ ಗಂಧರ್ವರಾಜನಿರುವನು. ನಾನು ಅವನ ಮಗಳು. ನನ್ನ ಹೆಸರು ಅಂಶುಮತೀ ಎಂದು.

೧೨೧. ಪ್ರಾಜ್ಞನೆ! ನಾನು ಬರುತ್ತಿರುವಾಗಲೇ ನಿನ್ನನ್ನು ಕಂಡು ನಿನ್ನೊಡನೆ ಮಾತನಾಡಲು ಬಯಸಿ ಎಲ್ಲ ಗೆಳತಿಯರನ್ನು ತ್ಯಜಿಸಿ ನಾನೊಬ್ಬಳೆ ಇಲ್ಲಿರುವೆನು.

೧೨೨. ಸಮಸ್ತ ಸಂಗೀತ ವಿದ್ಯೆಗಳಲ್ಲಿಯೂ ನನಗಿಂತ ಕುಶಲಳಾದ ಮತ್ತೊಬ್ಬಳಿಲ್ಲ. ಎಲ್ಲ ದೇವಾಂಗನೆಯರೂ ನನ್ನ ಸಹವಾಸದಿಂದ ಸಂತೋಷಗೊಳ್ಳುತ್ತಾರೆ.

೧೨೩–೧೨೪. ಎಲ್ಲ ಕಲೆಗಳನ್ನರಿತವಳೂ, ಸಮಸ್ತ ಜನರ ಆಶಯವನ್ನು ಬಲ್ಲವಳೂ ಆದ ನಾನು ನಿನ್ನ ಇಷ್ಟಾರ್ಥವನ್ನು ತಿಳಿದಿರುವೆನು. ನಿನ್ನ ಮನಸ್ಸು ನನ್ನಲ್ಲಿ ಆಸಕ್ತವಾಗಿರುವುದು. ಹಾಗೆಯೇ ನನ್ನ ಮನಸ್ಸೂ ನಿನ್ನಲ್ಲಿ ಔತ್ಸುಕ್ಯಗೊಂಡಿರುವುದು. ನಮ್ಮಿರ್ವರ ಸ್ನೇಹವು ಇನ್ನುಮುಂದೆ ಬೆಳೆಯಲಿ."

೧೨೫. ಆ ಗಂಧರ್ವಕನ್ಯೆಯು ಪ್ರೀತಿಯಿಂದ ಹೀಗೆ ಹೇಳಿ ತನ್ನ ಕುಚಭೂಷಣವಾದ ಮುತ್ತಿನ ಸರವನ್ನು ಅವನಿಗೆ ಕೊಟ್ಟಳು.

೧೨೬. ರಾಜಕುಮಾರನು ಪ್ರಣಯದಿಂದ ಅವಳ ಆ ಅದ್ಭುತ ಹಾರವನ್ನು ತೆಗೆದುಕೊಂಡು ಗಾಢಾನಂದಗೊಂಡು ಅವಳನ್ನು ಕುರಿತು ಇಂತೆಂದನು.

೧೨೭. "ಓ ಭಯಶೀಲಳೆ! ನೀನು ನಿಜವಾಗಿ ನುಡಿದೆ. ಆದರೂ ನಾನು

CC-0. Jangamwadi Math Collection. Digitized by eGangotri

ಸಾತ್ವಂ ಪಿತೃಮತೀ ಬಾಲಾ ವಿಲಂಘ್ಯ ಪಿತೃಶಾಸನಂ ।
ಸ್ವಚ್ಛಂದಾಚರಣಂ ಕರ್ತುಂ ಮೂಢೇವ ಕಥಮರ್ಹಸಿ ॥ ೧೨೮ ॥
ಇತಿ ತಸ್ಯ ವಚಃ ಶ್ರುತ್ವಾ ತಂ ಪ್ರತ್ಯಾಹ ಶುಚಿಸ್ಮಿತಾ ।
ಅಸ್ತು ನಾಮ ತಥೈವಾಽಹಂ ಕರಿಷ್ಯೇ ಪಶ್ಯ ಕೌತುಕಂ ॥ ೧೨೯ ॥
ಗಚ್ಛಸ್ವ ಭವನಂ ಕಾಂತ ಪರಶ್ವಃ ಪ್ರಾತರೇವ ತು ।
ಆಗಚ್ಛ ಪುನರತ್ರೈವ ಕಾರ್ಯಮಸ್ತಿ ಚ ನೋ ನೃಷಾ ॥ ೧೩೦ ॥
ಇತ್ಯುಕ್ತ್ವಾ ತಂ ನೃಪಸುತಂ ಸಾ ಸಂಗತಸಖೀಜನಾ ।
ಅಪಾಕ್ರಾಮತ ಚಾರ್ವಂಗೀ ಸ ಚಾಽಪಿ ನೃಪನಂದನಃ ॥ ೧೩೧ ॥
ಸ ಸಮಭ್ಯೇತ್ಯ ಹರ್ಷೇಣ ದ್ವಿಜಪುತ್ರಸ್ಯ ಸನ್ನಿಧಿಂ ।
ಸರ್ವಮಾಖ್ಯಾಯ ತೇನೈವ ಸಾರ್ಧಂ ಸ್ವಭವನಂ ಯಯೌ ॥ ೧೩೨ ॥
ತಾಂ ಚ ವಿಪ್ರಸತೀಂ ಭೂಯೋ ಹರ್ಷಯಿತ್ವಾ ನೃಪಾತ್ಮಜಃ ।
ಪರಶ್ವೋ ದ್ವಿಜಪುತ್ರೇಣ ಸಾರ್ಧಂ ತೇನ ವನಂ ಯಯೌ ॥ ೧೩೩ ॥
ಸ ತಯಾ ಪೂರ್ವನಿರ್ದಿಷ್ಟಂ ಸ್ಥಾನಂ ಪ್ರಾಪ್ಯ ನೃಪಾತ್ಮಜಃ ।
ಗಂಧರ್ವರಾಜಮದ್ರಾಕ್ಷೀತ್ಸ್ವದುಹಿತ್ರಾ ಸಮನ್ವಿತಂ ॥ ೧೩೪ ॥

---

ಒಂದನ್ನು ಮಾತ್ರ ಹೇಳುತ್ತೇನೆ. ರಾಜ್ಯವನ್ನು ಕಳೆದುಕೊಂಡು ದರಿದ್ರನಾದ ನನಗೆ ನೀನು ಹೇಗೆ ಪ್ರೇಯಸಿಯಾಗುವೆ?

೧೨೮. ತಂದೆಯ ಅಧೀನಳಾದ ಕನ್ಯೆಯಾಗಿರುವ ನೀನು ಅವನ ಆಣತಿಯಿಲ್ಲದೆ ಮೂಢಳಂತೆ ನಿನ್ನಿಷ್ಟದಂತೆ ನಡೆಯಲು ಹೇಗೆ ಅರ್ಹಳು?''

೧೨೯. ಆ ಕುಮಾರನ ಈ ಮಾತನ್ನು ಅವಳು ಕೇಳಿ ನಗುತ್ತ, ''ಆಗಲಿ; ಹಾಗೆಯೇ ಮಾಡುತ್ತೇನೆ.

೧೩೦. ಪ್ರಿಯನೆ! ಈಗ ನೀನು ನಿನ್ನ ಮನೆಗೆ ಹೋಗು. ನಾಳಿದ್ದು ಬೆಳಿಗ್ಗೆ ಇಲ್ಲಿಗೆ ಬಾ. ಕಾರ್ಯವೊಂದಿರುವುದು, ಸುಳ್ಳಲ್ಲ.''

೧೩೧. ಆ ಗಂಧರ್ವಕನ್ಯೆಯಾದ ಅಂಶುಮತಿಯು ರಾಜಕುಮಾರನನ್ನು ಕುರಿತು ಹೀಗೆ ಹೇಳಿ ಸಖಿಯರೊಡನೆ ಹೊರಟುಹೋದಳು. ಅವನೂ ಅಲ್ಲಿಂದ ಹೊರಟನು.

೧೩೨. ಅವನು ಸಂತೋಷದಿಂದ ದ್ವಿಜಕುಮಾರನ ಬಳಿಗೆ ಹೋಗಿ ನಡೆದ ಸಮಾಚಾರವನ್ನೆಲ್ಲ ಅವನಿಗೆ ಹೇಳಿ ಅವನೊಡನೆ ತನ್ನ ಮನೆಗೆ ಹೋದನು.

೧೩೩. ಅವನು ಆ ಬ್ರಾಹ್ಮಣಸ್ತ್ರೀಯನ್ನು ಸಂತೋಷಗೊಳಿಸಿ ಮೂರನೆಯ ದಿನ ಬ್ರಾಹ್ಮಣಕುಮಾರನೊಡನೆ ಕಾಡಿಗೆ ಹೋದನು.

೧೩೪. ಅಲ್ಲಿ ಆ ಗಂಧರ್ವಕನ್ಯೆಯು ಹಿಂದೆ ಸೂಚಿಸಿದ ಸ್ಥಳವನ್ನು ಸೇರಿ, ಮಗಳೊಡನೆ ಬಂದಿರುವ ಗಂಧರ್ವರಾಜನನ್ನು ಕಂಡನು.

CC-0. Jangamwadi Math Collection. Digitized by eGangotri

ಸ ಗಂಧರ್ವಪತಿಃ ಪ್ರಾಪ್ತಾವಭಿನಂದ್ಯ ಕುಮಾರಕೌ ।
ಉಪವೇಶ್ಯಾಸನೇ ರಮ್ಯೇ ರಾಜಪುತ್ರಮಭಾಷತ ॥ ೧೩೫ ॥

ಗಂಧರ್ವ ಉವಾಚ :–

ರಾಜೇಂದ್ರಪುತ್ರ ಪೂರ್ವೇದ್ಯುಃ ಕೈಲಾಸಂ ಗತವಾನಹಂ ।
ತತ್ರಾಽಪಶ್ಯಂ ಮಹಾದೇವಂ ಪಾರ್ವತ್ಯಾ ಸಹಿತಂ ಪ್ರಭುಂ ॥ ೧೩೬ ॥
ಆಹೂಯ ಮಾಂ ಸ ದೇವೇಶಃ ಸರ್ವೇಷಾಂ ತ್ರಿದಿವೌಕಸಾಂ ।
ಸನ್ನಿಧಾವಾಹ ಭಗವಾನ್ಕರುಣಾಽಮೃತವಾರಿಧಿಃ ॥ ೧೩೭ ॥
ಧರ್ಮಗುಪ್ತಾಹ್ವಯಃ ಕಶ್ಚಿದ್ರಾಜಪುತ್ರೋಽಸ್ತಿ ಭೂತಲೇ ।
ಅಕಿಂಚನೋ ಭ್ರಷ್ಟರಾಜ್ಯೋ ಹೃತದೇಶಶ್ಚ ಶತ್ರುಭಿಃ ॥ ೧೩೮ ॥
ಸ ಬಾಲೋ ಗುರುವಾಕ್ಯೇನ ಮದರ್ಚಾಯಾಂ ರತಃ ಸದಾ ।
ಅದ್ಯ ತತ್ಪಿತರಃ ಸರ್ವೇ ಮಾಂ ಪ್ರಾಪ್ತಾಸ್ತತ್ಪ್ರಭಾವತಃ ॥ ೧೩೯ ॥
ತಸ್ಯ ತ್ವಮಪಿ ಸಾಹಾಯ್ಯಂ ಕುರು ಗಂಧರ್ವಸತ್ತಮ ।
ಅಥಾಽಸೌ ನಿಜರಾಜ್ಯಸ್ಥೋ ಹತಶತ್ರುರ್ಭವಿಷ್ಯತಿ ॥ ೧೪೦ ॥
ಇತ್ಯಾಜ್ಞಪ್ತೋ ಮಹೇಶೇನ ಸಂಪ್ರಾಪ್ತೋ ನಿಜಮಂದಿರಂ ।
ಅನಯಾ ಮದ್ದುಹಿತ್ರಾ ಚ ಬಹುಶೋಽಭ್ಯರ್ಥಿತಸ್ತಥಾ ॥ ೧೪೧ ॥

---

೧೩೫. ಆ ಗಂಧರ್ವರೊಡೆಯನು ಬಂದಿರುವ ಈ ಕುಮಾರನನ್ನು ಮನೋಹರವಾದ ಆಸನದಲ್ಲಿ ಕುಳ್ಳಿರಿಸಿ ರಾಜಕುಮಾರನನ್ನು ಕುರಿತು ಇಂತೆಂದನು.

೧೩೬–೧೩೭. ಗಂಧರ್ವನು ಹೇಳುತ್ತಾನೆ:–"ರಾಜಕುಮಾರ! ನಾನು ನಿನ್ನೆ ಕೈಲಾಸಕ್ಕೆ ಹೋಗಿದ್ದೆನು. ಅಲ್ಲಿ ಪಾರ್ವತಿಯೊಡನೆ ಇರುವ ಮಹೇಶ್ವರನನ್ನು ಕಂಡೆನು. ದಯಾಳುವಾದ ಆ ಶಿವನು ನನ್ನನ್ನು ಕರೆದು ಸಮಸ್ತ ದೇವತೆಗಳ ಸಮೀಪದಲ್ಲಿಯೆ ಹೀಗೆಂದನು.

೧೩೮. 'ಗಂಧರ್ವರಾಜ! ಭೂಮಿಯಲ್ಲಿ ದರಿದ್ರನೂ, ರಾಜ್ಯವನ್ನು ಕಳೆದುಕೊಂಡವನೂ, ಬಂಧುಗಳಿಲ್ಲದವನೂ ಆದ ಧರ್ಮಗುಪ್ತನೆಂಬ ಓರ್ವ ರಾಜಕುಮಾರನಿದ್ದಾನೆ.

೧೩೯. ಆ ಕುಮಾರನು ಗುರುವಿನ ಮಾತಿನಿಂದ ಯಾವಾಗಲೂ ನನ್ನ ಪೂಜೆಯಲ್ಲಿ ನಿರತನಾಗಿದ್ದಾನೆ. ಆ ಪೂಜೆಯ ಪ್ರಭಾವದಿಂದ ಅವನ ಪಿತೃಗಳೆಲ್ಲ ಈಗ ನನ್ನೆಡೆಗೆ ಬಂದಿದ್ದಾರೆ.

೧೪೦. ಗಂಧರ್ವರಾಜ! ನೀನೂ ಅವನಿಗೆ ಸಹಾಯಮಾಡು. ಅವನು ಮರಳಿ ಶತ್ರುಗಳನ್ನು ವಧಿಸಿ ತನ್ನ ರಾಜ್ಯವನ್ನು ಪಡೆಯುವನು.'

೧೪೧. ಹೀಗೆ ಮಹೇಶ್ವರನು ಆಜ್ಞಾಪಿಸಲು ನಾನು ಮನೆಗೆ ಬಂದೆನು. ಬಳಿಕ ನನ್ನ ಈ ಮಗಳು ಬಹುವಾಗಿ ಹಾಗೆಯೇ ಪ್ರಾರ್ಥಿಸಿದಳು.



CC-0. Jangamwadi Math Collection. Digitized by eGangotri

ಜ್ಞಾತ್ವೇಮಂ ಸಕಲಂ ಶಂಭೋರ್ನಿಯೋಗಂ ಕರುಣಾತ್ಮನಃ ।
ಆದಾಯೇಮಾಂ ದುಹಿತರಂ ಪ್ರಾಪ್ತೋಽಸ್ಮೀದಂ ವನಾಂತರಂ ॥ ೧೪೨ ॥
ಅತ ಏನಾಂ ಪ್ರಯಚ್ಛಾಮಿ ಕನ್ಯಾಮಂಶುಮತೀಂ ತವ ।
ಹತ್ವಾ ಶತ್ರೂನ್ಸ್ವರಾಷ್ಟ್ರೇ ತ್ವಾಂ ಸ್ಥಾಪಯಾಮಿ ಶಿವಾಜ್ಞಯಾ ॥ ೧೪೩ ॥
ತಸ್ಮಿನ್ಪುರೇ ತ್ವಮನಯಾ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ದಶವರ್ಷಸಹಸ್ರಾಂತೇ ಗಂತಾಽಸಿ ಗಿರಿಶಾಲಯಂ ॥ ೧೪೪ ॥
ತತ್ರಾಽಪಿ ಮಮ ಕನ್ಯೇಯಂ ತ್ವಾಮೇವ ಪ್ರತಿಪತ್ಸ್ಯತೇ ।
ಅನೇನೈವ ಸ್ವದೇಹೇನ ದಿವ್ಯೇನ ಶಿವಸನ್ನಿಧೌ ॥ ೧೪೫ ॥
ಇತಿ ಗಂಧರ್ವರಾಜಸ್ತಮಾಭಾಷ್ಯ ನೃಪನಂದನಂ ।
ತಸ್ಮಿನ್ವನೇ ಸ್ವದುಹಿತುಃ ಪಾಣಿಗ್ರಾಹಮಕಾರಯತ್ ॥ ೧೪೬ ॥
ಪಾರಿಬರ್ಹಮದಾತ್ತಸ್ಮೈ ರತ್ನಭಾರಾನ್ಮಹೋಜ್ಜ್ವಲಾನ್ ।
ಚೂಡಾಮಣಿಂ ಚಂದ್ರನಿಭಂ ಮುಕ್ತಾಹಾರಾಂಶ್ಚ ಭಾಸುರಾನ್ ॥ ೧೪೭ ॥
ದಿವ್ಯಾಽಲಂಕಾರವಾಸಾಂಸಿ ಕಾರ್ತಸ್ವರಪರಿಚ್ಛದಾನ್ ।
ಗಜಾನಾಮಯುತಂ ಭೂಯೋ ನಿಯುತಂ ನೀಲವಾಜಿನಾಂ ॥ ೧೪೮ ॥
ಸ್ಯಂದನಾನಾಂ ಸಹಸ್ರಾಣಿ ಸೌವರ್ಣಾನಿ ಮಹಾಂತಿ ಚ ।
ಪುನರೇಕಂ ರಥಂ ದಿವ್ಯಂ ಧನುಶ್ಚೈಂದ್ರಾಯುಧೋಪಮಂ ॥ ೧೪೯ ॥

---

೧೪೨. ಇದನ್ನೆಲ್ಲ ದಯಾಳುವಾದ ಶಂಕರನ ಆಜ್ಞೆಯೆಂದು ತಿಳಿದು ಈ ಮಗಳನ್ನು ಕರೆದುಕೊಂಡು ಕಾಡಿಗೆ ಬಂದೆನು.

೧೪೩. ಅದರಂತೆ ಈ ಅಂಶುಮತಿಯನ್ನು ನಿನಗೆ ಒಪ್ಪಿಸಿ ಶಿವನ ಅಪ್ಪಣೆಯಂತೆ ಶತ್ರುಗಳನ್ನೆಲ್ಲ ಕೊಂದು ನಿನ್ನನ್ನು ರಾಜ್ಯದಲ್ಲಿ ಪಟ್ಟಾಭಿಷೇಕಮಾಡುವೆನು.

೧೪೪. ನೀನು ಆ ಪಟ್ಟಣದಲ್ಲಿ ಈ ಅಂಶುಮತಿಯೊಡನೆ ಇಷ್ಟವಾದ ಭೋಗಗಳನ್ನನುಭವಿಸಿ ಹತ್ತು ಸಾವಿರ ವರ್ಷಗಳಾದ ಬಳಿಕ ಕೈಲಾಸವನ್ನು ಸೇರುವೆ.

೧೪೫. ಅಲ್ಲಿಯೂ ಈ ನನ್ನ ಕನ್ಯೆಯು ಈ ದಿವ್ಯದೇಹದಿಂದ ನಿನ್ನನ್ನೇ ಪಡೆಯುವಳು.''

೧೪೬. ಗಂಧರ್ವರಾಜನು ಆ ರಾಜಕುಮಾರನನ್ನು ಕುರಿತು ಹೀಗೆ ಹೇಳಿ ಆ ಕಾಡಿನಲ್ಲಿ ತನ್ನ ಮಗಳಿಗೆ ವಿವಾಹವನ್ನು ಮಾಡಿದನು.

೧೪೭–೧೫೨. ಅಳಿಯನಾದ ಆ ರಾಜಕುಮಾರನಿಗೆ ಉಡುಗೊರೆಯಾಗಿ ಉಜ್ಜ್ವಲ ರತ್ನಗಳನ್ನೂ, ಚಂದ್ರನಂತಿರುವ ಚೂಡಾಮಣಿಯನ್ನೂ, ಪ್ರಕಾಶಮಾನವಾದ ಮುತ್ತಿನಹಾರವನ್ನೂ, ದಿವ್ಯವಾದ ಒಡವೆ ವಸ್ತ್ರಗಳನ್ನೂ, ಸುವರ್ಣದ

CC-0. Jangamwadi Math Collection. Digitized by eGangotri

ಅಸ್ತ್ರಾಣಾಂ ಚ ಸಹಸ್ರಾಣಿ ತೂಣೀಚಾಕ್ಷಯಸಾಯಕೌ ।
ಅಭೇದ್ಯಂ ವರ್ಮ ಸೌವರ್ಣಂ ಶಕ್ತಿಂ ಚ ರಿಪುಮರ್ದಿನೀಂ ॥ ೧೫೦ ॥
ದುಹಿತುಃ ಪರಿಚರ್ಯಾರ್ಥಂ ದಾಸೀಪಂಚಸಹಸ್ರಕಂ ।
ದದೌ ಪ್ರೀತಮನಾಸ್ತಸ್ಮೈ ಧನಾನಿ ವಿವಿಧಾನಿ ಚ ॥ ೧೫೧ ॥
ಗಂಧರ್ವಸೈನ್ಯಮತ್ಯುಗ್ರಂ ಚತುರಂಗಸಮನ್ವಿತಂ ।
ಪುನಶ್ಚ ತತ್ಸಹಾಯಾರ್ಥೇ ಗಂಧರ್ವಾಧಿಪತಿರ್ದದೌ ॥ ೧೫೨ ॥
ಇತ್ಥಂ ರಾಜೇಂದ್ರತನಯಃ ಸಂಪ್ರಾಪ್ತಃ ಶ್ರಿಯಮುತ್ತಮಾಂ ।
ಅಭೀಷ್ಟಜಾಯಾಸಹಿತೋ ಮುಮುದೇ ನಿಜಸಂಪದಾ ॥ ೧೫೩ ॥
ಕಾರಯಿತ್ವಾ ಸ್ವದುಹಿತುರ್ವಿವಾಹಂ ಸಮಯೋಚಿತಂ ।
ಯಯೌ ವಿಮಾನಮಾರುಹ್ಯ ಗಂಧರ್ವಾಧಿಪತಿರ್ದಿವಂ ॥ ೧೫೪ ॥
ಧರ್ಮಗುಪ್ತಃ ಕೃತೋದ್ವಾಹಃ ಸಹ ಗಂಧರ್ವಸೇನಯಾ ।
ಪುನಃ ಸ್ವನಗರಂ ಪ್ರಾಪ್ಯ ಜಘಾನ ರಿಪುವಾಹಿನೀಂ ॥ ೧೫೫ ॥
ದುರ್ಧರ್ಷಣಂ ರಣೇ ಹತ್ವಾ ಶಕ್ತ್ಯಾ ಗಂಧರ್ವಸೇನಯಾ ।
ನಿಃಶೇಷಿತಾರಾತಿಬಲಃ ಪ್ರವಿವೇಶ ನಿಜಂ ಪುರಂ ॥ ೧೫೬ ॥

---

ಉಪಕರಣಗಳನ್ನೂ, ಚಿನ್ನದ ಒಂದು ಸಾವಿರ ದೊಡ್ಡ ರಥಗಳನ್ನೂ, ಒಂದು ದಿವ್ಯರಥವನ್ನೂ, ಇಂದ್ರನ ವಜ್ರಾಯುಧದಂತಿರುವ ಒಂದು ಬಿಲ್ಲನ್ನೂ, ಸಾವಿರ ಅಸ್ತ್ರಗಳನ್ನೂ, ಅಕ್ಷಯ ಬಾಣಗಳುಳ್ಳ ಎರಡು ಬತ್ತಳಿಕೆಗಳನ್ನೂ, ಅಭೇದ್ಯವಾದ ಒಂದು ಚಿನ್ನದ ಕವಚವನ್ನೂ, ರಿಪುಗಳನ್ನು ಕೊಲ್ಲುವ ಶಕ್ತ್ಯಾಯುಧವನ್ನೂ, ಮಗಳ ಸೇವೆಗಾಗಿ ಐದುಸಾವಿರ ಮಂದಿ ದಾಸಿಯರನ್ನೂ, ಹಣವನ್ನೂ, ಅಳಿಯನ ಸಹಾಯಕ್ಕಾಗಿ ಚತುರಂಗಬಲದಿಂದ ಕೂಡಿದ ಅತ್ಯುಗ್ರವಾದ ಗಂಧರ್ವಸೈನ್ಯವನ್ನೂ ಸಂತೋಷದಿಂದ ಕೊಟ್ಟನು.

೧೫೩. ಹೀಗೆ ರಾಜಕುಮಾರನು ಉತ್ತಮವಾದ ಸಂಪತ್ತನ್ನು ಪಡೆದು ಪ್ರಿಯಭಾರ್ಯೆಯೊಡನೆ ತನ್ನ ಐಶ್ವರ್ಯದಿಂದ ಆನಂದಗೊಂಡನು.

೧೫೪. ಗಂಧರ್ವರಾಜನು ಮಗಳಿಗೆ ಸಮಯೋಚಿತವಾದ ವಿವಾಹವನ್ನು ಮಾಡಿಸಿ ವಿಮಾನವನ್ನೇರಿ ಸ್ವರ್ಗಕ್ಕೆ ತೆರಳಿದನು.

೧೫೫. ಇತ್ತ ಧರ್ಮಗುಪ್ತನು ಮದುವೆಮಾಡಿಕೊಂಡು ಗಂಧರ್ವ ಸೇನೆಯೊಡನೆ ತನ್ನ ಪಟ್ಟಣವನ್ನು ಸೇರಿ ಶತ್ರುಸೇನೆಯನ್ನು ಕೊಂದನು.

೧೫೬. ಸಮರದಲ್ಲಿ ಶಕ್ತ್ಯಾಯುಧದಿಂದ ದುರ್ಧರ್ಷಣನನ್ನು ವಧಿಸಿ ಗಂಧರ್ವ ಸೇನೆಯಿಂದ ಶತ್ರುಬಲವನ್ನು ನಿರ್ಮೂಲಗೊಳಿಸಿ ತನ್ನ ನಗರವನ್ನು ಪ್ರವೇಶಿಸಿದನು.

CC-0. Jangamwadi Math Collection. Digitized by eGangotri

ತತೋಽಭಿಷಿಕ್ತಃ ಸಚಿವೈರ್ಬ್ರಾಹ್ಮಣೈಶ್ಚ ಮಹೋತ್ತಮೈಃ ।
ರತ್ನಸಿಂಹಾಸನಾರೂಢಶ್ಚಕ್ರೇ ರಾಜ್ಯಮಕಂಟಕಂ ॥ ೧೫೭ ॥
ಯಾ ವಿಪ್ರವನಿತಾ ಪೂರ್ವಂ ತಮಪುಷ್ಣಾತ್ಸ್ವಪುತ್ರವತ್ ।
ಸೈವ ಮಾತಾಽಭವತ್ತಸ್ಯ ಸಭ್ರಾತಾ ದ್ವಿಜನಂದನಃ ॥ ೧೫೮ ॥
ಗಂಧರ್ವತನಯಾ ಜಾಯಾ ವಿದರ್ಭನಗರೇಶ್ವರಃ ।
ಆರಾಧ್ಯ ದೇವಂ ಗಿರಿಶಂ ಧರ್ಮಗುಪ್ತೋ ನೃಪೋಽಭವತ್ ॥ ೧೫೯ ॥
ಏವಮನ್ಯೇ ಸಮಾರಾಧ್ಯ ಪ್ರದೋಷೇ ಗಿರಿಜಾಪತಿಂ ।
ಲಭಂತೇಽಭೀಪ್ಸಿತಾನ್ಕಾಮಾನ್ದೇಹಾಂತೇ ತು ಪರಾಂ ಗತಿಂ ॥ ೧೬೦ ॥

ಸೂತ ಉವಾಚ :—

ಏತನ್ಮಹಾವ್ರತಂ ಪುಣ್ಯಂ ಪ್ರದೋಷೇ ಶಂಕರಾರ್ಚನಂ ।
ಧರ್ಮಾರ್ಥಕಾಮಮೋಕ್ಷಾಣಾಂ ಯದೇತತ್ಸಾಧನಂ ಪರಂ ॥ ೧೬೧ ॥
ಯ ಏತಚ್ಛೃಣುಯಾತ್ಪುಣ್ಯಂ ಮಾಹಾತ್ಮ್ಯಂ ಪರಮಾದ್ಭುತಂ ।
ಪ್ರದೋಷೇ ಶಿವಪೂಜಾಂತೇ ಕಥಯೇದ್ವಾ ಸಮಾಹಿತಃ ॥ ೧೬೨ ॥
ಭವೇನ್ನ ತಸ್ಯ ದಾರಿದ್ರ್ಯಂ ಜನ್ಮಾಂತರಶತೇಷ್ವಪಿ ।
ಜ್ಞಾನೈಶ್ವರ್ಯಸಮಾಯುಕ್ತಃ ಸೋಽಂತೇ ಶಿವಪುರಂ ವ್ರಜೇತ್ ॥ ೧೬೩ ॥

---

೧೫೭. ಬಳಿಕ ಮಂತ್ರಿಗಳಿಂದಲೂ ಬ್ರಾಹ್ಮಣೋತ್ತಮರಿಂದಲೂ ರಾಜ್ಯಾಭಿಷಕ್ತನಾಗಿ ರತ್ನಸಿಂಹಾಸನದಲ್ಲಿ ಕುಳಿತು ನಿಷ್ಕಂಟಕವಾಗಿ ರಾಜ್ಯವನ್ನಾಳಿದನು.

೧೫೮. ಹಿಂದೆ ಅವನನ್ನು ತನ್ನ ಮಗನಂತೆ ಕಾಪಾಡಿದ ವಿಪ್ರರಮಣಿಯೇ ಅವನಿಗೆ ತಾಯಿಯಾದಳು. ಆ ದ್ವಿಜಕುಮಾರನೇ ಸಹೋದರನಾದನು.

೧೫೯. ಹೀಗೆ ಧರ್ಮಗುಪ್ತನು ಮಹೇಶ್ವರನನ್ನು ಆರಾಧಿಸಿ ಗಂಧರ್ವಕನ್ಯೆಯನ್ನು ಪತ್ನಿಯನ್ನಾಗಿ ಪಡೆದು ವಿದರ್ಭದೇಶಕ್ಕೆ ಒಡೆಯನಾದನು.

೧೬೦. ಹೀಗೆ ಇತರರೂ ಪ್ರದೋಷಕಾಲದಲ್ಲಿ ಮಹೇಶ್ವರನನ್ನು ಪೂಜಿಸಿ ಅಭೀಷ್ಟಾರ್ಥಗಳನ್ನು ಪಡೆದು ದೇಹಾವಸಾನದಲ್ಲಿ ಉತ್ತಮಗತಿಯನ್ನು ಹೊಂದುವರು.

೧೬೧. ಸೂತನು ಹೇಳುತ್ತಾನೆ:—ಪ್ರದೋಷಕಾಲದಲ್ಲಿ ಮಾಡುವ ಈ ಶಿವಪೂಜೆಯೆಂಬ ಪವಿತ್ರವಾದ ಮಹಾವ್ರತವು ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನೀಯುವುದು.

೧೬೨—೧೬೩. ಅದ್ಭುತವಾದ ಈ ಮಾಹಾತ್ಮ್ಯವನ್ನು ಕೇಳಿದವನೂ, ಪ್ರದೋಷಕಾಲದ ಶಿವಪೂಜೆಯ ಕೊನೆಯಲ್ಲಿ ಇದನ್ನು ಹೇಳಿದವನೂ ಬಡತನವಿಲ್ಲದವನಾಗಿ ಅನೇಕ ಜನ್ಮಗಳಲ್ಲಿ ಜ್ಞಾನೈಶ್ವರ್ಯಯುಕ್ತನಾಗಿ ಅವಸಾನದಲ್ಲಿ ಶಿವಾಲಯವನ್ನು ಸೇರುವನು.

CC-0. Jangamwadi Math Collection. Digitized by eGangotri

ಯೇ ಪ್ರಾಪ್ಯ ದುರ್ಲಭತರಂ ಮನುಜಾಃ ಶರೀರಂ
ಕುರ್ವಂತಿ ಹಂತ ಪರಮೇಶ್ವರಪಾದಪೂಜಾಂ ।
ಧನ್ಯಾಸ್ತ ಏವ ನಿಜಪುಣ್ಯಜಿತತ್ರಿಲೋಕಾ
ಸ್ತೇಷಾಂ ಪದಾಂಬುಜರಜೋ ಭುವನಂ ಪುನಾತಿ ॥೧೬೪॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಪ್ರದೋಷಮಹಿಮಾನುವರ್ಣನಂ" ನಾಮ ಸಪ್ತಮೋಽಧ್ಯಾಯಃ

---

೧೬೪. ಯಾರು ದುರ್ಲಭವಾದ ಈ ಮಾನವ ಶರೀರವನ್ನು ಪಡೆದು ಪರಮೇಶ್ವರನ ಚರಣಾರಾಧನೆಯನ್ನು ಮಾಡಿದ ಪುಣ್ಯದಿಂದ ಮೂರು ಲೋಕಗಳನ್ನೂ ಜಯಿಸಿದವರೋ ಅವರೇ ಧನ್ಯರು. ಅವರ ಚರಣಸರೋಜಗಳ ಧೂಲಿಯು ಲೋಕವನ್ನು ಪವಿತ್ರಗೊಳಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಪ್ರದೋಷಮಹಿಮಾನುವರ್ಣನ" ವೆಂಬ ಏಳನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥಾಽಷ್ಟಮೋಽಧ್ಯಾಯಃ

### ಸೋಮವಾರವ್ರತವರ್ಣನಂ

ಸೂತ ಉವಾಚ :—

ನಿತ್ಯಾನಂದಮಯಂ ಶಾಂತಂ ನಿರ್ವಿಕಲ್ಪಂ ನಿರಾಮಯಂ ।
ಶಿವತತ್ತ್ವಮನಾದ್ಯಂತಂ ಯೇ ವಿದುಸ್ತೇ ಪರಂ ಗತಾಃ ॥ ೧ ॥
ವಿರಕ್ತಾಃ ಕಾಮಭೋಗೇಭ್ಯೋ ಯೇ ಪ್ರಕುರ್ವಂತ್ಯಹೈತುಕೀಂ ।
ಭಕ್ತಿಂ ಪರಾಂ ಶಿವೇ ಧೀರಾಸ್ತೇಷಾಂ ಮುಕ್ತಿರ್ನಸಂಸೃತಿಃ ॥ ೨ ॥
ವಿಷಯಾನಭಿಸಂಧಾಯ ಯೇ ಕುರ್ವಂತಿ ಶಿವೇ ರತಿಂ ।
ವಿಷಯೈರ್ನಾಽಭಿಭೂಯಂತೇ ಭುಂಜಾನಾಸ್ತತ್ಫಲಾನ್ಯಪಿ ॥ ೩ ॥
ಯೇನ ಕೇನಾಽಪಿ ಭಾವೇನ ಶಿವಭಕ್ತಿಯುತೋ ನರಃ ।
ನ ವಿನಶ್ಯತಿ ಕಾಲೇನ ಸ ಯಾತಿ ಪರಮಾಂ ಗತಿಂ ॥ ೪ ॥
ಆರುರುಕ್ಷುಃ ಪರಂ ಸ್ಥಾನಂ ವಿಷಯಾಸಕ್ತಮಾನಸಃ ।
ಪೂಜಯೇತ್ಕರ್ಮಣಾ ಶಂಭುಂ ಭೋಗಾಂತೇ ಶಿವಮಾಪ್ನುಯಾತ್ ॥ ೫ ॥

---

## ಕನ್ನಡದ ಅನುವಾದ

### ಸೋಮವಾರವ್ರತವರ್ಣನ

೧. ಸೂತನು ಹೇಳುತ್ತಾನೆ:— ನಿತ್ಯಾನಂದಸ್ವರೂಪನೂ, ಶಾಂತನೂ, ವಿಕಲ್ಪರಹಿತನೂ, ನಿರ್ದುಷ್ಟನೂ, ಆದ್ಯಂತವಿಲ್ಲದವನೂ ಆದ ಶಿವನ ತತ್ತ್ವವನ್ನರಿತವರು ಉತ್ತಮಗತಿಯನ್ನು ಪಡೆಯುವರು.

೨. ಕಾಮಭೋಗಗಳನ್ನು ತೊರೆದು ವೈರಾಗ್ಯಗೊಂಡು ಶಿವನಲ್ಲಿ ನಿರ್ವ್ಯಾಜಭಕ್ತಿಯನ್ನು ಮಾಡುವ ಜ್ಞಾನಿಗಳು ಸಂಸಾರದುಃಖವಿಲ್ಲದೆ ಮೋಕ್ಷವನ್ನು ಪಡೆಯುವರು.

೩. ವಿಷಯಗಳಲ್ಲಿ ಅಭಿಲಾಷೆಯಿಲ್ಲದೆ ಅವುಗಳ ಫಲಗಳನ್ನು ಅನುಭವಿಸುತ್ತ ಶಿವನಲ್ಲಿ ಭಕ್ತಿಮಾಡುವವರು ವಿಷಯಾಸಕ್ತರಾಗುವುದಿಲ್ಲ.

೪. ಯಾವುದಾದರೊಂದು ಭಾವನೆಯಿಂದ ಶಿವನಲ್ಲಿ ಭಕ್ತಿಯನ್ನು ತಳೆದರೂ ಮಾನವನು ಕೆಡುವುದಿಲ್ಲ. ಅವನು ಉತ್ತಮಗತಿಯನ್ನೇ ಪಡೆಯುವನು.

೫. ಉತ್ತಮಸ್ಥಾನವನ್ನೇರಲಪೇಕ್ಷೆಯುಳ್ಳವನಾಗಿ ವಿಷಯಾಸಕ್ತವಾದ ಮನಸ್ಸುಳ್ಳವನು ಕರ್ಮಾನುಷ್ಠಾನಮಾಡುತ್ತ ಶಿವನನ್ನು ಪೂಜಿಸಿದರೆ ಅವನು ವಿಷಯಾನುಭವದ ಕೊನೆಯಲ್ಲಿಯಾದರೂ ಶಿವನನ್ನು ಸೇರುವನು.

CC-0. Jangamwadi Math Collection. Digitized by eGangotri

ಅಶಕ್ತಾಃ ಕಶ್ಚಿದುತ್ಸ್ರಷ್ಟುಂ ಪ್ರಾಯೋ ವಿಷಯವಾಸನಾಂ ।
ಅತಃ ಕರ್ಮಮಯೀ ಪೂಜಾ ಕಾಮಧೇನುಃ ಶರೀರಿಣಾಂ ॥ ೬ ॥
ಮಾಯಾಮಯೇಹ ಸಂಸಾರೇ ಯೇ ವಿಹೃತ್ಯ ಚಿರಂ ಸುಖಂ ।
ಮುಕ್ತಿಮಿಚ್ಛಂತಿ ದೇಹಾಂತೇ ತೇಷಾಂ ಧರ್ಮೋಽಯಮೀರಿತಃ ॥ ೭ ॥
ಶಿವಪೂಜಾ ಸದಾ ಲೋಕೇ ಹೇತುಃ ಸ್ವರ್ಗಾಪವರ್ಗಯೋಃ ।
ಸೋಮವಾರೇ ವಿಶೇಷೇಣ ಪ್ರದೋಷಾದಿಗುಣಾನ್ವಿತೇ । ॥ ೮ ॥
ಕೇವಲೇನಾಽಪಿ ಯೇ ಕುರ್ಯುಃ ಸೋಮವಾರೇ ಶಿವಾರ್ಚನಂ ।
ನ ತೇಷಾಂ ವಿದ್ಯತೇ ಕಿಂಚಿದಿಹಾಮುತ್ರ ಚ ದುರ್ಲಭಂ ॥ ೯ ॥
ಉಪೋಷಿತಃ ಶುಚಿರ್ಭೂತ್ವಾ ಸೋಮವಾರೇ ಜಿತೇಂದ್ರಿಯಃ ।
ವೈದಿಕೈರ್ಲೌಕಿಕೈರ್ವಾಽಪಿ ವಿಧಿವತ್ಪೂಜಯೇಚ್ಛಿವಂ ॥ ೧೦ ॥
ಬ್ರಹ್ಮಚಾರೀ ಗೃಹಸ್ಥೋ ವಾ ಕನ್ಯಾ ವಾಽಪಿ ಸಭರ್ತೃಕಾ ।
ವಿಭರ್ತೃಕಾ ವಾ ಸಂಪೂಜ್ಯ ಲಭತೇ ವರಮೀಪ್ಸಿತಂ ॥ ೧೧ ॥
ಅತ್ರಾಽಹಂ ಕಥಯಿಷ್ಯಾಮಿ ಕಥಾಂ ಶ್ರೋತೃಮನೋಹರಾಂ ।
ಶ್ರುತ್ವಾ ಮುಕ್ತಿಂ ಪ್ರಯಾಂತ್ಯೇವ ಭಕ್ತಿರ್ಭವತಿ ಶಾಂಭವೀ ॥ ೧೨ ॥

---

೬. ಕೆಲವರು ವಿಷಯವಾಸನೆಯನ್ನು ತ್ಯಜಿಸಲು ಬಹಳಮಟ್ಟಿಗೆ ಶಕ್ತರಾಗುವುದಿಲ್ಲ. ಆದುದರಿಂದ ಅಂತಹ ಮಾನವರಿಗೆ ಕರ್ಮಮಯವಾದ ಪೂಜೆಯು ಕಾಮಧೇನುವಿನಂತೆ ಇಷ್ಟಾರ್ಥವನ್ನೀಯುವುದು.

೭. ಮಾಯಾರೂಪವಾದ ಸಂಸಾರದಲ್ಲಿ ಬಹಳಕಾಲ ಸುಖವಾಗಿ ವಿಹರಿಸಿ ದೇಹಾವಸಾನದಲ್ಲಿ ಮೋಕ್ಷವನ್ನಿಚ್ಛಿಸುವವರಿಗೆ ಈ ಧರ್ಮವು ಉಕ್ತವಾಗಿದೆ.

೮. ಲೋಕದಲ್ಲಿ ಯಾವಾಗಲೂ ಶಿವಪೂಜೆಯು ಸ್ವರ್ಗ, ಮೋಕ್ಷಗಳಿಗೆ ಕಾರಣವಾದುದು. ಪ್ರದೋಷಾದಿಗುಣಗಳಿಂದ ಕೂಡಿದ ಸೋಮವಾರವು ಶಿವಪೂಜೆಗೆ ಇನ್ನೂ ವಿಶೇಷವಾದುದು.

೯. ಸೋಮವಾರದ ದಿನ ಸಾಮಾನ್ಯವಾಗಿ ಶಿವಾರ್ಚನೆಯನ್ನು ಮಾಡಿದವರಿಗೆ ಇಹಪರಗಳಲ್ಲಿ ದುರ್ಲಭವಾದುದು ಯಾವುದೂ ಇಲ್ಲ.

೧೦. ಸೋಮವಾರದ ದಿವಸ ಉಪವಾಸವಿದ್ದು ಶುದ್ಧನೂ ಜಿತೇಂದ್ರಿಯನೂ ಆಗಿ ವೈದಿಕ ಅಥವಾ ಲೌಕಿಕ ಕ್ರಮದಿಂದ ಶಿವನನ್ನರ್ಚಿಸಬೇಕು.

೧೧. ಬ್ರಹ್ಮಚಾರಿಯಾಗಲಿ, ಗೃಹಸ್ಥನಾಗಲಿ, ಕನ್ಯೆಯಾಗಲಿ, ಸುಮಂಗಲಿಯಾಗಲಿ, ವಿಧವೆಯಾಗಲಿ ಶಿವನನ್ನು ಪೂಜಿಸಿದರೆ ಇಷ್ಟಾರ್ಥವು ದೊರೆಯುವುದು.

೧೨. ಈ ವಿಷಯದಲ್ಲಿ ಶ್ರೋತೃಗಳಿಗೆ ಮನೋಹರವಾದ ಒಂದು ಕಥೆಯನ್ನು ಹೇಳುವೆನು. ಇದನ್ನು ಕೇಳಿದವರು ಶಿವಭಕ್ತಿಸಂಪನ್ನರಾಗಿ ಮುಕ್ತಿಯನ್ನು ಪಡೆಯುವರು.

CC-0. Jangamwadi Math Collection. Digitized by eGangotri

ಆರ್ಯಾವರ್ತೇ ನೃಪಃ ಕಶ್ಚಿದಾಸೀದ್ಧರ್ಮಭೃತಾಂ ವರಃ ।
ಚಿತ್ರವರ್ಮೇತಿ ವಿಖ್ಯಾತೋ ಧರ್ಮರಾಜೋ ದುರಾತ್ಮನಾಂ ॥ ೧೩ ॥
ಸ ಗೋಪ್ತಾ ಧರ್ಮಸೇತೂನಾಂ ಶಾಸ್ತಾ ದುಷ್ಪಥಗಾಮಿನಾಂ ।
ಯಷ್ಟಾ ಸಮಸ್ತಯಜ್ಞಾನಾಂ ತ್ರಾತಾ ಶರಣಮಿಚ್ಛತಾಂ ॥ ೧೪ ॥
ಕರ್ತಾ ಸಕಲಪುಣ್ಯಾನಾಂ ದಾತಾ ಸಕಲಸಂಪದಾಂ ।
ಜೇತಾ ಸಪತ್ನವೃಂದಾನಾಂ ಭಕ್ತಃ ಶಿವಮುಕುಂದಯೋಃ ॥ ೧೫ ॥
ಸೋಽನುಕೂಲಾಸು ಪತ್ನೀಷು ಲಬ್ಧ್ವಾ ಪುತ್ರಾನ್ಮಹೌಜಸಃ ।
ಚಿರೇಣ ಪ್ರಾರ್ಥಿತಾಂ ಲೇಭೇ ಕನ್ಯಾಮೇಕಾಂ ವರಾನನಾಂ ॥ ೧೬ ॥
ಸ ಲಬ್ಧ್ವಾ ತನಯಾಂ ದಿಷ್ಟ್ಯಾ ಹಿಮವಾನಿವ ಪಾರ್ವತೀಂ ।
ಆತ್ಮಾನಂ ದೇವಸದೃಶಂ ಮೇನೇ ಪೂರ್ಣಮನೋರಥಂ ॥ ೧೭ ॥
ಸ ಏಕದಾ ಜಾತಕಲಕ್ಷಣಜ್ಞಾ
ನಾಹೂಯ ಸಾಧೂನ್ದ್ವಿಜಮುಖ್ಯವೃಂದಾನ್ ।
ಕುತೂಹಲೇನಾಽಭಿನಿವಿಷ್ಟಚೇತಾಃ
ಪಪ್ರಚ್ಛ ಕನ್ಯಾಜನನೇ ಫಲಾನಿ ॥ ೧೮ ॥

---

೧೩. ಆರ್ಯಾವರ್ತದಲ್ಲಿ ಧರ್ಮಿಷ್ಠರಲ್ಲಿ ವರಿಷ್ಠನಾಗಿ ದುಷ್ಟರಿಗೆ ಯಮನಂತಿರುವ ಚಿತ್ರವರ್ಮನೆಂಬ ಒಬ್ಬ ದೊರೆಯಿದ್ದನು.

೧೪–೧೫. ಅವನು ಧರ್ಮದ ಕಟ್ಟಳೆಗಳನ್ನು ಕಾಪಾಡುವವನೂ, ದುರ್ಮಾರ್ಗದಲ್ಲಿ ನಡೆಯುವವರನ್ನು ಶಿಕ್ಷಿಸುವವನೂ, ಸಕಲ ಯಾಗಗಳನ್ನು ಮಾಡುವವನೂ, ಶರಣಾಗತರನ್ನು ರಕ್ಷಿಸುವವನೂ, ಸಕಲ ಪುಣ್ಯಕರ್ಮಗಳನ್ನಾಚರಿಸುವವನೂ, ಸಮಸ್ತಸಂಪತ್ತುಗಳನ್ನು ದಾನಮಾಡುವವನೂ, ಶತ್ರುಗಳನ್ನು ಜಯಿಸುವವನೂ, ಹರಿಹರರಲ್ಲಿ ಭಕ್ತನೂ ಆಗಿದ್ದನು.

೧೬. ಅವನು ಅನುಕೂಲವಾದ ಹೆಂಡತಿಯರಲ್ಲಿ ಮಹಾತೇಜಸ್ವಿಗಳಾದ ಪುತ್ರರನ್ನು ಪಡೆದು ಬಹುಕಾಲದಿಂದ ಅಪೇಕ್ಷಿಸುತ್ತಿದ್ದ ಸುಂದರಿಯಾದ ಓರ್ವ ಕನ್ನೆಯನ್ನೂ ಪಡೆದನು.

೧೭. ಹಿಮವಂತನು ಗೌರೀದೇವಿಯನ್ನು ಪಡೆದಂತೆ ಅವನು ಅದೃಷ್ಟವಶದಿಂದ ಕನ್ನೆಯನ್ನು ಪಡೆದು ಸಂಪೂರ್ಣ ಮನೋರಥವುಳ್ಳ ತನ್ನನ್ನು ದೇವತೆಗಳಿಗೆ ಸಮಾನನನ್ನಾಗಿ ತಿಳಿದನು.

೧೮. ಒಂದಾನೊಂದುವೇಳೆ ಅವನು ಜಾತಕ ಲಕ್ಷಣವನ್ನರಿತ ಸಾಧುಗಳಾದ ದ್ವಿಜೋತ್ತಮರನ್ನು ಸೇರಿಸಿ ಕುತೂಹಲದಿಂದ ಕನ್ಯಾಜಾತಕದ ಫಲಗಳನ್ನು ಕೇಳಿದನು.

CC-0. Jangamwadi Math Collection. Digitized by eGangotri

ಅಥ ತತ್ರಾಽಬ್ರವೀದೇಕೋ ಬಹುಜ್ಞೋ ದ್ವಿಜಸತ್ತಮಃ ।
ಏಷಾ ಸೀಮಂತಿನೀ ನಾಮ್ನಾ ಕನ್ಯಾ ತವ ಮಹೀಪತೇ ॥ ೧೯ ॥
ಉಮೇವ ಮಾಂಗಲ್ಯವತೀ ದಮಯಂತೀವ ರೂಪಿಣೀ ।
ಭಾರತೀವ ಕಲಾಽಭಿಜ್ಞಾ ಲಕ್ಷ್ಮೀರಿವ ಮಹಾಗುಣಾ ॥ ೨೦ ॥
ಸುಪ್ರಜಾ ದೇವಮಾತೇವ ಜಾನಕೀವ ಧೃತವ್ರತಾ ।
ರವಿಪ್ರಭೇವ ಸತ್ಕಾಂತಿಶ್ಚಂದ್ರಿಕೇವ ಮನೋರಮಾ ॥ ೨೧ ॥
ದಶವರ್ಷಸಹಸ್ರಾಣಿ ಸಹಭರ್ತ್ರಾ ಪ್ರಮೋದತೇ ।
ಪ್ರಸೂಯ ತನಯಾನಷ್ಟೌ ಪರಂ ಸುಖಮವಾಪ್ಸ್ಯತಿ ॥ ೨೨ ॥
ಇತ್ಯುಕ್ತವಂತಂ ನೃಪತಿರ್ಧನೈಃ ಸಂಪೂಜ್ಯ ತಂ ದ್ವಿಜಂ ।
ಅವಾಪ ಪರಮಾಂ ಪ್ರೀತಿಂ ತದ್ವಾಗಮೃತಸೇವಯಾ ॥ ೨೩ ॥
ಅಥಾಽನ್ಯೋಽಪಿ ದ್ವಿಜಃ ಪ್ರಾಹ ಧೈರ್ಯವಾನಮಿತದ್ಯುತಿಃ ।
ಏಷಾ ಚತುರ್ದಶೇ ವರ್ಷೇ ವೈಧವ್ಯಂ ಪ್ರತಿಪತ್ಸ್ಯತಿ ॥ ೨೪ ॥
ಇತ್ಯಾಕರ್ಣ್ಯ ವಚಸ್ತಸ್ಯ ವಜ್ರನಿರ್ಘಾತನಿಷ್ಠುರಂ ।
ಮುಹೂರ್ತಮಭವದ್ರಾಜಾ ಚಿಂತಾವ್ಯಾಕುಲಮಾನಸಃ ॥ ೨೫ ॥

---

೧೯—೨೨. ಬಳಿಕ ಆ ಬ್ರಾಹ್ಮಣರ ಗುಂಪಿನಲ್ಲಿದ್ದ ವಿದ್ವಾಂಸನಾದ ಒಬ್ಬ ಬ್ರಾಹ್ಮಣನು, "ಮಹಾರಾಜ! ಸೀಮಂತಿನಿಯೆಂಬ ಈ ನಿನ್ನ ಕನ್ಯೆಯು ಪಾರ್ವತಿಯಂತೆ ಮಾಂಗಲ್ಯವುಳ್ಳವಳೂ, ದಮಯಂತಿಯಂತೆ ಸೌಂದರ್ಯವುಳ್ಳವಳೂ, ಭಾರತಿಯಂತೆ ಕಲೆಗಳನ್ನರಿತವಳೂ, ಲಕ್ಷ್ಮಿಯಂತೆ ಅತಿಶಯಗುಣಗಳುಳ್ಳವಳೂ, ಅದಿತಿಯಂತೆ ಒಳ್ಳೆಯ ಮಕ್ಕಳುಳ್ಳವಳೂ, ಸೀತೆಯಂತೆ ನಿಯಮವುಳ್ಳವಳೂ, ಸೂರ್ಯಪ್ರಭೆಯಂತೆ ಒಳ್ಳೆಯ ಕಾಂತಿಯುಳ್ಳವಳೂ, ಚಂದ್ರಿಕೆಯಂತೆ ಮನೋಹರಳೂ ಆಗಿ ಹತ್ತುಸಾವಿರ ವರ್ಷಗಳ ಕಾಲ ಪತಿಯೊಡನೆ ಸಂತೋಷಗೊಳ್ಳುತ್ತ ಅಷ್ಟಪುತ್ರರನ್ನು ಹೆತ್ತು ಸುಖವನ್ನು ಪಡೆಯುವಳು" ಎಂದು ಹೇಳಿದನು.

೨೩. ದೊರೆಯು ಹೀಗೆ ಶುಭಫಲವನ್ನು ಹೇಳಿದ ಆ ಬ್ರಾಹ್ಮಣನನ್ನು ಧನವನ್ನಿತ್ತು ಪೂಜಿಸಿ ಅವನ ವಚನಾಮೃತಸೇವನೆಯಿಂದ ಅತ್ಯಂತ ಸಂತೋಷಗೊಂಡನು.

೨೪. ಆಮೇಲೆ ಮತ್ತೊಬ್ಬ ಧೈರ್ಯವುಳ್ಳ ಅತ್ಯಂತ ತೇಜಸ್ವಿಯಾದ ಬ್ರಾಹ್ಮಣನು, "ಮಹಾರಾಜ! ಇವಳು ಹದಿನಾಲ್ಕನೆಯ ವರ್ಷದಲ್ಲಿ ವೈಧವ್ಯವನ್ನು ಹೊಂದುವಳು" ಎಂದನು.

೨೫. ರಾಜನು ಸಿಡಿಲಿನಂತೆ ಕಠೋರವಾದ ಈ ಮಾತನ್ನು ಕೇಳಿ ಸ್ವಲ್ಪ ಹೊತ್ತು ಚಿಂತಾಕ್ರಾಂತನಾದನು.

CC-0. Jangamwadi Math Collection. Digitized by eGangotri

ಅಥ ಸರ್ವಾನ್ಸಮುತ್ಸೃಜ್ಯ ಬ್ರಾಹ್ಮಣಾನ್ಪ್ರಹ್ಮವತ್ಸಲಃ ।
ಸರ್ವಂ ದೈವಕೃತಂ ಮತ್ವಾ ನಿಶ್ಚಿಂತಃ ಪಾರ್ಥಿವೋಽಭವತ್ ॥ ೨೬ ॥
ಸಾಽಪಿ ಸೀಮಂತನೀ ಬಾಲಾ ಕ್ರಮೇಣ ಗತಶೈಶವಾ ।
ವೈಧವ್ಯಮಾತ್ಮನೋ ಭಾವಿ ಶುಶ್ರಾವಾತ್ಮಸಖೀಮುಖಾತ್ ॥ ೨೭ ॥
ಪರಂ ನಿರ್ವೇದಮಾಪನ್ನಾ ಚಿಂತಯಾಮಾಸ ಬಾಲಿಕಾ ।
ಯಾಜ್ಞವಲ್ಕ್ಯಮುನೇಃ ಪತ್ನೀಂ ಮೈತ್ರೇಯೀಂ ಪರ್ಯಪೃಚ್ಛತ ॥ ೨೮ ॥
ಮಾತಸ್ತ್ವಚ್ಚರಣಾಂಭೋಜಂ ಪ್ರಪನ್ನಾಽಸ್ಮಿ ಭಯಾಕುಲಾ ।
ಸೌಭಾಗ್ಯವರ್ಧನಂ ಕರ್ಮ ಮಮ ಶಂಸಿತುಮರ್ಹಸಿ ॥ ೨೯ ॥
ಇತಿ ಪ್ರಪನ್ನಾಂ ನೃಪತೇಃ ಕನ್ಯಾಂ ಪ್ರಾಹ ಮುನೇಃ ಸತೀ ।
ಶರಣಂ ವ್ರಜ ತನ್ವಂಗಿ ಪಾರ್ವತೀಂ ಶಿವಸಂಯುತಾಂ ॥ ೩೦ ॥
ಸೋಮವಾರೇ ಶಿವಂ ಗೌರೀಂ ಪೂಜಯಸ್ವ ಸಮಾಹಿತಾ ।
ಉಪೋಷಿತಾ ವಾ ಸುಸ್ನಾತಾ ವಿರಜಾಂಬರಧಾರಿಣೀ ॥ ೩೧ ॥
ಯತವಾಙ್ನಿಶ್ಚಲಮನಾಃ ಪೂಜಾಂ ಕೃತ್ವಾ ಯಥೋಚಿತಾಂ ।
ಬ್ರಾಹ್ಮಣಾನ್ಭೋಜಯಿತ್ವಾಽಥ ಶಿವಂ ಸಮ್ಯಕ್ಪ್ರಸಾದಯೇತ್ ॥ ೩೨ ॥
ಪಾಪಕ್ಷಯೋಽಭಿಷೇಕೇಣ ಸಾಮ್ರಾಜ್ಯಂ ಪೀಠಪೂಜನಾತ್ ।
ಸೌಭಾಗ್ಯಮಖಿಲಂ ಸೌಖ್ಯಂ ಗಂಧಮಾಲ್ಯಾಕ್ಷತಾರ್ಪಣಾತ್ ॥ ೩೩ ॥

---

೨೬. ತರುವಾಯ ಬ್ರಾಹ್ಮಣಪ್ರಿಯನಾದ ಆ ದೊರೆಯು ಎಲ್ಲ ಬ್ರಾಹ್ಮಣರನ್ನೂ ಕಳುಹಿಸಿಕೊಟ್ಟು ಎಲ್ಲವೂ ದೈವಾಯತ್ತವೆಂದರಿತು ಚಿಂತಾರಹಿತನಾದನು.

೨೭. ಆ ಸೀಮಂತಿನಿಯು ಕಾಲಕ್ರಮದಲ್ಲಿ ಯೌವನವನ್ನು ಹೊಂದಿ ಸಖಿಯರಿಂದ ತನಗೆ ವೈಧವ್ಯವು ಪ್ರಾಪ್ತವಾಗುವುದೆಂದು ತಿಳಿದಳು.

೨೮. ಅವಳು ಅತ್ಯಂತ ನಿರ್ವಿಣ್ಣಳಾಗಿ ಚಿಂತಿಸಿ ಯಾಜ್ಞವಲ್ಕ್ಯಮುನಿಯ ಪತ್ನಿಯಾದ ಮೈತ್ರೇಯಿಯನ್ನು ಪ್ರಶ್ನಿಸಿದಳು.

೨೯. "ತಾಯಿ! ಭಯಗೊಂಡ ನಾನು ನಿನ್ನ ಚರಣಾಂಭೋಜವನ್ನು ಶರಣು ಹೊಂದಿದ್ದೇನೆ. ನೀನು ನನಗೆ ಸೌಭಾಗ್ಯವನ್ನು ಹೆಚ್ಚಿಸುವ ಕರ್ಮವನ್ನು ಉಪದೇಶಿಸು."

೩೦. ಮುನಿಪತ್ನಿಯು ಶರಣಾಗತಳಾದ ರಾಜಕನ್ಯೆಯನ್ನು ಕುರಿತು ಹೀಗೆಂದಳು. "ಸುಂದರಿ! ಪಾರ್ವತೀಪರಮೇಶ್ವರರನ್ನು ಮರೆಹೋಗು.

೩೧–೩೬. ಸೋಮವಾರದ ದಿವಸ ಉಪವಾಸವಿದ್ದು ಅಥವಾ ಮಿಂದು ಶುದ್ಧ ವಸ್ತ್ರವನ್ನುಟ್ಟು ಮೌನವನ್ನು ತಳೆದು ದೃಢಮನಸ್ಸಿನಿಂದ ಯಥೋಚಿತ ಪೂಜೆಯನ್ನೆಸಗಿ ಬ್ರಾಹ್ಮಣರಿಗೆ ಭೋಜನಮಾಡಿಸಿ ಶಿವನನ್ನು ಚೆನ್ನಾಗಿ ಸಂತೋಷಗೊಳಿಸಬೇಕು. ಶಿವನಿಗೆ ಅಭಿಷೇಕಮಾಡುವುದರಿಂದ ಪಾಪನಾಶವೂ, ಪೀಠ

CC-0. Jangamwadi Math Collection. Digitized by eGangotri

ಧೂಪದಾನೇನ ಸೌಗಂಧ್ಯಂ ಕಾಂತಿರ್ದೀಪಪ್ರದಾನತಃ ।
ನೈವೇದ್ಯೈಶ್ಚ ಮಹಾಭೋಗೋ ಲಕ್ಷ್ಮೀಸ್ತಾಂಬೂಲದಾನತಃ ॥ ೩೪ ॥
ಧರ್ಮಾರ್ಥಕಾಮಮೋಕ್ಷಾಶ್ಚ ನಮಸ್ಕಾರಪ್ರದಾನತಃ ।
ಅಷ್ಟೈಶ್ವರ್ಯಾದಿಸಿದ್ಧೀನಾಂ ಜಪ ಏವ ಹಿ ಕಾರಣಂ ॥ ೩೫ ॥
ಹೋಮೇನ ಸರ್ವಕಾಮಾನಾಂ ಸಮೃದ್ಧಿರುಪಜಾಯತೇ ।
ಸರ್ವೇಷಾಮೇವ ದೇವಾನಾಂ ತುಷ್ಟಿರ್ಬ್ರಾಹ್ಮಣಭೋಜನಾತ್ ॥ ೩೬ ॥
ಇತ್ಥಮಾರಾಧಯ ಶಿವಂ ಸೋಮವಾರೇ ಶಿವಾಮಪಿ ।
ಅತ್ಯಾಪದಮಪಿ ಪ್ರಾಪ್ತಾ ನಿಸ್ತೀರ್ಣಾಭಿಭವಾ ಭವೇಃ ॥ ೩೭ ॥
ಘೋರಾದ್ಘೋರಂ ಪ್ರಪನ್ನಾಽಪಿ ಮಹಾಕ್ಲೇಶಂ ಭಯಾನಕಂ ।
ಶಿವಪೂಜಾ ಪ್ರಭಾವೇಣ ತರಿಷ್ಯಸಿ ಮಹದ್ಭಯಂ ॥ ೩೮ ॥
ಇತ್ಥಂ ಸೀಮಂತಿನೀಂ ಸಮ್ಯಗನುಶಾಸ್ಯ ಪುನಃ ಸತೀ ।
ಯಯೌ ಸಾಽಪಿ ವರಾರೋಹಾ ರಾಜಪುತ್ರೀ ತಥಾಽಕರೋತ್ ॥ ೩೯ ॥
ದಮಯಂತ್ಯಾಂ ನಲಸ್ಯಾಸೀದಿಂದ್ರಸೇನಾಽಭಿಧಃ ಸುತಃ ।
ತಸ್ಯ ಚಂದ್ರಾಂಗದೋ ನಾಮ ಪುತ್ರೋಽಭೂಚ್ಚಂದ್ರಸನ್ನಿಭಃ ॥ ೪೦ ॥
ಚಿತ್ರವರ್ಮಾ ನೃಪಶ್ರೇಷ್ಠಸ್ತಮಾಹೂಯ ನೃಪಾತ್ಮಜಂ ।
ಕನ್ಯಾಂ ಸೀಮಂತಿನೀಂ ತಸ್ಮೈ ಪ್ರಾಽಯಚ್ಛದ್ಗುರ್ವನುಜ್ಞಯಾ ॥ ೪೧ ॥

---

ಪೂಜೆಯಿಂದ ಸಾಮ್ರಾಜ್ಯಲಾಭವೂ, ಗಂಧ, ಮಾಲೆ, ಅಕ್ಷತೆಗಳನ್ನರ್ಪಿಸುವುದರಿಂದ ಸಮಸ್ತ ಸೌಭಾಗ್ಯವೂ, ಸೌಖ್ಯವೂ, ಧೂಪದಿಂದ ಸೌಗಂಧ್ಯವೂ, ದೀಪವನ್ನರ್ಪಿಸುವುದರಿಂದ ಕಾಂತಿಯೂ, ನೈವೇದ್ಯದಿಂದ ಅತಿಶಯ ಭೋಗವೂ, ತಾಂಬೂಲದಾನದಿಂದ ಸಂಪತ್ತೂ, ನಮಸ್ಕಾರದಿಂದ ಧರ್ಮಾರ್ಥ ಕಾಮ ಮೋಕ್ಷಗಳೂ, ಅಷ್ಟೈಶ್ವರ್ಯಾದಿಸಿದ್ಧಿಗಳೂ, ಹೋಮದಿಂದ ಸಕಲೇಷ್ಟಾರ್ಥಸಮೃದ್ಧಿಯೂ, ಬ್ರಾಹ್ಮಣಭೋಜನದಿಂದ ಸಕಲ ದೇವತಾತೃಪ್ತಿಯೂ ಆಗುವುದು.

೩೭. ಹೀಗೆ ಸೋಮವಾರದ ದಿನ ಪಾರ್ವತೀಪರಮೇಶ್ವರನನ್ನು ಪೂಜಿಸು. ಅದರಿಂದ ನೀನು ಅತ್ಯಂತವಾದ ಆಪತ್ತನ್ನೂ ದಾಟುವೆ.

೩೮. ಅತ್ಯಂತ ಭಯಂಕರವಾದ ಮಹಾಕಷ್ಟವನ್ನು ಹೊಂದಿದವಳಾದರೂ ಅದನ್ನು ಶಿವಪೂಜಾ ಸಾಮರ್ಥ್ಯದಿಂದಲೇ ದಾಟುತ್ತೀಯೆ."

೩೯. ಮೈತ್ರೇಯಿಯು ಹೀಗೆ ಸೀಮಂತಿನಿಗೆ ಉಪದೇಶಿಸಿ ಹೊರಟು ಹೋದಳು. ಆ ರಾಜಪುತ್ರಿಯು ಹಾಗೆಯೇ ಮಾಡಿದಳು.

೪೦. ನಳನಿಂದ ದಮಯಂತಿಯಲ್ಲಿ ಇಂದ್ರಸೇನನೆಂಬ ಮಗನು ಜನಿಸಿದನು. ಅವನಿಗೆ ಚಂದ್ರನಂತಿರುವ ಚಂದ್ರಾಂಗದನೆಂಬ ಪುತ್ರನಾದನು.

೪೧–೪೨. ಚಿತ್ರವರ್ಮನು ಗುರುವಿನ ಅಪ್ಪಣೆಯಿಂದ ಆ ಚಂದ್ರಾಂಗದ

CC-0. Jangamwadi Math Collection. Digitized by eGangotri

ಸೋಽಭೂನ್ಮಹೋತ್ಸವಸ್ತತ್ರ ತಸ್ಯಾ ಉದ್ವಾಹ ಕರ್ಮಣಿ ।
ಯತ್ರ ಸರ್ವಮಹೀಪಾನಾಂ ಸಮವಾಯೋ ಮಹಾನಭೂತ್ ॥ ೪೨ ॥
ತಸ್ಯಾಃ ಪಾಣಿಗ್ರಹಂ ಕಾಲೇ ಕೃತ್ವಾ ಚಂದ್ರಾಂಗದಃ ಕೃತೀ ।
ಉವಾಸ ಕತಿಚಿನ್ಮಾಸಾಂಸ್ತತ್ರೈವ ಶ್ವಶುರಾಲಯೇ ॥ ೪೩ ॥
ಏಕದಾ ಯಮುನಾಂ ತರ್ತುಂ ಸ ರಾಜತನಯೋ ಬಲೀ ।
ಆರುರೋಹ ತರೀಂ ಕೈಶ್ಚಿದ್ವಯಸ್ಯೈಃ ಸಹ ಲೀಲಯಾ ॥ ೪೪ ॥
ತಸ್ಮಿಂಸ್ತರತಿ ಕಾಲಿಂದೀಂ ರಾಜಪುತ್ರೇ ವಿಧೇರ್ವಶಾತ್ ।
ಮಮಜ್ಜ ಸಹ ಕೈವರ್ತೈರಾವರ್ತಾಽಭಿಹತಾ ತರೀ ॥ ೪೫ ॥
ಹಾಹೇತಿ ಶಬ್ದಃ ಸುಮಹಾನಾಸೀತ್ತಸ್ಯಾಸ್ತಟದ್ವಯೇ ।
ಪಶ್ಯತಾಂ ಸರ್ವಸೈನ್ಯಾನಾಂ ಪ್ರಲಾಪೋ ದಿವಮಸ್ಪೃಶತ್ ॥ ೪೬ ॥
ಮಜ್ಜಂತೋ ಮಮ್ರಿರೇ ಕೇಚಿತ್ಕೇಚಿದ್ಗ್ರಾಹೋದರಂ ಗತಾಃ ।
ರಾಜಪುತ್ರಾದಯಃ ಕೇಚಿನ್ನಾಽದೃಶ್ಯಂತ ಮಹಾಜಲೇ ॥ ೪೭ ॥
ತದುಪಶ್ರುತ್ಯ ರಾಜಾಽಪಿ ಚಿತ್ರವರ್ಮಾಽತಿವಿಹ್ವಲಃ ।
ಯಮುನಾಯಾಸ್ತಟಂ ಪ್ರಾಪ್ಯ ವಿಚೇಷ್ಟಃ ಸಮಜಾಯತ ॥ ೪೮ ॥

---

ನೆಂಬ ರಾಜಕುಮಾರನನ್ನು ಕರೆಯಿಸಿ ಅವನಿಗೆ ಸೀಮಂತಿನಿಯನ್ನು ಮದುವೆ ಮಾಡಿಕೊಟ್ಟನು. ಅವಳ ವಿವಾಹಮಹೋತ್ಸವಕ್ಕೆ ಸಕಲ ರಾಜರೂ ಬಂದಿದ್ದರು.

೪೩. ಚಂದ್ರಾಂಗದನು ಸಕಾಲದಲ್ಲಿ ಆ ಸೀಮಂತಿನಿಯ ಪಾಣಿಗ್ರಹಣವನ್ನು ಮಾಡಿ ಮಾವನ ಮನೆಯಲ್ಲಿಯೇ ಕೆಲವು ತಿಂಗಳು ವಾಸವಾಗಿದ್ದನು.

೪೪. ಒಂದಾನೊಂದು ದಿನ ಬಲಿಷ್ಠನಾದ ಆ ಚಂದ್ರಾಂಗದನು ಯಮುನಾ ನದಿಯನ್ನು ದಾಟುವುದಕ್ಕಾಗಿ ಕೆಲವು ಸ್ನೇಹಿತರೊಡನೆ ದೋಣಿಯನ್ನು ಹತ್ತಿದನು.

೪೫. ಆ ರಾಜಕುಮಾರನು ಯಮುನಾನದಿಯನ್ನು ದಾಟುತ್ತಿರಲು ಸುಳಿಯಿಂದ ಹೊಡೆಯಲ್ಪಟ್ಟ ದೋಣಿಯು ಬೆಸ್ತರೊಡನೆ ದೈವೇಚ್ಛೆಯಿಂದ ಮುಳುಗಿತು.

೪೬. ಆಗ ನದಿಯ ಎರಡು ದಡಗಳಲ್ಲಿಯೂ ಅತ್ಯಂತ ಹಾಹಾಕಾರ ವುಂಟಾಯಿತು. ನೋಡುತ್ತಿರುವ ಸಮಸ್ತ ಸೈನ್ಯದವರ ಪ್ರಲಾಪವೂ ದೇವಲೋಕವನ್ನು ಮುಟ್ಟಿತು.

೪೭–೪೮. ಮುಳುಗಿದವರಲ್ಲಿ ಕೆಲವರು ಸತ್ತರು. ಕೆಲವರು ಮೊಸಳೆಯ ಹೊಟ್ಟೆಯನ್ನು ಸೇರಿದರು. ಕೆಲವರು ರಾಜಪುತ್ರರು ಆ ನೀರಿನ ಪ್ರವಾಹದಲ್ಲಿ ಕಾಣಿಸಲಿಲ್ಲ. ಅದನ್ನು ಕೇಳಿ ಚಿತ್ರವರ್ಮನೂ ಅತ್ಯಂತ ವ್ಯಥೆಗೊಂಡು ಯಮುನಾ ದಡಕ್ಕೆ ಹೋಗಿ ಸ್ತಬ್ಧನಾದನು.

CC-0. Jangamwadi Math Collection. Digitized by eGangotri

ಶ್ರುತ್ವಾಽಥ ರಾಜಪತ್ನ್ಯಶ್ಚ ಬಭೂವುರ್ಗತಚೇತನಾಃ ।
ಸಾ ಚ ಸೀಮಂತಿನೀ ಶ್ರುತ್ವಾ ಪಪಾತ ಭುವಿ ಮೂರ್ಛಿತಾ ॥ ೪೯ ॥
ತಥಾಽನ್ಯೇ ಮಂತ್ರಿಮುಖ್ಯಾಶ್ಚ ನಾಯಕಾಃ ಸ ಪುರೋಹಿತಾಃ ।
ವಿಹ್ವಲಾಃ ಶೋಕಸಂತಪ್ತಾ ವಿಲೇಪುರ್ಮುಕ್ತಮೂರ್ಧಜಾಃ ॥ ೫೦ ॥
ಇಂದ್ರಸೇನೋಽಪಿ ರಾಜೇಂದ್ರಃ ಪುತ್ರವಾರ್ತಾಂ ಸುದುಃಖಿತಃ ।
ಆಕರ್ಣ್ಯ ಸಹಪತ್ನೀಭಿರ್ನಷ್ಟಸಂಜ್ಞಃ ಪಪಾತ ಹ ॥ ೫೧ ॥
ತನ್ಮಂತ್ರಿಣಶ್ಚ ತತ್ಪೌರಾಸ್ತಥಾ ತದ್ದೇಶವಾಸಿನಃ ।
ಆಬಾಲವೃದ್ಧವನಿತಾಶ್ಚುಕ್ರುಶುಃ ಶೋಕವಿಹ್ವಲಾಃ ॥ ೫೨ ॥
ಶೋಕಾತ್ಕೇಚಿದುರೋ ಜಘ್ನುಃ ಶಿರೋ ಜಘ್ನುಶ್ಚ ಕೇಚನ ।
ಹಾ ರಾಜಪುತ್ರ ಹಾ ತಾತ ಕ್ವಾಽಸಿ ಕ್ವಾಽಸೀತಿ ಬಭ್ರಮುಃ ॥ ೫೩ ॥
ಏವಂ ಶೋಕಾಕುಲಂ ದೀನಮಿಂದ್ರಸೇನಮಹೀಪತೇಃ ।
ನಗರಂ ಸಹಸಾ ಕ್ಷುಬ್ಧಂ ಚಿತ್ರವರ್ಮಪುರಂ ತಥಾ ॥ ೫೪ ॥
ಅಥ ವೃದ್ಧೈಃ ಸಮಾಶ್ವಸ್ತಶ್ಚಿತ್ರವರ್ಮಾ ಮಹೀಪತಿಃ ।
ಶನೈರ್ನಗರಮಾಗತ್ಯ ಸಾಂತ್ವಯಾಮಾಸ ಚಾತ್ಮಜಾಂ ॥ ೫೫ ॥

---

೪೯. ರಾಣಿಯರು ಕೇಳಿ ನಿಶ್ಚೇತನರಾದರು. ಸೀಮಂತಿನಿಯು ಕೇಳಿ ಮೂರ್ಛೆಗೊಂಡು ಭೂಮಿಯಲ್ಲಿ ಬಿದ್ದಳು.

೫೦. ಹಾಗೆಯೇ ಮುಖ್ಯ ಮಂತ್ರಿಗಳೂ, ಪುರೋಹಿತರೂ, ವ್ಯಥೆಗೊಂಡು ದುಃಖದಿಂದ ತಲೆಕೂದಲುಗಳನ್ನು ಬಿಚ್ಚಿಕೊಂಡು ಗೋಳಾಡಿದರು.

೫೧. ಇಂದ್ರಸೇನನೂ ಪುತ್ರನ ಮರಣಸಮಾಚಾರವನ್ನು ತಿಳಿದು ಅತಿ ದುಃಖದಿಂದ ರಾಣಿಯರೊಡನೆ ಮೂರ್ಛಾಕ್ರಾಂತನಾದನು.

೫೨. ಅವನ ಮಂತ್ರಿಗಳೂ, ಪಟ್ಟಣಿಗರೂ, ದೇಶದ ಪ್ರಜೆಗಳೂ, ಬಾಲಕರೂ, ವೃದ್ಧರೂ, ಹೆಂಗಸರು ಮೊದಲ್ಗೊಂಡು ಎಲ್ಲರೂ ದುಃಖದಿಂದ ಗೋಳಾಡಿದರು.

೫೩. ದುಃಖದಿಂದ ಕೆಲವರು ಹೊಟ್ಟೆ ಹೊಡೆದುಕೊಂಡರು. ಕೆಲವರು ತಲೆಯನ್ನು ಬಡಿದುಕೊಂಡರು. ಕೆಲವರು “ಅಯ್ಯೋ! ರಾಜಕುಮಾರ! ಅಯ್ಯೋ! ಮಗು! ಎಲ್ಲಿರುವೆ?” ಎಂದು ಸುತ್ತಲೂ ಅಲೆದರು.

೫೪. ಹೀಗೆ ಇಂದ್ರಸೇನ ಚಿತ್ರವರ್ಮರ ಪಟ್ಟಣಗಳು ಕೂಡಲೆ ದುಃಖದಿಂದ ತುಂಬಿ ಕೋಲಾಹಲಗೊಂಡವು.

೫೫. ತರುವಾಯ ವೃದ್ಧರ ಮಾತಿನಿಂದ ಸಮಾಧಾನಗೊಂಡ ಚಿತ್ರವರ್ಮರಾಜನು ಮೆಲ್ಲಗೆ ತನ್ನ ಪಟ್ಟಣಕ್ಕೆ ಬಂದು ಮಗಳನ್ನು ಸಮಾಧಾನಗೊಳಿಸಿದನು.

CC-0. Jangamwadi Math Collection. Digitized by eGangotri

ಸ ರಾಜಾಽಂಭಸಿ ಮಗ್ನಸ್ಯ ಜಾಮಾತುಸ್ತಸ್ಯ ಬಾಂಧವೈಃ ।
ಆಗತೈಃ ಕಾರಯಾಮಾಸ ಸಾಕಲ್ಯಾದೌರ್ಧ್ವದೈಹಿಕಂ ॥ ೫೬ ॥
ಸಾ ಚ ಸೀಮಂತಿನೀ ಸಾಧ್ವೀ ಭರ್ತೃಲೋಕಮತಿಃ ಸತೀ ।
ಪಿತ್ರಾ ನಿಷಿದ್ಧಾ ಸ್ನೇಹೇನ ವೈಧವ್ಯಂ ಪ್ರತ್ಯಪದ್ಯತ ॥ ೫೭ ॥
ಮುನೇಃ ಪತ್ನ್ಯೋಪದಿಷ್ಟಂ ಯತ್ಸೋಮವಾರವ್ರತಂ ಶುಭಂ ।
ನ ತತ್ಯಾಜ ಶುಭಾಚಾರಾ ವೈಧವ್ಯಂ ಪ್ರಾಪ್ತವತ್ಯಪಿ ॥ ೫೮ ॥
ಏವಂ ಚತುರ್ದಶೇ ವರ್ಷೇ ದುಃಖಂ ಪ್ರಾಪ್ಯ ಸುದಾರುಣಂ ।
ಧ್ಯಾಯಂತೀ ಶಿವಪಾದಾಬ್ಜಂ ವತ್ಸರತ್ರಯಮತ್ಯಗಾತ್ ॥ ೫೯ ॥
ಪುತ್ರಶೋಕಾದಿವೋನ್ಮತ್ತಮಿಂದ್ರಸೇನಂ ಮಹೀಪತಿಂ ।
ಪ್ರಸಹ್ಯ ತಸ್ಯ ದಾಯಾದಾಃ ಸಪ್ತಾಂಗಂ ಜಹ್ರುರೋಜಸಾ ॥ ೬೦ ॥
ಹೃತಸಿಂಹಾಸನಃ ಶೂರೈರ್ದಾಯಾದ್ಯೈಃ ಸೋಽಪ್ರಜೋನೃಪಃ ।
ನಿಗೃಹ್ಯ ಕಾರಾಭವನೇ ಸಪತ್ನೀಕೋ ನಿವೇಶಿತಃ ॥ ೬೧ ॥
ಚಂದ್ರಾಂಗದೋಽಪಿ ತತ್ಪುತ್ರೋ ನಿಮಗ್ನೋ ಯಮುನಾಜಲೇ ।
ಅಧೋಽಧೋ ಮಜ್ಜಮಾನೋಽಸೌ ದದರ್ಶೋರಗಕಾಮಿನೀಃ ॥ ೬೨ ॥

---

೫೬. ಅವನು ನೀರಿನಲ್ಲಿ ಮುಳುಗಿದ ಅಳಿಯನಿಗೆ ಅಲ್ಲಿ ನೆರೆದಿರುವ ಅವನ ಬಂಧುಗಳಿಂದ ಉತ್ತರಕ್ರಿಯೆಯನ್ನು ಸಂಪೂರ್ಣವಾಗಿ ಮಾಡಿಸಿದನು.

೫೭. ಪತಿವ್ರತೆಯಾದ ಆ ಸೀಮಂತಿನಿಯು ಸಹಗಮನ ಮಾಡಲಿಚ್ಛೆಯುಳ್ಳವಳಾಗಲು ತಂದೆಯು ಸ್ನೇಹದಿಂದ ಅವಳನ್ನು ತಡೆದನು. ಆಗ ಅವಳು ವಿಧವೆಯಾದಳು.

೫೮. ಅವಳು ವಿಧವೆಯಾದರೂ ಒಳ್ಳೆಯ ನಡತೆಯುಳ್ಳವಳಾಗಿ ಮೈತ್ರೇಯಿಯು ಉಪದೇಶಿಸಿದ ಸೋಮವಾರದ ಶುಭ ವ್ರತವನ್ನು ಬಿಡಲಿಲ್ಲ.

೫೯. ಅವಳು ಹೀಗೆ ಹದಿನಾಲ್ಕನೆಯ ವರ್ಷದಲ್ಲಿ ದಾರುಣವಾದ ವೈಧವ್ಯ ದುಃಖವನ್ನು ಹೊಂದಿ ಶಿವನ ಅಡಿದಾವರೆಗಳನ್ನೇ ಧ್ಯಾನಿಸುತ್ತಿರಲು ಮೂರು ವರ್ಷಗಳು ಕಳೆದುವು.

೬೦. ಮಗನು ಮಡಿದ ಶೋಕದಿಂದ ಹುಚ್ಚನಂತಾದ ಇಂದ್ರಸೇನ ರಾಜನನ್ನು ಅವನ ದಾಯಾದರು ಬಲಾತ್ಕಾರದಿಂದ ಸೋಲಿಸಿ ಸಪ್ತಾಂಗಸಹಿತವಾದ ರಾಜ್ಯವನ್ನು ಕಿತ್ತುಕೊಂಡರು.

೬೧. ಶೂರರಾದ ಆ ದಾಯಾದರು ಮಕ್ಕಳಿಲ್ಲದ ಇಂದ್ರಸೇನನ ಸಿಂಹಾಸನವನ್ನು ಅಪಹರಿಸಿ ಅವನನ್ನು ಪತ್ನಿಯರೊಡನೆ ಬಂಧನದಲ್ಲಿಟ್ಟರು.

೬೨. ಅವನ ತನಯನಾದ ಚಂದ್ರಾಂಗದನೂ ಯಮುನಾಜಲದಲ್ಲಿ ಮುಳುಗಿ ಕೆಳಕೆಳಗೆ ಹೋಗುತ್ತಾ ಅಲ್ಲಿ ನಾಗಕನ್ಯೆಯರನ್ನು ಕಂಡನು.

CC-0. Jangamwadi Math Collection. Digitized by eGangotri

ಜಲಕ್ರೀಡಾಸು ಸಕ್ತಾಸ್ತಾ ದೃಷ್ಟ್ವಾ ರಾಜಕುಮಾರಕಂ ।
ವಿಸ್ಮಿತಾಸ್ತಮಥೋ ನಿನ್ಯುಃ ಪಾತಾಲಂ ಪನ್ನಗಾಲಯಂ ॥ ೬೩ ॥
ಸ ನೀಯಮಾನಸ್ತರಸಾ ಪನ್ನಗೀಭಿರ್ನೃಪಾತ್ಮಜಃ ।
ತಕ್ಷಕಸ್ಯ ಪುರಂ ರಮ್ಯಂ ವಿವೇಶ ಪರಮಾಽದ್ಭುತಂ ॥ ೬೪ ॥
ಸೋಽಪಶ್ಯದ್ರಾಜತನಯೋ ಮಹೇಂದ್ರಭವನೋಪಮಂ ।
ಮಹಾರತ್ನಪರಿಭ್ರಾಜನ್ಮಯೂಖಪರಿದೀಪಿತಂ ॥ ೬೫ ॥
ವಜ್ರವೈಡೂರ್ಯಪಾಚಾದಿ ಪ್ರಾಸಾದಶತಸಂಕುಲಂ ।
ಮಾಣಿಕ್ಯಗೋಪುರದ್ವಾರಂ ಮುಕ್ತಾದಾಮಭಿರುಜ್ಜ್ವಲಂ ॥ ೬೬ ॥
ಚಂಧ್ರಕಾಂತಸ್ಥಲಂ ರಮ್ಯಂ ಹೇಮದ್ವಾರಕಪಾಟಕಂ ।
ಅನೇಕಶತಸಾಹಸ್ರಮಣಿದೀಪವಿರಾಜಿತಂ ॥ ೬೭ ॥
ತತ್ರಾಽಪಶ್ಯತ್ಸಭಾಮಧ್ಯೇ ನಿಷಣ್ಣಂ ರತ್ನವಿಷ್ಟರೇ ।
ತಕ್ಷಕಂ ಪನ್ನಗಾಽಧೀಶಂ ಫಣಾಽನೇಕಶತೋಜ್ಜ್ವಲಂ ॥ ೬೮ ॥
ದಿವ್ಯಾಂಬರಧರಂ ದೀಪ್ತಂ ರತ್ನಕುಂಡಲರಾಜಿತಂ ।
ನಾನಾರತ್ನಪರಿಕ್ಷಿಪ್ತಮುಕುಟದ್ಯುತಿರಂಜಿತಂ ॥ ೬೯ ॥
ಫಣಾಮಣಿಮಯೂಖಾಢ್ಯೈರಸಂಖ್ಯೈಃ ಪನ್ನಗೋತ್ತಮೈಃ ।
ಉಪಾಸಿತಂ ಪ್ರಾಂಜಲಿಭಿಶ್ಚಿತ್ರರತ್ನವಿಭೂಷಿತೈಃ ॥ ೭೦ ॥

---

೬೩. ಜಲಕ್ರೀಡೆಯಲ್ಲಿ ಆಸಕ್ತರಾದ ಆ ನಾಗಕನ್ಯೆಯರು ರಾಜಕುಮಾರನನ್ನು ಕಂಡು ವಿಸ್ಮಯಗೊಂಡು ಅವನನ್ನು ಪಾತಾಳಕ್ಕೆ ಕರೆದುಕೊಂಡು ಹೋದರು.

೬೪. ಪನ್ನಗಸ್ತ್ರೀಯರಿಂದ ಕರೆದುಕೊಂಡುಹೋಗಲ್ಪಡುತ್ತಿರುವ ಆ ರಾಜಕುಮಾರನು ಆಶ್ಚರ್ಯಕರವಾದ ತಕ್ಷಕನ ರಮ್ಯನಗರವನ್ನು ಸೇರಿದನು.

೬೫–೬೭. ಅವನು ದೇವೇಂದ್ರನ ಮನೆಯಂತಿರುವುದೂ, ಅತಿಶಯ ರತ್ನಗಳ ಕಾಂತಿಗಳಿಂದ ಬೆಳಗುತ್ತಿರುವುದೂ, ವಜ್ರವೈಡೂರ್ಯಾದಿಗಳ ಅನೇಕ ಪ್ರಾಸಾದಗಳಿಂದ ಪ್ರಕಾಶಮಾನವಾದದೂ, ಮಾಣಿಕ್ಯದ ಗೋಪುರದ್ವಾರವುಳ್ಳುದೂ, ಮುತ್ತಿನ ಸರಗಳಿಂದ ಉಜ್ವಲವಾದುದೂ, ಚಂದ್ರಕಾಂತಶಿಲೆಯ ಸ್ಥಳವುಳ್ಳುದೂ, ಸುವರ್ಣದ ಬಾಗಿಲುಗಳುಳ್ಳುದೂ, ಅನೇಕ ಲಕ್ಷ ರತ್ನದೀಪಗಳಿಂದ ವಿರಾಜಮಾನವಾದುದೂ ಆಗಿರುವ ಆ ತಕ್ಷಕನ ನಗರವನ್ನು ಕಂಡನು.

೬೮–೭೦. ಅಲ್ಲಿ ಸಭೆಯ ಮಧ್ಯದಲ್ಲಿ ರತ್ನಸಂಹಾಸನದಲ್ಲಿ ಕುಳಿತು ಅನೇಕ ಹೆಡೆಗಳಿಂದ ಪ್ರಕಾಶಿಸುವವನೂ, ದಿವ್ಯವಸ್ತ್ರವನ್ನುಟ್ಟಿರುವವನೂ, ರತ್ನಕುಂಡಲಗಳಿಂದ ಶೋಭಿಸುತ್ತಿರುವವನೂ, ಅನೇಕ ರತ್ನಗಳಿಂದ ಕೆತ್ತಲ್ಪಟ್ಟ ಕಿರೀಟದ ಕಾಂತಿಗಳಿಂದ ವಿರಾಜಿತನೂ, ಹೆಡೆಯಲ್ಲಿರುವ ರತ್ನಪ್ರಭೆಗಳುಳ್ಳ

CC-0. Jangamwadi Math Collection. Digitized by eGangotri

ರೂಪಯೌವನಮಾಧುರ್ಯವಿಲಾಸಗತಿಶೋಭಿನಾ ।
ನಾಗಕನ್ಯಾಸಹಸ್ರೇಣ ಸಮಂತಾತ್ಪರಿವಾರಿತಂ ॥ ೭೧ ॥
ದಿವ್ಯಾಭರಣದೀಪ್ತಾಂಗಂ ದಿವ್ಯಚಂದನಚರ್ಚಿತಂ ।
ಕಾಲಾಗ್ನಿಮಿವ ದುರ್ಧರ್ಷಂ ತೇಜಸಾದಿತ್ಯಸನ್ನಿಭಂ ॥ ೭೨ ॥
ದೃಷ್ಟ್ವಾ ರಾಜಸುತೋ ಧೀರಃ ಪ್ರಣಿಪತ್ಯ ಸಭಾಸ್ಥಲೇ ।
ಉತ್ಥಿತಃ ಪ್ರಾಂಜಲಿಸ್ತಸ್ಯ ತೇಜಸಾಽಕ್ಷಿಪ್ತಲೋಚನಃ ॥ ೭೩ ॥
ನಾಗರಾಜೋಽಪಿ ತಂ ದೃಷ್ಟ್ವಾ ರಾಜಪುತ್ರಂ ಮನೋರಮಂ ।
ಕೋಽಯಂ ಕಸ್ಮಾದಿಹಾಯಾತ ಇತಿ ಪಪ್ರಚ್ಛ ಪನ್ನಗೀಃ ॥ ೭೪ ॥
ತಾ ಊಚುರ್ಯಮುನಾತೋಯೇ ದೃಷ್ಟೋಽಸ್ಮಾಭಿರ್ಯದೃಚ್ಛಯಾ ।
ಅಜ್ಞಾತಕುಲನಾಮಾಽಯಮಾನೀತಸ್ತವ ಸನ್ನಿಧಿಂ ॥ ೭೫ ॥
ಅಥ ಪೃಷ್ಟೋ ರಾಜಪುತ್ರಸ್ತಕ್ಷಕೇಣ ಮಹಾತ್ಮನಾ ।
ಕಸ್ಯಾಽಸಿ ತನಯಃ ಕಸ್ತ್ವಂ ಕೋ ದೇಶಃ ಕಥಮಾಗತಃ ॥ ೭೬ ॥
ರಾಜಪುತ್ರೋ ವಚಃ ಶ್ರುತ್ವಾ ತಕ್ಷಕಂ ವಾಕ್ಯಮಬ್ರವೀತ್ ॥ ೭೭ ॥

---

ನಾನಾವಿಧರತ್ನಗಳಿಂದ ವಿಭೂಷಿತರಾಗಿ ಕೈಮುಗಿದುಕೊಂಡಿರುವ ಅಸಂಖ್ಯರಾದ ನಾಗೋತ್ತಮರಿಂದ ಸೇವಿಸಲ್ಪಟ್ಟವನೂ, ಸೌಂದರ್ಯಯೌವನಾದಿಗಳಿಂದ ಪ್ರಕಾಶಿಸುತ್ತಿರುವ ಅನೇಕಸಾವಿರ ನಾಗಕನ್ಯೆಯರಿಂದ ಸುತ್ತುವರೆಯಲ್ಪಟ್ಟವನೂ, ದಿವ್ಯಭೂಷಣಗಳಿಂದ ಪ್ರಕಾಶಕೊಂಡ ಅವಯವಗಳುಳ್ಳವನೂ, ದಿವ್ಯಗಂಧಾನುಲಿಪ್ತನೂ, ಪ್ರಳಯಕಾಲದ ಅಗ್ನಿಯಂತೆ ಅತಿಕ್ರಮಿಸಲಶಕ್ಯನೂ, ಸೂರ್ಯನಂತಿರುವವನೂ ಆಗಿರುವ ತಕ್ಷಕನನ್ನು ನೋಡಿದನು.

೭೩. ಧೀರನಾದ ಆ ರಾಜಕುಮಾರನು ಸಭೆಯಲ್ಲಿ ಅವನನ್ನು ಕಂಡ ಕೂಡಲೆ ತೇಜಸ್ಸಿನಿಂದ ಸೆಳೆಯಲ್ಪಟ್ಟ ಕಣ್ಣುಗಳುಳ್ಳವನಾಗಿ ನಮಸ್ಕರಿಸಿ ಕೈಮುಗಿದುಕೊಂಡು ನಿಂತನು.

೭೪. ತಕ್ಷಕನೂ ಆ ಸುಂದರ ರಾಜಕುಮಾರನನ್ನು ಕಂಡು, "ಇವನಾರು? ಎಲ್ಲಿಂದ ಇಲ್ಲಿಗೆ ಬಂದನು?" ಎಂದು ನಾಗಕನ್ಯೆಯರನ್ನು ಪ್ರಶ್ನಿಸಿದನು.

೭೫. ಅವರು, "ನಾವು ಇವನನ್ನು ಯಮುನಾಜಲದಲ್ಲಿ ಆಕಸ್ಮಿಕವಾಗಿ ಕಂಡೆವು. ಇವನ ಕುಲ ಮತ್ತು ಹೆಸರನ್ನರಿಯದೆ ನಿನ್ನೆಡೆಗೆ ಕರೆತಂದೆವು" ಎಂದರು.

೭೬. ಮಹಾತ್ಮನಾದ ತಕ್ಷಕನು ಆ ರಾಜಪುತ್ರನನ್ನು ಕುರಿತು, "ನೀನಾರು? ನಿನ್ನ ತಂದೆ ಯಾರು? ನಿನ್ನ ದೇಶವಾವುದು? ಇಲ್ಲಿಗೆ ಹೇಗೆ ಬಂದೆ?" ಎಂದು ಕೇಳಿದನು.

೭೭. ರಾಜಕುಮಾರನು ಆ ತಕ್ಷಕನ ಮಾತನ್ನು ಕೇಳಿ ಇಂತೆಂದನು.

CC-0. Jangamwadi Math Collection. Digitized by eGangotri

ರಾಜಪುತ್ರ ಉವಾಚ :—

ಅಸ್ತಿ ಭೂಮಂಡಲೇ ಕಶ್ಚಿದ್ದೇಶೋ ನಿಷಧಸಂಜ್ಞಕಃ ।
ತಸ್ಯಾಽಧಿಪೋಽಭವದ್ರಾಜಾ ನಲೋ ನಾಮ ಮಹಾಯಶಾಃ ।
ಸ ಪುಣ್ಯಕೀರ್ತಿಃ ಕ್ಷಿತಿಪೋ ದಮಯಂತೀಪತಿಃ ಶುಭಃ ॥ ೭೮ ॥
ತಸ್ಮಾದಪೀಂದ್ರಸೇನಾಖ್ಯಸ್ತಸ್ಯ ಪುತ್ರೋ ಮಹಾಬಲಃ ।
ಚಂದ್ರಾಂಗದೋಽಸ್ಮಿ ನಾಮ್ನಾಹಂ ನವೋಢಃ ಶ್ವಶುರಾಲಯೇ ।
ವಿಹರನ್ಯಮುನಾತೋಯೇ ನಿಮಗ್ನೋ ದೈವಚೋದಿತಃ ॥ ೭೯ ॥
ಏತಾಭಿಃ ಪನ್ನಗಸ್ತ್ರೀಭಿರಾನೀತೋಽಸ್ಮಿ ತವಾಂಽತಿಕಂ ।
ದೃಷ್ಟ್ವಾಽಹಂ ತವ ಪಾದಾಬ್ಜಂ ಪುಣ್ಯೈರ್ಜನ್ಮಾಂತರಾರ್ಜಿತೈಃ ॥ ೮೦ ॥
ಅದ್ಯ ಧನ್ಯೋಽಸ್ಮಿ ಧನ್ಯೋಽಸ್ಮಿ ಕೃತಾರ್ಥೌ ಪಿತರೌ ಮಮ ।
ಯತ್ಪ್ರೇಕ್ಷಿತೋಽಹಂ ಕಾರುಣ್ಯಾತ್ತ್ವಯಾ ಸಂಭಾಷಿತೋಽಪಿ ಚ ॥ ೮೧ ॥

ಸೂತ ಉವಾಚ :—

ಇತ್ಯುದಾರಮಸಂಭ್ರಾಂತಂ ವಚಃ ಶ್ರುತ್ವಾಽತಿಪೇಶಲಂ ।
ತಕ್ಷಕಃ ಪುನರೌತ್ಸುಕ್ಯಾದ್ಬಭಾಷೇ ರಾಜನಂದನಂ ॥ ೮೨ ॥

ತಕ್ಷಕ ಉವಾಚ :—

ಭೋ ಭೋ ನರೇಂದ್ರದಾಯಾದ ಮಾಭೈಷೀರ್ಧೀರತಾಂ ವ್ರಜ ।
ಸರ್ವದೇವೇಷು ಕೋ ದೇವೋ ಯುಷ್ಮಾಭಿಃ ಪೂಜ್ಯತೇ ಸದಾ ॥ ೮೩ ॥

---

೭೮–೭೯. ರಾಜಪುತ್ರನು ಹೇಳುತ್ತಾನೆ:—"ಭೂಮಂಡಲದಲ್ಲಿ ನಿಷಧವೆಂಬ ಒಂದು ದೇಶವಿರುವುದು. ಅದಕ್ಕೆ ದಮಯಂತೀಪತಿಯಾದ ಪವಿತ್ರಕೀರ್ತಿಯುಳ್ಳ ನಳನೆಂಬವನು ರಾಜನಾಗಿದ್ದನು. ನಾನು ಅವನ ಮಗನಾದ ಇಂದ್ರಸೇನನ ತನಯನು. ಚಂದ್ರಾಂಗದನೆಂದು ನನ್ನ ಹೆಸರು. ಹೊಸದಾಗಿ ವಿವಾಹಮಾಡಿಕೊಂಡ ನಾನು ಮಾವನ ಮನೆಯಲ್ಲಿ ವಾಸಿಸುತ್ತ ಯಮುನಾಜಲದಲ್ಲಿ ವಿಹರಿಸಿ ದೈವವಶದಿಂದ ಮುಳುಗಿಹೋದೆನು.

೮೦–೮೧. ಈ ನಾಗಕನ್ಯೆಯರು ನನ್ನನ್ನು ನಿನ್ನ ಬಳಿಗೆ ಕರೆತಂದರು. ನಾನು ಜನ್ಮಾಂತರದ ಪುಣ್ಯಗಳಿಂದ ನಿನ್ನ ಚರಣಕಮಲವನ್ನು ಕಂಡೆನು. ನಾನು ನಿನ್ನ ದರ್ಶನಮಾಡಿದುದರಿಂದಲೂ, ನೀನು ದಯೆಯಿಂದ ನನ್ನೊಡನೆ ಮಾತನಾಡಿದುದರಿಂದಲೂ, ಧನ್ಯನಾದೆನು. ನನ್ನ ತಂದೆತಾಯಿಗಳು ಈಗ ಕೃತಾರ್ಥರಾದರು."

೮೨. ಸೂತನು ಹೇಳುತ್ತಾನೆ:— ತಕ್ಷಕನು ಆ ರಾಜಕುಮಾರನ ಉದಾರವೂ, ಭ್ರಾಂತಿಯಿಲ್ಲದುದೂ, ಅತಿ ಮೃದುವೂ ಆಗಿರುವ ಮಾತನ್ನು ಕೇಳಿ ಕುತೂಹಲದಿಂದ ಅವನನ್ನು ಕುರಿತು ಇಂತೆಂದನು.

೮೩. ತಕ್ಷಕನು ಹೇಳುತ್ತಾನೆ:—ಎಲೈ ರಾಜಕುಮಾರನೆ! ಹೆದರಬೇಡ.

CC-0. Jangamwadi Math Collection. Digitized by eGangotri

ರಾಜಪುತ್ರ ಉವಾಚ :—

ಯೋ ದೇವಃ ಸರ್ವದೇವೇಷು ಮಹಾದೇವ ಇತಿ ಸ್ಮೃತಃ ।
ಪೂಜ್ಯತೇ ಸಹಿ ವಿಶ್ವಾತ್ಮಾ ಶಿವೋಽಸ್ಮಾಭಿರುಮಾಪತಿಃ ॥ ೮೪ ॥
ತಸ್ಯ ತೇಜೋಽಂಶಲೇಶೇನ ರಜಸಾ ಚ ಪ್ರಜಾಪತಿಃ ।
ಕೃತರೂಪೋಽಸೃಜದ್ವಿಶ್ವಂ ಸನಃ ಪೂಜ್ಯೋ ಮಹೇಶ್ವರಃ ॥ ೮೫ ॥
ಯಸ್ಯಾಂಶಾತ್ಸಾತ್ವಿಕಂ ದಿವ್ಯಂ ಬಿಭ್ರದ್ವಿಷ್ಣುಃ ಸನಾತನಃ ।
ವಿಶ್ವಂ ಬಿಭರ್ತಿ ಭೂತಾತ್ಮಾ ಶಿವೋಽಸ್ಮಾಭಿಃ ಸ ಪೂಜ್ಯತೇ ॥ ೮೬ ॥
ಯಸ್ಯಾಂಶಾತ್ತಾಮಸಾಜ್ಜಾತೋ ರುದ್ರಃ ಕಾಲಾಗ್ನಿಸನ್ನಿಭಃ ।
ವಿಶ್ವಮೇತದ್ಧರತ್ಯಂತೇ ಸ ಪೂಜ್ಯೋಽಸ್ಮಾಭಿರೀಶ್ವರಃ ॥ ೮೭ ॥
ಯೋ ವಿಧಾತಾ ವಿಧಾತುಶ್ಚ ಕಾರಣಸ್ಯಾಪಿ ಕಾರಣಂ ।
ತೇಜಸಾಂ ಪರಮಂ ತೇಜಃ ಸ ಶಿವೋ ನಃ ಪರಾಗತಿಃ ॥ ೮೮ ॥
ಯೋಽಂತಿಕಸ್ಥೋಽಪಿ ದೂರಸ್ಥಃ ಪಾಪೋಪಹತಚೇತಸಾಂ ।
ಅಪರಿಚ್ಛೇದ್ಯಧಾಮಾಽಸೌ ಶಿವೋ ನಃ ಪರಮಾಗತಿಃ ॥ ೮೯ ॥

---

ಧೈರ್ಯವನ್ನು ತಾಳು. ನೀವು ಯಾವಾಗಲೂ ದೇವತೆಗಳಲ್ಲಿ ಯಾವ ದೇವತೆಯನ್ನು ಪೂಜಿಸುತ್ತೀರಿ.''

೮೪. ರಾಜಪುತ್ರನು ಹೇಳುತ್ತಾನೆ:—ಸಕಲ ದೇವತೆಗಳಲ್ಲಿಯೂ ಮಹಾದೇವನೆನಿಸಿಕೊಂಡ ವಿಶ್ವಸ್ವರೂಪನಾದ ಪಾರ್ವತೀಪತಿಯನ್ನು ನಾವು ಆರಾಧಿಸುತ್ತೇವೆ.

೮೫. ಯಾವನ ತೇಜಸ್ಸಿನ ಅಂಶಲೇಶವಾದ ರಜೋಗುಣದಿಂದ ಹುಟ್ಟಿದ ಬ್ರಹ್ಮನು ಪ್ರಪಂಚವನ್ನು ಸೃಜಿಸಿರುವನೊ ಅವನನ್ನು ನಾವು ಆರಾಧಿಸುವೆವು.

೮೬. ಯಾವನ ಅಂಶದಿಂದ ವಿಷ್ಣುವು ಸಾತ್ವಿಕರೂಪವನ್ನು ಧರಿಸಿ ಸರ್ವಾಂತರ್ಯಾಮಿಯಾಗಿ ಪ್ರಪಂಚವನ್ನು ಕಾಪಾಡುವನೊ ಅವನನ್ನು ನಾವು ಪೂಜಿಸುವೆವು.

೮೭. ಯಾವನ ತಾಮಸಾಂಶದಿಂದ ಪ್ರಳಯಕಾಲದ ಅಗ್ನಿಯಂತಿರುವ ರುದ್ರನು ಹುಟ್ಟಿ ಈ ಪ್ರಪಂಚವನ್ನು ನಾಶಗೊಳಿಸುವನೊ ಅವನು ನಮಗೆ ಪೂಜ್ಯನು.

೮೮. ಯಾವನು ಬ್ರಹ್ಮನನ್ನು ಸೃಷ್ಟಿಮಾಡಿದವನೊ, ಕಾರಣಕ್ಕೆ ಕಾರಣನೊ, ತೇಜಸ್ಸುಗಳಲ್ಲಿ ಉತ್ತಮ ತೇಜಸ್ಸೊ, ಆ ಶಿವನು ನಮಗೆ ಪರಮಗತಿಯು.

೮೯. ಪಾಪಿಷ್ಠರಿಗೆ ಹತ್ತಿರದಲ್ಲಿದ್ದರೂ ದೂರನಾಗುವ, ತಿಳಿಯಲಾಗದ ಸ್ಥಾನವುಳ್ಳ ಶಿವನು ನಮಗೆ ಪರಮಗತಿಯು.

CC-0. Jangamwadi Math Collection. Digitized by eGangotri

ಯೋಽಗ್ನೌ ತಿಷ್ಠತಿ ಯೋ ಭೂಮೌ ಯೋ ವಾಯೌ ಸಲಿಲೇ ಚ ಯಃ ।
ಯ ಆಕಾಶೇ ಚ ವಿಶ್ವಾತ್ಮಾ ಸ ಪೂಜ್ಯೋ ನಃ ಸದಾಶಿವಃ ॥ ೯೦ ॥
ಯಃ ಸಾಕ್ಷೀ ಸರ್ವಭೂತಾನಾಂ ಯ ಆತ್ಮಸ್ಥೋ ನಿರಂಜನಃ ।
ಯಸ್ಯೇಚ್ಛಾವಶಗೋ ಲೋಕಃ ಸೋಽಸ್ಮಾಭಿಃ ಪೂಜ್ಯತೇ ಶಿವಃ ॥ ೯೧ ॥
ಯಮೇಕಮಾದ್ಯಂ ಪುರುಷಂ ಪುರಾಣಂ
ವದಂತಿ ಭಿನ್ನಂ ಗುಣವೈಕೃತೇನ ।
ಕ್ಷೇತ್ರಜ್ಞಮೇಕೇಽಥ ತುರೀಯಮನ್ಯೇ
ಕೂಟಸ್ಥಮನ್ಯೇ ಸ ಶಿವೋ ಗತಿರ್ನಃ ॥ ೯೨ ॥
ಯಂ ನಾಸ್ಪೃಶಂಶ್ಚಿತ್ಯಮಚಿಂತ್ಯತತ್ವಂ
ದುರಂತಧಾಮಾನಮತತ್ಸ್ವರೂಪಂ ।
ಮನೋ ವಚೋ ವೃತ್ತಯ ಆತ್ಮಭಾಜಾಂ
ಸ ಏಷ ಪೂಜ್ಯಃ ಪರಮಃ ಶಿವೋ ನಃ ॥ ೯೩ ॥
ಯಸ್ಯ ಪ್ರಸಾದಂ ಪ್ರತಿಲಭ್ಯ ಸಂತೋ
ವಾಂಛಂತಿ ನೈಂದ್ರಂ ಪದಮುಜ್ಜ್ವಲಂ ವಾ ।
ನಿಸ್ತೀರ್ಣಕರ್ಮಾರ್ಗಲಕಾಲಚಕ್ರಾ
ಶ್ಚರಂತ್ಯಭೀತಾಃ ಸಶಿವೋ ಗತಿರ್ನಃ ॥ ೯೪ ॥

---

೯೦. ಯಾವನು ಅಗ್ನಿಯಲ್ಲಿಯೂ, ಭೂಮಿಯಲ್ಲಿಯೂ, ಗಾಳಿಯಲ್ಲಿಯೂ, ನೀರಿನಲ್ಲಿಯೂ, ಆಕಾಶದಲ್ಲಿಯೂ ಇರುವನೊ ಆ ವಿಶ್ವಸ್ವರೂಪನಾದ ಶಿವನು ನಮಗೆ ಪೂಜ್ಯನು.

೯೧. ಯಾವನು ಸಕಲ ಭೂತಗಳಿಗೆ ಸಾಕ್ಷಿಯೊ, ಯಾವ ನಿರ್ದುಷ್ಟನೂ ಸಕಲ ಜೀವರಲ್ಲಿಯೂ ಅಂತರ್ಯಾಮಿಯಾಗಿರುವನೊ, ಲೋಕವು ಯಾವನ ಇಚ್ಛೆಗೆ ಅಧೀನನಾದುದೊ ಆ ಶಿವನನ್ನು ನಾವು ಪೂಜಿಸುತ್ತೇವೆ.

೯೨. ಕೆಲವರು ಅನಾದಿಪುರಾಣಪುರುಷನಾದ ಯಾವನೊಬ್ಬನನ್ನೇ ಗುಣ ವಿಕಾರಗಳಿಂದ ಭಿನ್ನನನ್ನಾಗಿಯೂ, ಕೆಲವರು ನಾಲ್ಕನೆಯವನನ್ನಾಗಿಯೂ, ಕೆಲವರು ಕೂಟಸ್ಥನನ್ನಾಗಿಯೂ ಹೇಳುತ್ತಾರೆಯೋ ಆ ಶಿವನು ನಮಗೆ ಗತಿಯು.

೯೩. ಪ್ರಾಣಿಗಳ ಮನಸ್ಸು ಮತ್ತು ವಚನಗಳು ಚಿತ್ಸುರೂಪನೂ, ಚಿಂತಿಸ ಲಾಗದ ಸ್ವರೂಪವುಳ್ಳವನೂ, ಹೊದಲಾಗದ ಸ್ಥಾನವುಳ್ಳವನೂ, ಪ್ರಪಂಚ ವಿಲಕ್ಷಣಸ್ವರೂಪನೂ ಆದ ಯಾವನನ್ನು ಚಿಂತಿಸಲು ಮತ್ತು ಹೇಳಲಶಕ್ಯವಾಗಿ ರುವುವೊ ಆ ಪರಶಿವನು ನಮಗೆ ಪೂಜ್ಯನು.

೯೪. ಸಜ್ಜನರು ಯಾವನ ಅನುಗ್ರಹವನ್ನು ಪಡೆದು ಇಂದ್ರನ ಉತ್ಕೃಷ್ಟ

CC-0. Jangamwadi Math Collection. Digitized by eGangotri

ಯಸ್ಯ ಸ್ಮೃತಿಃ ಸಕಲಪಾಪರುಜಾಂ ವಿಘಾತಂ
ಸದ್ಯಃ ಕರೋತ್ಯಪಿ ಚ ಪುಲ್ಕಸಜನ್ಮಭಾಜಾಂ ।
ಯಸ್ಯ ಸ್ವರೂಪಮಖಿಲಂ ಶ್ರುತಿಭಿರ್ವಿಮೃಗ್ಯಂ
ತಸ್ಮೈ ಶಿವಾಯ ಸತತಂ ಕರವಾಮ ಪೂಜಾಂ ॥ ೯೫ ॥
ಯನ್ಮೂರ್ಧ್ನಿಲಬ್ಧನಿಲಯಾ ಸುರಲೋಕ ಸಿಂಧು
ರ್ಯಸ್ಯಾಂಗಗಾ ಭಗವತೀ ಜಗದಂಬಿಕಾ ಚ ।
ಯತ್ಕುಂಡಲೇ ತ್ವಹಹ ತಕ್ಷಕ ವಾಸುಕೀ ದ್ವೌ
ಸೋಽಸ್ಮಾಕಮೇವ ಗತಿರರ್ಧಶಶಾಂಕಮೌಲಿಃ ॥ ೯೬ ॥
ಜಯತಿ ನಿಗಮಚೂಡಾಗ್ರೇಷು ಯಸ್ಯಾಂಘ್ರಿಪದ್ಮಂ
ಜಯತಿ ಚ ಹೃದಿ ನಿತ್ಯಂ ಯೋಗಿನಾಂ ಯಸ್ಯಮೂರ್ತಿಃ ।
ಜಯತಿ ಸಕಲತತ್ತ್ವೋದ್ಭಾಸನಂ ಯಸ್ಯ ಮೂರ್ತಿಃ
ಸ ವಿಜಿತ ಗುಣಸರ್ಗಃ ಪೂಜ್ಯತೇಽಸ್ಮಾಭಿರೀಶಃ ॥ ೯೭ ॥

ಸೂತ ಉವಾಚ :—

ಇತ್ಯಾಕರ್ಣ್ಯ ವಚಸ್ತಸ್ಯ ತಕ್ಷಕಃ ಪ್ರೀತಮಾನಸಃ ।
ಜಾತಭಕ್ತಿರ್ಮಹಾದೇವೇ ರಾಜಪುತ್ರಮಭಾಷತ ॥ ೯೮ ॥

---

ಪದವಿಯನ್ನೂ ಬಯಸದೆ ಕರ್ಮಬಂಧನವನ್ನೂ, ಕಾಲಚಕ್ರವನ್ನೂ ದಾಟಿ ಭಯವಿಲ್ಲದವರಾಗುವರೊ ಆ ಶಿವನು ನಮಗೆ ಗತಿಯು.

೯೫. ಯಾವನ ಸ್ಮರಣೆಯು ಚಂಡಾಲ ಜಾತಿಯಲ್ಲಿ ಹುಟ್ಟಿದರೂ ಮರ್ತ್ಯರ ಸಮಸ್ತ ಪಾಪಗಳನ್ನು ಕೂಡಲೆ ಪರಿಹರಿಸುವುದೊ, ಯಾವನ ಸ್ವರೂಪವನ್ನು ಶ್ರುತಿಗಳಿಂದ ಹುಡುಕಲು ಸಾಧ್ಯವೊ ಆ ಶಿವನನ್ನು ನಾವು ಯಾವಾಗಲೂ ಪೂಜಿಸುವೆವು.

೯೬. ಯಾವನ ತಲೆಯಲ್ಲಿ ಗಂಗೆಯು ವಾಸವಾಗಿರುವಳೊ, ಯಾವನ ದೇಹದಲ್ಲಿ ಜಗನ್ಮಾತೆಯಾದ ಪಾರ್ವತಿಯು ನೆಲಸಿರುವಳೊ, ತಕ್ಷಕ, ವಾಸುಕಿಗಳು ಯಾವನ ಕುಂಡಲಗಳೊ ಆ ಚಂದ್ರಮೌಳೀಶ್ವರನೇ ನಮಗೆ ಗತಿಯು.

೯೭. ಯಾವನ ಅಡಿದಾವರೆಗಳು ವೇದಾಂತಗಳಲ್ಲಿ ಉತ್ಕೃಷ್ಟಸ್ಥಾನವನ್ನು ಪಡೆದಿರುವುವೊ, ಯಾವನ ಮೂರ್ತಿಯು ಯೋಗಿಗಳ ಹೃದಯದಲ್ಲಿ ಉತ್ತಮವಾಗಿ ನೆಲಸಿ ಸಕಲತತ್ವಗಳನ್ನು ಪ್ರಕಾಶಗೊಳಿಸುವುದೊ; ಆ ಗುಣಬಾಹ್ಯನಾದ ಶಿವನು ನಮಗೆ ಪೂಜ್ಯನು.

೯೮. ಸೂತನು ಹೇಳುತ್ತಾನೆ:—ತಕ್ಷಕನು ಚಂದ್ರಾಂಗದನ ಈ ಮಾತನ್ನು ಕೇಳಿ ಸಂತೋಷಗೊಂಡು ಮಹಾದೇವನಲ್ಲಿ ಭಕ್ತಿಯುಳ್ಳವನಾಗಿ ಆ ಕುಮಾರನನ್ನು ಕುರಿತು ಹೀಗೆಂದನು.

CC-0. Jangamwadi Math Collection. Digitized by eGangotri

ತಕ್ಷಕ ಉವಾಚ:—

ಪರಿತುಷ್ಟೋಽಸ್ಮಿ ಭದ್ರಂ ಸ್ಯಾತ್ತವ ರಾಜೇಂದ್ರನಂದನ ।
ಬಾಲೋಽಪಿ ಯತ್ಪರಂ ತತ್ವಂ ವೇತ್ಸಿ ಶೈವಂ ಪರಾತ್ಪರಂ ॥ ೯೯ ॥
ಏಷ ರತ್ನಮಯೋ ಲೋಕ ಏತಾಶ್ಚಾರುದೃಶೋಽಬಲಾಃ ।
ಏತೇ ಕಲ್ಪದ್ರುಮಾಃ ಸರ್ವೇ ವಾಪ್ಯೋಽಮೃತರಸಾಂಭಸಃ ॥ ೧೦೦ ॥
ನಾಽತ್ರ ಮೃತ್ಯುಭಯಂ ಘೋರಂ ನ ಜರಾರೋಗಪೀಡನಂ ।
ಯಥೇಷ್ಟಂ ವಿಹರಾಽತ್ರೈವ ಭುಂಕ್ಷ್ವ ಭೋಗಾನ್ಯಥೋಚಿತಾನ್ ॥ ೧೦೧ ॥
ಇತ್ಯುಕ್ತೋ ನಾಗರಾಜೇನ ಸ ರಾಜೇಂದ್ರಕುಮಾರಕಃ ।
ಪ್ರತ್ಯುವಾಚ ಪರಂ ಪ್ರೀತ್ಯಾ ಕೃತಾಂಜಲಿರುದಾರಧೀಃ ॥ ೧೦೨ ॥
ಕೃತದಾರೋಽಸ್ಮ್ಯಹಂ ಕಾಲೇ ಸುವ್ರತಾ ಗೃಹಿಣೀ ಮಮ ।
ಶಿವಪೂಜಾಪರಾ ನಿತ್ಯಂ ಪಿತರಾವೇಕಪುತ್ರಕೌ ॥ ೧೦೩ ॥
ತೇತ್ವದ್ಯ ಮಾಂ ಮೃತಂ ಮತ್ವಾ ಶೋಕೇನ ಮಹತಾವೃತಾಃ ।
ಪ್ರಾಯಃ ಪ್ರಾಣೈರ್ವಿಯುಜ್ಯಂತೇ ದೈವಾತ್ಪ್ರಾಣಾನ್ನಹಂತಿ ವಾ ॥ ೧೦೪ ॥
ಅತೋ ಮಯಾ ಬಹುತಿಥಂ ನಾಽತ್ರ ಸ್ಥೇಯಂ ಕಥಂಚನ ।
ತಮೇವ ಲೋಕಂ ಕೃಪಯಾ ಮಾಂ ಪ್ರಾಪಯಿತುಮರ್ಹಸಿ ॥ ೧೦೫ ॥

---

೯೯. ತಕ್ಷಕನು ಹೇಳುತ್ತಾನೆ:—ರಾಜಕುಮಾರ! ನೀನು ಬಾಲಕನಾದರೂ ಸರ್ವೋತ್ಕೃಷ್ಟವಾದ ಶಿವತತ್ವವನ್ನು ತಿಳಿದುದರಿಂದ ನಾನು ಸಂತೋಷಗೊಂಡಿದ್ದೇನೆ. ನಿನಗೆ ಮಂಗಳವಾಗಲಿ.

೧೦೦. ಈ ಲೋಕವು ರತ್ನಮಯವಾದುದು. ಈ ಹೆಂಗಸರು ಈ ಲೋಕದ ಸುಂದರಿಯರು. ಇವುಗಳೆಲ್ಲ ಕಲ್ಪವೃಕ್ಷಗಳು. ಈ ಕೊಳಗಳು ಅಮೃತಮಯವಾದ ನೀರುಳ್ಳವು.

೧೦೧. ಇಲ್ಲಿ ಮರಣಭಯವೂ, ಮುಪ್ಪು, ರೋಗಗಳ ಬಾಧೆಯೂ ಇರುವುದಿಲ್ಲ. ಇಲ್ಲಿ ಇಷ್ಟಬಂದಂತೆ ವಿಹರಿಸು. ಇಷ್ಟವಾದ ಭೋಗಗಳನ್ನನುಭವಿಸು.

೧೦೨. ನಾಗರಾಜನು ಹೀಗೆ ಹೇಳಲು ಉತ್ಕೃಷ್ಟಬುದ್ಧಿಯುಳ್ಳ ಆ ರಾಜಕುಮಾರನು ಕೈಮುಗಿದುಕೊಂಡು ಅತಿ ಪ್ರೀತಿಯಿಂದ ಉತ್ತರಕೊಟ್ಟನು.

೧೦೩–೧೦೪. "ನಾನು ವಿವಾಹಮಾಡಿಕೊಂಡಿದ್ದೇನೆ. ನನ್ನ ಭಾರ್ಯೆಯು ವ್ರತನಿಷ್ಠಳಾಗಿ ಶಿವಪೂಜಾನಿರತಳಾಗಿದ್ದಾಳೆ. ನನ್ನ ತಂದೆಗೆ ನಾನೊಬ್ಬನೇ ಮಗನು. ಈಗ ಅವರು ನಾನು ಮೃತನಾಗಿದ್ದೇನೆಂದರಿತು ಅತಿ ದುಃಖದಿಂದ ಪ್ರಾಯಃ ಮೃತರಾಗಿರುತ್ತಾರೆ. ಅಥವಾ ದೈವವಶದಿಂದ ಬದುಕಿದ್ದಾರೆ.

೧೦೫. ಆದುದರಿಂದ ನಾನು ಹೆಚ್ಚುಕಾಲ ಇಲ್ಲಿರಬಾರದು. ದಯೆಯಿಂದ ನನ್ನನ್ನು ಅದೇ ಲೋಕಕ್ಕೆ ಕಳುಹಿಸು."

CC-0. Jangamwadi Math Collection. Digitized by eGangotri

ಇತ್ಯುಕ್ತವಂತಂ ನರದೇವಪುತ್ರಂ
ದಿವ್ಯೈರ್ವರಾನ್ನೈಃ ಸುರಪಾದಪೋತ್ಥೈಃ ।
ಆಪ್ಯಾಯಯಿತ್ವಾ ವರಗಂಧವಾಸಃ
ಸ್ರಗ್ರತ್ನದಿವ್ಯಾಭರಣೈರ್ವಿಚಿತ್ರೈಃ ॥ ೧೦೬ ॥
ಸಂತೋಷಯಿತ್ವಾ ವಿವಿಧೈಶ್ಚ ಭೋಗೈಃ
ಪುನರ್ಬಭಾಷೇ ಭುಜಗಾಽಧಿರಾಜಃ ।
ಯದಾ ಯದಾ ತ್ವಂ ಸ್ಮರಸಿ ತ್ವದಗ್ರೇ
ತದಾ ತದಾವಿಷ್ಕ್ರಿಯತೇ ಮಯೇತಿ ॥ ೧೦೭ ॥
ಪುನಶ್ಚ ರಾಜಪುತ್ರಾಯ ತಕ್ಷಕೋಽಶ್ವಂ ಚ ಕಾಮಗಂ ।
ನಾನಾದ್ವೀಪಸಮುದ್ರೇಷು ಲೋಕೇಷು ಚ ನಿರರ್ಗಲಂ ॥ ೧೦೮ ॥
ಛತ್ರವಾನ್ರತ್ನಾಭರಣದಿವ್ಯಾಭರಣವಾಸಸಾಂ ।
ವಾಹನಾಯ ದದಾವೇಕಂ ರಾಕ್ಷಸಂ ಪನ್ನಗೇಶ್ವರಃ ॥ ೧೦೯ ॥
ತತ್ಸಹಾಯಾರ್ಥಮೇಕಂ ಚ ಪನ್ನಗೇಂದ್ರಕುಮಾರಕಂ ।
ನಿಯುಜ್ಯ ತಕ್ಷಕಃ ಪ್ರೀತ್ಯಾ ಗಚ್ಛೇತಿ ವಿಸಸರ್ಜ ತಂ ॥ ೧೧೦ ॥
ಇತಿ ಚಂದ್ರಾಂಗದಃ ಸೋಽಥ ಸಂಗೃಹ್ಯ ವಿವಿಧಂ ಧನಂ ।
ಅಶ್ವಂ ಕಾಮಗಮಾರುಹ್ಯ ತಾಭ್ಯಾಂ ಸಹ ವಿನಿರ್ಯಯೌ ॥ ೧೧೧ ॥

---

೧೦೬–೧೦೭. ರಾಜಕುಮಾರನು ಹೀಗೆ ಹೇಳಲು ನಾಗರಾಜನು ದೇವ ವೃಕ್ಷಗಳಿಂದುಂಟಾದ ದಿವ್ಯಾನ್ನಗಳಿಂದ ಅವನನ್ನು ಸುಖಗೊಳಿಸಿ ಉತ್ತಮವಾದ ಗಂಧ, ವಸ್ತ್ರಗಳನ್ನಿತ್ತು, ಮಾಲೆ, ರತ್ನ, ವಿಚಿತ್ರಾಭರಣಗಳಿಂದಲೂ ವಿವಿಧ ಭೋಗಗಳಿಂದಲೂ ಸಂತೋಷಗೊಳಿಸಿ ನೀನು ಸ್ಮರಿಸಿದಾಗ ನಾನು ನಿನ್ನ ಮುಂದೆ ಬರುವೆನೆಂದು ಹೇಳಿದನು.

೧೦೮–೧೦೯. ತಿರುಗಿ ತಕ್ಷಕನು ಆ ರಾಜಕುಮಾರನಿಗೆ ನಾನಾ ದ್ವೀಪಗಳಲ್ಲಿಯೂ, ಸಮುದ್ರಗಳಲ್ಲಿಯೂ, ಲೋಕಗಳಲ್ಲಿಯೂ ತಡೆಯಿಲ್ಲದೆ ಸ್ವೇಚ್ಛೆಯಾಗಿ ಹೋಗುವ ಒಂದು ಕುದುರೆಯನ್ನಿತ್ತು, ರತ್ನದ ಒಡವೆಗಳನ್ನೂ, ದಿವ್ಯಾಭರಣಗಳನ್ನೂ, ವಸ್ತ್ರಗಳನ್ನೂ ಹೊರುವುದಕ್ಕಾಗಿ ಒಬ್ಬ ರಾಕ್ಷಸನನ್ನು ಕೊಟ್ಟನು.

೧೧೦. ಅವನ ಸಹಾಯಕ್ಕಾಗಿ ಒಬ್ಬ ನಾಗಕುಮಾರನನ್ನು ನೇಮಿಸಿ ಪ್ರೀತಿಯಿಂದ ಹೋಗೆಂದು ಕಳುಹಿಸಿದನು.

೧೧೧. ಹೀಗೆ ಚಂದ್ರಾಂಗದನು ವಿವಿಧ ಧನವನ್ನು ತೆಗೆದುಕೊಂಡು ಸ್ವೇಚ್ಛಾಚಾರಿಯಾದ ಅಶ್ವವನ್ನೇರಿ ಆ ರಾಕ್ಷಸನಾಗಕುಮಾರರೊಡನೆ ಹೊರಟನು.

CC-0. Jangamwadi Math Collection. Digitized by eGangotri

ಸ ಮುಹೂರ್ತಾದಿವೋನ್ಮಜ್ಯ ತಸ್ಮಾದೇವ ಸರಿಜ್ಜಲಾತ್ ।
ವಿಜಹಾರ ತಟೇ ರಮ್ಯೇ ದಿವ್ಯಮಾರುಹ್ಯ ವಾಜಿನಂ ॥ ೧೧೨ ॥
ಅಥಾಽಸ್ಮಿನ್ಸಮಯೇ ತನ್ವೀ ಸಾ ಚ ಸೀಮಂತಿನೀ ಸತೀ ।
ಸ್ನಾತುಂ ಸಮಾಯಯೌ ತತ್ರ ಸಖೀಭಿಃ ಪರಿವಾರಿತಾ ॥ ೧೧೩ ॥
ಸಾ ದದರ್ಶ ನದೀತೀರೇ ವಿಹರಂತಂ ನೃಪಾತ್ಮಜಂ ।
ರಕ್ಷಸಾ ನರರೂಪೇಣ ನಾಗಪುತ್ರೇಣ ಚಾನ್ವಿತಂ ॥ ೧೧೪ ॥
ದಿವ್ಯರತ್ನಸಮಾಕೀರ್ಣಂ ದಿವ್ಯಮಾಲ್ಯಾವತಂಸಕಂ ।
ದೇಹೇನ ದಿವ್ಯಗಂಧೇನ ವ್ಯಾಪ್ತದಶಯೋಜನಂ ॥ ೧೧೫ ॥
ತಮಪೂರ್ವಾಕೃತಿಂ ವೀಕ್ಷ್ಯ ದಿವ್ಯಾಽಶ್ವಮಧಿಸಂಸ್ಥಿತಂ ।
ಜಡೋನ್ಮತ್ತೇವ ಭೀತೇವ ತಸ್ಥೌ ತನ್ನ್ಯಸ್ತಲೋಚನಾ ॥ ೧೧೬ ॥
ತಾಂ ಚ ರಾಜೇಂದ್ರ ಪುತ್ರೋಽಸೌ ದೃಷ್ಟ್ವಾ ಪೂರ್ವಾಮಿತಿಸ್ಮರನ್ ।
ನಿರ್ಮುಕ್ತಕಂಠಾಭರಣಾಂ ಕಂಠಸೂತ್ರವಿವರ್ಜಿತಾಂ ॥ ೧೧೭ ॥
ಅಸಂಯೋಜಿತಧಮ್ಮಿಲ್ಲಾಮಂಗರಾಗವಿವರ್ಜಿತಾಂ ।
ತ್ಯಕ್ತನೀಲಾಂಜನಾಪಾಂಗೀಂ ಕೃಶಾಂಗೀಂ ಶೋಕದೂಷಿತಾಂ ॥ ೧೧೮ ॥
ದೃಷ್ಟ್ವಾಽವತೀರ್ಯ ತುರಗಾದುಪವಿಷ್ಟಃ ಸರಿತ್ತಟೇ ।
ತಾಮಾಹೂಯ ವರಾರೋಹಾಮುಪವೇಶ್ಯೇದಮಬ್ರವೀತ್ ॥ ೧೧೯ ॥

---

೧೧೨. ಅವನು ಒಂದು ಮುಹೂರ್ತದಲ್ಲಿಯೇ ಆ ಯಮುನಾನದಿಯ ನೀರಿನಿಂದ ಮೇಲಕ್ಕೆದ್ದು ಆ ನದಿಯ ರಮ್ಯವಾದ ದಡದಲ್ಲಿ ದಿವ್ಯಾಶ್ವವನ್ನೇರಿ ವಿಹರಿಸಿದನು.

೧೧೩. ಇದೇ ಸಮಯದಲ್ಲಿ ಪತಿವ್ರತೆಯಾದ ಆ ಸೀಮಂತಿನಿಯು ಸಖಿಯರೊಡನೆ ಸ್ನಾನಮಾಡುವುದಕ್ಕಾಗಿ ಅಲ್ಲಿಗೆ ಬಂದಳು.

೧೧೪. ಅವಳು ನದಿಯ ದಡದಲ್ಲಿ ರಾಕ್ಷಸ ಮತ್ತು ನರಾಕೃತಿಯುಳ್ಳ ನಾಗಕುಮಾರ ಇವರೊಡನೆ ವಿಹರಿಸುತ್ತಿರುವ ರಾಜಕುಮಾರನನ್ನು ಕಂಡಳು.

೧೧೫–೧೧೬. ದಿವ್ಯರತ್ನಗಳಿಂದ ವ್ಯಾಪ್ತನೂ, ದಿವ್ಯಮಾಲೆಯಿಂದಲಂಕೃತನೂ, ದಿವ್ಯ ಗಂಧವುಳ್ಳ ದೇಹದಿಂದ ಹತ್ತುಗಾವುದದವರೆಗೆ ಸುವಾಸನೆಯನ್ನು ಬೀರಿದವನೂ ಅಶ್ವಾರೂಢನೂ ಆದ ಹೊಸ ಆಕೃತಿಯುಳ್ಳ ಆ ರಾಜಕುಮಾರನನ್ನು ಮೂಢಳಂತೆಯೂ, ಹುಚ್ಚಳಂತೆಯೂ, ಭಯಗೊಂಡವಳಂತೆಯೂ ನೋಡುತ್ತ ನಿಂತಳು.

೧೧೭–೧೧೯. ರಾಜಕುಮಾರನು ಅವಳು ಹಿಂದೆ ನೋಡಲ್ಪಟ್ಟವಳೆಂದು ಜ್ಞಾಪಿಸಿಕೊಳ್ಳುತ್ತ ಕಂಠಾಭರಣವಿಲ್ಲದವಳೂ, ಮಾಂಗಲ್ಯರಹಿತಳೂ, ಕಟ್ಟದಿರುವ ಕೂದಲುಳ್ಳವಳೂ, ಗಂಧ ಕಾಡಿಗೆ ಮೊದಲಾದುವನ್ನು ಹಚ್ಚಿಕೊಳ್ಳದಿರುವವಳೂ, ಕೃಶಾಂಗಿಯೂ, ದುಃಖಗೊಂಡವಳೂ ಆಗಿರುವ ಆ ಸೀಮಂತಿನಿಯನ್ನು ಕಂಡು

CC-0. Jangamwadi Math Collection. Digitized by eGangotri

ಕಾ ತ್ವಂ ಕಸ್ಯ ಕಲತ್ರಂ ವಾ ಕಸ್ಯಾಽಪಿ ತನಯಾ ಸತೀ ।
ಕಿಮಿದಂ ತೇಽಂಗನೇ ಬಾಲ್ಯೇ ದುಃಸಹಂ ಶೋಕಲಕ್ಷಣಂ ॥ ೧೨೦ ॥
ಇತಿ ಸ್ನೇಹೇನ ಸಂಪೃಷ್ಟಾ ಸಾವಧೂರಶ್ರುಲೋಚನಾ ।
ಲಜ್ಜಿತಾ ಸ್ವಯಮಾಖ್ಯಾತುಂ ತತ್ಸಖೀ ಸರ್ವಮಬ್ರವೀತ್ ॥ ೧೨೧ ॥
ಇಯಂ ಸೀಮಂತಿನೀ ನಾಮ್ನಾ ಸ್ನುಷಾ ನಿಷಧಭೂಪತೇಃ ।
ಚಂದ್ರಾಂಗದಸ್ಯ ಮಹಿಷೀ ತನಯಾ ಚಿತ್ರವರ್ಮಣಃ ॥ ೧೨೨ ॥
ಅಸ್ಯಾಃ ಪತಿರ್ದೈವಯೋಗಾನ್ನಿಮಗ್ನೋಽಸ್ಮಿನ್ಮಹಾಜಲೇ ।
ತೇನೇಯಂ ಪ್ರಾಪ್ತವೈಧವ್ಯಾ ಬಾಲಾ ದುಃಖೇನ ಶೋಷಿತಾ ॥ ೧೨೩ ॥
ಏವಂ ವರ್ಷತ್ರಯಂ ನೀತಂ ಶೋಕೇನಾಽತಿ ಬಲೀಯಸಾ ।
ಅದ್ಯೇಂದುವಾರೇ ಸಂಪ್ರಾಪ್ತೇ ಸ್ನಾತುಮತ್ರ ಸಮಾಗತಾ ॥ ೧೨೪ ॥
ಶ್ವಶುರೋಽಸ್ಯಾಶ್ಚ ರಾಜೇಂದ್ರೋ ಹೃತರಾಜ್ಯಶ್ಚ ಶತ್ರುಭಿಃ ।
ಬಲಾದ್ಗೃಹೀತೋ ಬದ್ಧಶ್ಚ ಸಭಾರ್ಯಸ್ತದ್ವಶೇ ಸ್ಥಿತಃ ॥ ೧೨೫ ॥
ತಥಾಽಪ್ಯೇಷಾ ಶುಭಾಚಾರಾ ಸೋಮವಾರೇ ಮಹೇಶ್ವರಂ ।
ಸಾಽಂಬಿಕಂ ಪರಯಾ ಭಕ್ತ್ಯಾ ಪೂಜಯತ್ಯಮಲಾಶಯಾ ॥ ೧೨೬ ॥

---

ಕುದುರೆಯಿಂದಿಳಿದು ನದೀದಡದಲ್ಲಿ ಕುಳಿತುಕೊಂಡು ಅವಳನ್ನು ಕರೆಯಿಸಿ ಕುಳ್ಳಿರಿಸಿ ಇಂತೆಂದನು.

೧೨೦. "ಅಂಗನೆ! ನೀನಾರು? ಯಾರ ಪತ್ನಿಯು? ಯಾರ ಮಗಳು? ನಿನಗೆ ಬಾಲ್ಯದಲ್ಲಿ ಇಂತಹ ಸಹಿಸಲಾಗದ ದುಃಖವು ಹೇಗೆ ಸಂಭವಿಸಿತು?"

೧೨೧. ಹೀಗೆ ಪ್ರೀತಿಯಿಂದ ಆ ರಾಜಕುಮಾರನು ಕೇಳಲು ಅವಳು ಅಳುತ್ತ ತಾನೇ ತಿಳಿಸಲು ನಾಚಿಕೆಗೊಂಡಳು. ಅವಳ ಸಖಿಯು ಎಲ್ಲವನ್ನೂ ಹೇಳಿದಳು.

೧೨೨. "ಇವಳು ನಿಷಧರಾಜನ ಸೊಸೆಯೂ ಚಂದ್ರಾಂಗದನ ರಾಣಿಯೂ, ಚಿತ್ರವರ್ಮನ ಮಗಳೂ ಆದ ಸೀಮಂತಿನಿಯು.

೧೨೩–೧೨೪. ಇವಳ ಪತಿಯು ದೈವೇಚ್ಛೆಯಿಂದ ಈ ನದಿಯ ನೀರಿನಲ್ಲಿ ಮುಳುಗಿದನು. ಆದರಿಂದ ಈ ಬಾಲೆಯು ವೈಧವ್ಯವನ್ನು ಹೊಂದಿ ದುಃಖದಿಂದ ಒಣಗಿರುವಳು. ಹೀಗೆ ಅತಿಶಯ ಶೋಕದಿಂದ ಮೂರು ವರ್ಷಗಳನ್ನು ಕಳೆದು ಈ ಸೋಮವಾರ ದಿನ ಸ್ನಾನಕ್ಕಾಗಿ ಇಲ್ಲಿಗೆ ಬಂದಿರುವಳು.

೧೨೫. ಇವಳ ಮಾವನ ರಾಜ್ಯವನ್ನು ಶತ್ರುಗಳು ಬಲಾತ್ಕಾರದಿಂದ ಅಪಹರಿಸಿ ಅವನನ್ನು ಪತ್ನಿಯೊಡನೆ ಬಂಧನದಲ್ಲಿಟ್ಟಿರುವರು.

೧೨೬. ಹಾಗಾದರೂ ಒಳ್ಳೆಯ ನಡತೆಯುಳ್ಳ ಇವಳು ಶುದ್ಧಮನಸ್ಸುಳ್ಳವಳಾಗಿ ಸೋಮವಾರದ ದಿನ ಮಹೇಶ್ವರನನ್ನು ಪಾರ್ವತಿಯೊಡನೆ ಅತಿ ಭಕ್ತಿಯಿಂದ ಪೂಜಿಸುತ್ತಿರುವಳು.

CC-0. Jangamwadi Math Collection. Digitized by eGangotri

ಸೂತ ಉವಾಚ :—
ಇತ್ಥಂ ಸಖೀಮುಖೇನೈವ ಸರ್ವಮಾವೇದ್ಯ ಸುವ್ರತಾ ।
ತತಃ ಸೀಮಂತಿನೀ ಪ್ರಾಹ ಸ್ವಯಮೇವ ನೃಪಾತ್ಮಜಂ ॥ ೧೨೭ ॥
ಕಸ್ತ್ವಂ ಕಂದರ್ಪಸಂಕಾಶಃ ಕಾವಿಮೌ ತವ ಪಾರ್ಶ್ವಗೌ ।
ದೇವೋ ನರೇಂದ್ರಃ ಸಿದ್ಧೋ ವಾ ಗಂಧರ್ವೋಽಥ ಕಿನ್ನರಃ ॥ ೧೨೮ ॥
ಕಿಮರ್ಥಂ ಮಮ ವೃತ್ತಾಂತಂ ಸ್ನೇಹವಾನಿವ ಪೃಚ್ಛಸಿ ।
ಕಿಂ ಮಾಂ ವೇತ್ಸಿ ಮಹಾಬಾಹೋ ದೃಷ್ಟವಾನ್ಸಿಮು ಕುತ್ರಚಿತ್ ॥೧೨೯॥
ದೃಷ್ಟಪೂರ್ವ ಇವಾಽಭಾಸಿ ಮಯಾ ಚ ಸ್ವಜನೋ ಯಥಾ ।
ಸರ್ವಂ ಕಥಯ ತತ್ತ್ವೇನ ಸತ್ಯಸಾರಾ ಹಿ ಸಾಧವಃ ॥ ೧೩೦ ॥
ಸೂತ ಉವಾಚ :—
ಏತಾವದುಕ್ತ್ವಾ ನರದೇವಪುತ್ರೀ
ಸಬಾಷ್ಪಕಂಠಂ ಸುಚಿರಂ ರುರೋದ ।
ಮುಮೋಹ ಭೂಮೌ ಪತಿತಾ ಸಖೀಭಿ
ರ್ವೃತಾ ನ ಕಿಂಚಿತ್ಕಥಿತುಂ ಶಶಾಕ ॥ ೧೩೧ ॥
ಶ್ರುತ್ವಾ ಚಂದ್ರಾಂಗದಃ ಸರ್ವಂ ಪ್ರಿಯಾಯಾಃ ಶೋಕಕಾರಣಂ ।
ಮುಹೂರ್ತಮಭವತ್ತೂಷ್ಣೀಂ ಸ್ವಯಂ ಶೋಕಸಮಾಕುಲಃ ॥ ೧೩೨ ॥

---

೧೨೭. ಸೂತನು ಹೇಳುತ್ತಾನೆ :—ಆ ಸೀಮಂತಿನಿಯು ಹೀಗೆ ಗೆಳತಿಯ ಮುಖದಿಂದಲೇ ಎಲ್ಲವನ್ನೂ ಅವನಿಗೆ ತಿಳಿಸಿ ತಾನೇ ರಾಜಕುಮಾರನನ್ನು ಕುರಿತು ಇಂತೆಂದಳು.

೧೨೮. "ಮನ್ಮಥನಂತಿರುವ ನೀನಾರು? ನಿನ್ನ ಬಳಿಯಿರುವ ಇವರೀರ್ವ ರಾರು? ನೀನು ದೇವತೆಯೊ? ರಾಜೇಂದ್ರನೊ? ಸಿದ್ಧನೊ? ಗಂಧರ್ವನೊ? ಕಿನ್ನರನೊ?

೧೨೯-೧೩೦. ನನ್ನ ಸಮಾಚಾರವನ್ನು ಪ್ರೀತಿಯುಳ್ಳವನಂತೆ ಏಕೆ ಕೇಳು ತ್ತಿರುವೆ? ನಾನಾರೆಂಬುದು ನಿನಗೆ ತಿಳಿದಿರುವುದೆ? ಎಲ್ಲಿಯಾದರೂ ನನ್ನನ್ನು ನೋಡಿರುವೆಯಾ? ನೀನು ಹಿಂದೆ ನನ್ನಿಂದ ನೋಡಲ್ಪಟ್ಟ ಬಂಧುವಿನಂತೆ ಕಾಣು ತ್ತೀಯೆ. ಎಲ್ಲವನ್ನೂ ನಿಜವಾಗಿ ಹೇಳು. ಸಜ್ಜನರು ಸತ್ಯವನ್ನು ಆಡುವವರಷ್ಟೆ."

೧೩೧. ಸೂತನು ಹೇಳುತ್ತಾನೆ :—ರಾಜನ ಮಗಳಾದ ಆ ಸೀಮಂತಿನಿಯು ಇಷ್ಟನ್ನು ಹೇಳಿ ಕಣ್ಣೀರನ್ನು ಸುರಿಸುತ್ತ ಬಹಳ ಹೊತ್ತು ಅತ್ತಳು. ಸಖಿಯ ರೊಡನೆ ಭೂಮಿಯಲ್ಲಿ ಮೂರ್ಛೆಯಿಂದ ಬಿದ್ದು ಏನನ್ನೂ ಹೇಳಲು ಸಮರ್ಥ ಳಾಗಲಿಲ್ಲ.

೧೩೨. ಚಂದ್ರಾಂಗದನು ಪ್ರಿಯೆಯ ದುಃಖಕಾರಣಗಳನ್ನೆಲ್ಲ ಕೇಳಿ ತಾನು ಶೋಕಾಕ್ರಾಂತನಾಗಿ ಸ್ವಲ್ಪ ಹೊತ್ತು ಸುಮ್ಮನಿದ್ದನು.



CC-0. Jangamwadi Math Collection. Digitized by eGangotri

ಅಥಾಶ್ವಾಸ್ಯ ಪ್ರಿಯಾಂ ತನ್ವೀಂ ವಿವಿಧೈರ್ವಾಕ್ಯನೈಪುಣ್ಯೈಃ ।
ಸಿದ್ಧಾ ನಾಮ ವಯಂ ದೇವಾಃ ಕಾಮಗಾ ಇತಿ ಸೋಽಬ್ರವೀತ್ ॥೧೩೩॥
ತತೋ ಬಲಾದಿವಾಕೃಷ್ಯ ಪಾಣಿಗ್ರಹಣಶಂಕಿತಾಂ ।
ಪುಲಕಾಂಚಿತಸರ್ವಾಂಗೀಂ ತಾಂ ಕರ್ಣೇ ತ್ವಿದಮಬ್ರವೀತ್ ॥ ೧೩೪ ॥
ಕ್ವಾಽಪಿ ಲೋಕೇ ಮಯಾ ದೃಷ್ಟಸ್ತವ ಭರ್ತಾ ವರಾನನೇ ।
ತ್ವದ್ವ್ರತಾಚರಣಾತ್ಪ್ರೀತಃ ಸದ್ಯ ಏವಾಗಮಿಷ್ಯತಿ ॥ ೧೩೫ ॥
ಅಪನೇಷ್ಯತಿ ತೇ ಶೋಕಂ ದ್ವಿತ್ರೈರೇವ ದಿನೈರ್ಧ್ರುವಂ ।
ಏತಚ್ಛಂಸಿತುಮಾಯಾತಸ್ತವ ಭರ್ತುಃ ಸಖಾಽಸ್ಮ್ಯಹಂ ॥ ೧೩೬ ॥
ಅತ್ರ ಕಾರ್ಯೋ ನ ಸಂದೇಹಃ ಶಪಾಮಿ ಶಿವಪಾದಯೋಃ ।
ತಾವತ್ತ್ವದ್ಧೃದಯೇ ಸ್ಥೇಯಂ ನ ಪ್ರಕಾಶ್ಯಂ ಚ ಕುತ್ರಚಿತ್ ॥ ೧೩೭ ॥
ಸಾ ತು ತದ್ವಚನಂ ಶ್ರುತ್ವಾ ಸುಧಾಧಾರಾಶತಾಧಿಕಂ ।
ಸಂಭ್ರಮೋದ್ಭ್ರಾಂತನಯನಾ ತಮೇವ ಮುಹುರೈಕ್ಷತ ॥ ೧೩೮ ॥
ಪ್ರೇಮಬಂಧಾನುಗುಣಿತಂ ವಾಕ್ಯಂ ಚಾಹ ರಸಾಯನಂ ।
ವಿಭ್ರಮೋದಾರಸಹಿತಂ ಮಧುರಾಽಪಾಂಗವೀಕ್ಷಣಂ ॥ ೧೩೯ ॥

---

೧೩೩. ಬಳಿಕ ಅವನು ಪ್ರಿಯಳನ್ನು ಬಗೆಬಗೆಯ ಮಾತುಗಳಿಂದ ಸಮಾಧಾನಗೊಳಿಸಿ, "ನಾವು ಸ್ವೇಚ್ಛಾಚಾರಿಗಳಾದ ಸಿದ್ಧರೆಂಬ ದೇವತೆಗಳು" ಎಂದನು.

೧೩೪. ಅನಂತರ ಕೈಯನ್ನು ಹಿಡಿಯುವನೆಂದು ಶಂಕಿಸಿ ರೋಮಾಂಚಗೊಂಡ ಶರೀರವುಳ್ಳ ಆ ಪ್ರಿಯೆಯನ್ನು ಬಲಾತ್ಕಾರದಿಂದ ಎಳೆದು ಕಿವಿಯಲ್ಲಿ ಹೀಗೆಂದನು.

೧೩೫. "ಸುಂದರಿ! ನಿನ್ನ ಪ್ರಿಯನನ್ನು ಲೋಕದಲ್ಲಿ ಎಲ್ಲಿಯೋ ನೋಡಿದ್ದೇನೆ. ಅವನು ನಿನ್ನ ನೇಮದಿಂದ ಸಂತೋಷಗೊಂಡು ಕೂಡಲೆ ಬರುವನು.

೧೩೬. ಎರಡು ಮೂರು ದಿನಗಳಲ್ಲಿಯೇ ಅವನು ನಿನ್ನ ದುಃಖವನ್ನು ನಿಶ್ಚಯವಾಗಿಯೂ ಪರಿಹರಿಸುವನು. ಇದನ್ನು ಹೇಳುವುದಕ್ಕಾಗಿ ಬಂದಿರುವ ನಾನು ಅವನ ಸ್ನೇಹಿತನು.

೧೩೭. ಈ ವಿಷಯದಲ್ಲಿ ಸಂದೇಹಪಡಬೇಡ. ಶಿವನ ಪಾದದಾಣೆಗೂ ಇದು ಸತ್ಯವು. ಅಷ್ಟರವರೆಗೆ ಈ ವಿಷಯವನ್ನು ಯಾರಿಗೂ ಹೇಳದೆ ಗುಟ್ಟಾಗಿಟ್ಟಿರು."

೧೩೮. ಅವಳು ನೂರಾರು ಅಮೃತದ ಧಾರೆಗಳಿಗಿಂತಲೂ ಹೆಚ್ಚಾದ ಅವನ ಆ ಮಾತನ್ನು ಕೇಳಿ ಸಂಭ್ರಮದಿಂದ ಭ್ರಾಂತಿಗೊಂಡ ಕಣ್ಣುಳ್ಳವಳಾಗಿ ಅವನನ್ನೇ ಬಹುವಾಗಿ ನೋಡಿದಳು.

೧೩೯–೧೪೦. ಪ್ರೇಮಸಹಿತವಾದ ರಸಾಯನದಂತಿರುವ ಮಾತನ್ನೂ, ವಿಲಾಸಸಹಿತವಾದ ಕಡೆಗಣ್ಣಿನ ನೋಟವನ್ನೂ, ತನ್ನ ಕರಸ್ಪರ್ಶದಿಂದ

CC-0. Jangamwadi Math Collection. Digitized by eGangotri

ಸ್ವಪಾಣಿಸ್ಪರ್ಶನೋದ್ಭಿನ್ನಪುಲಕಾಂಚಿತವಿಗ್ರಹಂ ।
ಪೂರ್ವದೃಷ್ಟಾನಿ ಚಾಂಗೇಷು ಲಕ್ಷಣಾನಿ ಸ್ವರಾದಿಷು ।
ವಯಃಪ್ರಮಾಣಂ ವರ್ಣಂ ಚ ಪರೀಕ್ಷ್ಯೈನಮತರ್ಕಯತ್ ॥ ೧೪೦ ॥
ಏಷ ಏವ ಪತಿರ್ಮೇ ಸ್ಯಾದ್ಧ್ರುವಂ ನಾಽನ್ಯೋ ಭವಿಷ್ಯತಿ ।
ಅಸ್ಮಿನ್ನೇವ ಪ್ರಸಕ್ತಂ ಮೇ ಹೃದಯಂ ಪ್ರೇಮಕಾತರಂ ॥ ೧೪೧ ॥
ಪರಲೋಕಾದಿಹಾಯಾತಃ ಕಥಮೇವಂ ಸ್ವರೂಪಧೃಕ್ ।
ದುರ್ಭಾಗ್ಯಾಯಾಃ ಕಥಂ ಮೇ ಸ್ಯಾದ್ಭರ್ತುರ್ನಷ್ಟಸ್ಯ ದರ್ಶನಂ ॥ ೧೪೨ ॥
ಸ್ವಪ್ನೋಽಯಂ ಕಿಮು ನ ಸ್ವಪ್ನೋ ಭ್ರಮೋಽಯಂ ಕಿಂ ತು ನ ಭ್ರಮಃ ।
ಏಷ ಧೂರ್ತೋಽಥ ವಾ ಕಶ್ಚಿದ್ಯಕ್ಷೋ ಗಂಧರ್ವ ಏವ ವಾ ॥ ೧೪೩ ॥
ಮುನಿಪತ್ನ್ಯಾ ಯದುಕ್ತಂ ಮೇ ಪರಮಾಪದ್ಗತಾಽಪಿ ಚ ।
ವ್ರತಮೇತತ್ಕುರುಷ್ವೇತಿ ತಸ್ಯ ವಾ ಫಲಮೇವ ವಾ ॥ ೧೪೪ ॥
ಯೋ ವರ್ಷಾಽಯುತಸೌಭಾಗ್ಯಂ ಮಮೇತ್ಯಾಹ ದ್ವಿಜೋತ್ತಮಃ ।
ನೂನಂ ತಸ್ಯ ವಚಃ ಸತ್ಯಂ ಕೋ ವಿದ್ಯಾದೀಶ್ವರಂ ವಿನಾ ॥ ೧೪೫ ॥
ನಿಮಿತ್ತಾನಿ ಚ ದೃಶ್ಯಂತೇ ಮಂಗಲಾನಿ ದಿನೇ ದಿನೇ ।
ಪ್ರಸನ್ನೇ ಪಾರ್ವತೀನಾಥೇ ಕಿಮಸಾಧ್ಯಂ ಶರೀರಿಣಾಂ ॥ ೧೪೬ ॥

---

ರೋಮಾಂಚಗೊಂಡ ದೇಹವನ್ನೂ, ಅಂಗಗಳಲ್ಲಿಯೂ, ಸ್ವರಗಳಲ್ಲಿಯೂ ಹಿಂದೆ ನೋಡಿದ ಚಿಹ್ನೆಗಳನ್ನೂ, ವಯಸ್ಸಿನ ಸಮತೆಯನ್ನೂ, ಬಣ್ಣವನ್ನೂ ಪರೀಕ್ಷಿಸಿ ಹೀಗೆ ಊಹಿಸಿದಳು.

೧೪೧. "ನಿಶ್ಚಯವಾಗಿಯೂ ಇವನೇ ನನ್ನ ಪತಿಯು. ಇವನು ಬೇರೆಯವನಲ್ಲ. ಪ್ರೇಮಯುಕ್ತವಾದ ನನ್ನ ಮನಸ್ಸು ಇವನಲ್ಲಿ ಆಸಕ್ತವಾಗಿರುವುದು.

೧೪೨. ಪರಲೋಕದಿಂದ ಇಲ್ಲಿಗೆ ಬಂದಿರುವಕಾರಣ ಇಂತಹ ರೂಪವುಳ್ಳವನಾಗಿರುವನೊ ಏನೊ? ದುರ್ಭಾಗ್ಯಳಾದ ನನಗೆ ನಷ್ಟಪತಿಯ ದರ್ಶನವು ಹೇಗಾದೀತು?

೧೪೩. ಇದು ಸ್ವಪ್ನವೇ? ಸ್ವಪ್ನವಲ್ಲ. ಭ್ರಾಂತಿಯೊ? ಭ್ರಾಂತಿಯೂ ಅಲ್ಲ. ಇವನು ವಂಚಕನಾದ ಒಬ್ಬ ಯಕ್ಷನೊ? ಅಥವಾ ಗಂಧರ್ವನೊ?

೧೪೪. ಮುನಿಪತ್ನಿಯು ಅತ್ಯಂತಾಪತ್ತಿನಲ್ಲಿಯೂ ಈ ಸೋಮವಾರ ವ್ರತವನ್ನಾಚರಿಸೆಂದು ಹೇಳಿರುವಳು. ಇದು ಆ ವ್ರತದ ಫಲವೊ?

೧೪೫—೧೪೬. ನನಗೆ ಹತ್ತುಸಾವಿರವರ್ಷ ಸೌಭಾಗ್ಯವಿರುವುದೆಂದು ಹೇಳಿದ ಬ್ರಾಹ್ಮಣನ ಮಾತು ಸತ್ಯವಾಗಿರಬೇಕು. ಇದು ಶಿವನ ಹೊರತು ಯಾರಿಗೆ ಗೊತ್ತು. ಪ್ರತಿದಿನವೂ ಶುಭ ನಿಮಿತ್ತಗಳನ್ನು ಕಾಣುತ್ತಿದ್ದೇನೆ. ಪಾರ್ವತೀರಮಣನು ಪ್ರಸನ್ನನಾದರೆ ಪ್ರಾಣಿಗಳಿಗೆ ಅಸಾಧ್ಯವಾದುದು ಯಾವುದಿರುವುದು?

CC-0. Jangamwadi Math Collection. Digitized by eGangotri

ಇತ್ಥಂ ವಿಮೃಶ್ಯ ಬಹುಧಾ ತಾಂ ಪುನರ್ಮುಕ್ತಸಂಶಯಾಂ ।
ಲಜ್ಜಾನಮ್ರಮುಖೀಂ ಕರ್ಣೇ ಶಶಂಸಾತ್ಮಪ್ರಯೋಜನಂ ॥ ೧೪೭ ॥
ಇಮಂ ವೃತ್ತಾಂತಮಾಖ್ಯಾತುಂ ತತ್ಪಿತ್ರೋಃ ಶೋಕತಪ್ತಯೋಃ ।
ಗಚ್ಛಾಮಃ ಸ್ವಸ್ತಿ ತೇ ಭದ್ರೇ ಸದ್ಯಃ ಪತಿಮವಾಪ್ಸ್ಯಸಿ ॥ ೧೪೮ ॥
ಇತ್ಯುಕ್ತ್ವಾಽಶ್ವಂ ಸಮಾರುಹ್ಯ ಜಗಾಮ ನೃಪನಂದನಃ ।
ತಾಭ್ಯಾಂ ಸಹ ನಿಜಂ ರಾಷ್ಟ್ರಂ ಪ್ರತ್ಯಪದ್ಯತ ತತ್ಕ್ಷಣಾತ್ ॥ ೧೪೯ ॥
ಸ ಪುರೋಪವನಾಽಭ್ಯಾಶೇ ಸ್ಥಿತ್ವಾ ತಂ ಫಣಿಪುತ್ರಕಂ ।
ವಿಸಸರ್ಜಾತ್ಮದಾಯಾದಾನ್ನೃಪಾಸನಗತಾನ್ಪ್ರತಿ ॥ ೧೫೦ ॥
ಸ ಗತ್ವೋವಾಚ ತಾನ್ಶೀಘ್ರಮಿಂದ್ರಸೇನೋ ವಿಮುಚ್ಯತಾಂ ।
ಚಂದ್ರಾಂಗದಸ್ತಸ್ಯ ಸುತಃ ಪ್ರಾಪ್ತೋಽಯಂ ಪನ್ನಗಾಲಯಾತ್ ॥ ೧೫೧ ॥
ನೃಪಾಸನಂ ವಿಮುಂಚಂತು ಭವಂತೋ ನ ವಿಚಾರ್ಯತಾಂ ।
ನೋಚೇಚ್ಚಂದ್ರಾಂಗದಸ್ಯಾಶು ಬಾಣಾಃ ಪ್ರಾಣಾನ್ಹರಂತಿ ವಃ ॥ ೧೫೨ ॥
ಸ ಮಗ್ನೋ ಯಮುನಾತೋಯೇ ಗತ್ವಾ ತಕ್ಷಕಮಂದಿರಂ ।
ಲಬ್ಧ್ವಾ ಚ ತಸ್ಯ ಸಾಹಾಯ್ಯಂ ಪುನರ್ಲೋಕಾದಿಹಾಗತಃ ॥ ೧೫೩ ॥

---

೧೪೭. ಹೀಗೆ ಬಹಳ ತರ್ಕಿಸಿ ಸಂಶಯವನ್ನು ತ್ಯಜಿಸಿ ಲಜ್ಜೆಯಿಂದ ಮುಖವನ್ನು ತಗ್ಗಿಸಿಕೊಂಡಿರುವ ಆ ಸೀಮಂತಿನಿಯ ಕಿವಿಯಲ್ಲಿ ಚಂದ್ರಾಂಗದನು ಮತ್ತೆ ತನ್ನ ಪ್ರಯೋಜನವನ್ನು ತಿಳಿಸಿದನು.

೧೪೮. "ಈ ಸಮಾಚಾರವನ್ನು ಹೇಳುವುದಕ್ಕಾಗಿ ನಮ್ಮ ತಂದೆತಾಯಿಗಳ ಹತ್ತಿರಕ್ಕೆ ಹೋಗುತ್ತೇವೆ. ನಿನಗೆ ಮಂಗಳವಾಗಲಿ. ಕೂಡಲೆ ನೀನು ಪತಿಯನ್ನು ಪಡೆಯುವೆ."

೧೪೯. ರಾಜಕುಮಾರನು ಹೀಗೆ ಅವಳನ್ನು ಕುರಿತು ಹೇಳಿ ಅಶ್ವಾರೂಢನಾಗಿ ಆ ರಾಕ್ಷಸ, ನಾಗಕುಮಾರರೊಡನೆ ಕೂಡಲೆ ತನ್ನ ರಾಜ್ಯವನ್ನು ಸೇರಿದನು.

೧೫೦. ಅವನು ಪಟ್ಟಣೋದ್ಯಾನದ ಹತ್ತಿರ ಇದ್ದು ಆ ನಾಗಕುಮಾರನನ್ನು ಸಿಂಹಾಸನದಲ್ಲಿ ಕುಳಿತಿರುವ ತನ್ನ ದಾಯಾದರ ಹತ್ತಿರಕ್ಕೆ ಕಳುಹಿಸಿದನು.

೧೫೧. ಅವನು ಅಲ್ಲಿಗೆ ಹೋಗಿ "ಶೀಘ್ರವಾಗಿ ಇಂದ್ರಸೇನನನ್ನು ಬಿಟ್ಟು ಬಿಡಿರಿ. ಅವನ ಮಗನಾದ ಚಂದ್ರಾಂಗದನು ಪಾತಾಳದಿಂದ ಬಂದಿರುವನು.

೧೫೨–೧೫೩. ನೀವೆಲ್ಲರೂ ಸಿಂಹಾಸನವನ್ನು ಈಗಲೇ ತ್ಯಜಿಸಬೇಕು. ಹಾಗೆ ಮಾಡದಿದ್ದರೆ ಚಂದ್ರಾಂಗದನ ಬಾಣಗಳು ನಿಮ್ಮ ಪ್ರಾಣಗಳನ್ನು ಜಾಗ್ರತೆಯಾಗಿ ಅಪಹರಿಸುವುವು. ಅವನು ಯಮುನಾನದಿಯ ನೀರಿನಲ್ಲಿ ಮುಳುಗಿ ತಕ್ಷಕನ ಮಂದಿರವನ್ನು ಹೊಂದಿ ಅವನ ಸಾಹಾಯ್ಯವನ್ನು ಪಡೆದು ಪಾತಾಳಲೋಕದಿಂದ ಇಲ್ಲಿಗೆ ಬಂದಿರುವನು.

CC-0. Jangamwadi Math Collection. Digitized by eGangotri

ಇತ್ಯಾಖ್ಯಾತಮಶೇಷೇಣ ತದ್ವೃತ್ತಾಂತಂ ನಿಶಮ್ಯ ತೇ ।
ಸಾಧು ಸಾಧ್ವಿತಿ ಸಂಭ್ರಾಂತಾಃ ಶಶಂಸುಃ ಪರಿಪಂಥಿನಃ ॥ ೧೫೪ ॥
ಅಥೇಂದ್ರಸೇನಾಯ ನಿವೇದ್ಯ ಸತ್ವರಂ
ನಷ್ಟಸ್ಯ ಪುತ್ರಸ್ಯ ಪುನಃ ಸಮಾಗಮಂ ।
ಪ್ರಸಾದ್ಯ ತಂ ಪ್ರಾಪ್ತನರೇಶ್ವರಾಸನಂ
ದಾಯಾದಮುಖ್ಯಾಸ್ತು ಭಯಂ ಪ್ರಪೇದಿರೇ ॥ ೧೫೫ ॥
ಅಥ ಪೌರಜನಾಃ ಸರ್ವೇ ಪುರೋದ್ಯಾನೇ ನೃಪಾತ್ಮಜಂ ।
ದೃಷ್ಟ್ವಾ ರಾಜ್ಞೇ ದ್ರುತಂ ಪ್ರೋಚುರ್ಲೇಭಿರೇ ಚ ಮಹಾಧನಂ ॥ ೧೫೬ ॥
ಆಕರ್ಣ್ಯ ಪುತ್ರಮಾಯಾಂತಂ ರಾಜಾನಂದಜಲಾಪ್ಲುತಃ ।
ನ ವ್ಯಜಾನಾದಿಮಂ ಲೋಕಂ ರಾಜ್ಞೀ ಚ ಪರಯಾ ಮುದಾ ॥ ೧೫೭ ॥
ಅಥ ನಾಗರಿಕಾಃ ಸರ್ವೇ ಮಂತ್ರಿವೃದ್ಧಾಃ ಪುರೋಧಸಃ ।
ಪ್ರತ್ಯುದ್ಗಮ್ಯ ಪರಿಷ್ವಜ್ಯ ತಮಾನಿನ್ಯುರ್ನೃಪಾಂತಿಕಂ ॥ ೧೫೮ ॥
ಅಥೋತ್ಸವೇನ ಮಹತಾ ಪ್ರವಿಶ್ಯ ನಿಜಮಂದಿರಂ ।
ರಾಜಪುತ್ರಃ ಸ್ವಪಿತರೌ ವವಂದೇ ಬಾಷ್ಪಮುತ್ಸೃಜನ್ ॥ ೧೫೯ ॥
ತಂ ಪಾದಮೂಲೇ ಪತಿತಂ ಸ್ವಪುತ್ರಂ
ವಿವೇದ ನಾಽಸೌ ಪೃಥಿವೀಪತಿಃ ಕ್ಷಣಂ ।
ಪ್ರಬೋಧಿತೋಽಮಾತ್ಯಜನೈಃ ಕಥಂಚಿ
ದುತ್ಥಾಪ್ಯ ಕ್ಲಿನ್ನೇನ ಹೃದಾಲಿಲಿಂಗ ॥ ೧೬೦ ॥

---

೧೫೪. ಹೀಗೆ ಸಂಪೂರ್ಣವಾಗಿ ಹೇಳಿದ ಅವನ ವೃತ್ತಾಂತವನ್ನು ಕೇಳಿ ಆ ಶತ್ರುಗಳು ಒಳ್ಳೆಯದೆಂದು ಹೊಗಳಿದರು.

೧೫೫–೧೫೬. ಬಳಿಕ ದಾಯಾದರು ನಷ್ಟನಾದ ಪುತ್ರನು ತಿರುಗಿ ಬಂದಿರುವನೆಂದು ಇಂದ್ರಸೇನನಿಗೆ ಶೀಘ್ರವಾಗಿ ತಿಳಿಸಿ ಅವನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಸಂತೋಷಗೊಳಿಸಿ ತಾವು ಭಯಗ್ರಸ್ತರಾದರು. ಅನಂತರ ಪಟ್ಟಣಿಗರೆಲ್ಲರೂ ಪಟ್ಟಣದ ತೋಟದಲ್ಲಿ ರಾಜಕುಮಾರನನ್ನು ಕಂಡು ಇಂದ್ರಸೇನರಾಜನಿಗೆ ಕೂಡಲೆ ತಿಳಿಸಿ ಸಂತೋಷಗೊಂಡ ಅವನಿಂದ ಬಹು ಧನವನ್ನು ಪಡೆದರು.

೧೫೭. ರಾಜನೂ, ರಾಣಿಯೂ ಮಗನು ಬರುತ್ತಿರುವನೆಂಬುದನ್ನು ಕೇಳಿ, ಸಂತೋಷದಿಂದ ಆನಂದಬಾಷ್ಪವನ್ನು ಸುರಿಸುತ್ತ ಈ ಲೋಕವನ್ನೇ ತಿಳಿಯಲಿಲ್ಲ.

೧೫೮–೧೫೯. ಅನಂತರ ಪಟ್ಟಣಿಗರೂ, ಮುಖ್ಯಮಂತ್ರಿಗಳೂ, ಪುರೋಹಿತರೂ ಎದುರುಗೊಂಡು ಅವನನ್ನು ಆಲಿಂಗಿಸಿ ಅವನನ್ನು ರಾಜನ ಬಳಿಗೆ ಕರೆದುಕೊಂಡುಬಂದರು. ರಾಜಕುಮಾರನು ಮಹೋತ್ಸವದಿಂದ ತನ್ನ ಮಂದಿರವನ್ನು ಹೊಕ್ಕು ಕಣ್ಣೀರನ್ನು ಸುರಿಸುತ್ತ ತಾಯಿತಂದೆಗಳನ್ನು ನಮಸ್ಕರಿಸಿದನು.

೧೬೦. ಇಂದ್ರಸೇನ ರಾಜನು ಅಡಿಯ ಬುಡದಲ್ಲಿ ಬಿದ್ದಿರುವ ತನ್ನ

CC-0. Jangamwadi Math Collection. Digitized by eGangotri

ಕ್ರಮೇಣ ಮಾತೄರಭಿವಂದ್ಯ ತಾಭಿಃ
ಪ್ರವರ್ಧಿತಾಶೀಃ ಪ್ರಣಯಾಕುಲಾಭಿಃ ।
ಆಲಿಂಗಿತಃ ಪೌರಜನಾನಶೇಷಾ
ನ್ಸಂಭಾವಯಾಮಾಸ ಸ ರಾಜಸೂನುಃ ॥ ೧೬೧ ॥
ತೇಷಾಂ ಮಧ್ಯೇ ಸಮಾಸೀನಃ ಸ್ವವೃತ್ತಾಂತಮಶೇಷತಃ ।
ಪಿತ್ರೇ ನಿವೇದಯಾಮಾಸ ತಕ್ಷಕಸ್ಯ ಚ ಮಿತ್ರತಾಂ ॥ ೧೬೨ ॥
ದತ್ತಂ ಭುಜಂಗರಾಜೇನ ರತ್ನಾದಿಧನಸಂಚಯಂ ।
ದಿವ್ಯಂ ತದ್ರಾಕ್ಷಸಾನೀತಂ ಪಿತ್ರೇ ಸರ್ವಂ ನ್ಯವೇದಯತ್ ॥ ೧೬೩ ॥
ರಾಜಪುತ್ರಸ್ಯ ಚರಿತಂ ದೃಷ್ಟ್ವಾ ಶ್ರುತ್ವಾ ಚ ವಿಹ್ವಲಃ ।
ಮೇನೇ ಸ್ನುಷಾಯಾಃ ಸೌಭಾಗ್ಯಂ ಮಹೇಶಾರಾಧನಾರ್ಜಿತಂ ॥ ೧೬೪ ॥
ಸೌಮಾಂಗಲ್ಯಮಯೀಂ ವಾರ್ತಾಮಿಮಾಂ ನಿಷಧಭೂಪತಿಃ ।
ಚಾರೈರ್ನಿವೇದಯಾಮಾಸ ಚಿತ್ರವರ್ಮಮಹೀಪತೇಃ ॥ ೧೬೫ ॥
ಶ್ರುತ್ವಾಽಮೃತಮಯೀಂ ವಾರ್ತಾಂ ಸ ಸಮುತ್ಥಾಯ ಸಂಭ್ರಮಾತ್ ।
ತೇಭ್ಯೋ ದತ್ವಾ ಧನಂ ಭೂರಿ ನನರ್ತಾನಂದವಿಹ್ವಲಃ ॥ ೧೬೬ ॥

---

ತನಯನನ್ನು ಕ್ಷಣಹೊತ್ತು ತಿಳಿಯಲಿಲ್ಲ. ಅನಂತರ ಮಂತ್ರಿಗಳು ಎಚ್ಚರಿಸಲು ಅತಿಕಷ್ಟದಿಂದ ಅವನನ್ನು ಎಬ್ಬಿಸಿ ಆರ್ದ್ರಹೃದಯದಿಂದ ತಬ್ಬಿಕೊಂಡನು.

೧೬೧. ಆ ರಾಜಕುಮಾರನು ಕ್ರಮವಾಗಿ ತಾಯಂದಿರನ್ನು ವಂದಿಸಿ ಪ್ರೀತಿಯಿಂದ ವ್ಯಾಕುಲಗೊಂಡು ಆಲಿಂಗಿಸಿದ ಅವರ ಆಶೀರ್ವಾದವನ್ನು ಪಡೆದು ಸಮಸ್ತ ಪಟ್ಟಣಿಗರನ್ನೂ ಸನ್ಮಾನಮಾಡಿದನು.

೧೬೨. ಆ ಪುರಜನರ ಮಧ್ಯದಲ್ಲಿ ಕುಳಿತುಕೊಂಡು ತನ್ನ ಸಮಾಚಾರವನ್ನೂ, ತಕ್ಷಕನ ಸ್ನೇಹವನ್ನೂ ಸಂಪೂರ್ಣವಾಗಿ ತಂದೆಗೆ ತಿಳಿಸಿದನು.

೧೬೩. ನಾಗರಾಜನು ಕೊಟ್ಟ, ರಾಕ್ಷಸನು ತಂದಿದ್ದ ರತ್ನವೇ ಮೊದಲಾದವುಗಳನ್ನು ತಂದೆಗೆ ಒಪ್ಪಿಸಿದನು.

೧೬೪. ಇಂದ್ರಸೇನನು ಮಗನ ಚರಿತೆಯನ್ನು ಕಂಡು ಮತ್ತು ಕೇಳಿ ಆ ಸೌಭಾಗ್ಯವು ಸೊಸೆಯೆಸಗಿದ ಶಿವಪೂಜೆಯಿಂದಾದುದೆಂದರಿತನು.

೧೬೫. ನಿಷಧರಾಜನು. ಈ ಶುಭವಾರ್ತೆಯನ್ನು ದೂತರ ಮೂಲಕ ಚಿತ್ರವರ್ಮರಾಜನಿಗೆ ತಿಳಿಸಿದನು.

೧೬೬. ಆ ಚಿತ್ರವರ್ಮನು ಅಮೃತಮಯವಾದ ಆ ಸಮಾಚಾರವನ್ನು ಕೇಳಿ ಸಂಭ್ರಮದಿಂದೆದ್ದು ಆ ದೂತರಿಗೆ ಬಹುಧನವನ್ನಿತ್ತು ಸಂತೋಷದಿಂದ ಕುಣಿದಾಡಿದನು.

CC-0. Jangamwadi Math Collection. Digitized by eGangotri

ಅಥಾಹೂಯ ಸ್ವತನಯಾಂ ಪರಿಷ್ವಜ್ಯಾಽಶ್ರುಲೋಚನಃ ।
ಭೂಷಣೈರ್ಭೂಷಯಾಮಾಸ ತ್ಯಕ್ತವೈಧವ್ಯಲಕ್ಷಣಾಂ ॥ ೧೬೭ ॥
ಅಥೋತ್ಸವೋ ಮಹಾನಾಸೀದ್ರಾಷ್ಟ್ರಗ್ರಾಮಪುರಾದಿಷು ।
ಸೀಮಂತಿನ್ಯಾಃ ಶುಭಾಚಾರಂ ಶಶಂಸುಃ ಸರ್ವತೋ ಜನಾಃ ॥ ೧೬೮ ॥
ಚಿತ್ರವರ್ಮಾಽಥ ನೃಪತಿಃ ಸಮಾಹೂಯೇಂದ್ರಸೇನಜಂ ।
ಪುನರ್ವಿವಾಹವಿಧಿನಾ ಸುತಾಂ ತಸ್ಮೈ ನ್ಯವೇದಯತ್ ॥ ೧೬೯ ॥
ಚಂದ್ರಾಂಗದೋಽಪಿ ರತ್ನಾದ್ಯೈರಾನೀತೈಸ್ತಕ್ಷಕಾಲಯಾತ್ ।
ಸ್ವಾಂ ಪತ್ನೀಂ ಭೂಷಯಾಂಚಕ್ರೇ ಮರ್ತ್ಯಾನಾಮತಿದುರ್ಲಭೈಃ ॥ ೧೭೦ ॥
ಅಂಗರಾಗೇಣ ದಿವ್ಯೇನ ತಪ್ತಕಾಂಚನಶೋಭಿನಾ ।
ಶುಶುಭೇ ಸಾ ಸುಗಂಧೇನ ದಶಯೋಜನಗಾಮಿನಾ ॥ ೧೭೧ ॥
ಅಮ್ಲಾನಮಾಲಯಾ ಶಶ್ವತ್ಪದ್ಮಕಿಂಜಲ್ಕವರ್ಣಯಾ ।
ಕಲ್ಪದ್ರುಮೋತ್ಥಯಾ ಬಾಲಾ ಭೂಷಿತಾ ಶುಶುಭೇ ಸತೀ ॥ ೧೭೨ ॥
ಏವಂ ಚಂದ್ರಾಂಗದಃ ಪತ್ನೀಮವಾಪ್ಯ ಸಮಯೇ ಶುಭೇ ।
ಯಯೌ ಸ್ವನಗರೀಂ ಭೂಯಃ ಶ್ವಶುರೇಣಾಽನುಮೋದಿತಃ ॥ ೧೭೩ ॥

---

೧೬೭. ಬಳಿಕ ತನ್ನ ಮಗಳನ್ನು ಕರೆಯಿಸಿ ಆನಂದಬಾಷ್ಪವನ್ನು ಸುರಿಸುತ್ತ ಅವಳನ್ನು ಆಲಿಂಗಿಸಿ ಅವಳ ವೈಧವ್ಯಚಿಹ್ನೆಗಳನ್ನು ತೆಗೆಯಿಸಿ ಒಡವೆಗಳಿಂದ ಅಲಂಕಾರ ಮಾಡಿಸಿದನು.

೧೬೮. ಅನಂತರ ರಾಜ್ಯದಲ್ಲಿಯೂ, ಪಟ್ಟಣದಲ್ಲಿಯೂ ಹಳ್ಳಿಗಳಲ್ಲಿಯೂ ಮಹೋತ್ಸವವು ನಡೆಯಿತು. ಎಲ್ಲೆಡೆಯಲ್ಲಿಯೂ ಜನರು ಸೀಮಂತಿನಿಯ ಶುಭಾಚಾರವನ್ನು ಹೊಗಳಿದರು.

೧೬೯. ಚಿತ್ರವರ್ಮನು ಇಂದ್ರಸೇನನ ಕುಮಾರನಾದ ಚಂದ್ರಾಂಗದನನ್ನು ಕರೆಯಿಸಿ ಪುನರ್ವಿವಾಹ ಕ್ರಮದಿಂದ ಮಗಳನ್ನು ಅವನಿಗೆ ಒಪ್ಪಿಸಿದನು.

೧೭೦. ಚಂದ್ರಾಂಗದನೂ ತಾನು ತಕ್ಷಕಾಲಯದಿಂದ ತಂದಿರುವ, ಮನುಷ್ಯರಿಗೆ ದೊರಕಲಾರದ ರತ್ನಾದಿಗಳಿಂದ ತನ್ನ ಪತ್ನಿಯನ್ನು ಅಲಂಕಾರ ಮಾಡಿದನು.

೧೭೧. ಆ ಸೀಮಂತಿನಿಯು ಸುವರ್ಣದಂತೆ ಹೊಳೆಯುವ ಹತ್ತುಗಾವುದದ ವರೆಗೆ ಹರಡುವ ಸುವಾಸನೆಯುಳ್ಳ ದಿವ್ಯಾಂಗರಾಗದಿಂದ ವಿರಾಜಿಸಿದಳು.

೧೭೨. ತಾವರೆಯ ಕೇಸರದಂತೆ ಬಣ್ಣವುಳ್ಳುದಾಗಿ ಕಲ್ಪವೃಕ್ಷದಿಂದುಂಟಾದ ಬಾಡದಿರುವ ಹೂವಿನ ಮಾಲೆಯಿಂದ ಅಲಂಕೃತಳಾಗಿ ಪ್ರಕಾಶಗೊಂಡಳು.

೧೭೩. ಹೀಗೆ ಚಂದ್ರಾಂಗದನು ಶುಭಸಮಯದಲ್ಲಿ ಪತ್ನಿಯನ್ನು ಪಡೆದು ಮಾವನ ಒಪ್ಪಿಗೆಯಿಂದ ತನ್ನ ಪಟ್ಟಣಕ್ಕೆ ಹೊರಟುಹೋದನು.

CC-0. Jangamwadi Math Collection. Digitized by eGangotri

ಇಂದ್ರಸೇನೋಽಪಿ ರಾಜೇಂದ್ರೋ ರಾಜ್ಯೇ ಸ್ಥಾಪ್ಯ ನಿಜಾತ್ಮಜಂ ।
ತಪಸಾ ಶಿವಮಾರಾಧ್ಯ ಲೇಭೇ ಸಂಯಮಿನಾಂ ಗತಿಂ ॥ ೧೭೪ ॥
ದಶವರ್ಷಸಹಸ್ರಾಣಿ ಸೀಮಂತಿನ್ಯಾ ಸ್ವಭಾರ್ಯಯಾ ।
ಸಾರ್ಧಂ ಚಂದ್ರಾಂಗದೋ ರಾಜಾ ಬುಭುಜೇ ವಿಷಯಾನ್ಸ್ಪಹೂನ್ ॥೧೭೫॥
ಪ್ರಾಸೂತ ತನಯಾನಷ್ಟೌ ಕನ್ಯಾಮೇಕಾಂ ವರಾನನಾಂ ।
ರೇಮೇ ಸೀಮಂತಿನೀ ಭರ್ತ್ರಾ ಪೂಜಯಂತೀ ಮಹೇಶ್ವರಂ ।
ದಿನೇ ದಿನೇ ಚ ಸೌಭಾಗ್ಯಂ ಪ್ರಾಪ್ತಂ ಚೈವೇಂದುವಾಸರಾತ್ ॥ ೧೭೬ ॥

ಸೂತ ಉವಾಚ :—

ವಿಚಿತ್ರಮಿದಮಾಖ್ಯಾನಂ ಮಯಾ ಸಮನುವರ್ಣಿತಂ ।
ಭೂಯೋಽಪಿ ವಕ್ಷ್ಯೇ ಮಾಹಾತ್ಮ್ಯಂ ಸೋಮವಾರವ್ರತೋದಿತಂ ॥೧೭೭॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಸೋಮವಾರವ್ರತ ವರ್ಣನಂ" ನಾಮಾಷ್ಟಮೋಽಧ್ಯಾಯಃ

---

೧೭೪. ಇಂದ್ರಸೇನನೂ ರಾಜ್ಯದಲ್ಲಿ ತನ್ನ ಮಗನನ್ನು ಸ್ಥಾಪಿಸಿ ತಪಸ್ಸಿನಿಂದ ಶಿವನನ್ನಾರಾಧಿಸಿ ಯೋಗಿಗಳ ದಿವ್ಯಗತಿಯನ್ನು ಪಡೆದನು.

೧೭೫. ಚಂದ್ರಾಂಗದನು ಹತ್ತುಸಾವಿರ ವರ್ಷ ಸೀಮಂತಿನಿಯೊಡನೆ ರಾಜ್ಯವನ್ನಾಳುತ್ತ ಅನೇಕ ವಿಷಯಸುಖಗಳನ್ನನುಭವಿಸಿದನು.

೧೭೬. ಸೀಮಂತಿನಿಯು ಎಂಟುಜನ ಗಂಡುಮಕ್ಕಳನ್ನೂ, ಓರ್ವಸುಂದರಿಯಾದ ಕನ್ಯೆಯನ್ನೂ ಪಡೆದಳು. ಪತಿಯೊಡನೆ ಮಹೇಶ್ವರನನ್ನಾರಾಧಿಸುತ್ತ ವಿನೋದಪಟ್ಟಳು. ಸೋಮವಾರದ ಶಿವಪೂಜೆಯಿಂದ ಅವಳ ಸೌಭಾಗ್ಯವು ನಿತ್ಯವೂ ಹೆಚ್ಚಿತು.

೧೭೭. ಸೂತನು ಹೇಳುತ್ತಾನೆ:—ನಾನೀಗ ಆಶ್ಚರ್ಯಕರವಾದ ಈ ಉಪಾಖ್ಯಾನವನ್ನು ಹೇಳಿರುವೆನು. ಮರಳಿ ಸೋಮವಾರ ವ್ರತದ ಮಾಹಾತ್ಮ್ಯೆವನ್ನು ನಿಮಗೆ ಹೇಳುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಸೋಮವಾರವ್ರತವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ನವಮೋಽಧ್ಯಾಯಃ

### ಸೀಮಂತಿನ್ಯಾಃ ಪ್ರಭಾವವರ್ಣನಂ

ಋಷಯ ಊಚುಃ :—

ಸಾಧು ಸಾಧು ಮಹಾಭಾಗ ತ್ವಯಾ ಕಥಿತಮುತ್ತಮಂ ।
ಆಖ್ಯಾನಂ ಪುನರನ್ಯಚ್ಚ ವಿಚಿತ್ರಂ ವಕ್ತುಮರ್ಹಸಿ ॥ ೧ ॥

ಸೂತ ಉವಾಚ :—

ವಿದರ್ಭವಿಷಯೇ ಪೂರ್ವಮಾಸೀದೇಕೋ ದ್ವಿಜೋತ್ತಮಃ ।
ವೇದಮಿತ್ರ ಇತಿ ಖ್ಯಾತೋ ವೇದಶಾಸ್ತ್ರಾರ್ಥವಿತ್ಸುಧೀಃ ॥ ೨ ॥
ತಸ್ಯಾಸೀದಪರೋ ವಿಪ್ರಃ ಸಖಾ ಸಾರಸ್ವತಾಹ್ವಯಃ ।
ತಾವುಭೌ ಪರಮಸ್ನಿಗ್ಧಾವೇಕದೇಶನಿವಾಸಿನೌ ॥ ೩ ॥
ವೇದಮಿತ್ರಸ್ಯ ಪುತ್ರೋಽಭೂತ್ಸುಮೇಧಾ ನಾಮ ಸುವ್ರತಃ ।
ಸಾರಸ್ವತಸ್ಯ ತನಯಃ ಸೋಮವಾನಿತಿ ವಿಶ್ರುತಃ ॥ ೪ ॥
ಉಭೌ ಸವಯಸೌ ಬಾಲೌ ಸಮವೇಷೌ ಸಮಸ್ಥಿತೀ ।
ಸಮಂ ಚ ಕೃತಸಂಸ್ಕಾರೌ ಸಮವಿದ್ಯೌ ಬಭೂವತುಃ ॥ ೫ ॥

---

### ಕನ್ನಡದ ಅನುವಾದ

#### ಸೀಮಂತಿನೀಪ್ರಭಾವವರ್ಣನ

೧. ಋಷಿಗಳು ಕೇಳುತ್ತಾರೆ:—ಅಯ್ಯಾ ಭಾಗ್ಯಶಾಲಿಯೆ ! ನೀನು ಉತ್ತಮ ಆಖ್ಯಾನವನ್ನು ಹೇಳಿರುವೆ. ಮರಳಿ ಆಶ್ಚರ್ಯಕರವಾದ ಮತ್ತೊಂದು ಉಪಾಖ್ಯಾನವನ್ನು ಹೇಳು.

೨. ಸೂತನು ಹೇಳುತ್ತಾನೆ :—ಹಿಂದೆ ವಿದರ್ಭದೇಶದಲ್ಲಿ ವೇದಶಾಸ್ತ್ರಾರ್ಥಗಳನ್ನರಿತ ವಿದ್ವಾಂಸನಾದ ವೇದಮಿತ್ರನೆಂಬ ಬ್ರಾಹ್ಮಣಶ್ರೇಷ್ಠನಿದ್ದನು.

೩. ಅವನಿಗೆ ಸಾರಸ್ವತನೆಂಬ ಮತ್ತೊಬ್ಬ ಬ್ರಾಹ್ಮಣನು ಮಿತ್ರನಾಗಿದ್ದನು. ಅವರಿಬ್ಬರೂ ತುಂಬ ಸ್ನೇಹಿತರಾಗಿ ಒಂದೇ ಸ್ಥಳದಲ್ಲಿ ವಾಸವಾಗಿದ್ದರು.

೪. ವೇದಮಿತ್ರನಿಗೆ ಸುಮೇಧನೆಂಬ ತನಯನೂ, ಸಾರಸ್ವತನಿಗೆ ಸೋಮವಂತನೆಂಬ ಪುತ್ರನೂ ಇದ್ದರು.

೫. ಈ ಇಬ್ಬರು ಬಾಲಕರು ಸಮಾನವಯಸ್ಕರೂ, ಒಂದೇ ಉಡಿಗೆಯುಳ್ಳವರೂ, ಒಂದೇ ಸಮಯದಲ್ಲಿ ಉಪನಯನ ಸಂಸ್ಕಾರವನ್ನು ಹೊಂದಿದವರೂ, ಸಮಾನವಿದ್ಯೆಯುಳ್ಳವರೂ ಆಗಿದ್ದರು.

CC-0. Jangamwadi Math Collection. Digitized by eGangotri

ಸಾಂಗಾನಧೀತ್ಯ ತೌ ವೇದಾಂಸ್ತರ್ಕವ್ಯಾಕರಣಾನಿ ಚ ।
ಇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಕೃತ್ಸ್ನಶಃ ॥ ೬ ॥
ಸರ್ವವಿದ್ಯಾಕುಶಲಿನೌ ಬಾಲ್ಯ ಏವ ಮನೀಷಿಣೌ ।
ಪ್ರಹರ್ಷಮತುಲಂ ಪಿತ್ರೋರ್ದದತುಃ ಸಕಲೈರ್ಗುಣೈಃ ॥ ೭ ॥
ತಾವೇಕದಾ ಸ್ವತನಯೌ ತಾವುಭೌ ಬ್ರಾಹ್ಮಣೋತ್ತಮೌ ।
ಆಹೂಯಾವೋಚತಾಂ ಪ್ರೀತ್ಯಾ ಷೋಡಶಾಬ್ದೌ ಶುಭಾಕೃತೀ ॥ ೮ ॥
ಹೇ ಪುತ್ರಕೌ ಯುವಾಂ ಬಾಲ್ಯೇ ಕೃತವಿದ್ಯೌ ಸುವರ್ಚಸೌ ।
ವೈವಾಹಿಕೋಽಯಂ ಸಮಯೋ ವರ್ತತೇ ಯುವಯೋಃ ಸಮಂ ॥ ೯ ॥
ಇಮಂ ಪ್ರಸಾದ್ಯ ರಾಜಾನಂ ವಿದರ್ಭೇಶಂ ಸ್ವವಿದ್ಯಯಾ ।
ತತಃ ಪ್ರಾಪ್ಯ ಧನಂ ಭೂರಿ ಕೃತೋದ್ವಾಹೌ ಭವಿಷ್ಯಥ ॥ ೧೦ ॥
ಏವಮುಕ್ತೌ ಸುತೌ ತಾಭ್ಯಾಂ ತಾವುಭೌ ದ್ವಿಜನಂದನೌ ।
ವಿದರ್ಭರಾಜಮಾಸಾದ್ಯ ಸಮತೋಷಯತಾಂ ಗುಣೈಃ ॥ ೧೧ ॥
ವಿದ್ಯಯಾ ಪರಿತುಷ್ಟಾಯ ತಸ್ಮೈ ದ್ವಿಜಕುಮಾರಕೌ ।
ವಿವಾಹಾರ್ಥಂ ಕೃತೋದ್ಯೋಗೌ ಧನಹೀನಾವಶಂಸತಾಂ ॥ ೧೨ ॥

---

೬–೭. ಅವರು ಬಾಲ್ಯದಲ್ಲಿಯೇ ಅಂಗಸಹಿತವಾಗಿ ವೇದಗಳನ್ನೂ, ತರ್ಕ, ವ್ಯಾಕರಣಶಾಸ್ತ್ರಗಳನ್ನೂ, ಇತಿಹಾಸ, ಪುರಾಣಗಳನ್ನೂ, ಧರ್ಮಶಾಸ್ತ್ರಗಳನ್ನೂ ಸಂಪೂರ್ಣವಾಗಿ ಅಧ್ಯಯನಮಾಡಿ ಸಕಲ ವಿದ್ಯೆಗಳಲ್ಲಿಯೂ ನಿಪುಣರಾಗಿ, ಜ್ಞಾನಿಗಳಾಗಿ ಸಕಲ ಸದ್ಗುಣಗಳಿಂದ ತಂದೆತಾಯಿಗಳಿಗೆ ಅತ್ಯಂತ ಸಂತೋಷ ವನ್ನುಂಟುಮಾಡಿದರು.

೮. ಆ ಬ್ರಾಹ್ಮಣರಿಬ್ಬರೂ ಹದಿನಾರುವರ್ಷ ವಯಸ್ಸಿನ ಸುಂದರರಾದ ತಮ್ಮ ಮಕ್ಕಳಿಬ್ಬರನ್ನೂ ಕರೆದು ಪ್ರೀತಿಯಿಂದ ಹೀಗೆಂದರು.

೯. "ಎಲೈ ಪುತ್ರರೆ! ಬಾಲ್ಯದಲ್ಲಿ ವಿದ್ಯಾಭ್ಯಾಸಮಾಡಿ ವರ್ಚಸ್ವಿಗಳಾದ ನಿಮಗೆ ಇದು ವಿವಾಹ ಸಮಯವಾಗಿರುವುದು.

೧೦. ಈ ವಿದರ್ಭರಾಜನನ್ನು ನಿಮ್ಮ ವಿದ್ಯೆಯಿಂದ ಸಂತೋಷಗೊಳಿಸಿ ಅವನಿಂದ ಅಧಿಕದ್ರವ್ಯವನ್ನು ಪಡೆದು ವಿವಾಹಮಾಡಿಕೊಳ್ಳಿರಿ.

೧೧. ಹೀಗೆ ತಂದೆಯರು ಹೇಳಲು, ಆ ಇಬ್ಬರು ಕುಮಾರರೂ ವಿದರ್ಭ ರಾಜನನ್ನು ಹೊಂದಿ ತಮ್ಮ ವಿದ್ಯಾವಿನಯಾದಿ ಗುಣಗಳಿಂದ ಅವನನ್ನು ಮೆಚ್ಚಿ ಸಿದರು.

೧೨. ಆ ವಿಪ್ರಕುಮಾರರು ತಮ್ಮ ವಿದ್ಯೆಯಿಂದ ಸಂತೋಷಗೊಂಡ ಆ ವಿದರ್ಭೇಶನನ್ನು ಕುರಿತು, "ನಾವು ವಿವಾಹ ಮಾಡಿಕೊಳ್ಳಲಪೇಕ್ಷೆಯುಳ್ಳವ ರಾಗಿದ್ದೇವೆ. ಹಣವಿಲ್ಲ" ಎಂದರು.

CC-0. Jangamwadi Math Collection. Digitized by eGangotri

ತಯೋರಪಿ ಮತಂ ಜ್ಞಾತ್ವಾ ಸ ವಿದರ್ಭಮಹೀಪತಿಃ ।
ಪ್ರಹಸ್ಯ ಕಿಂಚಿತ್ಪ್ರೋವಾಚ ಲೋಕತತ್ವವಿವಿತ್ಸಯಾ ॥ ೧೩ ॥
ಆಸ್ತೇ ನಿಷಧರಾಜಸ್ಯ ರಾಜ್ಞೀ ಸೀಮಂತಿನೀ ಸತೀ ।
ಸೋಮವಾರೇ ಮಹಾದೇವಂ ಪೂಜಯತ್ಯಂಬಿಕಾಯುತಂ ॥ ೧೪ ॥
ತಸ್ಮಿನ್ದಿನೇ ಸಪತ್ನೀಕಾನ್ದ್ವಿಜಾಗ್ರ್ಯಾನ್ವೇದವಿತ್ತಮಾನ್ ।
ಸಂಪೂಜ್ಯ ಪರಯಾ ಭಕ್ತ್ಯಾ ಧನಂ ಭೂರಿ ದದಾತಿ ಚ ॥ ೧೫ ॥
ಅತೋಽತ್ರ ಯುವಯೋರೇಕೋ ನಾರೀವಿಭ್ರಮವೇಷಧೃಕ್ ।
ಏಕಸ್ತಸ್ಯಾಃ ಪತಿರ್ಭೂತ್ವಾ ಜಾಯೇತಾಂ ವಿಪ್ರದಂಪತೀ ॥ ೧೬ ॥
ಯುವಾಂ ವಧೂವರೌ ಭೂತ್ವಾ ಪ್ರಾಪ್ಯ ಸೀಮಂತಿನೀಗೃಹಂ ।
ಭುಕ್ತ್ವಾ ಭೂರಿಧನಂ ಲಬ್ಧ್ವಾ ಪುನರ್ಯಾತಂ ಮಮಾಂತಿಕಂ ॥ ೧೭ ॥
ಇತಿ ರಾಜ್ಞಾ ಸಮಾದಿಷ್ಟೌ ಭೀತೌ ದ್ವಿಜಕುಮಾರಕೌ ।
ಪ್ರತ್ಯೂಚತುರಿದಂ ಕರ್ಮ ಕರ್ತುಂ ನೌ ಜಾಯತೇ ಭಯಂ ॥ ೧೮ ॥
ದೇವತಾಸು ಗುರೌ ಪಿತ್ರೋಸ್ತಥಾ ರಾಜಕುಲೇಷು ಚ ।
ಕೌಟಿಲ್ಯಮಾಚರನ್ಮೋಹಾತ್ಸದ್ಯೋ ನಶ್ಯತಿ ಸಾನ್ವಯಃ ॥ ೧೯ ॥

---

೧೩. ಆ ವಿದರ್ಭರಾಜನು ಅವರೀರ್ವರ ಅಭಿಪ್ರಾಯವನ್ನು ತಿಳಿದು ಸ್ವಲ್ಪ ನಕ್ಕು ಪ್ರಪಂಚದ ತತ್ವವನ್ನು ತಿಳಿಯಲಿಚ್ಛೆಯಿಂದ ಇಂತೆಂದನು.

೧೪. "ನಿಷಧರಾಜನಿಗೆ ಸೀಮಂತಿನಿಯೆಂಬ ರಾಣಿಯಿರುವಳು. ಅವಳು ಸೋಮವಾರದಿನ ಪಾರ್ವತೀಸಹಿತನಾದ ಮಹಾದೇವನನ್ನು ಪೂಜಿಸುತ್ತಾಳೆ.

೧೫. ಆದಿನ ಅವಳು ವೇದಜ್ಞರಾದ ದ್ವಿಜದಂಪತಿಗಳನ್ನು ಪರಮಭಕ್ತಿಯಿಂದ ಪೂಜಿಸಿ ಅತಿಶಯವಾಗಿ ಧನವನ್ನು ಕೊಡುತ್ತಾಳೆ.

೧೬. ಆದುದರಿಂದ ನಿಮ್ಮಿಬ್ಬರಲ್ಲಿ ಒಬ್ಬನು ಹೆಂಗಸಿನ ವೇಷವನ್ನು ಧರಿಸಲಿ. ಮತ್ತೊಬ್ಬನು ಅವಳ ಪತಿಯಾಗಲಿ.

೧೭. ಹೀಗೆ ಬ್ರಾಹ್ಮಣದಂಪತಿಗಳಾದ ನೀವು ಸೀಮಂತಿನಿಯ ಮನೆಯನ್ನು ಸೇರಿ ಭೋಜನಮಾಡಿ ಬಹಳ ಹಣವನ್ನು ಪಡೆದು ಮರಳಿ ನನ್ನ ಹತ್ತಿರಕ್ಕೆ ಬನ್ನಿರಿ."

೧೮. ಹೀಗೆ ರಾಜನು ಆಜ್ಞಾಪಿಸಲು ಭಯಗೊಂಡ ಆ ಬ್ರಾಹ್ಮಣ ಬಾಲಕರು ಹೇಳಿದರು. ಈ ಕೆಲಸವನ್ನು ಮಾಡಲು ನಮಗೆ ಹೆದರಿಕೆಯಾಗುವುದು.

೧೯. ದೇವತೆಗಳಲ್ಲಿಯೂ, ಗುರುಗಳಲ್ಲಿಯೂ, ತಂದೆತಾಯಿಗಳಲ್ಲಿಯೂ, ರಾಜಕುಲಗಳಲ್ಲಿಯೂ, ಮೋಹದಿಂದ ಕಪಟವನ್ನಾಚರಿಸುವ ಮಾನವನು ಕೂಡಲೆ ಹಾಳಾಗುವನು.

CC-0. Jangamwadi Math Collection. Digitized by eGangotri

ಕಥಮಂತರ್ಗೃಹಂ ರಾಜ್ಞಾಂ ಛದ್ಮನಾ ಪ್ರವಿಶೇತ್ಪುಮಾನ್ ।
ಗೋಪ್ಯಮಾನಮಪಿ ಛದ್ಮ ಕದಾಚಿತ್ಖ್ಯಾತಿಮೇಷ್ಯತಿ ॥ ೨೦ ॥
ಯೇ ಗುಣಾಃ ಸಾಧಿತಾಃ ಪೂರ್ವಂ ಶೀಲಾಚಾರಶ್ರುತಾದಿಭಿಃ ।
ಸದ್ಯಸ್ತೇ ನಾಶಮಾಯಾಂತಿ ಕೌಟಿಲ್ಯಪಥಗಾಮಿನಃ ॥ ೨೧ ॥
ಪಾಪಂ ನಿಂದಾ ಭಯಂ ವೈರಂ ಚತ್ವಾರ್ಯೇತಾನಿ ದೇಹಿನಾಂ ।
ಛದ್ಮಮಾರ್ಗಪ್ರಪನ್ನಾನಾಂ ತಿಷ್ಠಂತ್ಯೇವ ಹಿ ಸರ್ವದಾ ॥ ೨೨ ॥
ಅತ ಆವಾಂ ಶುಭಾಚಾರೌ ಜಾತೌ ಚ ಶುಚಿನಾಂ ಕುಲೇ ।
ವೃತ್ತಂ ಧೂರ್ತಜನಶ್ಲಾಘ್ಯಂ ನಾಶ್ರಯಾವಃ ಕದಾಚನ ॥ ೨೩ ॥

ರಾಜೋವಾಚ :—

ದೈವತಾನಾಂ ಗುರೂಣಾಂ ಚ ಪಿತ್ರೋರ್ಶ್ಚ ಪೃಥಿವೀಪತೇಃ ।
ಶಾಸನಸ್ಯಾಪ್ಯಲಂಘ್ಯತ್ವಾತ್ತ್ಯಾದೇಶೋ ನ ಕರ್ಹಿಚಿತ್ ॥ ೨೪ ॥
ಏತೈರ್ಯದ್ಯತ್ಸಮಾದಿಷ್ಟಂ ಶುಭಂ ವಾ ಯದಿ ವಾಽಶುಭಂ ।
ಕರ್ತವ್ಯಂ ನಿಯತಂ ಭೀತೈರಪ್ರಮತ್ತೈರ್ಬುಭೂಷುಭಿಃ ॥ ೨೫ ॥
ಅಹೋ ವಯಂ ಹಿ ರಾಜಾನಃ ಪ್ರಜಾ ಯೂಯಂ ಹಿ ಸಂಮತಾಃ ।
ರಾಜಾಜ್ಞಯಾ ಪ್ರವೃತ್ತಾನಾಂ ಶ್ರೇಯಃ ಸ್ಯಾದನ್ಯಥಾ ಭಯಂ ॥ ೨೬ ॥

---

೨೦–೨೧. ರಾಜರ ಮನೆಯೊಳಗೆ ಮನುಷ್ಯನು ಕಪಟದಿಂದ ಹೇಗೆ ಪ್ರವೇಶಿಸಿಯಾನು? ಕಪಟವನ್ನು ಮುಚ್ಚಿಟ್ಟರೂ ಅದು ಒಂದಾನೊಂದುದಿನ ಬಹಿರಂಗವಾಗುವುದು. ಕಪಟದಹಾದಿಯನ್ನು ಅವಲಂಬಿಸಿದರೆ ಅವರು ಹಿಂದೆ ಸತ್ಸ್ವಭಾವ, ಆಚಾರ, ವಿದ್ಯೆಗಳಿಂದ ಸಾಧಿಸಿದ ಗುಣಗಳೆಲ್ಲ ಕೂಡಲೆ ಹಾಳಾಗುವುವು.

೨೨–೨೩. ಕಪಟಿಗಳಲ್ಲಿ ಪಾಪ, ನಿಂದೆ, ಭಯ, ದ್ವೇಷ ಈ ನಾಲ್ಕು ಯಾವಾಗಲೂ ಇದ್ದೇ ಇರುವುವು. ಆದುದರಿಂದ ಒಳ್ಳೆನಡತೆಯುಳ್ಳ, ಪವಿತ್ರವಾದ ವಂಶಗಳಲ್ಲಿ ಜನಿಸಿದ ನಾವು ವಂಚಕರಿಗೆ ಶ್ಲಾಘ್ಯವಾದ ನಡತೆಯನ್ನು ಯಾವಾಗಲೂ ಆಶ್ರಯಿಸುವುದಿಲ್ಲ.

೨೪. ರಾಜನು ಹೇಳುತ್ತಾನೆ:—"ದೇವತೆ, ಗುರು, ಪಿತೃಗಳು, ರಾಜ ಇವರ ಅಪ್ಪಣೆಯನ್ನು ಮೀರಬಾರದಾದುದರಿಂದ ಒಂದುವೇಳೆಯೂ ನೀವು ಅದನ್ನು ತಿರಸ್ಕರಿಸಕೂಡದು.

೨೫–೨೬. ದೇವತೆಗಳೇ ಮೊದಲಾದವರು ಅಪ್ಪಣೆಮಾಡಿದುದು ಒಳ್ಳೆಯದೆ ಆಗಲಿ, ಕೆಟ್ಟುದೇ ಆಗಲಿ ಅದನ್ನು ಭಯಗೊಂಡವರೂ ಪ್ರಮಾದವಿಲ್ಲದೆ ನೆರವೇರಿಸಬೇಕು. ನಾವು ರಾಜರು. ನೀವು ನಮಗೆ ಸಮ್ಮತರಾದ ಪ್ರಜೆಗಳು. ರಾಜನ ಅಪ್ಪಣೆಯಂತೆ ನಡೆಯುವವರಿಗೆ ಶ್ರೇಯಸ್ಸಾಗುವುದು. ಹಾಗೆ ನಡೆಯದಿದ್ದರೆ ಭಯವುಂಟಾಗುವುದು.

CC-0. Jangamwadi Math Collection. Digitized by eGangotri

ಅತೋ ಮುಚ್ಛಾಸನಂ ಕಾರ್ಯಂ ಭವದ್ಭ್ಯಾಮವಿಲಂಬಿತಂ ।
ಇತ್ಯುಕ್ತೌ ನರದೇವೇನ ತೌ ತಥೇತ್ಯೂಚತುರ್ಭಯಾತ್ ॥ ೨೭ ॥
ಸಾರಸ್ವತಸ್ಯ ತನಯಂ ಸೋಮವಂತಂ ನರಾಧಿಪಃ ।
ಸ್ತ್ರೀರೂಪಧಾರಿಣಂ ಚಕ್ರೇ ವಸ್ತ್ರಾಕಲ್ಪಾಂಜನಾದಿಭಿಃ ॥ ೨೮ ॥
ಸ ಕೃತ್ರಿಮೋದ್ಭೂತಕಲತ್ರಭಾವಃ
ಪ್ರಯುಕ್ತಕರ್ಣಾಭರಣಾಂಗರಾಗಃ ।
ಸ್ನಿಗ್ಧಾಂಜನಾಕ್ಷಃ ಸ್ಪೃಹಣೀಯರೂಪೋ
ಬಭೂವ ಸದ್ಯಃ ಪ್ರಮದೋತ್ತಮಾಭಃ ॥ ೨೯ ॥
ತಾವುಭೌ ದಂಪತೀ ಭೂತ್ವಾ ದ್ವಿಜಪುತ್ರೌ ನೃಪಾಜ್ಞಯಾ ।
ಜಗ್ಮತುರ್ನೈಷಧಂ ದೇಶಂ ಯದ್ವಾ ತದ್ವಾ ಭವತ್ವಿತಿ ॥ ೩೦ ॥
ಉಪೇತ್ಯ ರಾಜಸದನಂ ಸೋಮವಾರೇ ದ್ವಿಜೋತ್ತಮೈಃ ।
ಸಪತ್ನೀಕೈಃ ಕೃತಾತಿಥ್ಯೌ ಧೌತಪಾದೌ ಬಭೂವತುಃ ॥ ೩೧ ॥
ಸರಾಜ್ಞೀ ಬ್ರಾಹ್ಮಣಾನ್ಸರ್ವಾನುಪವಿಷ್ಟಾನ್ವರಾಸನೇ ।
ಪ್ರತ್ಯೇಕಮರ್ಚಯಾಂಚಕ್ರೇ ಸಪತ್ನೀಕಾನ್ದ್ವಿಜೋತ್ತಮಾನ್ ॥ ೩೨ ॥
ತೌ ಚ ವಿಪ್ರಸುತೌ ದೃಷ್ಟ್ವಾ ಪ್ರಾಪ್ತೌ ಕೃತಕದಂಪತೀ ।
ಜ್ಞಾತ್ವಾ ಕಿಂಚಿದ್ವಿಹಸ್ಯಾಽಥ ಮೇನೇ ಗೌರೀಮಹೇಶ್ವರೌ ॥ ೩೩ ॥

---

೨೭. ಆದುದರಿಂದ ನೀವು ಕೂಡಲೆ ನನ್ನ ಅಪ್ಪಣೆಯನ್ನು ನಡೆಸಬೇಕು" ಎಂದು ರಾಜನು ಹೇಳಲು ಅವರಿಬ್ಬರೂ ಭಯದಿಂದ ಹಾಗೆಯೇ ಆಗಲೆಂದರು.

೨೮. ದೊರೆಯು ಸಾರಸ್ವತನ ಮಗನಾದ ಸೋಮವಂತನನ್ನು ಬಟ್ಟೆ, ವೇಷ, ಕಾಡಿಗೆಗಳಿಂದ ಸ್ತ್ರೀರೂಪನನ್ನಾಗಿಸಿದನು.

೨೯. ಸೋಮವಂತನು ಕೃತ್ರಿಮಸ್ತ್ರೀಯಾಗಿ, ಧರಿಸಿದ ಕಿವಿಯ ಆಭರಣವುಳ್ಳವನೂ, ಗಂಧವನ್ನು ಹಚ್ಚಿ, ಕಣ್ಣಿಗೆ ಕಪ್ಪನ್ನು ಇಟ್ಟುಕೊಂಡು ಕೂಡಲೆ ಸುಂದರವಾಗಿ ಕಂಗೊಳಿಸಿದನು.

೩೦. ಆ ಇಬ್ಬರು ಬ್ರಾಹ್ಮಣಕುಮಾರರೂ ರಾಜನ ಅಪ್ಪಣೆಯಿಂದ ದಂಪತಿಗಳಾಗಿ ಏನಾದರೂ ಆಗಲೆಂದು ನಿಷಧದೇಶಕ್ಕೆ ತೆರಳಿದರು.

೩೧. ಸೋಮವಾರದ ದಿನ ಸಪತ್ನೀಕರಾದ ಬ್ರಾಹ್ಮಣರೊಡನೆ ರಾಜನ ಅರಮನೆಯನ್ನು ಸೇರಿ ಕಾಲನ್ನು ತೊಳೆಯಿಸಿಕೊಂಡು ಆತಿಥ್ಯವನ್ನು ಪಡೆದರು.

೩೨-೩೩. ಆ ಸೀಮಂತಿನಿಯು ಉತ್ತಮಾಸನದಲ್ಲಿ ಕುಳಿತಿರುವ ಬ್ರಾಹ್ಮಣ ದಂಪತಿಗಳನ್ನೆಲ್ಲ ಪ್ರತ್ಯೇಕವಾಗಿ ಪೂಜಿಸಿದಳು. ಅವಳು ಆ ಬ್ರಾಹ್ಮಣಕುಮಾರರನ್ನು ನೋಡಿ ಅವರನ್ನು ಕೃತ್ರಿಮದಂಪತಿಗಳನ್ನಾಗಿ ತಿಳಿದು, ಸ್ವಲ್ಪ ನಕ್ಕು ಪಾರ್ವತೀಪರಮೇಶ್ವರರೆಂದು ಧ್ಯಾನಿಸಿದಳು.

CC-0. Jangamwadi Math Collection. Digitized by eGangotri

ಆವಾಹ್ಯ ದ್ವಿಜಮುಖ್ಯೇಷು ದೇವದೇವಂ ಸದಾಶಿವಂ ।
ಪತ್ನೀಷ್ವಾವಾಹಯಾಮಾಸ ಸಾ ದೇವೀಂ ಜಗದಂಬಿಕಾಂ ॥ ೩೪ ॥
ಗಂಧೈರ್ಮಾಲ್ಯೈಃ ಸುರಭಿಭಿರ್ಧೂಪೈರ್ನೀರಾಜನೈರಪಿ ।
ಅರ್ಚಯಿತ್ವಾ ದ್ವಿಜಶ್ರೇಷ್ಠಾನ್ನಮಶ್ಚಕ್ರೇ ಸಮಾಹಿತಾ ॥ ೩೫ ॥
ಹಿರಣ್ಮಯೇಷು ಪಾತ್ರೇಷು ಪಾಯಸಂ ಘೃತಸಂಯುತಂ ।
ಶರ್ಕರಾಮಧುಸಂಯುಕ್ತಂ ಶಾಕೈರ್ಜುಷ್ಟಂ ಮನೋರಮೈಃ ॥ ೩೬ ॥
ಗಂಧಶಾಲ್ಯೋದನೈರ್ಹೃದ್ಯೈರ್ಮೋದಕಾಪೂಪರಾಶಿಭಿಃ ।
ಶಷ್ಕುಲೀಭಿಶ್ಚ ಸಂಯಾವೈಃ ಕೃಸರೈರ್ಮಾಷಪಕ್ವಕೈಃ ॥ ೩೭ ॥
ತಥಾನ್ಯೈರಪ್ಯಸಂಖ್ಯಾತೈರ್ಭಕ್ಷ್ಯೈರ್ಭೋಜ್ಯೈರ್ಮನೋರಮೈಃ ।
ಸುಗಂಧೈಃ ಸ್ವಾದುಭಿಃ ಸೂಪೈಃ ಪಾನೀಯೈರಪಿ ಶೀತಲೈಃ ॥ ೩೮ ॥
ಕ್ಲೃಪ್ತಮನ್ನಂ ದ್ವಿಜಾಗ್ರ್ಯೇಭ್ಯಃ ಸಾ ಭಕ್ತ್ಯಾ ಪರ್ಯವೇಷಯತ್ ।
ದಧ್ಯೋದನಂ ನಿರುಪಮಂ ನಿವೇದ್ಯ ಸಮತೋಷಯತ್ ॥ ೩೯ ॥
ಭುಕ್ತವತ್ಸು ದ್ವಿಜಾಗ್ರ್ಯೇಷು ಸ್ವಾಚಾಂತೇಷು ನೃಪಾಂಗನಾ ।
ಪ್ರಣಮ್ಯ ದತ್ವಾ ತಾಂಬೂಲಂ ದಕ್ಷಿಣಾಂ ಚ ಯಥಾರ್ಹತಃ ॥ ೪೦ ॥
ಧೇನೂರ್ಹಿರಣ್ಯವಾಸಾಂಸಿ ರತ್ನಸ್ರಗ್ಭೂಷಣಾನಿ ಚ ।
ದತ್ವಾ ಭೂಯೋ ನಮಸ್ಕೃತ್ಯ ವಿಸಸರ್ಜ ದ್ವಿಜೋತ್ತಮಾನ್ ॥ ೪೧ ॥

---

೩೪. ಅವಳು ದ್ವಿಜಶ್ರೇಷ್ಠರಲ್ಲಿ ಸದಾಶಿವನನ್ನೂ ಅವರ ಪತ್ನಿಯರಲ್ಲಿ ಗೌರೀದೇವಿಯನ್ನೂ ಆವಾಹನೆಮಾಡಿದಳು.

೩೫. ಗಂಧ, ಮಾಲೆ, ಸುವಾಸನೆಯಾದ ಧೂಪ, ಆರತಿಗಳಿಂದ ದ್ವಿಜೋತ್ತಮರನ್ನು ಆರಾಧಿಸಿ ಒಮ್ಮನಸ್ಸಿನಿಂದ ನಮಸ್ಕರಿಸಿದಳು.

೩೬–೩೯. ಚಿನ್ನದ ಪಾತ್ರೆಗಳಲ್ಲಿ ತುಪ್ಪ, ಸಕ್ಕರೆ, ಜೇನುತುಪ್ಪ, ಮನೋಹರವಾದ ಕಾಯಿಪಲ್ಯಗಳಿಂದ ಕೂಡಿದ ಪಾಯಸವನ್ನೂ, ಗಂಧಸಾಲೆ ಅಕ್ಕಿ ಅನ್ನ, ಕಡುಬು, ಹಪ್ಪಳ, ಚಕ್ಕುಲಿ, ಹುಗ್ಗಿ, ಉದ್ದಿನವಡೆ, ರುಚಿಯಾದ ತೊವ್ವೆ, ತಣ್ಣಗಿರುವ ನೀರು, ಇನ್ನೂ ಇತರ ಲೆಕ್ಕವಿಲ್ಲದ ಭಕ್ಷ್ಯಭೋಜ್ಯಗಳಿಂದ ಕೂಡಿದ ಆಹಾರವಸ್ತುಗಳನ್ನೂ ಸೊಗಸಾದ ದಧ್ಯನ್ನವನ್ನೂ ಬಡಿಸಿ ಬ್ರಾಹ್ಮಣರನ್ನು ಸಂತೋಷಗೊಳಿಸಿದಳು.

೪೦–೪೧. ಬ್ರಾಹ್ಮಣೋತ್ತಮರು ಭೋಜನಮಾಡಿ ಆಚಮನಗೈಯಲು ಆ ಸೀಮಂತಿನಿಯು ಅವರನ್ನು ನಮಸ್ಕರಿಸಿ ಯಥೋಚಿತವಾಗಿ ತಾಂಬೂಲ ದಕ್ಷಿಣೆಗಳನ್ನೂ, ಆಕಳು, ಸುವರ್ಣ, ವಸ್ತ್ರ, ರತ್ನ, ಮಾಲೆ, ಒಡವೆ ಇವುಗಳನ್ನೂ ಕೊಟ್ಟು ಮರಳಿ ನಮಸ್ಕರಿಸಿ ಅವರನ್ನು ಕಳುಹಿಸಿದಳು.

CC-0. Jangamwadi Math Collection. Digitized by eGangotri

ತಯೋರ್ದ್ವಯೋ ರ್ಭೂಸುರವರ್ಯಪುತ್ರಯೋ
ರೇಕಸ್ತಯಾ ಹೈಮವತೀಧಿಯಾರ್ಚಿತಃ ।
ಏಕೋ ಮಹಾದೇವಧಿಯಾಽಭಿಪೂಜಿತಃ
ಕೃತಪ್ರಣಾಮೌ ಯಯತುಸ್ತದಾಜ್ಞಯಾ ॥ ೪೨ ॥

ಸಾ ತು ವಿಸ್ಮೃತಪುಂಭಾವಾ ತಸ್ಮಿನ್ನೇವ ದ್ವಿಜೋತ್ತಮೇ ।
ಜಾತಸ್ಪೃಹಾ ಮದೋತ್ಸಿಕ್ತಾ ಕಂದರ್ಪವಿವಶಾಽಬ್ರವೀತ್ ॥ ೪೩ ॥
ಅಯಿ ನಾಥ ವಿಶಾಲಾಕ್ಷ ಸರ್ವಾಂಽವಯವಸುಂದರ ।
ತಿಷ್ಠ ತಿಷ್ಠ ಕ್ವ ವಾ ಯಾಸಿ ಮಾಂ ನ ಪಶ್ಯಸಿ ತೇ ಪ್ರಿಯಾಂ ॥ ೪೪ ॥
ಇದಮಗ್ರೇ ವನಂ ರಮ್ಯಂ ಸುಪುಷ್ಪಿತಮಹಾದ್ರುಮಂ ।
ಅಸ್ಮಿನ್ವಿಹರ್ತುಮಿಚ್ಛಾಮಿ ತ್ವಯಾ ಸಹ ಯಥಾಸುಖಂ ॥ ೪೫ ॥
ಇತ್ಥಂ ತಯೋಕ್ತಮಾಕರ್ಣ್ಯ ಪುರೋಽಗಚ್ಛದ್ದ್ವಿಜಾತ್ಮಜಃ ।
ವಿಚಿಂತ್ಯ ಪರಿಹಾಸೋಕ್ತಿಂ ಗಚ್ಛತಿ ಸ್ಮ ಯಥಾ ಪುರಾ ॥ ೪೬ ॥
ಪುನರಪ್ಯಾಹ ಸಾ ಬಾಲಾ ತಿಷ್ಠ ತಿಷ್ಠ ಕ್ವ ಯಾಸ್ಯಸಿ ।
ದುರುತ್ಸಹಸ್ಮರಾವೇಶಾಂ ಪರಿಭೋಕ್ತುಮುಪೇತ್ಯ ಮಾಂ ॥ ೪೭ ॥

---

೪೨. ಪಾರ್ವತೀಪರಮೇಶ್ವರರ ಭಾವನೆಯಿಂದ ಪೂಜಿಸಲ್ಪಟ್ಟ ಆ ಇಬ್ಬರು ಬ್ರಾಹ್ಮಣಕುಮಾರರೂ ಅವಳ ಅಪ್ಪಣೆಯನ್ನು ಪಡೆದು ಹೊರಟರು.

೪೩. ಆ ಕೃತ್ರಿಮ ಸ್ತ್ರೀಯು ತನ್ನ ಹಿಂದಿನ ಪುರುಷತನವನ್ನು ಮರೆತು ಆ ಮತ್ತೊಬ್ಬ ಬ್ರಾಹ್ಮಣಕುಮಾರನಲ್ಲಿಯೇ ಅನುರಾಗಗೊಂಡು ಮದದಿಂದ ಮದನವಶಳಾದಳು.

೪೪. "ವಿಶಾಲನಯನನೂ, ಸಮಸ್ತಾವಯವಗಳಲ್ಲಿಯೂ ಸುಂದರನೂ ಆದ ಓ ನನ್ನ ಪ್ರಿಯನೆ! ನಿಲ್ಲು, ನಿಲ್ಲು. ಎಲ್ಲಿಗೆ ಹೋಗುವೆ? ನಿನ್ನ ಪ್ರೇಯಸಿಯಾದ ನನ್ನನ್ನು ನೋಡುವುದೇ ಇಲ್ಲವೊ?

೪೫. ಇಗೊ! ಮುಂಭಾಗದಲ್ಲಿ ಹೂಬಿಟ್ಟಿರುವ ದೊಡ್ಡದೊಡ್ಡ ಮರಗಳುಳ್ಳ ಮನೋಹರವಾದ ಅರಣ್ಯವಿದೆ. ಇದರಲ್ಲಿ ನಾನು ನಿನ್ನೊಡನೆ ಸುಖವಾಗಿ ವಿಹರಿಸಲು ಬಯಸುವೆನು."

೪೬. ಹೀಗೆ ಅವಳು ಹೇಳಿದುದು ಹಾಸ್ಯದ ಮಾತೆಂದು ಭಾವಿಸಿ ಆ ಬ್ರಾಹ್ಮಣಕುಮಾರನು ಮೊದಲಿನಂತೆ ಮುಂದೆ ಸಾಗಿದನು.

೪೭. ಅವಳು ಮತ್ತೆ ಆ ಕುಮಾರನನ್ನು ಕುರಿತು, "ತಡೆಯಲಾರದ ಮನ್ಮಥಾವೇಶವುಳ್ಳ ನನ್ನನ್ನು ಉಪಭೋಗಿಸಲು ಬಂದು ಎಲ್ಲಿಗೆ ಹೋಗುವೆ? ನಿಲ್ಲು. ನಿಲ್ಲು.

CC-0. Jangamwadi Math Collection. Digitized by eGangotri

ಪರಿಷ್ವಜಸ್ವ ಮಾಂ ಕಾಂತಾಂ ಪಾಯಯಸ್ವ ತವಾಽಧರಂ ।
ನಾಽಹಂ ಗಂತುಂ ಸಮರ್ಥಾಽಸ್ಮಿ ಸ್ಮರಬಾಣಪ್ರಪೀಡಿತಾ ॥ ೪೮ ॥
ಇತ್ಥಮಶ್ರುತಪೂರ್ವಾಂ ತಾಂ ನಿಶಮ್ಯ ಪರಿಶಂಕಿತಃ ।
ಆಯಾಂತೀಂ ಪೃಷ್ಠತೋ ವೀಕ್ಷ್ಯ ಸಹಸಾ ವಿಸ್ಮಯಂ ಗತಃ ॥ ೪೯ ॥
ಕೈಷಾ ಪದ್ಮಪಲಾಶಾಕ್ಷೀ ಪೀನೋನ್ನತಪಯೋಧರಾ ।
ಕೃಶೋದರೀ ಬೃಹಚ್ಛ್ರೋಣೀ ನವಪಲ್ಲವಕೋಮಲಾ ॥ ೫೦ ॥
ಸ ಏವ ಮೇ ಸಖಾ ಕಿಂ ನು ಜಾತ ಏವ ವರಾಂಗನಾ ।
ಪೃಚ್ಛಾಮ್ಯೇನಮತಃ ಸರ್ವಮಿತಿ ಸಂಚಿಂತ್ಯ ಸೋಽಬ್ರವೀತ್ ॥ ೫೧ ॥
ಕಿಮಪೂರ್ವ ಇವಾಭಾಸಿ ಸಖೇ ರೂಪಗುಣಾದಿಭಿಃ ।
ಅಪೂರ್ವಂ ಭಾಷಸೇ ವಾಕ್ಯಂ ಕಾಮಿನೀವ ಸಮಾಕುಲಾ ॥ ೫೨ ॥
ಯಸ್ತ್ವಂ ವೇದಪುರಾಣಜ್ಞೋ ಬ್ರಹ್ಮಚಾರೀ ಜಿತೇಂದ್ರಿಯಃ ।
ಸಾರಸ್ವತಾತ್ಮಜಃ ಶಾಂತಃ ಕಥಮೇವಂ ಪ್ರಭಾಷಸೇ ॥ ೫೩ ॥
ಇತ್ಯುಕ್ತಾ ಸಾ ಪುನಃ ಪ್ರಾಹ ನಾಽಹಮಸ್ಮಿ ಪುಮಾನ್ಪ್ರಭೋ ।
ನಾಮ್ನಾ ಸಾಮವತೀ ಬಾಲಾ ತವಾಽಸ್ಮಿ ರತಿದಾಯಿನೀ ॥ ೫೪ ॥

---

೪೮. ಪ್ರಿಯಳಾದ ನನ್ನನ್ನು ಆಲಿಂಗಿಸು. ನಿನ್ನ ಅಧರವನ್ನು ಚುಂಬಿಸಲಿಚ್ಛಿಸುವೆನು. ಕಾಮಬಾಣದಿಂದ ಪೀಡಿತಳಾದ ನನಗೆ ಹೋಗಲು ಶಕ್ತಿಯಿಲ್ಲ'' ಎಂದು ಹೇಳಿದಳು.

೪೯. ಹೀಗೆ ಹಿಂದೆ ಕೇಳದ ಆ ಮಾತನ್ನು ಕೇಳಿ ಸಂದೇಹಗೊಂಡ ಆ ವಿಪ್ರಕುಮಾರನು ಹಿಂಬಾಲಿಸುತ್ತಿರುವ ಅವಳನ್ನು ನೋಡಿ ಆಶ್ಚರ್ಯಗೊಂಡನು.

೫೦. ''ಕಮಲದಳದಂತೆ ಕಣ್ಣುಗಳುಳ್ಳವಳೂ, ಪುಷ್ಟವಾದ ಉನ್ನತಕುಚಗಳುಳ್ಳವಳೂ ಕೃಶೋದರಿಯೂ, ವಿಶಾಲವಾದ ನಿತಂಬಗಳುಳ್ಳವಳೂ, ಹೊಸ ಚಿಗುರಿನಂತೆ ಕೋಮಲಳೂ ಆದ ಇವಳು ಯಾರು?

೫೧. ಆ ನನ್ನ ಗೆಳೆಯನೆ ಉತ್ತಮಾಂಗನೆಯಾದನೊ? ಇವನನ್ನೇ ಎಲ್ಲವನ್ನೂ ಕೇಳುವೆನು'' ಎಂದಾಲೋಚಿಸಿ ಹೀಗೆಂದನು.

೫೨. ''ಮಿತ್ರ! ರೂಪ, ಗುಣಾದಿಗಳಿಂದ ಹೊಸಬನಾದಂತೆ ಕಾಣುತ್ತೀಯೆ; ವ್ಯಾಕುಲಗೊಂಡ ಹೆಂಗಸಿನಂತೆ ಏತಕ್ಕೆ ಹೊಸ ಮಾತನ್ನಾಡುತ್ತೀಯೆ?

೫೩. ವೇದಪುರಾಣಗಳನ್ನರಿತವನೂ, ಬ್ರಹ್ಮಚಾರಿಯೂ, ಜಿತೇಂದ್ರಿಯನೂ, ಶಾಂತನೂ, ಸಾರಸ್ವತನ ಮಗನೂ ಆದ ನೀನು ಹೀಗೇಕೆ ಮಾತಾಡುತ್ತೀಯೆ?''

೫೪–೫೫. ಆ ಕುಮಾರನು ಹೀಗೆ ಹೇಳಲು ಅವಳು ''ಪ್ರಭೊ! ನಾನು ಗಂಡಸಲ್ಲ. ನಿನಗೆ ರತಿಸುಖವನ್ನೀಯುವ ಸಾಮವತೀ ಎಂಬ ಕನ್ಯೆಯಾಗಿದ್ದೇನೆ.

CC-0. Jangamwadi Math Collection. Digitized by eGangotri

ಯದಿ ತೇ ಸಂಶಯಃ ಕಾಂತ ಮಮಾಂಗಾನಿ ವಿಲೋಕಯ ।
ಇತ್ಯುಕ್ತಃ ಸಹಸಾ ಮಾರ್ಗೇ ರಹಸ್ಯೇನಾಂ ವ್ಯಲೋಕಯತ್ ॥ ೫೫ ॥
ತಾಮಕೃತ್ರಿಮಧಮ್ಮಿಲ್ಲಾಂ ಜಘನಸ್ತನಶೋಭಿನೀಂ ।
ಸುರೂಪಾಂ ವೀಕ್ಷ್ಯ ಕಾಮೇನ ಕಿಂಚಿದ್ವ್ಯಾಕುಲತಾಮಗಾತ್ ॥ ೫೬ ॥
ಪುನಃ ಸಂಸ್ತಭ್ಯ ಯತ್ನೇನ ಚೇತಸೋ ವಿಕೃತಿಂ ಬುಧಃ ।
ಮುಹೂರ್ತಂ ವಿಸ್ಮಯಾವಿಷ್ಟೋ ನ ಕಿಂಚಿತ್ಪ್ರತ್ಯಭಾಷತ ॥ ೫೭ ॥

ಸಾಮವತ್ಯುವಾಚ :—

ಗತಸ್ತೇ ಸಂಶಯಃ ಕಚ್ಚಿತ್ತರ್ಹ್ಯಾಗಚ್ಛ ಭಜಸ್ವ ಮಾಂ ।
ಪಶ್ಯೇದಂ ವಿಪಿನಂ ಕಾಂತ ಪರಸ್ತ್ರೀಸುರತೋಚಿತಂ ॥ ೫೮ ॥

ಸುಮೇಧಾ ಉವಾಚ :—

ಮೈವಂ ಕಥಯ ಮರ್ಯಾದಾಂ ಮಾ ಹಿಂಸೀರ್ಮದಮತ್ತವತ್ ।
ಆವಾಂ ವಿಜ್ಞಾತಶಾಸ್ತ್ರಾರ್ಥೌ ತ್ವಮೇವಂ ಭಾಷಸೇ ಕಥಂ ॥ ೫೯ ॥
ಅಧೀತಸ್ಯ ಚ ಶಾಸ್ತ್ರಸ್ಯ ವಿವೇಕಸ್ಯ ಕುಲಸ್ಯ ಚ ।
ಕಿಮೇಷ ಸದೃಶೋ ಧರ್ಮೋ ಜಾರಧರ್ಮನಿಷೇವಣಂ ॥ ೬೦ ॥
ನ ತ್ವಂ ಸ್ತ್ರೀ ಪುರುಷೋ ವಿದ್ವಾನ್ ಜಾನೀಹ್ಯಾತ್ಮಾನಮಾತ್ಮನಾ ।
ಅಯಂ ಸ್ವಯಂ ಕೃತೋಽನರ್ಥ ಆವಾಭ್ಯಾಂ ಯದ್ವಿಚೇಷ್ಟಿತಂ ॥ ೬೧ ॥

---

ನಿನಗೆ ಸಂದೇಹವಿದ್ದರೆ ನನ್ನ ಅವಯವಗಳನ್ನು ನೋಡು'' ಎಂದು ಹೇಳಲು ಅವನು ಕೂಡಲೆ ದಾರಿಯಲ್ಲಿ ಗುಟ್ಟಾಗಿ ಅವಳನ್ನು ಪರೀಕ್ಷಿಸಿದನು.

೫೬–೫೭. ಸ್ವಾಭಾವಿಕವಾದ ತಲೆಕೂದಲುಳ್ಳವಳೂ, ನಿತಂಬಸ್ತನಗಳಿಂದ ಶೋಭಿಸುವವಳೂ, ಸುಂದರಿಯೂ ಆದ ಅವಳನ್ನು ವೀಕ್ಷಿಸಿ ಅವನು ಸ್ವಲ್ಪ ಮನ್ಮಥವಶನಾದನು. ಜ್ಞಾನಿಯಾದ ಅವನು ಪ್ರಯತ್ನದಿಂದ ಮನಸ್ಸನ್ನು ಬಿಗಿಹಿಡಿದು ಸ್ವಲ್ಪಹೊತ್ತು ಆಶ್ಚರ್ಯಗೊಂಡವನಾಗಿ ಏನನ್ನೂ ಮಾತಾಡಲಿಲ್ಲ.

೫೮. ಸಾಮವತಿಯು ಹೇಳುತ್ತಾಳೆ:—''ನಿನ್ನ ಸಂಶಯವು ತೊಲಗಿತಷ್ಟೆ? ಹಾಗಾದರೆ ಪರಸ್ತ್ರೀರತಿಕ್ರೀಡೆಗೆ ಉಚಿತವಾದ ಈ ಕಾಡನ್ನು ನೋಡು. ನನ್ನನ್ನು ಉಪಯೋಗಿಸು.''

೫೯. ಸುಮೇಧನು ಹೇಳುತ್ತಾನೆ:—''ಹೀಗೆನ್ನಬೇಡ. ಮದದಿಂದ ಮತ್ತಳಾದವಳಂತೆ ಮರ್ಯಾದೆಯನ್ನು ಮೀರಬೇಡ. ನಾವಿಬ್ಬರೂ ಶಸ್ತ್ರಾರ್ಥಗಳನ್ನು ತಿಳಿದವರು. ನೀನು ಹೀಗೇತಕ್ಕೆ ಮಾತಾಡುವೆ?

೬೦. ಓದಿದ ಶಾಸ್ತ್ರಕ್ಕೂ, ವಿವೇಕಕ್ಕೂ, ವಂಶಕ್ಕೂ ಈ ಜಾರನ ಧರ್ಮಾವಲಂಬನೆಯು ಸರಿಯಾದುದೊ?

೬೧–೬೩. ನೀನು ಹೆಂಗಸಲ್ಲ, ವಿದ್ವಾಂಸನಾದ ಗಂಡಸು. ನಿನ್ನ ನಿಜ

CC-0. Jangamwadi Math Collection. Digitized by eGangotri

ವಂಚಯಿತ್ವಾತ್ಮಪಿತರೌ ಧೂರ್ತರಾಜಾಽನುಶಾಸನಾತ್ ।
ಕೃತ್ವಾ ಚಾಽನುಚಿತಂ ಕರ್ಮ ತಸ್ಯೈತದ್ಭುಜ್ಯತೇ ಫಲಂ ॥ ೬೨ ॥
ಸರ್ವಂ ತ್ವನುಚಿತಂ ಕರ್ಮ ನೃಣಾಂ ಶ್ರೇಯೋವಿನಾಶನಂ ।
ಯಸ್ತ್ವಂ ವಿಪ್ರಾತ್ಮಜೋ ವಿದ್ವಾನ್ಗತಃ ಸ್ತ್ರೀತ್ವಂ ವಿಗರ್ಹಿತಂ ॥ ೬೩ ॥
ಮಾರ್ಗಂ ತ್ಯಕ್ತ್ವಾ ಗತೋಽರಣ್ಯಂ ನರೋ ವಿದ್ಯೇತ ಕಂಟಕೈಃ ।
ಬಲಾದ್ಧಿಂಸ್ಯೇತ ವಾ ಹಿಂಸ್ರೈರ್ಯದಾ ತ್ಯಕ್ತಸಮಾಗಮಃ ॥ ೬೪ ॥
ಏವಂ ವಿವೇಕಮಾಶ್ರಿತ್ಯ ತೂಷ್ಣೀಮೇಹಿ ಸ್ವಯಂ ಗೃಹಂ ।
ದೇವದ್ವಿಜಪ್ರಸಾದೇನ ಸ್ತ್ರೀತ್ವಂ ತವ ವಿಲೀಯತೇ ॥ ೬೫ ॥
ಅಥವಾ ದೈವಯೋಗೇನ ಸ್ತ್ರೀತ್ವಮೇವ ಭವೇತ್ತವ ।
ಪಿತ್ರಾ ದತ್ತಾ ಮಯಾ ಸಾಕಂ ರಂಸ್ಯಸೇ ವರವರ್ಣಿನಿ ॥ ೬೬ ॥
ಅಹೋ ಚಿತ್ರಮಹೋ ದುಃಖಮಹೋ ಪಾಪಬಲಂ ಮಹತ್ ।
ಅಹೋ ರಾಜ್ಞ್ಯಾಃ ಪ್ರಭಾವೋಽಯಂ ಶಿವಾರಾಧನಸಂಭೃತಃ ॥ ೬೭ ॥
ಇತ್ಯುಕ್ತ್ವಾಽಪ್ಯಸಕೃತ್ತೇನ ಸಾ ವಧೂರತಿವಿಹ್ವಲಾ ।
ಬಲೇನ ತಂ ಸಮಾಲಿಂಗ್ಯ ಚುಚುಂಬಾಽಧರಪಲ್ಲವಂ ॥ ೬೮ ॥

---

ಸ್ವರೂಪವನ್ನು ತಿಳಿದುಕೊ. ಇದು ನಾವೇ ಮಾಡಿಕೊಂಡ ಅನರ್ಥವು. ನಾವು ಎಂತಹ ಕೆಲಸವನ್ನು ಮಾಡಿದ್ದೇವೆ! ನಾವು ನಮ್ಮ ತಂದೆತಾಯಿಗಳನ್ನು ವಂಚಿಸಿ ವಂಚಕನಾದ ರಾಜನ ಅಪ್ಪಣೆಯಿಂದ ಅಯೋಗ್ಯವಾದ ಕೆಲಸವನ್ನು ಆಚರಿಸಿ ಅದರ ಫಲವನ್ನನುಭವಿಸುತ್ತಿದ್ದೇವೆ.

೬೩. ಮನುಷ್ಯರ ಅನುಚಿತವಾದ ಕರ್ಮಾಚರಣೆಯು ಶ್ರೇಯಸ್ಸನ್ನು ನಾಶಗೊಳಿಸುವುದು. ಅದರಿಂದಲೇ ಬ್ರಾಹ್ಮಣತನಯನಾದ ನೀನು ವಿದ್ವಾಂಸನಾದರೂ ಈ ನಿಂದ್ಯವಾದ ಸ್ತ್ರೀಸ್ವರೂಪವನ್ನು ಹೊಂದಿದೆ.

೬೪. ನರನು ದಾರಿಯನ್ನು ಬಿಟ್ಟು ಕಾಡಿನಲ್ಲಿ ನಡೆದರೆ ಮುಳ್ಳುಗಳು ಚುಚ್ಚಿಕೊಳ್ಳುವುವು. ಅಥವಾ ಘಾತುಕ ಮೃಗಗಳು ಹಿಂಸಿಸುವುವು.

೬೫. ನೀನು ಹೀಗೆ ವಿವೇಕವನ್ನಾಶ್ರಯಿಸಿ ಸುಮ್ಮನೆ ಮನೆಯನ್ನು ಸೇರು. ದೇವ ಬ್ರಾಹ್ಮಣರ ಅನುಗ್ರಹದಿಂದ ನಿನ್ನ ಸ್ತ್ರೀತ್ವವು ತೊಲಗುವುದು.

೬೬. ಅಥವಾ ದೈವೇಚ್ಛೆಯಿಂದ ನಿನಗೆ ಸ್ತ್ರೀತ್ವವೇ ಉಳಿದರೆ ಆಗ ನಿನ್ನ ತಂದೆಯಿಂದ ಕೊಡಲ್ಪಟ್ಟವಳಾಗಿ ನನ್ನೊಡನೆ ರಮಿಸುವೆ.

೬೭. ಪಾಪಬಲವು ಆಶ್ಚರ್ಯಕರವೂ ದುಃಖದಾಯಕವೂ ಆಗಿರುವುದು. ಶಿವಪೂಜೆಯಿಂದ ಸಂಪಾದಿಸಿದ ಆ ರಾಣಿಯ ಈ ಸಾಮರ್ಥ್ಯವು ಆಶ್ಚರ್ಯಕರವಾದುದು."

೬೮. ಅವನು ಅನೇಕಸಾರಿ ಹೀಗೆ ಹೇಳಿದರೂ ಅತಿವ್ಯಥೆಗೊಂಡ ಅವಳು ಬಲಾತ್ಕಾರವಾಗಿ ಅವನನ್ನು ಆಲಿಂಗಿಸಿ ಮುದ್ದಿಟ್ಟಳು.

CC-0. Jangamwadi Math Collection. Digitized by eGangotri

ಧರ್ಷಿತೋಽಪಿ ತಯಾ ಧೀರಃ ಸುಮೇಧಾ ನೂತನಸ್ತ್ರಿಯಂ ।
ಯತ್ನಾದಾನೀಯ ಸದನಂ ಕೃತ್ಸ್ನಂ ತತ್ರ ನ್ಯವೇದಯತ್ ॥ ೭೯ ॥
ತದಾಕರ್ಣ್ಯಾಥ ತೌ ವಿಪ್ರೌ ಕುಪಿತೌ ಶೋಕವಿಹ್ವಲೌ ।
ತಾಭ್ಯಾಂ ಸಹ ಕುಮಾರಾಭ್ಯಾಂ ವೈದರ್ಭಾಂತಿಕಮಾಯತುಃ ॥ ೭೦ ॥
ತತಃ ಸಾರಸ್ವತಃ ಪ್ರಾಹ ರಾಜಾನಂ ಧೂರ್ತಚೇಷ್ಟಿತಂ ।
ರಾಜನ್ನಮುಮಾತ್ಮಜಂ ಪಶ್ಯ ತವಶಾಸನಯಂತ್ರಿತಂ ॥ ೭೧ ॥
ಏತೌ ತವಾಜ್ಞಾವಶಗೌ ಚಕ್ರತುಃ ಕರ್ಮ ಗರ್ಹಿತಂ ।
ಮತ್ಪುತ್ರಸ್ತತ್ಫಲಂ ಭುಂಕ್ತೇ ಸ್ತ್ರೀತ್ವಂ ಪ್ರಾಪ್ಯ ಜುಗುಪ್ಸಿತಂ ॥ ೭೨ ॥
ಅದ್ಯ ಮೇ ಸಂತತಿರ್ನಷ್ಟಾ ನಿರಾಶಾಃ ಪಿತರೋ ಮಮ ।
ನಾಽಪುತ್ರಸ್ಯ ಹಿ ಲೋಕೋಽಸ್ತಿ ಲುಪ್ತಪಿಂಡಾದಿಸಂಸ್ಕೃತೇಃ ॥ ೭೩ ॥
ಶಿಖೋಪವೀತಮಜಿನಂ ಮೌಂಜೀಂ ದಂಡಂ ಕಮಂಡಲುಂ ।
ಬ್ರಹ್ಮಚರ್ಯೋಚಿತಂ ಚಿಹ್ನಂ ವಿಹಾಯೇಮಾಂ ದಶಾಂ ಗತಃ ॥ ೭೪ ॥
ಬ್ರಹ್ಮಸೂತ್ರಂ ಚ ಸಾವಿತ್ರೀಂ ಸ್ನಾನಂ ಸಂಧ್ಯಾಂ ಜಪಾರ್ಚನಂ ।
ವಿಸೃಜ್ಯ ಸ್ತ್ರೀತ್ವಮಾಪ್ತೋಽಸ್ಯ ಕಾ ಗತಿರ್ವದ ಪಾರ್ಥಿವ ॥ ೭೫ ॥

---

೬೯. ಅವಳು ಹೀಗೆ ಮರ್ಯಾದೆಯನ್ನು ಮೀರಿದರೂ ಧೀರನಾದ ಆ ಸುಮೇಧನು ಆ ನೂತನಸ್ತ್ರೀಯನ್ನು ಬಲಾತ್ಕಾರವಾಗಿ ಮನೆಗೆ ಕರೆತಂದು ಅಲ್ಲಿ ಅವನು ತಾಯ್ತಂದೆಯರಿಗೆ ಎಲ್ಲವನ್ನೂ ತಿಳಿಸಿದನು.

೭೦. ಬಳಿಕ ಅದನ್ನು ಕೇಳಿ ಕೋಪಗೊಂಡ ಆ ಇಬ್ಬರು ಬ್ರಾಹ್ಮಣರೂ ದುಃಖಗೊಂಡು ಆ ಕುಮಾರರೊಡನೆ ವಿದರ್ಭರಾಜನ ಸಮೀಪಕ್ಕೆ ಹೋದರು.

೭೧. ಅನಂತರ ಸಾರಸ್ವತನು ಮೂರ್ಖನಾದ ಆ ರಾಜನನ್ನು ಕುರಿತು ಇಂತೆಂದನು. "ಮಹಾರಾಜ! ನಿನ್ನ ಆಜ್ಞಾಬದ್ಧನಾದ ನನ್ನ ಸುತನನ್ನುನೋಡು.

೭೨. ಇವರಿಬ್ಬರೂ ನಿನ್ನ ಆದೇಶದಂತೆ ನಿಂದ್ಯವಾದ ಕಾರ್ಯವನ್ನೆಸಗಿದರು. ನನ್ನ ಮಗನು ನಿಂದಿತವಾದ ಸ್ತ್ರೀತ್ವವನ್ನು ಹೊಂದಿ ಅದರ ಫಲವನ್ನು ಅನುಭವಿಸುತ್ತಿದ್ದಾನೆ.

೭೩. ಈಗ ನನ್ನ ಸಂತತಿಯು ಹಾಳಾಯಿತು. ನನ್ನ ಪಿತೃಗಳು ಹತಾಶರಾದರು. ಪಿಂಡಾದಿ ಸಂಸ್ಕಾರವಿಲ್ಲದ ಅಪುತ್ರನಿಗೆ ಉತ್ತಮಲೋಕವು ದೊರಕುವುದಿಲ್ಲ.

೭೪. ಇವನು ಬ್ರಹ್ಮಚರ್ಯೆಗೆ ಉಚಿತವಾದ ಶಿಖೆ, ಯಜ್ಞೋಪವೀತ, ಮೌಂಜೀ, ದಂಡ, ಕಮಂಡಲು ಮೊದಲಾದ ಚಿಹ್ನೆಗಳನ್ನು ತ್ಯಜಿಸಿ ಈ ಅವಸ್ಥೆಯನ್ನು ಹೊಂದಿದ್ದಾನೆ.

೭೫. ಮಹಾರಾಜ! ಯಜ್ಞೋಪವೀತ, ಗಾಯತ್ರಿ, ಸ್ನಾನ, ಸಂಧ್ಯಾ

CC-0. Jangamwadi Math Collection. Digitized by eGangotri

ತ್ವಯಾ ಮೇ ಸಂತತಿರ್ನಷ್ಟಾ ನಷ್ಟೋ ವೇದಪಥಶ್ಚ ಮೇ ।
ಏಕಾತ್ಮಜಸ್ಯ ಮೇ ರಾಜನ್ಕಾ ಗತಿರ್ವದ ಶಾಶ್ವತೀ ॥ ೭೬ ॥
ಇತಿ ಸಾರಸ್ವತೇನೋಕ್ತಂ ವಾಕ್ಯಮಾಕರ್ಣ್ಯ ಭೂಪತಿಃ ।
ಸೀಮಂತಿನ್ಯಾಃ ಪ್ರಭಾವೇಣ ವಿಸ್ಮಯಂ ಪರಮಂ ಗತಃ ॥ ೭೭ ॥
ಅಥ ಸರ್ವಾನ್ಸಮಾಹೂಯ ಮಹರ್ಷೀನಮಿತದ್ಯುತೀನ್ ।
ಪ್ರಸಾದ್ಯ ಪ್ರಾರ್ಥಯಾಮಾಸ ತಸ್ಯ ಪುಂಸ್ತ್ವಂ ಮಹೀಪತಿಃ ॥ ೭೮ ॥
ತೇಽಬ್ರುವನ್ನಥ ಪಾರ್ವತ್ಯಾಃ ಶಿವಸ್ಯ ಚ ಸಮೀಹಿತಂ ।
ತದ್ಭಕ್ತಾನಾಂ ಚ ಮಾಹಾತ್ಮ್ಯಂ ಕೋಽನ್ಯಥಾ ಕರ್ತುಮೀಶ್ವರಃ ॥ ೭೯ ॥
ಅಥ ರಾಜಾ ಭರದ್ವಾಜಮಾದಾಯ ಮುನಿಪುಂಗವಂ ।
ತಾಭ್ಯಾಂ ಸಹ ದ್ವಿಜಾಗ್ರ್ಯಾಭ್ಯಾಂ ತತ್ಸುತಾಭ್ಯಾಂ ಸಮನ್ವಿತಃ ॥ ೮೦ ॥
ಅಂಬಿಕಾಭವನಂ ಪ್ರಾಪ್ಯ ಭರದ್ವಾಜೋಪದೇಶತಃ ।
ತಾಂ ದೇವೀಂ ನಿಯಮೈಸ್ತೀವ್ರೈರುಪಾಸ್ತೇ ಸ್ಮ ಮಹಾನಿಶಿ ॥ ೮೧ ॥
ಏವಂ ತ್ರಿರಾತ್ರಂ ಸುವಿಸೃಷ್ಟಭೋಜನಃ
ಸ ಪಾರ್ವತೀಧ್ಯಾನರತೋ ಮಹೀಪತಿಃ ।
ಸಮ್ಯಕ್ಪ್ರಣಾಮೈರ್ವಿವಿಧೈಶ್ಚ ಸಂಸ್ತವೈ
ಗೌರೀಂ ಪ್ರಪನ್ನಾರ್ತಿಹರಾಮತೋಷಯತ್ ॥ ೮೨ ॥

---

ವಂದನ, ಜಪ, ಪೂಜೆ ಇವುಗಳನ್ನು ಬಿಟ್ಟು ಸ್ತ್ರೀತ್ವವನ್ನು ಹೊಂದಿದ ಇವನಿಗೆ ಎಂತಹ ಗತಿಯಾಗುವುದು? ಹೇಳು.

೭೬. ನಿನ್ನಿಂದ ನನ್ನ ಸಂತಾನವು ಹಾಳಾಯಿತು. ವೇದಮಾರ್ಗವು ನಷ್ಟವಾಯಿತು. ಏಕಪುತ್ರನಾದ ನನಗೆ ಶಾಶ್ವತಗತಿಯಾವುದು?''

೭೭. ರಾಜನು ಸಾರಸ್ವತನು ಆಡಿದ ಈ ಮಾತನ್ನು ಕೇಳಿ ಸೀಮಂತಿನಿಯ ಸಾಮರ್ಥ್ಯವನ್ನು ತಿಳಿದು ಅತ್ಯಾಶ್ಚರ್ಯಗೊಂಡನು.

೭೮. ಬಳಿಕ ವಿದರ್ಭರಾಜನು ತೇಜಸ್ವಿಗಳಾದ ಸಕಲ ಮಹರ್ಷಿಗಳನ್ನೂ ಕರೆಯಿಸಿ ಅವರನ್ನು ಸಂತೋಷಗೊಳಿಸಿ ಆ ಕುಮಾರನಿಗೆ ಪುಂಸ್ತ್ವವನ್ನು ಕೊಡಬೇಕೆಂದು ಬೇಡಿಕೊಂಡನು.

೭೯. ಅವರು "ಪಾರ್ವತೀ ಪರಮೇಶ್ವರರ ಇಷ್ಟವನ್ನೂ, ಅವರ ಭಕ್ತರ ಮಾಹಾತ್ಮ್ಯವನ್ನೂ ವ್ಯತ್ಯಾಸಗೊಳಿಸಲು ಯಾರು ಶಕ್ತರು?'' ಎಂದರು.

೮೦–೮೧. ಅನಂತರ ರಾಜನು ಭಾರದ್ವಾಜಮುನಿವರ್ಯರನ್ನು ಕರೆದು ಆ ಬ್ರಾಹ್ಮಣರು ಅವರ ಮಕ್ಕಳೊಡನೆ ಪಾರ್ವತಿಯ ದೇವಾಲಯವನ್ನು ಹೊಂದಿ ಭಾರದ್ವಾಜರ ಉಪದೇಶದಿಂದ ಅಂಬಿಕೆಯನ್ನು ರಾತ್ರಿಯಲ್ಲಿ ಕಠಿನವ್ರತಗಳಿಂದ ಉಪಾಸಿಸಿದನು.

೮೨. ರಾಜನು ಹೀಗೆ ಮೂರು ರಾತ್ರಿ ಭೋಜನವಿಲ್ಲದೆ ಪಾರ್ವತಿಯ

CC-0. Jangamwadi Math Collection. Digitized by eGangotri

ತತಃ ಪ್ರಸನ್ನಾ ಸಾ ದೇವೀ ಭಕ್ತಸ್ಯ ಪೃಥಿವೀಪತೇಃ ।
ಸ್ವರೂಪಂ ದರ್ಶಯಾಮಾಸ ಚಂದ್ರಕೋಟಿಸಮಪ್ರಭಂ ॥ ೮೩ ॥
ಅಥಾಹ ಗೌರೀ ರಾಜಾನಂ ಕಿಂ ತೇ ಬ್ರೂಹಿ ಸಮೀಹಿತಂ ।
ಸೋಽಪ್ಯಾಹ ಪುಂಸ್ತ್ವಮೇತಸ್ಯ ಕೃಪಯಾ ದೀಯತಾಮಿತಿ ॥ ೮೪ ॥
ಭೂಯೋಽಪ್ಯಾಹ ಮಹಾದೇವೀ ಮದ್ಭಕ್ತೈಃ ಕರ್ಮ ಯತ್ಕೃತಂ ।
ಶಕ್ಯತೇ ನಾಽನ್ಯಥಾ ಕರ್ತುಂ ವರ್ಷಾಽಯುತಶತೈರಪಿ ॥ ೮೫ ॥

ರಾಜೋವಾಚ :—

ಏಕಾತ್ಮಜೋ ಹಿ ವಿಪ್ರೋಽಯಂ ಕರ್ಮಣಾ ನಷ್ಟಸಂತತಿಃ ।
ಕಥಂ ಸುಖಂ ಪ್ರಪದ್ಯೇತ ವಿನಾ ಪುತ್ರೇಣ ತಾದೃಶಃ ॥ ೮೬ ॥

ದೇವ್ಯುವಾಚ :—

ತಸ್ಯಾಽನ್ಯೋ ಮತ್ಪ್ರಸಾದೇನ ಭವಿಷ್ಯತಿ ಸುತೋತ್ತಮಃ ।
ವಿದ್ಯಾವಿನಯಸಂಪನ್ನೋ ದೀರ್ಘಾಯುರಮಲಾಶಯಃ ॥ ೮೭ ॥
ಏಷಾ ಸಾಮವತೀ ನಾಮ ಸುತಾ ತಸ್ಯ ದ್ವಿಜನ್ಮನಃ ।
ಭೂತ್ವಾ ಸುಮೇಧಸಃ ಪತ್ನೀ ಕಾಮಭೋಗೇಷ ಯುಜ್ಯತಾಂ ॥ ೮೮ ॥

---

ಧ್ಯಾನದಲ್ಲಿ ನಿರತನಾಗಿ ಶರಣಾಗತರ ದುಃಖವನ್ನು ನಿವಾರಿಸುವ ಆ ದೇವಿಯನ್ನು ನಮಸ್ಕಾರಗಳಿಂದಲೂ, ವಿವಿಧ ಸ್ತೋತ್ರಗಳಿಂದಲೂ ಆನಂದಗೊಳಿಸಿದನು.

೮೩. ಬಳಿಕ ಭಕ್ತನಾದ ಆ ರಾಜನಿಗೆ ಪ್ರಸನ್ನಳಾದ ಆ ದೇವಿಯು ಕೋಟಿಚಂದ್ರರಿಗೆ ಸಮಾನವಾದ ಕಾಂತಿಯುಳ್ಳ ತನ್ನ ರೂಪವನ್ನು ತೋರಿದಳು.

೮೪. ಅವಳು ರಾಜನನ್ನು ಕುರಿತು, "ನಿನ್ನ ಅಭೀಷ್ಟವಾವುದು" ಎಂದು ಕೇಳಿದಳು. ಅವನು "ಈ ಕುಮಾರನಿಗೆ ಪುಂಸ್ತ್ವವನ್ನು ಅನುಗ್ರಹಮಾಡು" ಎಂದನು.

೮೫. ಆಗ ದೇವಿಯು ನನ್ನ ಭಕ್ತರೆಸಗಿದ ಕಾರ್ಯವನ್ನು ಮಾರ್ಪಡಿಸುವುದಕ್ಕೆ ಅನೇಕ ಅಯುತವರ್ಷಗಳಾದರೂ ಸಾಧ್ಯವಿಲ್ಲವೆಂದಳು.

೮೬. ರಾಜನು ಹೇಳುತ್ತಾನೆ:—ದೇವಿ! ಈ ದ್ವಿಜನು ಒಬ್ಬನೇ ಮಗನುಳ್ಳವನು. ಕರ್ಮದಿಂದ ಹಾಳಾದ ಸಂತತಿಯುಳ್ಳ ಇವನು ಮಗನಿಲ್ಲದೆ ಹೇಗೆ ಸುಖವನ್ನು ಪಡೆದಾನು?

೮೭. ದೇವಿಯು ಹೇಳುತ್ತಾಳೆ:—ಇವನಿಗೆ ನನ್ನ ಪ್ರಸಾದದಿಂದ ವಿದ್ಯಾ, ವಿನಯ, ದೀರ್ಘಾಯುಸ್ಸು, ಶುದ್ಧವಾದ ಮನಸ್ಸು ಇವುಗಳುಳ್ಳ ಮತ್ತೊಬ್ಬ ಮಗನು ಜನಿಸುವನು.

೮೮. ಸಾಮವತಿಯೆಂಬ ಈ ಬ್ರಾಹ್ಮಣನ ಮಗಳು ಸುಮೇಧನ ಪತ್ನಿಯಾಗಿ ಕಾಮಭೋಗವನ್ನನುಭವಿಸಲಿ.

CC-0. Jangamwadi Math Collection. Digitized by eGangotri

ಇತ್ಯುಕ್ತ್ವಾಽಂತರ್ಹಿತಾ ದೇವೀ ತೇ ಚ ರಾಜಪುರೋಗಮಾಃ ।
ಗತಾಃ ಸ್ವಂ ಸ್ವಂ ಗೃಹಂ ಸರ್ವೇ ಚಕ್ರುಸ್ತಚ್ಛಾಸನೇ ಸ್ಥಿತಿಂ ॥ ೮೯ ॥
ಸೋಽಪಿ ಸಾರಸ್ವತೋ ವಿಪ್ರಃ ಪುತ್ರಂ ಪೂರ್ವಸುತೋತ್ತಮಂ ।
ಲೇಭೇ ದೇವ್ಯಾಃ ಪ್ರಸಾದೇನ ಹ್ಯಚಿರಾದೇವ ಕಾಲತಃ ॥ ೯೦ ॥
ತಾಂ ಚ ಸಾಮವತೀಂ ಕನ್ಯಾಂ ದದೌ ತಸ್ಮೈ ಸುಮೇಧಸೇ ।
ತೌ ದಂಪತೀ ಚಿರಂ ಕಾಲಂ ಬುಭುಜಾತೇ ಪರಂ ಸುಖಂ ॥ ೯೧ ॥

ಸೂತ ಉವಾಚ :—

ಇತ್ಯೇಷ ಶಿವಭಕ್ತಾಯಾಃ ಸೀಮಂತಿನ್ಯಾ ನೃಪಸ್ತ್ರಿಯಾಃ ।
ಪ್ರಭಾವಃ ಕಥಿತಃ ಶಂಭೋರ್ಮಾಹಾತ್ಮ್ಯಮಪಿ ವರ್ಣಿತಂ ॥ ೯೨ ॥
ಭೂಯೋಽಪಿ ಶಿವಭಕ್ತಾನಾಂ ಪ್ರಭಾವಂ ವಿಸ್ಮಯಾವಹಂ ।
ಸಮಾಸಾದ್ವರ್ಣಯಿಷ್ಯಾಮಿ ಶ್ರೋತೄಣಾಂ ಮಂಗಲಾಯನಂ ॥ ೯೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಸೀಮಂತಿನ್ಯಾಃ ಪ್ರಭಾವ ವರ್ಣನಂ" ನಾಮ ನವಮೋಽಧ್ಯಾಯಃ

---

೮೯. ದೇವಿಯು ಹೀಗೆಂದು ಹೇಳಿ ಅಂತರ್ಧಾನಳಾಗಲು ಆ ರಾಜನೇ ಮೊದಲಾದವರೆಲ್ಲರೂ ತಮ್ಮತಮ್ಮ ಮನೆಗಳನ್ನು ಸೇರಿ ದೇವಿಯ ಅಪ್ಪಣೆಯನ್ನು ಪಾಲಿಸಿದರು.

೯೦. ಸಾರಸ್ವತನೂ ಸ್ವಲ್ಪಕಾಲದಲ್ಲಿಯೇ ದೇವಿಯ ಅನುಗ್ರಹದಿಂದ ಹಿಂದಿನ ಮಗನಿಗಿಂತ ಉತ್ತಮನಾದ ಸುತನನ್ನು ಪಡೆದನು.

೯೧. ಸಾಮವತಿಯನ್ನು ಸುಮೇಧನಿಗೆ ಮದುವೆಮಾಡಿಕೊಟ್ಟನು. ಆ ದಂಪತಿಗಳು ಬಹುಕಾಲ ಸುಖವನ್ನನುಭವಿಸಿದರು.

೯೨. ಸೂತನು ಹೇಳುತ್ತಾನೆ:—ಹೀಗೆ ಶಿವಭಕ್ತಳಾದ ಸೀಮಂತಿನಿಯ ಪ್ರಭಾವವನ್ನೂ, ಶಿವನ ಮಾಹಾತ್ಮ್ಯವನ್ನೂ ಹೇಳಿರುವೆನು.

೯೩. ಮರಳಿ ಆಶ್ಚರ್ಯಕರವೂ, ಕೇಳುವವರಿಗೆ ಮಂಗಳದಾಯಕವೂ ಆದ ಶಿವಭಕ್ತರ ಸಾಮರ್ಥ್ಯವನ್ನು ಸಂಕ್ಷೇಪವಾಗಿ ವರ್ಣಿಸುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಸೀಮಂತಿನಿಯ ಪ್ರಭಾವವರ್ಣನ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ದಶಮೋಽಧ್ಯಾಯಃ

### ಭದ್ರಾಯುಜೀವನವರ್ಣನಂ

ಸೂತ ಉವಾಚ :—

ವಿಚಿತ್ರಂ ಶಿವನಿರ್ಮಾಣಂ ವಿಚಿತ್ರಂ ಶಿವಚೇಷ್ಟಿತಂ ।
ವಿಚಿತ್ರಂ ಶಿವಮಾಹಾತ್ಮ್ಯಂ ವಿಚಿತ್ರಂ ಶಿವಭಾಷಿತಂ ॥ ೧ ॥
ವಿಚಿತ್ರಂ ಶಿವಭಕ್ತಾನಾಂ ಚರಿತಂ ಪಾಪನಾಶನಂ ।
ಸ್ವರ್ಗಾಽಪವರ್ಗಯೋಃ ಸತ್ಯಂ ಸಾಧನಂ ತದ್ಬ್ರವೀಮ್ಯಹಂ ॥ ೨ ॥
ಅವಂತಿವಿಷಯೇ ಕಶ್ಚಿದ್ಬ್ರಾಹ್ಮಣೋ ಮಂದರಾಹ್ವಯಃ ।
ಬಭೂವ ವಿಷಯಾರಾಮಃ ಸ್ತ್ರೀಜಿತೋ ಧನಸಂಗ್ರಹೀ ॥ ೩ ॥
ಸಂಧ್ಯಾಸ್ನಾನಪರಿತ್ಯಕ್ತೋ ಗಂಧಮಾಲ್ಯಾಂಬರಪ್ರಿಯಃ ।
ಕುಸ್ತ್ರೀಸಕ್ತಃ ಕುಮಾರ್ಗಸ್ಥೋ ಯಥಾ ಪೂರ್ವಮಜಾಮಿಲಃ ॥ ೪ ॥
ಸ ವೇಶ್ಯಾಂ ಪಿಂಗಲಾಂ ನಾಮ ರಮಮಾಣೋ ದಿವಾನಿಶಂ ।
ತಸ್ಯಾ ಏವ ಗೃಹೇ ನಿತ್ಯಮಾಸೀದವಿಜಿತೇಂದ್ರಿಯಃ ॥ ೫ ॥

---

### ಕನ್ನಡದಅನುವಾದ

#### ಭದ್ರಾಯುಜೀವನವರ್ಣನ

೧—೨. ಸೂತನು ಹೇಳುತ್ತಾನೆ:—ಶಿವನ ಜಗನ್ನಿರ್ಮಾಣವೂ, ಕಾರ್ಯವೂ, ಮಾಹಾತ್ಮ್ಯವೂ, ಮಾತೂ, ಪಾಪವನ್ನು ನಾಶಗೊಳಿಸುವ ಶಿವಭಕ್ತರ ಚರಿತೆಯೂ ಆಶ್ಚರ್ಯಕರವಾದುವುಗಳು. ಈಗ ನಾನು ಸ್ವರ್ಗಮೋಕ್ಷಗಳಿಗೆ ಸಾಧಕವಾದ ಅದನ್ನು ಹೇಳುವೆನು.

೩. ಅವಂತಿದೇಶದಲ್ಲಿ ವಿಷಯಲೋಲುಪನೂ, ಸ್ತ್ರೀಯ ಅಧೀನನೂ, ಧನವನ್ನು ಸಂಗ್ರಹಿಸುವವನೂ ಆದ ಮಂದರನೆಂಬೊಬ್ಬ ಬ್ರಾಹ್ಮಣನಿದ್ದನು.

೪. ಅವನು ಸಂಧ್ಯಾವಂದನೆ, ಸ್ನಾನಗಳನ್ನು ಬಿಟ್ಟು ಗಂಧ, ಮಾಲೆ, ವಸ್ತ್ರಗಳಲ್ಲಿ ಪ್ರೀತಿಯುಳ್ಳವನೂ ದುಷ್ಟ ಸ್ತ್ರೀಯಲ್ಲಿ ಆಸಕ್ತನೂ, ದುರ್ಮಾರ್ಗ ಗಾಮಿಯೂ ಆಗಿ ಅಜಾಮಿಳನಂತೆ ಇದ್ದನು.

೫. ಇವನು ಇಂದ್ರಿಯವಶನಾಗಿ ಹಗಲು ರಾತ್ರಿ ಪಿಂಗಳೆ ಎಂಬ ವೇಶ್ಯೆಯೊಡನೆ ವಿನೋದಪಡುತ್ತ ಅವಳ ಮನೆಯಲ್ಲಿಯೇ ಯಾವಾಗಲೂ ವಾಸಿಸುತ್ತಿದ್ದನು.

CC-0. Jangamwadi Math Collection. Digitized by eGangotri

ಕದಾಚಿತ್ಸದನೇ ತಸ್ಯಾಸ್ತಸ್ಮಿನ್ನಿವಸತಿ ದ್ವಿಜೇ ।
ಋಷಭೋ ನಾಮ ಧರ್ಮಾತ್ಮಾ ಶಿವಯೋಗೀ ಸಮಾಯಯೌ ॥ ೬ ॥
ತಮಾಗತಮಭಿಪ್ರೇಕ್ಷ್ಯ ಮತ್ವಾ ಸ್ವಂ ಪುಣ್ಯಮೂರ್ಜಿತಂ ।
ಸಾ ವೇಶ್ಯಾ ಸ ಚ ವಿಪ್ರಶ್ಚ ಪರ್ಯಪೂಜಯತಾಮುಭೌ ॥ ೭ ॥
ತಮಾರೋಪ್ಯ ಮಹಾಪೀಠೇ ಕಂಬಲಾಂಬರಸಂಭೃತೇ ।
ಪ್ರಕ್ಷಾಲ್ಯ ಚರಣೌ ಭಕ್ತ್ಯಾ ತಜ್ಜಲಂ ದಧತುಃ ಶಿರಃ ॥ ೮ ॥
ಸ್ವಾಗತಾಽರ್ಘ್ಯನಮಸ್ಕಾರೈರ್ಗಂಧಪುಷ್ಪಾಽಕ್ಷತಾದಿಭಿಃ ।
ಉಪಚಾರೈಃ ಸಮಭ್ಯರ್ಚ್ಯ ಭೋಜಯಾಮಾಸತುರ್ಮುದಾ ॥ ೯ ॥
ತಂ ಭುಕ್ತವಂತಮಾಚಾಂತಂ ಪರ್ಯಂಕೇ ಸುಖಸಂಸ್ತರೇ ।
ಉಪವೇಶ್ಯ ಮುದಾಯುಕ್ತೌ ತಾಂಬೂಲಂ ಪ್ರತ್ಯಯಚ್ಛತಾಂ ॥ ೧೦ ॥
ಪಾದಸಂವಾಹನಂ ಭಕ್ತ್ಯಾ ಕುರ್ವಂತೌ ದೈವಚೋದಿತೌ ।
ಕಲ್ಪಯಿತ್ವಾ ತು ಶುಶ್ರೂಷಾಂ ಪ್ರೀಣಯಾಮಾಸತುಶ್ಚಿರಂ ॥ ೧೧ ॥
ಏವಂ ಸಮರ್ಚಿತಸ್ತಾಭ್ಯಾಂ ಶಿವಯೋಗೀ ಮಹಾದ್ಯುತಿಃ ।
ಅತಿವಾಹ್ಯ ನಿಶಾಮೇಕಾಂ ಯಯೌ ಪ್ರಾತಸ್ತದಾದೃತಃ ॥ ೧೨ ॥

---

೬. ಅವಳ ಮನೆಯಲ್ಲಿ ಆ ಮಂದರನು ವಾಸಮಾಡುತ್ತಿರಲು ಒಂದಾನೊಂದು ದಿನ ಋಷಭನೆಂಬ ಧರ್ಮಿಷ್ಠನಾದ ಶಿವಯೋಗಿಯು ಅಲ್ಲಿಗೆ ಬಂದನು.

೭. ಆ ಸೂಳೆಯೂ ಆ ಬ್ರಾಹ್ಮಣನೂ ಬಂದಿರುವ ಯೋಗಿಯನ್ನು ಕಂಡು ತಮ್ಮ ಪುಣ್ಯವು ಉತ್ಕೃಷ್ಟವಾದುದೆಂದರಿತು ಅವನನ್ನು ಪೂಜಿಸಿದರು.

೮. ಅವನನ್ನು ಕಂಬಳಿಯಿಂದ ಮಾಡಿದ ದೊಡ್ಡ ಆಸನದಲ್ಲಿ ಕುಳ್ಳಿರಿಸಿ ಭಕ್ತಿಯಿಂದ ಅವನ ಕಾಲುಗಳನ್ನು ತೊಳೆದು ಆ ನೀರನ್ನು ತಲೆಯಲ್ಲಿ ಧರಿಸಿದರು.

೯. ಸುಖಾಗಮನ, ಅರ್ಘ್ಯ, ನಮಸ್ಕಾರ, ಗಂಧ, ಪುಷ್ಪ, ಅಕ್ಷತಗಳೇ ಮೊದಲಾದ ಉಪಚಾರಗಳಿಂದ ಅವನನ್ನು ಚೆನ್ನಾಗಿ ಆರಾಧಿಸಿ ಸಂತೋಷದಿಂದ ಭೋಜನಮಾಡಿಸಿದರು.

೧೦. ಊಟಮಾಡಿ ಆಚಮನಮಾಡಿದ ಅವನನ್ನು ಸುಖಕರವಾದ ಹಾಸುಗೆಯುಳ್ಳ ಮಂಚದ ಮೇಲೆ ಕುಳ್ಳಿರಿಸಿ ಸಂತೋಷದಿಂದ ತಾಂಬೂಲವನ್ನು ಕೊಟ್ಟರು.

೧೧. ದೈವಪ್ರೇರಣೆಯಿಂದ ಭಕ್ತಿಯಿಂದ ಕಾಲನ್ನು ಒತ್ತಿ ಸೇವೆಯನ್ನೆಸಗಿ ಬಹಳ ಹೊತ್ತು ಸಂತೋಷಗೊಳಿಸಿದರು.

೧೨. ಹೀಗೆ ಅವರಿಬ್ಬರೂ ಮಹಾತೇಜಸ್ವಿಯಾದ ಆ ಶಿವಯೋಗಿಯನ್ನು ಪೂಜಿಸಲು ಅವನು ಒಂದು ರಾತ್ರಿ ಅಲ್ಲಿ ಕಳೆದು ಬೆಳಗ್ಗೆ ಹೊರಟುಹೋದನು.

CC-0. Jangamwadi Math Collection. Digitized by eGangotri

ಏವಂ ಕಾಲೇ ಗತಪ್ರಾಯೇ ಸ ವಿಪ್ರೋ ನಿಧನಂ ಗತಃ ।
ಸಾ ಚ ವೇಶ್ಯಾ ಮೃತಾ ಕಾಲೇ ಯಯೌ ಕರ್ಮಾರ್ಜಿತಾಂ ಗತಿಂ ॥ ೧೩ ॥
ಸ ವಿಪ್ರಃ ಕರ್ಮಣಾ ನೀತೋ ದಶಾರ್ಣಧರಣೀಪತೇಃ ।
ವಜ್ರಬಾಹುಕುಟುಂಬಿನ್ಯಾಃ ಸುಮತ್ಯಾ ಗರ್ಭಮಾಸ್ಥಿತಃ ॥ ೧೪ ॥
ತಾಂ ಜ್ಯೇಷ್ಠಪತ್ನೀಂ ನೃಪತೇರ್ಗರ್ಭಸಂಪದಮಾಶ್ರಿತಾಂ ।
ಅವೇಕ್ಷ್ಯ ತಸ್ಯೈ ಗರಲಂ ಸಪತ್ನ್ಯಶ್ಛದ್ಮನಾ ದದುಃ ॥ ೧೫ ॥
ಸಾ ಭುಕ್ತ್ವಾ ಗರಲಂ ಘೋರಂ ನ ಮೃತಾ ದೈವಯೋಗತಃ ।
ಕ್ಲೇಶಮೇವ ಪರಂ ಪ್ರಾಪ ಮರಣಾದತಿ ದುಸ್ಸಹಂ ॥ ೧೬ ॥
ಅಥ ಕಾಲೇ ಸಮಾಯಾತೇ ಪುತ್ರಮೇಕಮಜೀಜನತ್ ।
ಕ್ಲೇಶೇನ ಮಹತಾ ಸಾಧ್ವೀ ಪೀಡಿತಾ ವರವರ್ಣಿನೀ ॥ ೧೭ ॥
ಸ ನಿರ್ದಶೋ ರಾಜಪುತ್ರಃ ಸ್ಪೃಷ್ಟಪೂರ್ವೋ ಗರೇಣ ಯತ್ ।
ತೇನಾಽವಾಪ ಮಹಾಕ್ಲೇಶಂ ಕ್ರಂದಮಾನೋ ದಿವಾನಿಶಂ ॥ ೧೮ ॥
ತಸ್ಯ ಬಾಲಸ್ಯ ಮಾತಾ ಚ ಸರ್ವಾಂಗವ್ರಣಪೀಡಿತಾ ।
ಬಭೂವತುರತಿಕ್ಲಿಷ್ಟೌ ಗರಯೋಗಪ್ರಭಾವತಃ ॥ ೧೯ ॥
ತೌ ರಾಜ್ಞಾ ಚ ಸಮಾನೀತೌ ವೈದ್ಯೈಶ್ಚ ಕೃತಭೇಷಜೌ ।
ನ ಸ್ವಾಸ್ಥ್ಯಮಾಪತುರ್ಯತ್ನೈರನೇಕೈರ್ಯೋಜಿತೈರಪಿ ॥ ೨೦ ॥

---

೧೩. ಹೀಗೆ ಕೆಲವು ಕಾಲವು ಕಳೆಯಲು ಆ ಬ್ರಾಹ್ಮಣನು ಮೃತನಾದನು. ಆ ವೇಶ್ಯೆಯೂ ಮಡಿದು ತನ್ನ ಕರ್ಮಕ್ಕನುಗುಣವಾದ ಗತಿಯನ್ನು ಪಡೆದಳು.

೧೪. ಆ ಬ್ರಾಹ್ಮಣನು ಕರ್ಮವಶದಿಂದ ದಶಾರ್ಣದ ದೊರೆಯಾದ ವಜ್ರಬಾಹುವಿನ ಪತ್ನಿಯಾದ ಸುಮತಿಯ ಗರ್ಭವನ್ನು ಸೇರಿದನು.

೧೫. ಸವತಿಯರು ದೊರೆಯ ಆ ಹಿರಿಯ ಹೆಂಡತಿಯು ಗರ್ಭಿಣಿಯಾದುದನ್ನು ಕಂಡು ಮೋಸದಿಂದ ಅವಳಿಗೆ ವಿಷವನ್ನಿತ್ತರು.

೧೬. ಸುಮತಿಯು ಆ ಘೋರವಿಷವನ್ನು ತಿಂದೂ ಅದೃಷ್ಟವಶದಿಂದ ಸಾಯದೆ ಸಾವಿಗಿಂತ ಹೆಚ್ಚಾದ ದುಃಖವನ್ನು ಹೊಂದಿದಳು.

೧೭. ಪತಿವ್ರತೆಯಾದ ಆ ಸುಮತಿಯು ಕಾಲವೊದಗಲು ಅತಿಕಷ್ಟದಿಂದ ಒಬ್ಬ ಮಗನನ್ನು ಹೆತ್ತಳು.

೧೮. ದುರ್ಭಾಗ್ಯನಾದ ಆ ರಾಜಪುತ್ರನಿಗೆ ಗರ್ಭದಲ್ಲಿ ವಿಷಸಂಬಂಧವಾದುದರಿಂದ ಅವನು ಹಗಲು ರಾತ್ರಿ ಅಳುತ್ತ ಅತಿಕಷ್ಟವನ್ನು ಅನುಭವಿಸಿದನು.

೧೯. ವಿಷದ ಪ್ರಭಾವದಿಂದ ಆ ಬಾಲಕನ ತಾಯಿಯೂ ಸಮಸ್ತಾಂಗಗಳಲ್ಲಿಯೂ ಹುಣ್ಣುಗಳಿಂದ ಪೀಡಿಸಲ್ಪಟ್ಟು ಅತ್ಯಂತ ಕಷ್ಟಪಟ್ಟಳು.

೨೦. ರಾಜನು ಅನೇಕ ವೈದ್ಯರನ್ನು ಕರೆಯಿಸಿ ಬಹಳ ಪ್ರಯತ್ನಪಟ್ಟು ಔಷಧಮಾಡಿಸಿದರೂ ಆ ತಾಯಿಮಕ್ಕಳು ಸ್ವಸ್ಥರಾಗಲಿಲ್ಲ.

CC-0. Jangamwadi Math Collection. Digitized by eGangotri

ನ ರಾತ್ರೌ ಲಭತೇ ನಿದ್ರಾಂ ಸಾ ರಾಜ್ಞೀ ವಿಪುಲವ್ಯಥಾ ।
ಸ್ವಪುತ್ರಸ್ಯ ಚ ದುಃಖೇನ ದುಃಖಿತಾ ನಿತರಾಂ ಕೃಶಾ ॥ ೨೧ ॥
ನೀತ್ವೈವಂ ಕತಿಚಿನ್ಮಾಸಾನ್ಸ ರಾಜಾ ಮಾತೃಪುತ್ರಕೌ ।
ಜೀವಂತೌ ಚ ಮೃತಪ್ರಾಯೌ ವಿಲೋಕ್ಯಾತ್ಮನ್ಯ ಚಿಂತಯತ್ ॥ ೨೨ ॥
ಏತೌ ಮೇ ಗೃಹಿಣೀಪುತ್ರೌ ನಿರಯಾದಾಗತಾವಿಹ ।
ಅಶ್ರಾಂತರೋಗೌ ಕ್ರಂದಂತೌ ನಿದ್ರಾಭಂಗವಿಧಾಯಿನೌ ॥ ೨೩ ॥
ಅತ್ರೋಪಾಯಂ ಕರಿಷ್ಯಾಮಿ ಪಾಪಯೋರ್ಧ್ರುವಮೇತಯೋಃ ।
ಮರ್ತುಂ ವಾ ಜೀವಿತುಂ ವಾಽಪಿ ನ ಕ್ಷಮೌ ಪಾಪಭೋಗಿನೌ ॥ ೨೪ ॥
ಇತ್ಥಂ ವಿನಿಶ್ಚಿತ್ಯ ಚ ಭೂಮಿಪಾಲಃ
ಸಕ್ತಃ ಸಪತ್ನೀಷು ತದಾತ್ಮಜೇಷು ।
ಆಹೂಯ ಸೂತಂ ನಿಜದಾರಪುತ್ರೌ
ನಿರ್ವಾಪಯಾಮಾಸ ರಥೇನ ದೂರಂ ॥ ೨೫ ॥
ತೌ ಸೂತೇನ ಪರಿತ್ಯಕ್ತೌ ಕುತ್ರಚಿದ್ವಿಜನೇ ವನೇ ।
ಅವಾಪತುಃ ಪರಾಂ ಪೀಡಾಂ ಕ್ಷುತ್ತೃಡ್ಭ್ಯಾಂ ಭೃಶವಿಹ್ವಲೌ ॥ ೨೬ ॥
ಸೋದ್ವಹಂತೀ ನಿಜಂ ಬಾಲಂ ನಿಪತಂತೀ ಪದೇ ಪದೇ ।
ನಿಃಶ್ವಸಂತೀ ನಿಜಂ ಕರ್ಮ ನಿಂದಂತೀ ಚಕಿತಾ ಭೃಶಂ ॥ ೨೭ ॥

---

೨೧. ಆ ರಾಣಿಯು ತನ್ನ ಮಗನ ದುಃಖದಿಂದ ಬಹಳವಾಗಿ ವ್ಯಥೆಗೊಂಡು ರಾತ್ರಿ ನಿದ್ರೆಯಿಲ್ಲದೆ ಬಹಳ ಕೃಶಳಾದಳು.

೨೨. ಆ ರಾಜನು ಹೀಗೆ ಕೆಲವು ತಿಂಗಳುಗಳನ್ನು ಕಳೆದು ಬದುಕಿದರೂ ಸತ್ತಂತಿರುವ ಆ ತಾಯಿಮಕ್ಕಳನ್ನು ನೋಡಿ ತಾನೇ ಆಲೋಚಿಸಿದನು.

೨೩–೨೪. ಈ ನನ್ನ ಹೆಂಡತಿ ಮತ್ತು ಮಗನು ನರಕದಿಂದ ಇಲ್ಲಿಗೆ ಬಂದಿರುವರು. ಇವರು ಯಾವಾಗಲೂ ರೋಗಪೀಡಿತರಾಗಿ ಅಳುತ್ತ ನಿದ್ರೆಯನ್ನು ಹಾಳುಮಾಡುತ್ತಿರುವರು. ಇವರು ಪಾಪವನ್ನನುಭವಿಸುತ್ತ ಸಾಯುವುದಕ್ಕೂ ಬದುಕುವುದಕ್ಕೂ ಸಮರ್ಥರಾಗಿಲ್ಲ. ಪಾಪಿಗಳಾದ ಇವರ ವಿಷಯದಲ್ಲಿ ನಿಶ್ಚಯವಾಗಿಯೂ ಒಂದುಪಾಯವನ್ನು ಮಾಡುವೆನು.

೨೫. ಸವತಿಯರಲ್ಲಿಯೂ, ಅವರ ಮಕ್ಕಳಲ್ಲಿಯೂ ಪ್ರೀತಿಯುಳ್ಳ ಆ ರಾಜನು ಹೀಗೆ ನಿಶ್ಚಯಿಸಿ ಸಾರಥಿಯನ್ನು ಕರೆದು ಆ ಹೆಂಡತಿ ಮತ್ತು ಮಗನನ್ನು ರಥದಲ್ಲಿ ದೂರ ಕಳುಹಿಸಿದನು.

೨೬. ಸಾರಥಿಯು ಯಾವುದೊ ಒಂದು ಜನರಿಲ್ಲದ ಕಾಡಿನಲ್ಲಿ ಅವರನ್ನು ಬಿಟ್ಟುಬಿಡಲು ಅವರು ಹಸಿವು ಬಾಯಾರಿಕೆಯಿಂದ ಬಹು ವ್ಯಥೆಗೊಂಡರು.

೨೭–೩೦. ಅವಳು ತನ್ನ ಬಾಲಕನನ್ನು ಎತ್ತಿಕೊಂಡು ಪ್ರತಿಹೆಜ್ಜೆಯಲ್ಲಿಯೂ ಎಡವುವವಳೂ, ನಿಟ್ಟುಸಿರುಬಿಡುವವಳೂ, ಅತ್ಯಂತ ಭಯಗೊಂಡು

CC-0. Jangamwadi Math Collection. Digitized by eGangotri

ಕ್ವಚಿತ್ಕಂಟಿಕಭಿನ್ನಾಂಗೀ ಮುಕ್ತಕೇಶೀ ಭಯಾತುರಾ ।
ಕ್ವಚಿದ್ವ್ಯಾಘ್ರಸ್ವನೈರ್ಭೀತಾ ಕ್ವಚಿದ್ವ್ಯಾಲೈರನುದ್ರುತಾ ॥ ೨೮ ॥
ಭರ್ತ್ಸ್ಯಮಾನಾ ಪಿಶಾಚೈಶ್ಚ ವೇತಾಲೈರ್ಬ್ರಹ್ಮರಾಕ್ಷಸೈಃ ।
ಮಹಾಗುಲ್ಮೇಷು ಧಾವಂತೀ ಭಿನ್ನಪಾದಾ ಕ್ಷುರಾಶ್ಮಭಿಃ ॥ ೨೯ ॥
ಸೈವಂ ಘೋರೇ ಮಹಾಽರಣ್ಯೇ ಭ್ರಮಂತೀ ನೃಪಗೇಹಿನೀ ।
ದೈವಾತ್ಪ್ರಾಪ್ತಾ ವಣಿಙ್ಮಾರ್ಗಂ ಗೋವಾಜಿನರಸೇವಿತಂ ॥ ೩೦ ॥
ಗಚ್ಛಂತೀ ತೇನ ಮಾರ್ಗೇಣ ಸುದೂರಮತಿಯತ್ನತಃ ।
ದದರ್ಶ ವೈಶ್ಯನಗರಂ ಬಹುಸ್ತ್ರೀನರಸೇವಿತಂ ॥ ೩೧ ॥
ತಸ್ಯ ಗೋಪ್ತಾ ಮಹಾವೈಶ್ಯೋ ನಗರಸ್ಯ ಮಹಾಜನಃ ।
ಅಸ್ತಿ ಪದ್ಮಾಕರೋ ನಾಮ ರಾಜರಾಜ ಇವಾಽಪರಃ ॥ ೩೨ ॥
ತಸ್ಯ ವೈಶ್ಯಪತೇಃ ಕಾಚಿದ್ಗೃಹದಾಸೀ ನೃಪಾಂಗನಾಂ ।
ಆಯಾಂತೀಂ ದೂರತೋ ದೃಷ್ಟ್ವಾ ತದಂತಿಕಮುಪಾಯಯೌ ॥ ೩೩ ॥
ಸಾ ದಾಸೀ ನೃಪತೇಃ ಕಾಂತಾಂ ಸಪುತ್ರಾಂ ಭೃಶಪೀಡಿತಾಂ ।
ಸ್ವಯಂ ವಿದಿತವೃತ್ತಾಂತಾ ಸ್ವಾಮಿನೇ ಪ್ರತ್ಯದರ್ಶಯತ್ ॥ ೩೪ ॥

---

ತನ್ನ ಕರ್ಮವನ್ನು ನಿಂದಿಸುವವಳೂ, ಒಂದೆಡೆಯಲ್ಲಿ ಮುಳ್ಳುಗಳಿಂದ ಸೀಳಿದ ಅವಯವವುಳ್ಳವಳೂ, ಬಿಡಿಸಿಹೋದ ಕೂದಲುಳ್ಳವಳೂ, ಭಯಗೊಂಡವಳೂ, ಮತ್ತೊಂದೆಡೆಯಲ್ಲಿ ಹುಲಿಯ ಗರ್ಜನೆಯಿಂದ ಹೆದರಿದವಳೂ, ಇನ್ನೊಂದೆಡೆಯಲ್ಲಿ ಸರ್ಪದಿಂದ ಹಿಂಬಾಲಿಸಲ್ಪಟ್ಟವಳೂ, ಪಿಶಾಚಗಳಿಂದಲೂ, ಭೇತಾಳಗಳಿಂದಲೂ, ಬ್ರಹ್ಮರಾಕ್ಷಸರಿಂದಲೂ ಗದರಿಸಲ್ಪಟ್ಟವಳೂ, ದೊಡ್ಡ ಪೊದೆಗಳಲ್ಲಿ ಓಡುವವಳೂ, ಚೂಪಾದ ಕಲ್ಲುಗಳಿಂದ ಸೀಳಿದ ಪಾದಗಳುಳ್ಳವಳೂ ಆಗಿ ಘೋರಾರಣ್ಯದಲ್ಲಿ ಅಲೆಯುತ್ತ ಅದೃಷ್ಟವಶದಿಂದ ಗೋವು, ಕುದುರೆ, ಮನುಷ್ಯರು ನಡೆಯುವ ವೈಶ್ಯರ ದಾರಿಯನ್ನು ಹೊಂದಿದಳು.

೩೧. ಆ ದಾರಿಯಲ್ಲಿ ಬಹು ದೂರ ಬಹಳ ಪ್ರಯತ್ನದಿಂದ ನಡೆದು ಅನೇಕ ಗಂಡಸರೂ, ಹೆಂಗಸರೂ ಇರುವ ವೈಶ್ಯರ ಪಟ್ಟಣವನ್ನು ನೋಡಿದಳು.

೩೨. ಆ 'ಪಟ್ಟಣವನ್ನು ಮತ್ತೊಬ್ಬ ಕುಬೇರನಂತಿದ್ದ ಪದ್ಮಾಕರನೆಂಬ ವೈಶ್ಯನು ರಕ್ಷಿಸುತ್ತಿದ್ದನು.

೩೩. ಆ ವೈಶ್ಯರಾಜನ ಮನೆಯ ದಾಸಿಯೊಬ್ಬಳು ದೂರದಲ್ಲಿ ಬರುತ್ತಿರುವ ಆ ರಾಣಿಯನ್ನು ಕಂಡು ಅವಳ ಸಮೀಪಕ್ಕೆ ಬಂದಳು.

೩೪. ಅವಳು ಅತ್ಯಂತ ರೋಗಪೀಡಿತಳೂ, ಪುತ್ರಸಹಿತಳೂ ಆದ ಆ ರಾಣಿಯ ವೃತ್ತಾಂತವನ್ನೆಲ್ಲ ತಾನು ತಿಳಿದುಕೊಂಡು ಅವಳನ್ನು ಯಜಮಾನನಿಗೆ ತೋರಿಸಿದಳು.

CC-0. Jangamwadi Math Collection. Digitized by eGangotri

ಸ ತಾಂ ದೃಷ್ಟ್ವಾ ವಿಶಾಂನಾಥೋ ರುಜಾರ್ತಾಂ ಕ್ಲಿಷ್ಟಪುತ್ರಕಾಂ ।
ನೀತ್ವಾ ರಹಸಿ ಸುವ್ಯಕ್ತಂ ತದ್ವೃತ್ತಾಂತಮಪೃಚ್ಛತ ॥ ೩೫ ॥
ತಯಾ ನಿವೇದಿತಾಶೇಷವೃತ್ತಾಂತಃ ಸ ವಣಿಕ್ಪತಿಃ ।
ಅಹೋ ಕಷ್ಟಮಿತಿ ಜ್ಞಾತ್ವಾ ನಿಶಶ್ವಾಸ ಮುಹುರ್ಮುಹುಃ ॥ ೩೬ ॥
ತಾಮಂತಿಕೇ ಸ್ವಗೇಹಸ್ಯ ಸನ್ನಿವೇಶ್ಯ ರಹೋಗೃಹೇ ।
ವಾಸೋಽನ್ನಪಾನಶಯನೈರ್ಮಾತೃಸಾಮ್ಯಮಪೂಜಯತ್ ॥ ೩೭ ॥
ತಸ್ಮಿನ್ಗೃಹೇ ನೃಪವಧೂರ್ನಿವಸಂತೀ ಸುರಕ್ಷಿತಾ ।
ವ್ರಣಯಕ್ಷ್ಮಾದಿ ರೋಗಾಣಾಂ ನ ಶಾಂತಿಂ ಪ್ರತ್ಯಪದ್ಯತ ॥ ೩೮ ॥
ತತೋ ದಿನೈಃ ಕತಿಪಯೈಃ ಸ ಬಾಲೋ ವ್ರಣಪೀಡಿತಃ ।
ವಿಲಂಘಿತಭಿಷಕ್ಸತ್ವೋ ಮಮಾರ ಚ ವಿಧೇರ್ವಶಾತ್ ॥ ೩೯ ॥
ಮೃತೇ ಸ್ವತನಯೇ ರಾಜ್ಞೀ ಶೋಕೇನ ಮಹತಾವೃತಾ ।
ಮೂರ್ಛಿತಾ ಚಾಽಪತದ್ಭೂಮೌ ಗಜಭಗ್ನೇವ ವಲ್ಲರೀ ॥ ೪೦ ॥
ದೈವಾತ್ಸಂಜ್ಞಾಮವಾಪ್ಯಾಽಥ ಬಾಷ್ಪಕ್ಲಿನ್ನಪಯೋಧರಾ ।
ಸಾಂತ್ವಿತಾಽಪಿ ವಣಿಕ್ಸ್ತ್ರೀಭಿರ್ವಿಲಲಾಪ ಸುದುಃಖಿತಾ ॥ ೪೧ ॥

---

೩೫. ವೈಶ್ಯರೊಡೆಯನು ರೋಗದಿಂದ ಪೀಡಿತಳೂ, ದುಃಖಗೊಂಡ ಮಗನುಳ್ಳವಳೂ ಆದ ಅವಳನ್ನು ಕಂಡು ಕರೆದುಕೊಂಡು ಹೋಗಿ ಗುಟ್ಟಿನಲ್ಲಿ ಅವಳ ವೃತ್ತಾಂತವನ್ನೆಲ್ಲ ಕೇಳಿದನು.

೩೬. ಆ ರಾಣಿಯು ಎಲ್ಲ ವೃತ್ತಾಂತವನ್ನೂ ತಿಳಿಸಲು ಆ ವೈಶ್ಯರಾಜನು ಅಯ್ಯೋ! ಕಷ್ಟ! ಎಂದು ನಿಟ್ಟುಸಿರು ಬಿಟ್ಟನು.

೩೭. ಅವಳನ್ನು ತನ್ನ ಮನೆಯ ಹತ್ತಿರದಲ್ಲಿ ಗುಟ್ಟಾದ ಮನೆಯಲ್ಲಿರಿಸಿ ತಾಯಿಯಂತೆ ಕಂಡು ಬಟ್ಟೆ, ಅನ್ನ, ನೀರು, ಹಾಸಿಗೆಗಳನ್ನಿತ್ತು ಪೂಜಿಸಿದನು.

೩೮. ಆ ಮನೆಯಲ್ಲಿ ಸುರಕ್ಷಿತಳಾಗಿ ವಾಸಿಸುತ್ತಿರುವ ಆ ರಾಣಿಯ ಹುಣ್ಣು, ಕ್ಷಯರೋಗಗಳು ವಾಸಿಯಾಗಲಿಲ್ಲ.

೩೯. ಬಳಿಕ ಕೆಲವು ದಿನಗಳಲ್ಲಿ ಹುಣ್ಣುಗಳಿಂದ ನೊಂದ ಅವಳ ಬಾಲಕನು ವೈದ್ಯರ ಔಷಧಗಳಿಂದ ವಾಸಿಗೊಳ್ಳದೆ ಅದೃಷ್ಟವಶದಿಂದ ಮಡಿದನು.

೪೦. ಮಗನು ಮಡಿಯಲು ರಾಣಿಯು ಅತ್ಯಂತ ದುಃಖಗೊಂಡು ಆನೆಯು ಕಿತ್ತೊಗೆದ ಬಳ್ಳಿಯಂತೆ ಮೂರ್ಛೆಯಿಂದ ನೆಲದಲ್ಲಿ ಬಿದ್ದಳು.

೪೧. ಬಳಿಕ ದೈವವಶದಿಂದ ಜ್ಞಾನವನ್ನು ಹೊಂದಿ ಕಣ್ಣೀರಿನಿಂದ ನೆನೆದ ಕುಚಗಳುಳ್ಳವಳಾಗಿ ವೈಶ್ಯ ಸ್ತ್ರೀಯರಿಂದ ಸಮಾಧಾನಗೊಳಿಸಲ್ಪಟ್ಟರೂ ಅತಿ ದುಃಖದಿಂದ ಗೋಳಾಡಿದಳು.

CC-0. Jangamwadi Math Collection. Digitized by eGangotri

ಹಾ ತಾತ ತಾತ ಹಾ ಪುತ್ರ ಹಾ ಮಮ ಪ್ರಾಣರಕ್ಷಕ ।
ಹಾ ರಾಜಕುಲಪೂರ್ಣೇಂದೋ ಹಾ ಮಮಾನಂದವರ್ಧನ ॥ ೪೨ ॥
ಇಮಾಮನಾಥಾಂ ಕೃಪಣಾಂ ತ್ವತ್ಪ್ರಾಣಾಂ ತ್ಯಕ್ತಬಾಂಧವಾಂ ।
ಮಾತರಂ ತೇ ಪರಿತ್ಯಜ್ಯ ಕ್ವ ಯಾತೋಽಸಿ ನೃಪಾತ್ಮಜ ॥ ೪೩ ॥
ಇತ್ಯೇಭಿರುದಿತೈರ್ವಾಕ್ಯೈಃ ಶೋಕಚಿಂತಾವಿವರ್ಧಕೈಃ ।
ವಿಲಪಂತೀಂ ಮೃತಾಪತ್ಯಾಂ ಕೋ ನು ಸಾಂತ್ವಯಿತುಂ ಕ್ಷಮಃ ॥ ೪೪ ॥
ಏತಸ್ಮಿನ್ನಸಮಯೇ ತಸ್ಯಾ ದುಃಖಶೋಕಚಿಕಿತ್ಸಕಃ ।
ಋಷಭಃ ಪೂರ್ವಮಾಖ್ಯಾತಃ ಶಿವಯೋಗೀ ಸಮಾಯಯೌ ॥ ೪೫ ॥
ಸ ಯೋಗೀ ವೈಶ್ಯನಾಥೇನ ಸಾಽರ್ಘ್ಯಹಸ್ತೇನ ಪೂಜಿತಃ ।
ತಸ್ಯಾಃ ಸಕಾಶಮಾಗಮ್ಯ ಶೋಚಂತ್ಯಾ ಇದಮಬ್ರವೀತ್ ॥ ೪೬ ॥

ಋಷಭ ಉವಾಚ :—

ಅಕಸ್ಮಾತ್ಕಿಮಹೋ ವತ್ಸೇ ರೋದಿಷೀಷಿ ವಿಮೂಢಧೀಃ ।
ಕೋ ಜಾತಃ ಕತಮೋ ಲೋಕೇ ಕೋ ಮೃತೋ ವದ ಸಾಂಪ್ರತಂ ॥೪೭॥
ಅಮೀ ದೇಹಾದಯೋ ಭಾವಾಸ್ತೋಯಫೇನಸಧರ್ಮಕಾಃ ।
ಕ್ವಚಿದ್ಭ್ರಾಂತಿಃ ಕ್ವಚಿಚ್ಛಾಂತಿಃ ಸ್ಥಿತಿರ್ಭವತಿ ವಾ ಪುನಃ ॥ ೪೮ ॥

---

೪೨. "ಅಯ್ಯೋ! ಅಪ್ಪ! ಅಯ್ಯೋ! ಅಯ್ಯೋ! ನನ್ನ ಪ್ರಾಣಪಾಲಕ! ಅಯ್ಯೋ! ರಾಜವಂಶದ ಪೂರ್ಣಚಂದ್ರ! ಅಯ್ಯೋ! ನನ್ನ ಆನಂದವರ್ಧಕ!

೪೩. ದಿಕ್ಕಿಲ್ಲದವಳೂ, ನಿನ್ನಲ್ಲಿಯೇ ಪ್ರಾಣವಿಟ್ಟುಕೊಂಡಿರುವವಳೂ, ಬಂಧುಗಳಿಲ್ಲದವಳೂ ಆದ ನಿನ್ನ ತಾಯಿಯನ್ನು ತ್ಯಜಿಸಿ ಎಲ್ಲಿಗೆ ಹೋಗಿರುವೆ?"

೪೪. ಹೀಗೆ ದುಃಖ, ಚಿಂತೆಗಳನ್ನು ಹೆಚ್ಚಿಸುವ ಮಾತುಗಳಿಂದ ಗೋಳಾಡುತ್ತಿರುವ ಮೃತನಾದ ಮಗನುಳ್ಳ ತಾಯಿಯನ್ನು ಸಮಾಧಾನಮಾಡಲು ಯಾರು ಶಕ್ತರು?

೪೫. ಈ ಸಮಯದಲ್ಲಿ ಅವಳ ದುಃಖವನ್ನು ಹೋಗಲಾಡಿಸಲು ಶಕ್ತನಾದ ಹಿಂದೆ ಹೇಳಿದ ಋಷಭ ಶಿವಯೋಗಿಯು ಬಂದನು.

೪೬. ವೈಶ್ಯರಾಜನಿಂದ ಅರ್ಘ್ಯ ಮೊದಲಾದುವುಗಳನ್ನು ಪಡೆದು ಪೂಜಿಸಲ್ಪಟ್ಟ ಆ ಶಿವಯೋಗಿಯು ಅಳುತ್ತಿರುವ ಅವಳ ಸಮೀಪಕ್ಕೆ ಹೋಗಿ ಹೀಗೆಂದನು.

೪೭. ಋಷಭನು ಹೇಳುತ್ತಾನೆ:—ಮಗು! ಮೂಢಬುದ್ಧಿಯುಳ್ಳವಳಾಗಿ ಕಾರಣವಿಲ್ಲದೆ ಏಕೆ ಅಳುತ್ತೀಯೆ? ಈಗ ಲೋಕದಲ್ಲಿ ಯಾವನು ಹುಟ್ಟಿದನು? ಯಾವನು ಮಡಿದನು?

೪೮. ಈ ದೇಹಾದಿ ವಸ್ತುಗಳು ನೀರಿನ ಗುಳ್ಳೆಯಂತಿರುವುವು. ಒಂದೆಡೆ

CC-0. Jangamwadi Math Collection. Digitized by eGangotri

ಅತೋಽಸ್ಮಿನ್ಫೇನಸದೃಶೇ ದೇಹೇ ಪಂಚತ್ವಮಾಗತೇ ।
ಶೋಕಸ್ಯಾಽನವಕಾಶತ್ವಾನ್ನ ಶೋಚಂತಿ ವಿಪಶ್ಚಿತಃ ॥ ೪೯ ॥
ಗುಣೈರ್ಭೂತಾನಿ ಸೃಜ್ಯಂತೇ ಭ್ರಾಮ್ಯಂತೇ ನಿಜಕರ್ಮಭಿಃ ।
ಕಾಲೇನಾಽಥ ವಿಕೃಷ್ಯಂತೇ ವಾಸನಾಯಾಂ ಚ ಶೇರತೇ ॥ ೫೦ ॥
ಮಾಯಯೋತ್ಪತ್ತಿಮಾಯಾಂತಿ ಗುಣಾಃ ಸತ್ವಾದಯಸ್ತ್ರಯಃ ।
ತೈರೇವ ದೇಹಾ ಜಾಯಂತೇ ಜಾತಾಸ್ತಲ್ಲಕ್ಷಣಾಶ್ರಯಾಃ ॥ ೫೧ ॥
ದೇವತ್ವಂ ಯಾತಿ ಸತ್ವೇನ ರಜಸಾ ಚ ಮನುಷ್ಯತಾಂ ।
ತಿರ್ಯಕ್ತ್ವಂ ತಮಸಾ ಜಂತುರ್ವಾಸನಾಽನುಗತೋ ವಶಃ ॥ ೫೨ ॥
ಸಂಸಾರೇ ವರ್ತಮಾನೇಽಸ್ಮಿನ್ ಜಂತುಃ ಕರ್ಮಾನುಬಂಧನಾತ್ ।
ದುರ್ವಿಭಾವ್ಯಾಂ ಗತಿಂ ಯಾತಿ ಸುಖದುಃಖಮಯೀಂ ಮುಹುಃ ॥ ೫೩ ॥
ಅಪಿ ಕಲ್ಪಾಯುಷಾಂ ತೇಷಾಂ ದೇವಾನಾಂ ತು ವಿಪರ್ಯಯಃ ।
ಅನೇಕಾಮಯಬದ್ಧಾನಾಂ ಕಾ ಕಥಾ ನರದೇಹಿನಾಂ ॥ ೫೪ ॥

---

ಯಲ್ಲಿ ಭ್ರಾಂತಿಯೂ, ಇನ್ನೊಂದೆಡೆಯಲ್ಲಿ ಶಾಂತಿಯೂ, ಮತ್ತೊಂದೆಡೆಯಲ್ಲಿ ಸ್ವಾಸ್ಥ್ಯವೂ ಉಂಟಾಗುವುವು.

೪೯. ಆದುದರಿಂದ ಪಂಡಿತನು ನೊರೆಯಂತಿರುವ ದೇಹವು ಮೃತವಾಗಲು ದುಃಖಕ್ಕೆ ಅವಕಾಶವಿಲ್ಲದುದರಿಂದ ಅಳುವುದಿಲ್ಲ.

೫೦. ಸತ್ತ್ವರಜಸ್ತಮೋಗುಣಗಳಿಂದ ಪ್ರಾಣಿಗಳು ಹುಟ್ಟುತ್ತವೆ. ತಮ್ಮ ಕರ್ಮವಶದಿಂದ ಸಂಚಾರಮಾಡಿಸಲ್ಪಡುತ್ತವೆ. ಬಳಿಕ ಅವಧಿಯು ಮುಗಿಯುತ್ತಲೆ ಸಾಯುತ್ತವೆ. ತಮ್ಮ ವಾಸನೆಯಲ್ಲಿ ಅಡಗಿಹೋಗುತ್ತವೆ.

೫೧. ಮಾಯೆಯಿಂದ ಸತ್ತ್ವಾದಿ ಗುಣಗಳು ಹುಟ್ಟುತ್ತವೆ. ಅವುಗಳಿಂದಲೇ ದೇಹಗಳು ಉತ್ಪನ್ನವಾಗುತ್ತವೆ. ಹುಟ್ಟಿದ ಆ ದೇಹಗಳು ಆ ಗುಣಗಳ ಲಕ್ಷಣಗಳನ್ನಾಶ್ರಯಿಸಿರುತ್ತವೆ.

೫೨. ಜಂತುವು ತನ್ನ ವಾಸನೆಯಂತೆ ಸತ್ತ್ವಗುಣದಿಂದ ದೇವತ್ವವನ್ನೂ, ರಜೋಗುಣದಿಂದ ಮನುಷ್ಯತ್ವವನ್ನೂ, ತಮೋಗುಣದಿಂದ ತಿರ್ಯಗ್ಜಾತಿಯನ್ನೂ ಹೊಂದುವುದು.

೫೩. ಈ ಸಂಸಾರದಲ್ಲಿ ಪ್ರಾಣಿಯು ಕರ್ಮಬಂಧನದಿಂದ ಸುಖದುಃಖರೂಪವಾಗಿ ಆಲೋಚಿಸಲಾಗದ ಗತಿಯನ್ನು ಹೊಂದುತ್ತದೆ.

೫೪. ಕಲ್ಪಾಂತರದವರೆಗೆ ಆಯುಸ್ಸುಳ್ಳ ದೇವತೆಗಳಿಗೂ ಇಂತು ವ್ಯತ್ಯಾಸವಾಗುತ್ತಿರುವುದು. ಅನೇಕ ರೋಗಪೀಡಿತರಾದ ಮನುಷ್ಯರ ವಿಷಯದಲ್ಲಿ ಏನೆಂದು ಹೇಳಲಿ?

CC-0. Jangamwadi Math Collection. Digitized by eGangotri

ಕೇಚಿದ್ವದಂತಿ ದೇಹಸ್ಯ ಕಾಲನೇವ ಹಿ ಕಾರಣಂ ।
ಕರ್ಮ ಕೇಚಿದ್ಗುಣಾನ್ಕೇಚಿದ್ದೇಹಃ ಸಾಧಾರಣೋ ಹ್ಯಯಂ ॥ ೫೫ ॥
ಕಾಲಕರ್ಮಗುಣಾಧಾನಂ ಪಂಚಾತ್ಮಕಮಿದಂ ವಪುಃ ।
ಜಾತಂ ದೃಷ್ಟ್ವಾ ನ ಹೃಷ್ಯಂತಿ ನ ಶೋಚಂತಿ ಮೃತಂ ಬುಧಾಃ ॥ ೫೬ ॥
ಅವ್ಯಕ್ತೇ ಜಾಯತೇ ಜಂತುರವ್ಯಕ್ತೇ ಚ ಪ್ರಲೀಯತೇ ।
ಮಧ್ಯೇಽವ್ಯಕ್ತವದಾಭಾತಿ ಜಲಬುದ್ಬುದಸನ್ನಿಭಃ ॥ ೫೭ ॥
ಯದಾ ಗರ್ಭಗತೋ ದೇಹೀ ವಿನಾಶಃ ಕಲ್ಪಿತಸ್ತದಾ ।
ದೈವಾಜ್ಜೀವತಿ ವಾ ಜಾತೋ ಮ್ರಿಯತೇ ಸಹಸೈವ ವಾ ॥ ೫೮ ॥
ಗರ್ಭಸ್ಥಾ ಏವ ನಶ್ಯಂತಿ ಜಾತಮಾತ್ರಾಸ್ತಥಾಪರೇ ।
ಕ್ವಚಿದ್ಯುವಾನೋ ನಶ್ಯಂತಿ ಮ್ರಿಯಂತೇ ಕೇಽಪಿ ವಾರ್ಧಕೇ ॥ ೫೯ ॥
ಯಾದೃಶಂ ಪ್ರಾಕ್ತನಂ ಕರ್ಮ ತಾದೃಶಂ ವಿಂದತೇ ವಪುಃ ।
ಭುಂಕ್ತೇ ತದನುರೂಪಾಣಿ ಸುಖದುಃಖಾನಿ ವೈ ಹ್ಯಸೌ ॥ ೬೦ ॥

---

೫೫. ಕೆಲವರು ದೇಹಕ್ಕೆ ಕಾಲವೇ ಕಾರಣವೆಂದೂ, ಇನ್ನು ಕೆಲವರು ಕರ್ಮವು ಕಾರಣವೆಂದೂ, ಮತ್ತೆ ಕೆಲವರು ಗುಣಗಳು ಕಾರಣಗಳೆಂದೂ ಹೇಳುತ್ತಾರೆ. ಈ ದೇಹವು ಎಲ್ಲರಿಗೂ ಸಮಾನವಾದುದು.

೫೬. ಜ್ಞಾನಿಗಳು ಕಾಲ, ಕರ್ಮ, ಗುಣಗಳೇ ಕಾರಣವಾಗಿರುವ ಪಾಂಚಭೌತಿಕಸ್ವರೂಪವಾದ ಈ ದೇಹವು ಹುಟ್ಟಲು ಅದನ್ನು ಕಂಡು ಸಂತೋಷಪಡುವುದಿಲ್ಲ. ಮೃತವಾಗಲು ದುಃಖಿಸುವುದಿಲ್ಲ.

೫೭. ಜಂತುವು ಅವ್ಯಕ್ತತತ್ವದಿಂದಲೆ ಹುಟ್ಟಿ ಕೊನೆಗೆ ಅಲ್ಲಿಯೆ ಅಡಗಿಹೋಗುವುದು. ಮಧ್ಯಕಾಲದಲ್ಲಿ ನೀರಿನ ಗುಳ್ಳೆಯಂತಿದ್ದು ಪ್ರಪಂಚದಲ್ಲಿ ಸ್ಪಷ್ಟವಾದ ವಸ್ತುವಿನಂತೆ ಕಾಣುವುದು.

೫೮. ಪ್ರಾಣಿಯು ಗರ್ಭವನ್ನು ಸೇರಿದ ಕೂಡಲೆ ಅದಕ್ಕೆ ನಾಶವು ಸಿದ್ಧವಾಗಿರುವುದು. ಅದು ದೈವವಶದಿಂದಲೆ ಜೀವಿಸುವುದು ಅಥವಾ ಕೂಡಲೆ ಸಾಯುವುದು.

೫೯. ಕೆಲವರು ಗರ್ಭದಲ್ಲಿಯೇ ಸಾಯುವರು. ಇನ್ನು ಕೆಲವರು ಹುಟ್ಟಿದ ಕೂಡಲೆ ಮಡಿಯುವರು. ಮತ್ತೆ ಕೆಲವರು ಯೌವನದಲ್ಲಿ ಸಾಯುವರು. ಇತರರು ಮುಪ್ಪಿನಲ್ಲಿ ಮಡಿಯುತ್ತಾರೆ.

೬೦. ಈ ಪ್ರಾಣಿಯು ಹಿಂದೆ ಎಂತಹ ಕರ್ಮವನ್ನು ಮಾಡಿರುವುದೊ ಅಂತಹ ದೇಹವನ್ನೆ ಹೊಂದುವುದು. ಅದಕ್ಕನುಗುಣವಾದ ಸುಖದುಃಖಗಳನ್ನೇ ಅನುಭವಿಸುವುದು.

CC-0. Jangamwadi Math Collection. Digitized by eGangotri

ಮಾಯಾನುಭಾವೇರಿತಯೋಃ ಪಿತ್ರೋಃ ಸುರತಸಂಭ್ರಮಾತ್ ।
ದೇಹ ಉತ್ಪದ್ಯತೇ ಕೋಽಪಿ ಪುಂಯೋಷಿತ್ಕ್ಲೀಬಲಕ್ಷಣಃ ॥ ೬೧ ॥
ಆಯುಃ ಸುಖಂ ಚ ದುಃಖಂ ಚ ಪುಣ್ಯಂ ಪಾಪಂ ಶ್ರುತಂ ಧನಂ ।
ಲಲಾಟೇ ಲಿಖಿತಂ ಧಾತ್ರಾ ವಹನ್ ಜಂತುಃ ಪ್ರಜಾಯತೇ ॥ ೬೨ ॥
ಕರ್ಮಣಾಮವಿಲಂಘ್ಯತ್ವಾತ್ಕಾಲಸ್ಯಾಽಪ್ಯನತಿಕ್ರಮಾತ್ ।
ಅನಿತ್ಯತ್ವಾಚ್ಚ ಭಾವಾನಾಂ ನ ಶೋಕಂ ಕರ್ತುಮರ್ಹಸಿ ॥ ೬೩ ॥
ಕ್ವ ಸ್ವಪ್ನೇ ನಿಯತಂ ಸ್ಥೈರ್ಯಮಿಂದ್ರಜಾಲೇ ಕ್ವ ಸತ್ಯತಾ ।
ಕ್ವ ನಿತ್ಯತಾ ಶರನ್ಮೇಘೇ ಕ್ವ ಶಶ್ವತ್ತ್ವಂ ಕಲೇವರೇ ॥ ೬೪ ॥
ತವ ಜನ್ಮಾನ್ಯತೀತಾನಿ ಶತಕೋಟ್ಯಯುತಾನಿ ಚ ।
ಅಜ್ಞಾನಂತ್ಯಾಃ ಪರಂ ತತ್ತ್ವಂ ಸಂಪ್ರಾಪ್ತೋಽಯಂ ಮಹಾಭ್ರಮಃ ॥ ೬೫ ॥
ಕಸ್ಯ ಕಸ್ಯಾಽಸಿ ತನಯಾ ಜನನೀ ಕಸ್ಯ ಕಸ್ಯ ವಾ ।
ಕಸ್ಯ ಕಸ್ಯಾಽಸಿ ಗೃಹಿಣೀ ಭವಕೋಟಿಷು ವರ್ತಿನೀ ॥ ೬೬ ॥
ಪಂಚಭೂತಾತ್ಮಕೋ ದೇಹಸ್ತ್ವಗಸೃಙ್ಮಾಂಸ ಬಂಧನಃ ।
ಮೇದೋಮಜ್ಜಾಽಸ್ಥಿನಿಚಿತೋ ವಿಣ್ಮೂತ್ರಶ್ಲೇಷ್ಮಭಾಜನಃ ॥ ೬೭ ॥

---

೬೧. ಮಾಯೆಯಿಂದ ಮೋಹಗೊಂಡ ತಂದೆತಾಯಿಗಳ ಸುರತದಿಂದ ಗಂಡು, ಹೆಣ್ಣು, ನಪುಂಸಕ ರೂಪವಾದ ದೇಹವು ಹುಟ್ಟುವುದು.

೬೨. ಜಂತುವು ಬ್ರಹ್ಮನು ನೇಮಿಸಿದಂತೆ ಆಯುಸ್ಸು, ಸುಖ, ದುಃಖ, ಪುಣ್ಯ, ಪಾಪ, ವಿದ್ಯೆ, ಧನ ಇವುಗಳನ್ನು ಹೊಂದಿಕೊಂಡೇ ಹುಟ್ಟುವುದು.

೬೩. ಕಾಲಕರ್ಮಗಳನ್ನು ಮೀರಲಾಗದಿರುವುದರಿಂದಲೂ, ಪದಾರ್ಥಗಳೆಲ್ಲ ನಶ್ವರವಾದುದರಿಂದಲೂ ನೀನು ದುಃಖಮಾಡಬಾರದು.

೬೪. ಸ್ವಪ್ನದಲ್ಲಿ ಸ್ಥಿರತ್ವವೂ, ಇಂದ್ರಜಾಲದಲ್ಲಿ ಸತ್ಯತೆಯೂ, ಶರತ್ಕಾಲದ ಮೋಡದಲ್ಲಿ ನಿತ್ಯತೆಯೂ, ದೇಹದಲ್ಲಿ ನಾಶವಾಗದಿರುವಿಕೆಯೂ ಎಲ್ಲಿಯದು ?

೬೫. ನಿನಗೆ ಎಣಿಸಲಾಗದಷ್ಟು ಜನ್ಮಗಳು ಕಳೆದುಹೋಗಿವೆ. ಪರತತ್ವವನ್ನರಿಯದಿರುವುದರಿಂದ ನಿನಗೆ ಈ ಭ್ರಾಂತಿಯುಂಟಾಗಿದೆ.

೬೬. ನೀನು ಅನೇಕ ಜನ್ಮಗಳಲ್ಲಿ ಸಂಚರಿಸುತ್ತ ಯಾರು ಯಾರಿಗೊ ಮಗಳೂ, ಯಾರು ಯಾರಿಗೊ ತಾಯಿಯೂ, ಯಾರು ಯಾರಿಗೊ ಹೆಂಡತಿಯೂ ಆಗಿದ್ದೀಯೆ.

೬೭. ಈ ಭೂಮ್ಯಾದಿ ಪಂಚಭೂತಜನಿತವಾದ ದೇಹವು ಚರ್ಮ, ರಕ್ತ, ಮಾಂಸ, ಕೊಬ್ಬು, ಮಜ್ಜಾ, ಮೂಳೆಗಳಿಂದ ವ್ಯಾಪ್ತವಾಗಿ ಮಲ, ಮೂತ್ರ, ಕಫಗಳಿಗೆ ಆಶ್ರಯವಾದುದು.

CC-0. Jangamwadi Math Collection. Digitized by eGangotri

ಶರೀರಾಂತರಮುಷ್ಯೇತನ್ನಿಜದೇಹೋದ್ಭವಂ ಮಲಂ ।
ಮತ್ವಾ ಸ್ವತನಯಂ ಮೂಢೇ ಮಾ ಶೋಕಂ ಕರ್ತುಮರ್ಹಸಿ ॥ ೬೮ ॥
ಯದಿ ನಾಮ ಜನಃ ಕಶ್ಚಿನ್ಮೃತ್ಯುಂ ತರತಿ ಯತ್ನತಃ ।
ಕಥಂ ತರ್ಹಿ ವಿಪದ್ಯೇರನ್ಸರ್ವೇ ಪೂರ್ವೇ ವಿಪಶ್ಚಿತಃ ॥ ೬೯ ॥
ತಪಸಾ ವಿದ್ಯಯಾ ಬುದ್ಧ್ಯಾ ಮಂತ್ರೌಷಧಿರಸಾಯನೈಃ ।
ಅತಿಯಾತಿ ಪರಂ ಮೃತ್ಯುಂ ನ ಕಶ್ಚಿದಪಿ ಪಂಡಿತಃ ॥ ೭೦ ॥
ಏಕಸ್ಯಾಽದ್ಯ ಮೃತಿರ್ಜಂತೋಃ ಶ್ವಶ್ಚಾನ್ಯಸ್ಯ ವರಾನನೇ ।
ತಸ್ಮಾದನಿತ್ಯಾಽವಯಮೇ ನ ತ್ವಂ ಶೋಚಿತುಮರ್ಹಸಿ ॥ ೭೧ ॥
ನಿತ್ಯಂ ಸನ್ನಿಹಿತೋ ಮೃತ್ಯುಃ ಕಿಂ ಸುಖಂ ವದ ದೇಹಿನಾಂ ।
ವ್ಯಾಘ್ರೇ ಪುರಃ ಸ್ಥಿತೇ ಗ್ರಾಸಃ ಪಶೂನಾಂ ಕಿಂ ನು ರೋಚತೇ ॥ ೭೨ ॥
ಅತೋ ಜನ್ಮ ಜರಾಂ ಜೇತುಂ ಯದೀಚ್ಛಸಿ ವರಾನನೇ ।
ಶರಣಂ ವ್ರಜ ಸರ್ವೇಶಂ ಮೃತ್ಯುಂಜಯಮುಮಾಪತಿಂ ॥ ೭೩ ॥
ತಾವನ್ಮೃತ್ಯುಭಯಂ ಘೋರಂ ತಾವಜ್ಜನ್ಮಜರಾಭಯಂ ।
ಯಾವನ್ನೋ ಯಾತಿ ಶರಣಂ ದೇಹೀ ಶಿವಪದಾಂಬುಜಂ ॥ ೭೪ ॥
ಅನುಭೂಯೇಹ ದುಃಖಾನಿ ಸಂಸಾರೇ ಭೃಶದಾರುಣೇ ।
ಮನೋ ಯದಾ ವಿಯುಜ್ಯೇತ ತದಾ ಧ್ಯೇಯೋ ಮಹೇಶ್ವರಃ ॥ ೭೫ ॥

---

೬೮. ನಿನ್ನ ದೇಹದ ಮಲವೆ ಮತ್ತೊಂದು ದೇಹವಾಗಿರುವುದು. ಮೂಢಳೆ! ಇದನ್ನು ಮಗನೆಂದು ತಿಳಿದು ದುಃಖಿಸಬಾರದು.

೬೯. ಯಾವನಾದರೊಬ್ಬ ಮನುಷ್ಯನು ಪ್ರಯತ್ನದಿಂದ ಸಾವನ್ನು ತಪ್ಪಿಸಿಕೊಳ್ಳುವುದಾದರೆ ಹಿಂದಿನ ಜ್ಞಾನಿಗಳೆಲ್ಲ ಏತಕ್ಕೆ ಮೃತ್ಯುವಶರಾದರು?

೭೦. ಒಬ್ಬ ಜ್ಞಾನಿಯೂ ತಪಸ್ಸು, ವಿದ್ಯೆ, ಬುದ್ಧಿ, ಮಂತ್ರ, ಔಷಧಿ, ರಸಾಯನ ಇವುಗಳ ಬಲದಿಂದ ಮೃತ್ಯುವನ್ನು ಮೀರಲಾರನು.

೭೧. ಈ ದಿನ ಒಬ್ಬನು ಸಾಯುವನು. ನಾಳೆ ಮತ್ತೊಬ್ಬನು ಸಾಯುವನು. ಆದುದರಿಂದ ಅನಿತ್ಯವಾದ ಈ ದೇಹದ ವಿಷಯದಲ್ಲಿ ನೀನು ದುಃಖಿಸಬಾರದು.

೭೨-೭೩. ಯಾವಾಗಲೂ ಪ್ರಾಣಿಗಳಿಗೆ ಮೃತ್ಯುವು ಸನ್ನಿಹಿತವಾಗಿರುವುದು. ಆದುದರಿಂದ ಸುಖವೆಲ್ಲಿ? ಹುಲಿಯು ಮುಂದೆ ನಿಂತಿರಲು ಪಶುಗಳಿಗೆ ಆಹಾರದ ತುತ್ತು ರುಚಿಸುವುದೇ? ಆದುದರಿಂದ ನೀನು ಜನ್ಮ, ಮುಪ್ಪುಗಳನ್ನು ಜಯಿಸಲಿಚ್ಛಿಸುವುದಾದರೆ ಮೃತ್ಯುವನ್ನು ಜಯಿಸಿದ ಉಮಾರಮಣನನ್ನು ಮರೆಹೋಗು.

೭೪. ನರನು ಶಿವನ ಅಡಿದಾವರೆಗಳನ್ನು ಮರೆಹೋಗದಿರುವವರೆಗೆ ಘೋರವಾದ ಸಾವು, ಮುಪ್ಪುಗಳ ಭಯವಿರುವುದು.

೭೫. ಅತ್ಯಂತ ಕಠಿನವಾದ ಈ ಸಂಸಾರದಲ್ಲಿ ದುಃಖಗಳನ್ನನುಭವಿಸಿ ಮನಸ್ಸು ವೈರಾಗ್ಯಗೊಂಡಾಗ ಮಹೇಶ್ವರನನ್ನು ಚಿಂತಿಸಬೇಕು.


CC-0. Jangamwadi Math Collection. Digitized by eGangotri

ಮನಸಾ ಪಿಬತಃ ಪುಂಸಃ ಶಿವಧ್ಯಾನರಸಾಽಮೃತಂ ।
ಭೂಯಸ್ತೃಷ್ಣಾ ನ ಜಾಯೇತ ಸಂಸಾರವಿಷಯಾಸವೇ ॥ ೭೬ ॥
ವಿಮುಕ್ತಂ ಸರ್ವಸಂಗೈಶ್ಚ ಮನೋ ವೈರಾಗ್ಯಯಂತ್ರಿತಂ ।
ಯದಾ ಶಿವಪದೇ ಮಗ್ನಂ ತದಾ ನಾಽಸ್ತಿ ಪುನರ್ಭವಃ ॥ ೭೭ ॥
ತಸ್ಮಾದಿದಂ ಮನೋ ಭದ್ರೇ ಶಿವಧ್ಯಾನೈಕಸಾಧನಂ ।
ಶೋಕಮೋಹಸಮಾವಿಷ್ಟಂ ಮಾ ಕುರುಷ್ವ ಶಿವಂ ಭಜ ॥ ೭೮ ॥

ಸೂತ ಉವಾಚ :—

ಇತ್ಥಂ ಸಾಽನುನಯಂ ರಾಜ್ಞೀ ಬೋಧಿತಾ ಶಿವಯೋಗಿನಾ ।
ಪ್ರತ್ಯಾಚಷ್ಟ ಗುರೋಸ್ತಸ್ಯ ಪ್ರಣಮ್ಯ ಚರಣಾಂಬುಜಂ ॥ ೭೯ ॥

ರಾಜ್ಞ್ಯುವಾಚ :—

ಭಗವನ್ಮೃತಪುತ್ರಾಯಾಸ್ತ್ಯಕ್ತಾಯಾಃ ಪ್ರಿಯಬಂಧುಭಿಃ ।
ಮಹಾರೋಗಾತುರಾಯಾ ಮೇ ಕಾ ಗತಿರ್ಮರಣಂ ವಿನಾ ॥ ೮೦ ॥
ಅತೋಽಹಂ ಮರ್ತುಮಿಚ್ಛಾಮಿ ಸಹೈವ ಶಿಶುನಾಽಮುನಾ ।
ಕೃತಾರ್ಥಾಽಹಂ ಯದದ್ಯ ತ್ವಾಮುಪಶ್ಯಂ ಮರಣೋನ್ಮುಖೀ ॥ ೮೧ ॥

---

೭೬. ಮನಸ್ಸಿನಿಂದ ಶಿವನ ಧ್ಯಾನವೆಂಬ ಅಮೃತರಸವನ್ನು ಕುಡಿಯುತ್ತಿರುವ ಮನುಷ್ಯನಿಗೆ ಮರಳಿ ಸಂಸಾರಸುಖವೆಂಬ ಹೆಂಡದಲ್ಲಿ ಆಶೆಯುಂಟಾಗಲಾರದು.

೭೭. ಮನಸ್ಸು ಸರ್ವವಿಷಯಗಳ ಸಂಬಂಧವನ್ನು ತ್ಯಜಿಸಿ ವೈರಾಗ್ಯಗೊಂಡು ಶಿವನ ಚರಣದಲ್ಲಿ ಆಸಕ್ತವಾದರೆ ತಿರುಗಿ ಜನ್ಮವನ್ನು ಹೊಂದುವುದಿಲ್ಲ.

೭೮. ಎಲೌ ಮಂಗಳಕರಳೆ! ಆದುದರಿಂದ ಶಿವನ ಧ್ಯಾನಕ್ಕೆಮಾತ್ರ ಕಾರಣವಾದ ಈ ಮನಸ್ಸನ್ನು ದಃಖಮೋಹಗಳಿಗೆ ಆಶ್ರಯವಾದುದನ್ನಾಗಿ ಮಾಡಬೇಡ. ಶಿವನನ್ನು ಸೇವಿಸು.

೭೯. ಸೂತನು ಹೇಳುತ್ತಾನೆ:—ಹೀಗೆ ಆ ಶಿವಯೋಗಿಯು ಆ ರಾಣಿಗೆ ಸಮಾಧಾನದಿಂದ ತತ್ತ್ವವನ್ನು ಬೋಧಿಸಲು ಅವಳು ಆ ಗುರುವಿನ ಚರಣಕಮಲವನ್ನು ವಂದಿಸಿ ಹೀಗೆ ಉತ್ತರವಿತ್ತಳು.

೮೦. "ಪೂಜ್ಯನೆ! ಮಗನು ಸತ್ತಿರುವವಳೂ, ಪ್ರಿಯರಾದ ಬಂಧುಗಳಿಂದ ಬಿಡಲ್ಪಟ್ಟವಳೂ, ಮಹಾ ರೋಗದಿಂದ ಪೀಡಿತಳೂ ಆದ ನನಗೆ ಮರಣವನ್ನು ಬಿಟ್ಟು ಗತಿಯೇನಿರುವುದು?

೮೧. ಆದುದರಿಂದ ನಾನು ಈ ಮಗುವಿನೊಡನೆ ಸಾಯಬಯಸುವೆನು. ಈ ದಿನ ಮರಣೋದ್ಯುಕ್ತಳಾದ ನಾನು ನಿನ್ನ ದರ್ಶನದಿಂದ ಧನ್ಯಳಾದೆನು."

CC-0. Jangamwadi Math Collection. Digitized by eGangotri

ಸೂತ ಉವಾಚ :—

ಇತಿ ತಸ್ಯಾ ವಚಃ ಶ್ರುತ್ವಾ ಶಿವಯೋಗೀ ದಯಾನಿಧಿಃ ।
ಪೂರ್ವೋಪಕಾರಂ ಸಂಸ್ಮೃತ್ಯ ಮೃತಸ್ಯಾಂತಿಕಮಾಯಯೌ ॥ ೮೨ ॥
ಸ ತದಾ ಭಸ್ಮ ಸಂಗೃಹ್ಯ ಶಿವಮಂತ್ರಾಭಿಮಂತ್ರಿತಂ ।
ವಿದೀರ್ಣೇ ತನ್ಮುಖೇ ಕ್ಷಿಪ್ತ್ವಾ ಮೃತಂ ಪ್ರಾಣೈರಯೋಜಯತ್ ॥ ೮೩ ॥
ಸ ಬಾಲಃ ಸಂಗತಃ ಪ್ರಾಣೈಃ ಶನೈರುನ್ಮೀಲ್ಯ ಲೋಚನೇ ।
ಪ್ರಾಪ್ತಸರ್ವೇಂದ್ರಿಯಬಲೋ ರುರೋದ ಸ್ತನ್ಯಕಾಂಕ್ಷಯಾ ॥ ೮೪ ॥
ಮೃತಸ್ಯ ಪುನರುತ್ಥಾನಂ ವೀಕ್ಷ್ಯ ಬಾಲಸ್ಯ ವಿಸ್ಮಿತಾಃ ।
ಜನಾ ಮುಮುದಿರೇ ಸರ್ವೇ ನಗರೇಷು ಪುರೋಗಮಾಃ ॥ ೮೫ ॥
ಅಥಾನಂದಭರಾ ರಾಜ್ಞೀ ವಿಹ್ವಲೋನ್ಮತ್ತಲೋಚನಾ ।
ಜಗ್ರಾಹ ತನಯಂ ಶೀಘ್ರಂ ಬಾಷ್ಪವ್ಯಾಕುಲಲೋಚನಾ ॥ ೮೬ ॥
ಉಪಗುಹ್ಯ ತದಾ ತನ್ವೀ ಪರಮಾನಂದನಿರ್ವೃತಾ ।
ನ ವೇದಾತ್ಮಾನಮನ್ಯಂ ವಾ ಸುಷುಪ್ತೇವ ಪರಿಶ್ರಮಾತ್ ॥ ೮೭ ॥

---

೮೨. ಸೂತನು ಹೇಳುತ್ತಾನೆ:—ದಯಾಳುವಾದ ಆ ಶಿವಯೋಗಿಯು ಅವಳ ಈ ಮಾತನ್ನು ಕೇಳಿ ಹಿಂದಿನ ಉಪಕಾರವನ್ನು ಸ್ಮರಿಸಿ ಮೃತಬಾಲಕನ ಹತ್ತಿರಕ್ಕೆ ಬಂದನು.

೮೩. ಆಗ ಅವನು ಶಿವಮಂತ್ರದಿಂದ ಅಭಿಮಂತ್ರಿತವಾದ ಭಸ್ಮವನ್ನು ತೆಗೆದುಕೊಂಡು ಅದನ್ನು ಆ ಬಾಲಕನ ತೆರೆದ ಬಾಯಲ್ಲಿ ಹಾಕಿ ಮೃತನಾದ ಅವನನ್ನು ಬದುಕಿಸಿದನು.

೮೪. ಪುನಃ ಪ್ರಾಣಸಹಿತನಾದ ಆ ಬಾಲಕನು ಮೆಲ್ಲಗೆ ಕಣ್ಣುಗಳನ್ನು ತೆರೆದು ಹಿಂದಿನಂತೆ ಇಂದ್ರಿಯಗಳ ಶಕ್ತಿಯನ್ನು ಪಡೆದು ಸ್ತನ್ಯದಾಶೆಯಿಂದ ಅತ್ತನು.

೮೫. ಪಟ್ಟಣದ ಜನರೆಲ್ಲ ಮೃತಬಾಲಕನು ತಿರುಗಿ ಬದುಕಿ ಬಂದಿರುವುದನ್ನು ನೋಡಿ ಆಶ್ಚರ್ಯದಿಂದ ಕೂಡಿ ಸಂತೋಷಗೊಂಡರು.

೮೬. ಬಳಿಕ ಆನಂದಭರಿತಳಾದ ಆ ರಾಣಿಯು ಕಂಗೆಟ್ಟ ಹುಚ್ಚಿಯ ಕಣ್ಣುಗಳಂತಿರುವ ತನ್ನ ಕಣ್ಣುಗಳಿಂದ ಕಣ್ಣೀರನ್ನು ಸುರಿಸುತ್ತ ಶೀಘ್ರವಾಗಿ ಬಾಲಕನನ್ನು ಎತ್ತಿಕೊಂಡಳು.

೮೭. ಆ ಬಾಲಕನನ್ನು ಆಲಿಂಗಿಸಿಕೊಂಡು ಅತ್ಯಾನಂದದಿಂದ ಸುಖಗೊಂಡ ಆಯಾಸದಿಂದ ನಿದ್ರಿಸಿದವಳಂತೆ ಅವಳು ತನ್ನನ್ನೂ, ಬೇರೆಯವರನ್ನೂ ತಿಳಿಯಲಾರಳಾಗಿದ್ದಳು.

CC-0. Jangamwadi Math Collection. Digitized by eGangotri

ಪುನಶ್ಚ ಋಷಭೋ ಯೋಗೀ ತಯೋರ್ಮಾತೃಕುಮಾರಯೋಃ ।
ವಿಷವ್ರಣಯುತಂ ದೇಹಂ ಭಸ್ಮನೈವ ಪರಾಮೃಶತ್ ॥ ೮೮ ॥
ತೌ ಚ ತದ್ಭಸ್ಮನಾ ಸ್ಪೃಷ್ಟೌ ಪ್ರಾಪ್ಯ ದಿವ್ಯಕಲೇಬರೌ ।
ದೇವಾನಾಂ ಸದೃಶಂ ರೂಪಂ ದಧತುಃ ಕಾಂತಿಭೂಷಿತಂ ॥ ೮೯ ॥
ಸಂಪ್ರಾಪ್ತೇ ತ್ರಿದಿವೈಶ್ವರ್ಯೇ ಯತ್ಸುಖಂ ಪುಣ್ಯಕರ್ಮಣಾಂ ।
ತಸ್ಮಾಚ್ಛತಗುಣಂ ಪ್ರಾಪ ಸಾ ರಾಜ್ಞೀ ಸುಖಮುತ್ತಮಂ ॥ ೯೦ ॥
ತಾಂ ಪಾದಯೋರ್ನಿಪತಿತಾಮೃಷಭಃ ಪ್ರೇಮವಿಹ್ವಲಃ ।
ಉತ್ಥಾಪ್ಯಾಶ್ವಾಸಯಾಮಾಸ ದುಃಖೈರ್ಮುಕ್ತಾಮುವಾಚ ಹ ॥ ೯೧ ॥
ಅಯಿ ವತ್ಸೇ ಮಹಾರಾಜ್ಞಿ ಜೀವ ತ್ವಂ ಶಾಶ್ವತೀಃ ಸಮಾಃ ।
ಯಾವಜ್ಜೀವಸಿ ಲೋಕೇಽಸ್ಮಿನ್ನ ತಾವತ್ಪ್ರಾಪ್ಸ್ಯಸೇ ಜರಾಂ ॥ ೯೨ ॥
ಏಷ ತೇ ತನಯಃ ಸಾಧ್ವಿ ಭದ್ರಾಯುರಿತಿ ನಾಮತಃ ।
ಖ್ಯಾತಿಂ ಯಾಸ್ಯತಿ ಲೋಕೇಷು ನಿಜಂ ರಾಜ್ಯಮವಾಪ್ಸ್ಯತಿ ॥ ೯೩ ॥
ಅಸ್ಯ ವೈಶ್ಯಸ್ಯ ಸದನೇ ತಾವತ್ತಿಷ್ಠ ಶುಚಿಸ್ಮಿತೇ ।
ಯಾವದೇಷ ಕುಮಾರಸ್ತೇ ಪ್ರಾಪ್ತವಿದ್ಯೋ ಭವಿಷ್ಯತಿ ॥ ೯೪ ॥

---

೮೮. ಮರಳಿ ಋಷಭಯೋಗಿಯು ಆ ತಾಯಿಮಕ್ಕಳ ವಿಷದ ಹುಣ್ಣುಗಳುಳ್ಳ ಶರೀರಗಳನ್ನು ಭಸ್ಮದಿಂದ ಉಜ್ಜಿದನು.

೮೯. ಆ ಭಸ್ಮದ ಸ್ಪರ್ಶದಿಂದ ದಿವ್ಯದೇಹವನ್ನು ಪಡೆದ ತಾಯಿಮಕ್ಕಳು ದೇವತೆಗಳಿಗೆ ಸಮಾನವಾಗಿ, ಕಾಂತಿಯಿಂದ ವಿರಾಜಿಸುವ ಆಕೃತಿಯನ್ನು ಹೊಂದಿದರು.

೯೦. ಪುಣ್ಯಗೈದವರಿಗೆ ದೇವಲೋಕದ ಐಶ್ವರ್ಯವು ಬಂದರೆ ಎಂತಹ ಸುಖವಾಗುವುದೊ, ಅದಕ್ಕಿಂತಲೂ ನೂರರಷ್ಟು ಹೆಚ್ಚಾದ ಉತ್ತಮ ಸೌಖ್ಯವನ್ನು ಆ ರಾಣಿಯು ಹೊಂದಿದಳು.

೯೧. ಋಷಭಯೋಗಿಯು ತನ್ನ ಚರಣಗಳಲ್ಲಿ ಬಿದ್ದಿರುವ ಆ ರಾಣಿಯನ್ನು ಪ್ರೀತಿಯಿಂದ ಎಬ್ಬಿಸಿ ಸಮಾಧಾನಗೊಳಿಸಿ ದುಃಖರಹಿತಳಾದ ಅವಳನ್ನು ಕುರಿತು ಇಂತೆಂದನು.

೯೨. "ಎಲೌ ತರುಣಿಯೆ! ನೀನು ಬಹುಕಾಲ ಬದುಕು. ನೀನು ಈ ಲೋಕದಲ್ಲಿ ಬದುಕಿರುವಷ್ಟು ಕಾಲ ಮುದುಕಿಯಾಗುವುದಿಲ್ಲ.

೯೩. ಎಲೆ ಸಾಧ್ವಿಯೆ! ಈ ನಿನ್ನ ಮಗನು ಭದ್ರಾಯುವೆಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧನಾಗಿ ತನ್ನ ರಾಜ್ಯವನ್ನು ಪಡೆಯುವನು.

೯೪. ಈ ಕುಮಾರನು ವಿದ್ಯಾವಂತನಾಗುವವರೆಗೆ ನೀನು ಈ ವೈಶ್ಯನ ಮನೆಯಲ್ಲಿರು."

CC-0. Jangamwadi Math Collection. Digitized by eGangotri

ಸೂತ ಉವಾಚ :—

ಇತಿ ತಾವೃಷಭೋ ಯೋಗೀ ತಂ ಚ ರಾಜಕುಮಾರಕಂ ।
ಸಂಜೀವ್ಯ ಭಸ್ಮವೀರ್ಯೇಣ ಯಯೌ ದೇಶಾನ್ಯಥೇಪ್ಸಿತಾನ್ ॥ ೯೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ ಭದ್ರಾಯ್ವಾಖ್ಯಾನೇ ಋಷಭಯೋಗಿನಾ "ಭದ್ರಾಯುಜೀವನವರ್ಣನಂ" ನಾಮ ದಶಮೋऽಧ್ಯಾಯಃ

---

೯೫. ಆ ಋಷಭಯೋಗಿಯು ಹೀಗೆ ಅವಳನ್ನೂ, ಆ ರಾಜಕುಮಾರನನ್ನೂ ಭಸ್ಮದ ಸಾಮರ್ಥ್ಯದಿಂದ ಬದುಕಿಸಿ ತನಗೆ ಇಷ್ಟಬಂದ ದೇಶಕ್ಕೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದ ಭದ್ರಾಯ್ವಾಖ್ಯಾನದಲ್ಲಿ ಋಷಭಯೋಗಿಕೃತ "ಭದ್ರಾಯುಜೀವನವರ್ಣನ" ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥೈಕಾದಶೋಽಧ್ಯಾಯಃ

### ಭದ್ರಾಯುಷಂ ಪ್ರತಿ ಋಷಭೋಪದೇಶವರ್ಣನಂ

ಸೂತ ಉವಾಚ :—

ಪಿಂಗಲಾ ನಾಮ ಯಾ ವೇಶ್ಯಾ ಮಯಾ ಪೂರ್ವಮುದಾಹೃತಾ ।
ಶಿವಭಕ್ತಾರ್ಚನಾತ್ಪುಣ್ಯಾತ್ತ್ಯಕ್ತ್ವಾ ಪೂರ್ವಕಲೇವರಂ ॥ ೧ ॥
ಚಂದ್ರಾಂಗದಸ್ಯ ಸಾ ಭೂಯಃ ಸೀಮಂತಿನ್ಯಾಮಜಾಯತ ।
ರೂಪೌದಾರ್ಯಗುಣೋಪೇತಾ ನಾಮ್ನಾ ವೈ ಕೀರ್ತಿಮಾಲಿನೀ ॥ ೨ ॥
ಭದ್ರಾಯುರಪಿ ತತ್ರೈವ ರಾಜಪುತ್ರೋ ವಣಿಕ್ಪತೇಃ ।
ವವೃಧೇ ಸದನೇ ಭಾನುಃ ಶುಚಾವಿವ ಮಹಾತಪಾಃ ॥ ೩ ॥
ತಸ್ಯಾಽಪಿ ವೈಶ್ಯನಾಥಸ್ಯ ಕುಮಾರಸ್ತ್ವೇಕ ಉತ್ತಮಃ ।
ಸ ನಾಮ್ನಾ ಸುನಯಃ ಪ್ರೋಕ್ತೋ ರಾಜಸೂನೋಃ ಸಖಾಽಭವತ್ ॥ ೪ ॥
ತಾವುಭೌ ಪರಮಸ್ನಿಗ್ಧೌ ರಾಜವೈಶ್ಯಕುಮಾರಕೌ ।
ಚಿತ್ರಕ್ರೀಡಾವುದಾರಾಂಗೌ ರತ್ನಾಭರಣಮಂಡಿತೌ ॥ ೫ ॥
ತಸ್ಯ ರಾಜಕುಮಾರಸ್ಯ ಬ್ರಾಹ್ಮಣೈಃ ಸ ವಣಿಕ್ಪತಿಃ ।
ಸಂಸ್ಕಾರಾನ್ಕಾರಯಾಮಾಸ ಸ್ವಪುತ್ರಸ್ಯಾಽಪಿ ವಿಸ್ತರಾತ್ ॥ ೬ ॥

---

### ಕನ್ನಡದ ಅನುವಾದ

#### ಭದ್ರಾಯುವಿಗೆ ಋಷಭೋಪದೇಶವರ್ಣನ

೧–೨. ಸೂತನು ಹೇಳುತ್ತಾನೆ:—ನಾನು ಹಿಂದೆ ತಿಳಿಸಿದ ಪಿಂಗಳೆಯೆಂಬ ಸೂಳೆಯು ಶಿವಭಕ್ತನ ಪೂಜೆಯಿಂದ ಉಂಟಾದ ಪುಣ್ಯದಿಂದ ಹಿಂದಿನ ದೇಹವನ್ನು ಬಿಟ್ಟು ಚಂದ್ರಾಂಗದನ ಪತ್ನಿಯಾದ ಸೀಮಂತಿನಿಯಲ್ಲಿ ಜನಿಸಿ, ರೂಪ, ಔದಾರ್ಯಗಳಿಂದ ಕಂಗೊಳಿಸುತ್ತ ಕೀರ್ತಿಮಾಲಿನಿಯೆಂಬ ಹೆಸರನ್ನು ಪಡೆದಳು.

೩. ಭದ್ರಾಯುವೂ ಆ ವೈಶ್ಯನ ಮನೆಯಲ್ಲಿಯೇ ಗ್ರೀಷ್ಮರ್ತುವಿನಲ್ಲಿ ಅತ್ಯಂತ ಬಿಸಿಲುಳ್ಳ ಸೂರ್ಯನಂತೆ ಬೆಳೆದನು.

೪. ಆ ವೈಶ್ಯರಾಜನ ಸುನಯ ಎಂಬ ಕುಮಾರನು ಈ ರಾಜಕುಮಾರನಿಗೆ ಸ್ನೇಹಿತನಾದನು.

೫. ಆ ಇಬ್ಬರು ರಾಜವೈಶ್ಯಕುಮಾರರು ಸ್ನೇಹಿತರಾಗಿಯೂ, ವಿಚಿತ್ರವಾದ ಆಟವಾಡುವರಾಗಿಯೂ, ಉತ್ಕೃಷ್ಟಾವಯವವುಳ್ಳವರಾಗಿಯೂ, ರತ್ನದ ಒಡವೆಗಳಿಂದ ಅಲಂಕೃತರಾಗಿಯೂ ಇದ್ದರು.

೬. ಆ ವೈಶ್ಯರಾಜನು ಆ ರಾಜಕುಮಾರನಿಗೂ, ತನ್ನ ಮಗನಿಗೂ ಬ್ರಾಹ್ಮಣರಿಂದ ಉಪನಯನಾದಿ ಸಂಸ್ಕಾರಗಳನ್ನು ವಿಸ್ತಾರವಾಗಿ ಮಾಡಿಸಿದನು.

CC-0. Jangamwadi Math Collection. Digitized by eGangotri

ಕಾಲೇ ಕೃತೋಪನಯನೌ ಗುರುಶುಶ್ರೂಷಣೇ ರತೌ ।
ಚಕ್ರತುಃ ಸರ್ವವಿದ್ಯಾನಾಂ ಸಂಗ್ರಹಂ ವಿನಯಾನ್ವಿತೌ ॥ ೭ ॥
ಅಥ ರಾಜಕುಮಾರಸ್ಯ ಪ್ರಾಪ್ತೇ ಷೋಡಶಹಾಯನೇ ।
ಸ ಏವ ಋಷಭೋ ಯೋಗೀ ತಸ್ಯ ವೇಶ್ಮನ್ಯುಪಾಯಯೌ ॥ ೮ ॥
ಸ ರಾಜ್ಞೀ ಸ ಕುಮಾರಶ್ಚ ಶಿವಯೋಗಿನಮಾಗತಂ ।
ಮುಹುರ್ಮುಹುಃ ಪ್ರಣಮ್ಯೋಭೌ ಪೂಜಯಾಮಾಸತುರ್ಮುದಾ ॥ ೯ ॥
ತಾಭ್ಯಾಂ ಚ ಪೂಜಿತಃ ಸೋಽಥ ಯೋಗೀಶೋ ಹೃಷ್ಟಮಾನಸಃ ।
ತಂ ರಾಜಪುತ್ರಮುದ್ದಿಶ್ಯ ಬಭಾಷೇ ಕರುಣಾರ್ದ್ರಧೀಃ ॥ ೧೦ ॥

ಶಿವಯೋಗ್ಯುವಾಚ :—

ಕಚ್ಚಿತ್ತೇ ಕುಶಲಂ ತಾತ ತ್ವನ್ಮಾತುಶ್ಚಾಽಪ್ಯನಾಮಯಂ ।
ಕಚ್ಚಿತ್ತ್ವಂ ಸರ್ವವಿದ್ಯಾನಾಮಕಾರ್ಷೀಚ್ಚ ಪ್ರತಿಗ್ರಹಂ ॥ ೧೧ ॥
ಕಚ್ಚಿದ್ಗುರೂಣಾಂ ಸತತಂ ಶುಶ್ರೂಷಾತತ್ಪರೋ ಭವಾನ್ ।
ಕಚ್ಚಿತ್ಸ್ಮರಸಿ ಮಾಂ ತಾತ ತವ ಪ್ರಾಣಪ್ರದಂ ಗುರುಂ ॥ ೧೨ ॥
ಏವಂ ವದತಿ ಯೋಗೀಶೇ ರಾಜ್ಞೀ ಸಾ ವಿನಯಾನ್ವಿತಾ ।
ಸ್ವಪುತ್ರಂ ಪಾದಯೋಸ್ತಸ್ಯ ನಿಪಾತ್ಯೈನಮಭಾಷತ ॥ ೧೩ ॥

---

೭. ಸಕಾಲದಲ್ಲಿ ಉಪನೀತರಾದ ಆ ಇಬ್ಬರು ಬಾಲಕರೂ ಗುರುಸೇವೆಯಲ್ಲಿ ನಿರತರಾಗಿ ವಿನಯದಿಂದ ಸಕಲ ವಿದ್ಯೆಗಳನ್ನೂ ಸಂಗ್ರಹಿಸಿದರು.

೮. ಆ ರಾಜಕುಮಾರನಿಗೆ ಹದಿನಾರು ವರ್ಷಗಳು ತುಂಬಲು ಋಷಭಯೋಗಿಯು ಅವನ ಮನೆಗೆ ಬಂದನು.

೯. ಆ ರಾಣಿಯೂ ಆ ಕುಮಾರನೂ ಹೀಗೆ ಬಂದಿರುವ ಆ ಶಿವಯೋಗಿಯನ್ನು ವಂದಿಸಿ ಸಂತೋಷದಿಂದ ಪೂಜಿಸಿದರು.

೧೦. ಅವರ ಪೂಜೆಯಿಂದ ಸಂತುಷ್ಟನಾದ ಆ ಯೋಗೀಶ್ವರನು ದಯೆಯಿಂದ ಆ ರಾಜಕುಮಾರನನ್ನು ಕುರಿತು ಹೀಗೆಂದನು.

೧೧. ಶಿವಯೋಗಿಯು ಹೇಳುತ್ತಾನೆ:—"ಮಗು! ನೀನೂ ನಿನ್ನ ತಾಯಿಯೂ ಕ್ಷೇಮವಾಗಿರುವಿರಾ? ನೀನು ಎಲ್ಲಾ ವಿದ್ಯೆಗಳನ್ನು ಕಲಿತಿರುವೆಯಷ್ಟೆ?

೧೨. ನೀನು ಯಾವಾಗಲೂ ಗುರುಸೇವೆಯಲ್ಲಿ ನಿರತನಾಗಿರುವೆಯಾ? ನಿನಗೆ ಪ್ರಾಣವನ್ನಿತ್ತ ಗುರುವಾದ ನನ್ನನ್ನು ಸ್ಮರಿಸುತ್ತಿರುವೆಯಾ?"

೧೩. ಯೋಗೀಶ್ವರನು ಹೀಗೆ ಹೇಳಲು ಆ ರಾಣಿಯು ವಿನಯದಿಂದ ತನ್ನ ಮಗನಿಂದ ಅವನಿಗೆ ನಮಸ್ಕಾರಮಾಡಿಸಿ ಅವನನ್ನು ಕುರಿತು ಹೀಗೆಂದಳು.

CC-0. Jangamwadi Math Collection. Digitized by eGangotri

ಏಷ ಪುತ್ರಸ್ತವ ಗುರೋ ತ್ವಮಸ್ಯ ಪ್ರಾಣದಃ ಪಿತಾ ।
ಏಷ ಶಿಷ್ಯಸ್ತು ಸಂಗ್ರಾಹ್ಯೋ ಭವತಾ ಕರುಣಾತ್ಮನಾ ॥ ೧೪ ॥
ಅತೋ ಬಂಧುಭಿರುತ್ಸೃಷ್ಟಮನಾಥಂ ಪರಿಪಾಲಯ ।
ಅಸ್ಮೈ ಸಮ್ಯಕ್ಸತಾಂ ಮಾರ್ಗಮುಪದೇಷ್ಟುಂ ತ್ವಮರ್ಹಸಿ ॥ ೧೫ ॥
ಇತಿ ಪ್ರಸಾದಿತೋ ರಾಜ್ಞ್ಯಾ ಶಿವಯೋಗೀ ಮಹಾಮತಿಃ ।
ತಸ್ಮೈ ರಾಜಕುಮಾರಾಯ ಸನ್ಮಾರ್ಗಮುಪದಿಷ್ಟವಾನ್ ॥ ೧೬ ॥

ಋಷಭ ಉವಾಚ :–

ಶ್ರುತಿಸ್ಮೃತಿಪುರಾಣೇಷು ಪ್ರೋಕ್ತೋ ಧರ್ಮಃ ಸನಾತನಃ ।
ವರ್ಣಾಶ್ರಮಾನುರೂಪೇಣ ನಿಷೇವ್ಯಃ ಸರ್ವದಾ ಜನೈಃ ॥ ೧೭ ॥
ಭಜ ವತ್ಸ ಸತಾಂ ಮಾರ್ಗಂ ಸದೇವ ಚರಿತಂ ಚರ ।
ನ ದೇವಾಜ್ಞಾಂ ವಿಲಂಘೇಥಾ ಮಾಽಕಾರ್ಷೀರ್ದೇವಹೇಲನಂ ॥ ೧೮ ॥
ಗೋದೇವಗುರುವಿಪ್ರೇಷು ಭಕ್ತಿಮಾನ್ಭವ ಸರ್ವದಾ ।
ಚಾಂಡಾಲಮಪಿ ಸಂಪ್ರಾಪ್ತಂ ಸದಾ ಸಂಭಾವಯಾಽತಿಥಿಂ ॥ ೧೯ ॥
ಸತ್ಯಂ ನ ತ್ಯಜ ಸರ್ವತ್ರ ಪ್ರಾಪ್ತೇಽಪಿ ಪ್ರಾಣಸಂಕಟೇ ।
ಗೋಬ್ರಾಹ್ಮಣಾನಾಂ ರಕ್ಷಾರ್ಥಂ ಅಸತ್ಯಂ ತ್ವಂ ವದ ಕ್ವಚಿತ್ ॥ ೨೦ ॥

---

೧೪–೧೫. "ಗುರುವೆ! ಇವನು ನಿನ್ನ ಮಗನು. ನೀನು ಇವನಿಗೆ ಪ್ರಾಣವನ್ನಿತ್ತ ತಂದೆಯು. ದಯಾಳುವಾದ ನೀನು ಇವನನ್ನು ಶಿಷ್ಯನನ್ನಾಗಿ ಪರಿಗ್ರಹಿಸಬೇಕು. ಬಂಧುಗಳಿಂದ ಬಿಡಲ್ಪಟ್ಟ ಅನಾಥನಾದ ಇವನನ್ನು ಕಾಪಾಡು. ಇವನಿಗೆ ನೀನು ಸನ್ಮಾರ್ಗವನ್ನುಪದೇಶಿಸು."

೧೬. ಹೀಗೆ ರಾಣಿಯು ಶಿವಯೋಗಿಯನ್ನು ಸಂತೋಷಗೊಳಿಸಲು ಜ್ಞಾನಿಯಾದ ಅವನು ಆ ರಾಜಕುಮಾರನಿಗೆ ಸನ್ಮಾರ್ಗವನ್ನು ಉಪದೇಶಿಸಿದನು.

೧೭. ಋಷಭನು ಹೇಳುತ್ತಾನೆ:—ಜನರು ಯಾವಾಗಲೂ ಶ್ರುತಿ ಸ್ಮೃತಿಗಳಲ್ಲಿ ಹೇಳಿರುವ ಸನಾತನ ಧರ್ಮವನ್ನೂ, ವರ್ಣಾಶ್ರಮಗಳನ್ನೂ ಅನುಸರಿಸಿ ಸೇವಿಸಬೇಕು.

೧೮. ಮಗು! ಸನ್ಮಾರ್ಗದಲ್ಲಿ ನಡೆ. ಒಳ್ಳೆ ನಡತೆಯುಳ್ಳವನಾಗು. ದೇವರ ಆಜ್ಞೆಯನ್ನು ಮೀರಬೇಡ, ದೇವರನ್ನು ನಿಂದಿಸಬೇಡ.

೧೯–೨೦. ಯಾವಾಗಲೂ ಗೋವು, ದೇವರು, ಗುರು, ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗು. ಅತಿಥಿಯಾಗಿ ಚಾಂಡಾಲನು ಬಂದರೂ ಅವನನ್ನು ಸನ್ಮಾನಿಸು. ಪ್ರಾಣಾಪಾಯವು ಸಂಭವಿಸಿದರೂ ಎಲ್ಲೆಡೆಯಲ್ಲಿಯೂ ಸತ್ಯವನ್ನು ಬಿಡಬೇಡ. ಗೋಬ್ರಾಹ್ಮಣರ ರಕ್ಷಣೆಗಾಗಿ ಕೆಲವೆಡೆಯಲ್ಲಿ ಸುಳ್ಳನ್ನು ಹೇಳಬಹುದು.

CC-0. Jangamwadi Math Collection. Digitized by eGangotri

ಪರಸ್ವೇಷು ಪರಸ್ತ್ರೀಷು ದೇವಬ್ರಾಹ್ಮಣವಸ್ತುಷು ।
ತೃಷ್ಣಾಂ ತ್ಯಜ ಮಹಾಬಾಹೋ ದುರ್ಲಭೇಷ್ವಪಿ ವಸ್ತುಷು ॥ ೨೧ ॥
ಸತ್ಕಥಾಯಾಂ ಸದಾಚಾರೇ ಸದ್ವ್ರತೇ ಚ ಸದಾಗಮೇ ।
ಧರ್ಮಾದಿಸಂಗ್ರಹೇ ನಿತ್ಯಂ ತೃಷ್ಣಾಂ ಕುರು ಮಹಾಮತೇ ॥ ೨೨ ॥
ಸ್ನಾನೇ ಜಪೇ ಚ ಹೋಮೇ ಚ ಸ್ವಾಧ್ಯಾಯೇ ಪಿತೃತರ್ಪಣೇ ।
ಗೋದೇವಾಽತಿಥಿಪೂಜಾಸು ನಿರಾಲಸ್ಯೋ ಭವಾಽನಘ ॥ ೨೩ ॥
ಕ್ರೋಧಂ ದ್ವೇಷಂ ಭಯಂ ಶಾಠ್ಯಂ ಪೈಶುನ್ಯಮಸದಾಗ್ರಹಂ ।
ಕೌಟಿಲ್ಯಂ ದಂಭಮುದ್ವೇಗಂ ಯತ್ನೇನ ಪರಿವರ್ಜಯ ॥ ೨೪ ॥
ಕ್ಷಾತ್ರಧರ್ಮರತೋಽಪಿ ತ್ವಂ ವೃಥಾ ಹಿಂಸಾಂ ಪರಿತ್ಯಜ ।
ಶುಷ್ಕವೈರಂ ವೃಥಾಲಾಪಂ ಪರನಿಂದಾಂ ಚ ವರ್ಜಯ ॥ ೨೫ ॥
ಮೃಗಯಾದ್ಯೂತಪಾನೇಷು ಸ್ತ್ರೀಷು ಸ್ತ್ರೀವಿಜಿತೇಷು ಚ ।
ಅತ್ಯಾಹಾರಮತಿಕ್ರೋಧಮತಿನಿದ್ರಾಮತಿಶ್ರಮಂ ॥ ೨೬ ॥
ಅತ್ಯಾಲಾಪಮತಿಕ್ರೀಡಾಂ ಸರ್ವದಾ ಪರಿವರ್ಜಯ ॥ ೨೭ ॥
ಅತಿವಿದ್ಯಾಮತಿಶ್ರದ್ಧಾಮತಿಪುಣ್ಯಮತಿಸ್ಮೃತಿಂ ।
ಅತ್ಯುತ್ಸಾಹಮತಿಖ್ಯಾತಿಮತಿಧೈರ್ಯಂ ಚ ಸಾಧಯ ॥ ೨೮ ॥

---

೨೧. ಪರರ ಸ್ವತ್ತಿನಲ್ಲಿಯೂ, ಪರಸ್ತ್ರೀಯರಲ್ಲಿಯೂ, ದೇವಬ್ರಾಹ್ಮಣರ ಪದಾರ್ಥಗಳಲ್ಲಿಯೂ, ದುರ್ಲಭ ವಸ್ತುಗಳಲ್ಲಿಯೂ ಆಶೆಪಡಬೇಡ.

೨೨. ಒಳ್ಳೆಯ ಕಥೆ, ಒಳ್ಳೆಯ ನಡತೆ, ಒಳ್ಳೆಯ ವ್ರತ, ಒಳ್ಳೆಯ ಶಾಸ್ತ್ರ, ಧರ್ಮಾದಿಗಳ ಸಂಗ್ರಹ ಇವುಗಳಲ್ಲಿ ನಿತ್ಯವೂ ಆಶೆಪಡು.

೨೩. ಎಲೈ ನಿರ್ದುಷ್ಟನೆ! ಸ್ನಾನ, ಜಪ, ಹೋಮ, ವೇದಾಧ್ಯಯನ, ಪಿತೃತರ್ಪಣ, ಗೋವು, ದೇವತೆ, ಅತಿಥಿಪೂಜೆ ಇವುಗಳಲ್ಲಿ ಆಲಸ್ಯವುಳ್ಳವ ನಾಗಬೇಡ.

೨೪. ಕೋಪ, ದ್ವೇಷ, ಭಯ, ಮೂರ್ಖತನ, ಚಾಡಿಹೇಳುವುದು, ಕೆಟ್ಟಹಠ, ವಕ್ರತೆ, ಜಂಬ, ಉದ್ವೇಗ ಇವುಗಳನ್ನು ಪ್ರಯತ್ನದಿಂದ ಬಿಡು.

೨೫. ನೀನು ಕ್ಷತ್ರಿಯಧರ್ಮದಲ್ಲಿ ಆಸಕ್ತನಾದರೂ ವ್ಯರ್ಥವಾಗಿ ಹಿಂಸೆಯನ್ನು ಬಿಡು. ಪ್ರಯೋಜನಕ್ಕೆ ಬಾರದ ದ್ವೇಷ, ವ್ಯರ್ಥವಾದ ಮಾತು, ಪರನಿಂದೆ ಇವುಗಳನ್ನು ಬಿಟ್ಟುಬಿಡು.

೨೬–೨೭. ಬೇಟೆ, ಜೂಜು, ಕುಡಿತ, ಸ್ತ್ರೀ, ಸ್ತ್ರೀಜಿತರು ಇವುಗಳಲ್ಲಿ ಆಸಕ್ತನಾಗಬೇಡ. ಅತ್ಯಾಹಾರ, ಅತಿ ಕೋಪ, ಅತಿ ನಿದ್ರೆ, ಅತ್ಯಾಯಾಸ, ಅತಿ ಮಾತು, ಅತಿ ಆಟ ಇವುಗಳನ್ನು ಯಾವಾಗಲೂ ಬಿಡು.

೨೮. ಬಹಳ ವಿದ್ಯೆ, ಅತಿಶ್ರದ್ಧೆ, ಅತಿಪುಣ್ಯ, ಅತಿಸ್ಮರಣೆ, ಅತ್ಯುತ್ಸಾಹ, ಅತಿ ಪ್ರಸಿದ್ಧಿ, ಅತಿ ಧೈರ್ಯವನ್ನು ಸಂಪಾದಿಸು.



CC-0. Jangamwadi Math Collection. Digitized by eGangotri

ಸಕಾಮೋ ನಿಜದಾರೇಷು ಸಕ್ರೋಧೋ ನಿಜಶತ್ರುಷು ।
ಸಲೋಭಃ ಪುಣ್ಯನಿಚಯೇ ಸಾಭ್ಯಸೂಯೋ ಹ್ಯಧರ್ಮಿಷು ॥ ೨೯ ॥
ಸದ್ವೇಷೋ ಭವಪಾಖಂಡೇ ಸರಾಗಃ ಸಜ್ಜನೇಷು ಚ ।
ದುರ್ಬೋಧೋ ಭವ ದುರ್ಮಂತ್ರೇ ಬಧಿರಃ ಪಿಶುನೋಕ್ತಿಷು ॥ ೩೦ ॥
ಧೂರ್ತಂ ಚಂಡಂ ಶಠಂ ಕ್ರೂರಂ ಕಿತವಂ ಚಪಲಂ ಖಲಂ ।
ಪತಿತಂ ನಾಸ್ತಿಕಂ ಜಿಹ್ಮಂ ದೂರತಃ ಪರಿವರ್ಜಯ ॥ ೩೧ ॥
ಆತ್ಮ ಪ್ರಶಂಸಾಂ ಮಾಕಾರ್ಷೀಃ ಪರಿಜ್ಞಾತೇಂಗಿತೋ ಭವ ।
ಧನೇ ಸರ್ವಕುಟುಂಬೇ ಚ ನಾಽತ್ಯಾಸಕ್ತಃ ಸದಾ ಭವ ॥ ೩೨ ॥
ಪತ್ನ್ಯಾಃ ಪತಿವ್ರತಾಯಾಶ್ಚ ಜನನ್ಯಾಃ ಶ್ವಶುರಸ್ಯ ಚ ।
ಸತಾಂ ಗುರೋಶ್ಚ ವಚನೇ ವಿಶ್ವಾಸಂ ಕುರು ಸರ್ವದಾ ॥ ೩೩ ॥
ಆತ್ಮರಕ್ಷಾಪರೋ ನಿತ್ಯಮಪ್ರಮತ್ತೋ ದೃಢವ್ರತಃ ।
ವಿಶ್ವಾಸಂ ನೈವ ಕುರ್ವೀಥಾಃ ಸ್ವಭೃತ್ಯೇಷ್ವಪಿ ಕುತ್ರಚಿತ್ ॥ ೩೪ ॥
ವಿಶ್ವಸ್ತಂ ಮಾವಧೀಃ ಕಂಚಿದಪಿ ಚೋರಂ ಮಹಾಮತೇ ।
ಅಪಾಪೇಷು ನ ಶಂಕೇಥಾಃ ಸತ್ಯಾನ್ನ ಚಲಿತೋ ಭವ ॥ ೩೫ ॥

---

೨೯–೩೦. ನಿನ್ನಪತ್ನಿಯರಲ್ಲಿ ಕಾಮವುಳ್ಳವನೂ, ಶತ್ರುಗಳಲ್ಲಿ ಕ್ರೋಧವುಳ್ಳವನೂ, ಪುಣ್ಯಸಮೂಹದಲ್ಲಿ ಆಶೆಯುಳ್ಳವನೂ, ಅಧರ್ಮಿಷ್ಠರಲ್ಲಿ ಅಸೂಯೆಯುಳ್ಳವನೂ, ಪಾಷಂಡಿಗಳಲ್ಲಿ ದ್ವೇಷವುಳ್ಳವನೂ, ಸಜ್ಜನರಲ್ಲಿ ಪ್ರೀತಿಯುಳ್ಳವನೂ, ದುರಾಲೋಚನೆಯಲ್ಲಿ ಅರಿವಿಲ್ಲದವನೂ, ಚಾಡಿಹೇಳುವವರ ಮಾತಿಗೆ ಕಿವುಡನೂ ಆಗಿರು.

೩೧. ಧೂರ್ತ, ಅತಿಕೋಪಿಷ್ಠ, ಮೂರ್ಖ, ಕಠಿನ, ಮೋಸಗಾರ, ಚಪಲಚಿತ್ತ, ದುಷ್ಟ, ಪತಿತ, ನಾಸ್ತಿಕ, ಕುಟಿಲಬುದ್ಧಿಯುಳ್ಳವನು ಇವರನ್ನು ದೂರದಿಂದಲೇ ಬಿಡು.

೩೨. ಆತ್ಮಶ್ಲಾಘನೆಯನ್ನು ಮಾಡಿಕೊಳ್ಳಬೇಡ. ಪರರ ಇಂಗಿತವನ್ನು ತಿಳಿದುಕೊ. ಹಣದಲ್ಲಿಯೂ, ಸಕಲ ಕುಟುಂಬದಲ್ಲಿಯೂ ಯಾವಾಗಲೂ ಅತ್ಯಂತಾಸಕ್ತನಾಗಬೇಡ.

೩೩. ಪತಿವ್ರತೆಯಾದ ಹೆಂಡತಿ, ತಾಯಿ, ಮಾವ (ಹೆಂಡತಿಯ ತಂದೆ), ಸಜ್ಜನರು, ಗುರು ಇವರ ಮಾತಿನಲ್ಲಿ ಯಾವಾಗಲೂ ನಂಬಿಕೆಯನ್ನಿಡು.

೩೪–೩೫. ಯಾವಾಗಲೂ ಆತ್ಮರಕ್ಷಣೆಯಲ್ಲಿ ನಿರತನೂ, ಪ್ರಮಾದವಿಲ್ಲದವನೂ ದೃಢವಾದ ನೇಮವುಳ್ಳವನೂ ಆಗು. ನಿನ್ನ ಸೇವಕರಲ್ಲಿಯೂ ನಂಬಿಕೆಯಿಡಬೇಡ. ನಂಬಿದವನು ಕಳ್ಳನಾದರೂ ಅವನನ್ನು ಕೊಲ್ಲಬೇಡ. ಪಾಪವಿಲ್ಲದವರಲ್ಲಿ ಸಂದೇಹಪಡಬೇಡ. ಸತ್ಯಕ್ಕೆ ತಪ್ಪಬೇಡ.

CC-0. Jangamwadi Math Collection. Digitized by eGangotri

ಅನಾಥಂ ಕೃಪಣಂ ವೃದ್ಧಂ ಸ್ತ್ರಿಯಂ ಬಾಲಂ ನಿರಾಗಸಂ ।
ಪರಿರಕ್ಷ ಧನೈಃ ಪ್ರಾಣೈರ್ಬುದ್ಧ್ಯಾ ಶಕ್ತ್ಯಾ ಬಲೇನ ಚ ॥ ೩೬ ॥
ಅಪಿ ಶತ್ರುಂ ವಧಸ್ಯಾರ್ಹಂ ಮಾ ವಧೀಃ ಶರಣಾಗತಂ ।
ಅಪ್ಯಪಾತ್ರಂ ಸುಪಾತ್ರಂ ವಾ ನೀಚೋಽವಾಽಪಿ ಮಹತ್ತಮಃ ॥ ೩೭ ॥
ಯೋ ವಾ ಕೋ ವಾಽಪಿ ಯಾಚೇತ ತಸ್ಮೈ ದೇಹಿ ಶಿರೋಽಪಿ ಚ ।
ಅಪಿ ಯತ್ನೇನ ಮಹತಾ ಕೀರ್ತಿಮೇವ ಸದಾರ್ಜಯ ॥ ೩೮ ॥
ರಾಜ್ಞಾಂ ಚ ವಿದುಷಾಂ ಚೈವ ಕೀರ್ತಿರೇವ ಹಿ ಭೂಷಣಂ ।
ಸತ್ಕೀರ್ತಿಪ್ರಭವಾ ಲಕ್ಷ್ಮೀಃ ಪುಣ್ಯಂ ಸತ್ಕೀರ್ತಿಸಂಭವಂ ॥ ೩೯ ॥
ಸತ್ಕೀರ್ತ್ಯಾ ರಾಜತೇ ಲೋಕಶ್ಚಂದ್ರಶ್ಚಂದ್ರಿಕಯಾ ಯಥಾ ।
ಗಜಾಶ್ವಹೇಮನಿಚಯಂ ರತ್ನರಾಶಿಂ ನಗೋಪಮಂ ॥ ೪೦ ॥
ಅಕೀರ್ತ್ಯೋಪಹತಂ ಸರ್ವಂ ತೃಣವನ್ಮುಂಚ ಸತ್ವರಂ ।
ಮಾತುಃ ಕೋಪಂ ಪಿತುಃ ಕೋಪಂ ಗುರೋಃ ಕೋಪಂ ಧನವ್ಯಯಂ ॥ ೪೧ ॥
ಪುತ್ರಾಣಾಮಪರಾಧಂ ಚ ಬ್ರಾಹ್ಮಣಾನಾಂ ಕ್ಷಮಸ್ವ ಭೋಃ ।
ಯಥಾ ದ್ವಿಜಪ್ರಸಾದಃ ಸ್ಯಾತ್ತಥಾ ತೇಷಾಂ ಹಿತಂ ಚರ ॥ ೪೨ ॥
ರಾಜಾನಂ ಸಂಕಟೇ ಮಗ್ನಮುದ್ಧರೇಯುರ್ದ್ವಿಜೋತ್ತಮಾಃ ।
ಆಯುರ್ಯಶೋ ಬಲಂ ಸೌಖ್ಯಂ ಧನಂ ಪುಣ್ಯಂ ಪ್ರಜೋನ್ನತಿಃ ॥ ೪೩ ॥

---

೩೬. ದಿಕ್ಕಿಲ್ಲದವರು, ದೀನರು, ವೃದ್ಧರು, ಸ್ತ್ರೀಯರು, ಬಾಲಕರು, ತಪ್ಪು ಮಾಡದವರು ಇವರನ್ನು ಹಣ, ಪ್ರಾಣ, ಬುದ್ಧಿಶಕ್ತಿ, ಬಲ ಇವುಗಳಿಂದ ರಕ್ಷಿಸು.

೩೭–೩೮. ವಧೆಗೆ ಅರ್ಹನಾದರೂ ಮರೆಹೊಕ್ಕ ಶತ್ರುವನ್ನು ಕೊಲ್ಲಬೇಡ. ಯೋಗ್ಯನಾಗಲಿ, ಅಯೋಗ್ಯನಾಗಲಿ, ನೀಚನಾಗಲಿ, ಉತ್ಕೃಷ್ಟನಾಗಲಿ, ಯಾವನೇ ಆಗಲಿ ಬೇಡಿಕೊಂಡರೆ ತಲೆಯನ್ನಾದರೂ ಅವನಿಗೆ ಕೊಡು. ಯಾವಾಗಲೂ ಮಹಾ ಪ್ರಯತ್ನದಿಂದ ಕೀರ್ತಿಯನ್ನು ಗಳಿಸು.

೩೯. ರಾಜರಿಗೂ, ವಿದ್ವಾಂಸರಿಗೂ ಕೀರ್ತಿಯೇ ಒಡವೆಯು. ಸಂಪತ್ತು ಮತ್ತು ಪುಣ್ಯಗಳು ಸತ್ಕೀರ್ತಿಯಿಂದುದಿಸುವುವು.

೪೦–೪೫. ಚಂದ್ರನು ಬೆಳದಿಂಗಳಿಂದ ಲೋಕವನ್ನು ಬೆಳಗುವಂತೆ ಸತ್ಕೀರ್ತಿಯು ಲೋಕವನ್ನು ಬೆಳಗಿಸುವುದು. ಅಪಕೀರ್ತಿಯನ್ನೀಯುವ ಆನೆ, ಕುದುರೆ, ಚಿನ್ನ, ಬೆಟ್ಟದಂತಹ ರತ್ನರಾಶಿ ಇವುಗಳನ್ನು ಕೂಡಲೆ ಹುಲ್ಲಿನಂತೆ ತ್ಯಜಿಸು. ತಾಯಿ, ತಂದೆ, ಗುರುಗಳ ಕೋಪವನ್ನೂ, ಧನವ್ಯಯವನ್ನೂ, ಪುತ್ರರ ತಪ್ಪುಗಳನ್ನೂ, ಬ್ರಾಹ್ಮಣರ ಅಪರಾಧವನ್ನೂ ಸಹಿಸಿಕೊ. ಬ್ರಾಹ್ಮಣರು ಅನುಗ್ರಹಿಸುವಂತೆ ಅವರಿಗೆ ಹಿತವನ್ನಾಚರಿಸು. ಬ್ರಾಹ್ಮಣೋತ್ತಮರು ದುಃಖ

CC-0. Jangamwadi Math Collection. Digitized by eGangotri

ಕರ್ಮಣಾ ಯೇನ ಜಾಯೇತ ತತ್ಸೇವ್ಯಂ ಭವತಾ ಸದಾ ।
ದೇಶಂ ಕಾಲಂ ಚ ಶಕ್ತಿಂ ಚ ಕಾರ್ಯಂ ಚಾಽಕಾರ್ಯಮೇವ ಚ ॥ ೪೪ ॥
ಸಮ್ಯಗ್ವಿಚಾರ್ಯ ಯತ್ನೇನ ಕುರು ಕಾರ್ಯಂ ಚ ಸರ್ವದಾ ।
ನ ಕುರ್ಯಾಃ ಕಸ್ಯಚಿದ್ಬಾಧಾಂ ಪರಬಾಧಾಂ ನಿವಾರಯ ॥ ೪೫ ॥
ಚೋರಾನ್ದುಷ್ಟಾಂಶ್ಚ ಬಾಧೇಥಾಃ ಸುನೀತ್ಯಾ ಶಕ್ತಿಮತ್ತಯಾ ।
ಸ್ನಾನೇ ಜಪೇ ಚ ಹೋಮೇ ಚ ದೈವೇ ಪಿತ್ರ್ಯೇ ಚ ಕರ್ಮಣಿ ॥ ೪೬ ॥
ಅತ್ವರೋ ಭವ ನಿದ್ರಾಯಾಂ ಭೋಜನೇ ಭವ ಸತ್ವರಃ ।
ದಾಕ್ಷಿಣ್ಯಯುಕ್ತಮಶಠಂ ಸತ್ಯಂ ಜನಮನೋಹರಂ ॥ ೪೭ ॥
ಅಲ್ಪಾಽಕ್ಷರಮನಂತಾರ್ಥಂ ವಾಕ್ಯಂ ಬ್ರೂಹಿ ಮಹಾಮತೇ ।
ಅಭೀತೋ ಭವ ಸರ್ವತ್ರ ವಿಪಕ್ಷೇಷು ವಿಪತ್ಸು ಚ ॥ ೪೮ ॥
ಭೀತೋ ಭವ ಬ್ರಹ್ಮಕುಲೇ ನ ಪಾಪೇ ಗುರುಶಾಸನೇ ।
ಜ್ಞಾತಿಬಂಧುಷು ವಿಪ್ರೇಷು ಭಾರ್ಯಾಸು ತನಯೇಷು ಚ ॥ ೪೯ ॥
ಸಮಭಾವೇನ ವರ್ತೇಥಾಸ್ತಥಾ ಭೋಜನಪಂಕ್ತಿಷು ।
ಸತಾಂ ಹಿತೋಪದೇಶೇಷು ತಥಾ ಪುಣ್ಯಕಥಾಸು ಚ ॥ ೫೦ ॥
ವಿದ್ಯಾಗೋಷ್ಠೀಷು ಧರ್ಮ್ಯಾಸು ಕ್ವಚಿನ್ಮಾಭೂಃ ಪರಾಙ್ಮುಖಃ ।
ಶುಚೌ ಪುಣ್ಯಜಲಸ್ಯಾಂತೇ ಪ್ರಖ್ಯಾತೇ ಬ್ರಹ್ಮಸಂಕುಲೇ ॥ ೫೧ ॥

---

ದಲ್ಲಿ ಮುಳುಗಿದ ರಾಜನನ್ನು ಉದ್ಧಾರಮಾಡುವರು. ಆಯುಸ್ಸು, ಕೀರ್ತಿ, ಬಲ, ಸೌಖ್ಯ, ಧನ, ಪುಣ್ಯ, ಪ್ರಜೆಗಳ ಏಳಿಗೆ ಇವುಗಳನ್ನು ಹೆಚ್ಚಿಸುವ ಕಾರ್ಯವನ್ನು ಯಾವಾಗಲೂ ಮಾಡು. ದೇಶ, ಕಾಲ, ಶಕ್ತಿ, ಕಾರ್ಯ, ಅಕಾರ್ಯ ಇವುಗಳನ್ನು ಪ್ರಯತ್ನದಿಂದ ಚೆನ್ನಾಗಿ ವಿಚಾರಮಾಡಿ ಮಾಡು. ಯಾರನ್ನೂ ಪೀಡಿಸಬೇಡ. ಪರರ ಪೀಡೆಯನ್ನು ನಿವಾರಿಸು.

೪೬-೫೦. ಕಳ್ಳರನ್ನೂ, ದುಷ್ಟರನ್ನೂ, ಶಕ್ತಿಯನ್ನೂ ನೀತಿಯನ್ನೂ ಅನುಸರಿಸಿ ಪೀಡಿಸು. ಸ್ನಾನ, ಜಪ, ಹೋಮ, ದೇವಪಿತೃಕರ್ಮಗಳು, ಇವುಗಳಲ್ಲಿ ತ್ವರೆಮಾಡಬೇಡ. ನಿದ್ರೆ ಊಟವನ್ನು ಬೇಗನೆ ಮಾಡು. ದಾಕ್ಷಿಣ್ಯವುಳ್ಳದೂ, ಮೂರ್ಖತನವಿಲ್ಲದುದೂ, ಸತ್ಯವಾದುದೂ, ಜನರಿಗೆ ಮನೋಹರವಾದುದೂ, ಸ್ವಲ್ಪ ಶಬ್ದವುಳ್ಳದೂ, ಹೆಚ್ಚು ಅರ್ಥವುಳ್ಳದೂ ಆಗಿರುವ ಮಾತನ್ನಾಡು. ಸಕಲ ಶತ್ರುಗಳಿಂದಲೂ, ಆಪತ್ತುಗಳಿಂದಲೂ ಹೆದರಬೇಡ. ಬ್ರಾಹ್ಮಣರಿಂದ ಭೀತನಾಗು. ಪಾಪಮಾಡಿದವನಿಗೆ ಶಿಕ್ಷೆಯನ್ನು ವಿಧಿಸುವುದರಲ್ಲಿ ಹೆದರಬೇಡ. ಬಂಧುಗಳಲ್ಲಿಯೂ, ಬ್ರಾಹ್ಮಣರಲ್ಲಿಯೂ, ಪತ್ನಿಯರಲ್ಲಿಯೂ, ಮಕ್ಕಳಲ್ಲಿಯೂ, ಊಟದ ಪಂಕ್ತಿಗಳಲ್ಲಿಯೂ ಸಮವಾಗಿರು. ಸಜ್ಜನರ ಹಿತೋಪದೇಶಗಳಲ್ಲಿಯೂ, ಪುಣ್ಯಕಥೆಗಳಲ್ಲಿಯೂ, ಧರ್ಮದಿಂದ

CC-0. Jangamwadi Math Collection. Digitized by eGangotri

ಮಹಾದೇಶೇ ಶಿವಮಯೇ ವಸ್ತವ್ಯಂ ಭವತಾ ಸದಾ ।
ಕುಲಟಾ ಗಣಿಕಾ ಯತ್ರ ಯತ್ರ ತಿಷ್ಠತಿ ಕಾಮುಕಃ ॥ ೩೨ ॥
ದುರ್ದೇಶೇ ನೀಚಸಂಬಾಧೇ ಕದಾಚಿದಪಿ ಮಾ ವಸ ।
ಏಕಮೇವಾಶ್ರಿತೋಽಪಿ ತ್ವಂ ಶಿವಂ ತ್ರಿಭುವನೇಶ್ವರಂ ॥ ೩೩ ॥
ಸರ್ವಾನ್ದೇವಾನುಪಾಸೀಥಾಸ್ತದ್ದಿನಾನಿ ಚ ಮಾನಯನ್ ।
ಸದಾ ಶುಚಿಃ ಸದಾ ದಕ್ಷಃ ಸದಾ ಶಾಂತಃ ಸದಾ ಸ್ಥಿರಃ ॥ ೩೪ ॥
ಸದಾ ವಿಜಿತಷಡ್ವರ್ಗಃ ಸದೈಕಾಂತೋ ಭವಾಽನಘ ।
ವಿಪ್ರಾನ್ವೇದವಿದಃ ಶಾಂತಾನ್ಯತೀಂಶ್ಚ ನಿಯತೋಜ್ವಲಾನ್ ॥ ೩೫ ॥
ಪುಣ್ಯವೃಕ್ಷಾನ್ಪುಣ್ಯನದೀಃ ಪುಣ್ಯತೀರ್ಥಂ ಮಹತ್ಸರಃ ।
ಧೇನುಂ ಚ ವೃಷಭಂ ರತ್ನಂ ಯುವತೀಂ ಚ ಪತಿವ್ರತಾಂ ॥ ೩೬ ॥
ಆತ್ಮನೋ ಗೃಹದೇವಾಂಶ್ಚ ಸಹಸೈವ ನಮಸ್ಕುರು ।
ಉತ್ಥಾಯ ಸಮಯೇ ಬ್ರಾಹ್ಮೇ ಸ್ವಾಚಮ್ಯ ವಿಮಲಾಶಯಃ ॥ ೩೭ ॥
ನಮಸ್ಕೃತ್ಯಾತ್ಮಗುರವೇ ಧ್ಯಾತ್ವಾ ದೇವಮುಮಾಪತಿಂ ।
ನಾರಾಯಣಂ ಚ ಲಕ್ಷ್ಮೀಶಂ ಬ್ರಹ್ಮಾಣಂ ಚ ವಿನಾಯಕಂ ॥ ೩೮ ॥
ಸ್ಕಂದಂ ಕಾತ್ಯಾಯನೀಂ ದೇವೀಂ ಮಹಾಲಕ್ಷ್ಮೀಂ ಸರಸ್ವತೀಂ ।
ಇಂದ್ರಾದೀನಥ ಲೋಕೇಶಾನ್ಪುಣ್ಯಶ್ಲೋಕಾನ್ಋಷೀನಪಿ ॥ ೩೯ ॥

---

ಕೂಡಿದ ವಿದ್ಯಾಸಭೆಯಲ್ಲಿಯೂ ಅನಭಿಮುಖನಾಗಬೇಡ. ನೀನು ಯಾವಾಗಲೂ ಶುಚಿಯೂ, ಪ್ರಸಿದ್ಧವೂ, ಬ್ರಾಹ್ಮಣರಿರುವುದೂ, ಆದ ಪವಿತ್ರಜಲವುಳ್ಳ ಸರೋವರದ ದಡದಲ್ಲಿ, ಶಿವಭಕ್ತರಿರುವ ಪ್ರದೇಶದಲ್ಲಿ ವಾಸವಾಗಿರು. ಜಾರಿಣಿಯೂ, ಸೂಳೆಯೂ, ಕಾಮುಕನೂ ಇರುವ ನೀಚ ದೇಶದಲ್ಲಿ ವಾಸಮಾಡಬೇಡ. ನೀನು ತ್ರಿಲೋಕೇಶ್ವರನಾದ ಶಿವನನ್ನು ಆಶ್ರಯಿಸಿದರೂ ಸಕಲ ದೇವತೆಗಳನ್ನೂ ಅವರ ಅವತಾರ ದಿವಸಗಳನ್ನೂ ಸನ್ಮಾನಿಸುತ್ತ ಉಪಾಸನೆಮಾಡು. ಯಾವಾಗಲೂ ಶುಚಿಯೂ, ಕುಶಲನೂ, ಶಾಂತನೂ, ಸ್ಥಿರಮನಸ್ಸುಳ್ಳವನೂ, ಅರಿಷಡ್ವರ್ಗಗಳನ್ನು ಜಯಿಸಿದವನೂ ಆಗಿರು. ವೇದಾಧ್ಯಯನಮಾಡಿದ ಶಾಂತರಾದ ವಿಪ್ರರನ್ನೂ, ನಿಯಮದಿಂದ ಪ್ರಕಾಶಿಸುವ ಯತಿಗಳನ್ನೂ, ಪವಿತ್ರ ವೃಕ್ಷಗಳನ್ನೂ, ಪುಣ್ಯ ನದಿಗಳನ್ನೂ, ಪುಣ್ಯ ಜಲವುಳ್ಳ ಮಹಾ ಸರೋವರವನ್ನೂ, ಆಕಳನ್ನೂ, ಎತ್ತನ್ನೂ, ರತ್ನವನ್ನೂ, ಪತಿವ್ರತೆಯಾದ ಯುವತಿಯನ್ನೂ, ನಿನ್ನ ಮನೆಯ ದೇವರನ್ನೂ ನೋಡಿದ ಕೂಡಲೆ ನಮಸ್ಕರಿಸು. ಬ್ರಾಹ್ಮ ಮುಹೂರ್ತದಲ್ಲಿ ಎದ್ದು ಆಚಮನಮಾಡಿ ಶುದ್ಧವಾದ ಭಾವನೆಯುಳ್ಳವನಾಗಿ ನಿನ್ನ ಗುರುವಿಗೆ ವಂದಿಸಿ ಶಂಕರ, ನಾರಾಯಣ, ಬ್ರಹ್ಮ, ಗಣೇಶ, ಷಣ್ಮುಖ,

CC-0. Jangamwadi Math Collection. Digitized by eGangotri

ಚಿಂತಯಿತ್ವಾಽಥ ಮಾರ್ತಂಡಮುದ್ಯಂತಂ ಪ್ರಣಮೇತ್ಸದಾ ।
ಗಂಧಂ ಪುಷ್ಪಂ ಚ ತಾಂಬೂಲಂ ಶಾಕಂ ಪಕ್ವಫಲಾದಿಕಂ ।
ಶಿವಾಯ ದತ್ತ್ವೋಪಭುಂಕ್ಷ್ವ ಭಕ್ಷ್ಯಂ ಭೋಜ್ಯಂ ಪ್ರಿಯಂ ನವಂ ॥ ೬೦ ॥
ಯದ್ದತ್ತಂ ಯತ್ಕೃತಂ ಜಪ್ತಂ ಯತ್ಸ್ನಾತಂ ಯದ್ಧುತಂ ಸ್ಮೃತಂ ।
ಯಚ್ಚ ತಪ್ತಂ ತಪಃ ಸರ್ವಂ ತಚ್ಛಿವಾಯ ನಿವೇದಯ ॥ ೬೧ ॥
ಭುಂಜಾನಶ್ಚ ಪಠನ್ವಾಽಪಿ ಶಯಾನೋ ವಿಹರನ್ನಪಿ ।
ಪಶ್ಯಂಛೃಣ್ವನ್ವದನ್ಗೃಹ್ಣಂಛಿವಮೇವಾಽನುಚಿಂತಯ ॥ ೬೨ ॥
ರುದ್ರಾಕ್ಷಕಂಕಣಲಸತ್ಕರದಂಡಯುಗ್ಮೋ
ಮಾಲಾಂತರಾಲಧೃತಭಸ್ಮಸಿತತ್ರಿಪುಂಡ್ರಃ ।
ಪಂಚಾಕ್ಷರಂ ಪರಿಪಠನ್ವರಮಂತ್ರರಾಜಂ
ಧ್ಯಾಯನ್ಸದಾ ಪಶುಪತೇಶ್ಚರಣಂ ರಮೇಥಾಃ ॥ ೬೩ ॥
ಇತಿ ಸಂಕ್ಷೇಪತೋ ವತ್ಸ ಕಥಿತೋ ಧರ್ಮಸಂಗ್ರಹಃ ।
ಅನ್ಯೇಷು ಚ ಪುರಾಣೇಷು ವಿಸ್ತರೇಣ ಪ್ರಕೀರ್ತಿತಃ ॥ ೬೪ ॥

---

ಗೌರೀ, ಲಕ್ಷ್ಮೀ, ಸರಸ್ವತೀ, ಇಂದ್ರಾದಿ ದಿಕ್ಪಾಲಕರು, ಪವಿತ್ರ ಕೀರ್ತಿಯುಳ್ಳ ಮುನಿಗಳು ಇವರನ್ನು ಧ್ಯಾನಿಸಿ ಉದಯಿಸುತ್ತಿರುವ ಸೂರ್ಯದೇವನನ್ನು ನಮಸ್ಕರಿಸಬೇಕು. ಗಂಧ, ಪುಷ್ಪ, ತಾಂಬೂಲ, ತರಕಾರಿ, ಹಣ್ಣುಗಳು, ಪ್ರಿಯವಾಗಿಯೂ ಹೊಸದಾಗಿಯೂ ಇರುವ ಭಕ್ಷ್ಯಭೋಜ್ಯಗಳು ಇವುಗಳನ್ನು ಶಿವನಿಗೆ ಸಮರ್ಪಿಸಿ ಭುಂಜಿಸು.

೬೧. ನೀನು ಮಾಡಿದ ದಾನ, ಕೆಲಸ, ಜಪ, ಸ್ನಾನ, ಹೋಮ, ಸ್ಮರಣೆ, ತಪಸ್ಸು, ಇವುಗಳನ್ನೆಲ್ಲ ಶಿವನಿಗೆ ಸಮರ್ಪಿಸು.

೬೨. ಊಟ ಮಾಡುವಾಗಲೂ, ಸ್ತೋತ್ರವನ್ನು ಪಠಿಸುವಾಗಲೂ, ಮಲಗುವಾಗಲೂ, ವಿಹರಿಸುವಾಗಲೂ, ನೋಡುವಾಗಲೂ, ಕೇಳುವಾಗಲೂ, ಮಾತನಾಡುವಾಗಲೂ, ತೆಗೆದುಕೊಳ್ಳುವಾಗಲೂ ಶಿವನನ್ನೇ ಧ್ಯಾನಿಸು.

೬೩. ನೀನು ಹಸ್ತಗಳಲ್ಲಿ ರುದ್ರಾಕ್ಷಮಾಲೆಯ ಬಳೆಗಳನ್ನು ಧರಿಸಿ, ಕುತ್ತಿಗೆಯಲ್ಲಿ ಹಾಕಿಕೊಂಡಿರುವ ರುದ್ರಾಕ್ಷಮಾಲೆಯ ಮಧ್ಯದಲ್ಲಿ ಭಸ್ಮತ್ರಿಪುಂಡ್ರವುಳ್ಳವನಾಗಿ, ಮಂತ್ರಶ್ರೇಷ್ಠವಾದ ಶಿವಪಂಚಾಕ್ಷರಿಯನ್ನು ಜಪಿಸುತ್ತ ಶಿವನ ಚರಣವನ್ನು ಧ್ಯಾನಿಸುತ್ತ ವಿನೋದಪಡು.

೬೪. ಮಗು ! ನಿನಗೆ ಹೀಗೆ ಸಂಕ್ಷೇಪವಾಗಿ ಧರ್ಮವನ್ನು ಹೇಳಿರುವೆನು. ಬೇರೆ ಪುರಾಣಗಳಲ್ಲಿ ಈ ಧರ್ಮವು ವಿಸ್ತಾರವಾಗಿ ಹೇಳಲ್ಪಟ್ಟಿರುವುದು.

CC-0. Jangamwadi Math Collection. Digitized by eGangotri

ಅಥಾಪರಂ ಸರ್ವಪುರಾಣಗುಹ್ಯಂ
ನಿಃಶೇಷಪಾಪೌಘಹರಂ ಪವಿತ್ರಂ ।
ಜಯಪ್ರದಂ ಸರ್ವವಿಪದ್ವಿಮೋಚನಂ
ವಕ್ಷ್ಯಾಮಿ ಶೈವಂ ಕವಚಂ ಹಿತಾಯ ತೇ ॥ ೭೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಭದ್ರಾಯುಂ ಪ್ರತಿ ಋಷಭೋಪದೇಶವರ್ಣನಂ" ನಾಮೈಕಾದಶೋಽಧ್ಯಾಯಃ

---

೭೫. ಅನಂತರ ನಿನ್ನ ಹಿತಕ್ಕಾಗಿ ಸಕಲ ಪುರಾಣಗಳ ರಹಸ್ಯವೂ, ಸಮಸ್ತ ಪಾಪಗಳನ್ನು ಪರಿಹರಿಸುವುದೂ, ಪವಿತ್ರವೂ, ಜಯವನ್ನು ಕೊಡುವುದೂ, ಸಕಲ ವಿಪತ್ತುಗಳನ್ನು ಹೋಗಲಾಡಿಸುವುದೂ ಆಗಿರುವ ಶಿವಕವಚವನ್ನು ಹೇಳುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ
ಖಂಡದಲ್ಲಿ "ಭದ್ರಾಯುವಿಗೆ ಋಷಭೋಪದೇಶವರ್ಣನ"ವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ದ್ವಾದಶೋಽಧ್ಯಾಯಃ

### ಭದ್ರಾಯ್ವಾಖ್ಯಾನೇ ಶಿವಕವಚಕಥನಂ

ಋಷಭ ಉವಾಚ :—

ನಮಸ್ಕೃತ್ಯ ಮಹಾದೇವಂ ವಿಶ್ವವ್ಯಾಪಿನಮೀಶ್ವರಂ ।
ವಕ್ಷ್ಯೇ ಶಿವಮಯಂ ವರ್ಮ ಸರ್ವರಕ್ಷಾಕರಂ ನೃಣಾಂ ॥ ೧ ॥
ಶುಚೌ ದೇಶೇ ಸಮಾಸೀನೋ ಯಥಾವತ್ಕಲ್ಪಿತಾಸನಃ ।
ಜಿತೇಂದ್ರಿಯೋ ಜಿತಪ್ರಾಣಶ್ಚಿಂತಯೇಚ್ಛಿವಮವ್ಯಯಂ ॥ ೨ ॥
ಹೃತ್ಪುಂಡರೀಕಾಂತರಸನ್ನಿವಿಷ್ಟಂ
ಸ್ವತೇಜಸಾ ವ್ಯಾಪ್ತನಭೋಽವಕಾಶಂ ।
ಅತೀಂದ್ರಿಯಂ ಸೂಕ್ಷ್ಮಮನಂತಮಾದ್ಯಂ
ಧ್ಯಾಯೇತ್ಪರಾನಂದಮಯಂ ಮಹೇಶಂ ॥ ೩ ॥
ಧ್ಯಾನಾವಧೂತಾಽಖಿಲಕರ್ಮಬಂಧ
ಶ್ಚಿರಂ ಚಿದಾನಂದನಿಮಗ್ನಚೇತಾಃ ।
ಷಡಕ್ಷರನ್ಯಾಸಸಮಾಹಿತಾತ್ಮಾ
ಶೈವೇನ ಕುರ್ಯಾತ್ಕವಚೇನ ರಕ್ಷಾಂ ॥ ೪ ॥

---

### ಕನ್ನಡದ ಅನುವಾದ

#### ಭದ್ರಾಯ್ವಾಖ್ಯಾನದಲ್ಲಿ ಶಿವಕವಚಕಥನ

೧. ಋಷಭನು ಹೇಳುತ್ತಾನೆ:—ಸರ್ವವ್ಯಾಪಿಯಾದ ಮಹಾದೇವನನ್ನು ನಮಸ್ಕರಿಸಿ ಮನುಷ್ಯರನ್ನು ಸಕಲ ಆಪತ್ತುಗಳಿಂದಲೂ ರಕ್ಷಿಸುವ ಶಿವಕವಚವನ್ನು ಹೇಳುವೆನು.

೨. ಶುಚಿಯಾದ ಸ್ಥಳದಲ್ಲಿ ವಿಧಿಯಂತೆ ಆಸನದಲ್ಲಿ ಕುಳಿತು ಜಿತೇಂದ್ರಿಯನಾಗಿ ಪ್ರಾಣಾಯಾಮಮಾಡಿ ಶಿವನನ್ನು ಧ್ಯಾನಿಸಬೇಕು.

೩. ಹೃದಯಕಮಲದಲ್ಲಿ ನೆಲಸಿರುವವನೂ ತನ್ನ ತೇಜಸ್ಸಿನಿಂದ ಆಕಾಶವನ್ನೆಲ್ಲ ವ್ಯಾಪಿಸಿದವನೂ, ಇಂದ್ರಿಯಗಳಿಗೆ ಗೋಚರನೂ, ಸೂಕ್ಷ್ಮನೂ, ನಾಶವಿಲ್ಲದವನೂ, ಅನಾದಿಯೂ, ನಿತ್ಯಾನಂದಸ್ವರೂಪನೂ ಆದ ಮಹೇಶ್ವರನನ್ನು ಧ್ಯಾನಿಸಬೇಕು.

೪. ಶಿವನ ಧ್ಯಾನದಿಂದ ನೀಗಿದ ಸಮಸ್ತ ಕರ್ಮಬಂಧನವುಳ್ಳವನೂ, ಚಿನ್ಮಯನೂ, ಆನಂದಸ್ವರೂಪನೂ ಆದ ಶಿವನಲ್ಲಿ ಆಸಕ್ತವಾದ ಮನಸ್ಸುಳ್ಳವನೂ, ಷಡಕ್ಷರನ್ಯಾಸಗಳಿಂದ ಚಿತ್ತೈಕಾಗ್ರ್ಯವುಳ್ಳವನೂ ಆಗಿ ಶಿವಕವಚದಿಂದ ರಕ್ಷೆಯನ್ನು ಮಾಡಬೇಕು.

CC-0. Jangamwadi Math Collection. Digitized by eGangotri

ಮಾಂ ಪಾತು ದೇವೋಽಖಿಲದೇವತಾತ್ಮಾ
ಸಂಸಾರಕೂಪೇ ಪತಿತಂ ಗಭೀರೇ ।
ತನ್ನಾಮ ದಿವ್ಯಂ ವರಮಂತ್ರಮೂಲಂ
ಧುನೋತು ಮೇ ಸರ್ವಮಘಂ ಹೃದಿಸ್ಥಂ ॥ ೫ ॥
ಸರ್ವತ್ರ ಮಾಂ ರಕ್ಷತು ವಿಶ್ವಮೂರ್ತಿ
ರ್ಜ್ಯೋತಿರ್ಮಯಾನಂದಘನಶ್ಚಿದಾತ್ಮಾ ।
ಅಣೋರಣೀಯಾನುರುಶಕ್ತಿರೇಕಃ
ಸ ಈಶ್ವರಃ ಪಾತು ಭಯಾದಶೇಷಾತ್ ॥ ೬ ॥
ಯೋ ಭೂಸ್ವರೂಪೇಣ ಬಿಭರ್ತಿ ವಿಶ್ವಂ
ಪಾಯಾತ್ಸ ಭೂಮೇರ್ಗಿರಿಶೋಽಷ್ಟಮೂರ್ತಿಃ ।
ಯೋಽಪಾಂ ಸ್ವರೂಪೇಣ ನೃಣಾಂ ಕರೋತಿ
ಸಂಜೀವನಂ ಸೋಽವತು ಮಾಂ ಜಲೇಭ್ಯಃ ॥ ೭ ॥
ಕಲ್ಪಾವಸಾನೇ ಭುವನಾನಿ ದಗ್ಧ್ವಾ
ಸರ್ವಾಣಿ ಯೋ ನೃತ್ಯತಿ ಭೂರಿಲೀಲಃ ।
ಸ ಕಾಲರುದ್ರೋಽವತು ಮಾಂ ದವಾಗ್ನೇ
ರ್ವಾತ್ಯಾದಿಭೀತೇರಖಿಲಾಚ್ಚ ತಾಪಾತ್ ॥ ೮ ॥

---

೫. ಅಖಿಲದೇವತಾಸ್ವರೂಪನಾದ ಆ ಪರಶಿವನು ಆಳವಾದ ಸಂಸಾರವೆಂಬ ಬಾವಿಯಲ್ಲಿ ಬಿದ್ದಿರುವ ನನ್ನನ್ನು ಪೊರೆಯಲಿ. ಉತ್ತಮಮಂತ್ರಗಳಿಗೆ ಮೂಲವಾದ ಅವನ ದಿವ್ಯನಾಮವು ನನ್ನ ಮನಸ್ಸಿನಲ್ಲಿರುವ ಸಕಲಪಾಪವನ್ನೂ ನೀಗಿಸಲಿ.

೬. ತೇಜೋರೂಪಿಯೂ, ಆನಂದಸಾಂದ್ರನೂ, ಚಿತ್ಸ್ವರೂಪನೂ ಆದ ಆ ಶಿವನು ಎಲ್ಲ ವಿಷಯದಲ್ಲಿಯೂ ನನ್ನನ್ನು ಕಾಪಾಡಲಿ. ಸೂಕ್ಷ್ಮವಸ್ತುವಿಗಿಂತಲೂ ಅತಿಸೂಕ್ಷ್ಮನಾದವನೂ, ಅತಿಶಯ ಶಕ್ತಿಯುಳ್ಳವನೂ ಆದ ಆ ಈಶ್ವರನು ಸಕಲಭಯದಿಂದಲೂ ನನ್ನನ್ನು ಕಾಪಾಡಲಿ.

೭. ಭೂಮಿಯ ರೂಪದಿಂದ ಪ್ರಪಂಚವನ್ನು ಪೊರೆಯುವ ಎಂಟು ದೇಹವುಳ್ಳ ಶಿವನು ನನ್ನನ್ನು ಭೂಮಿಯಲ್ಲಿ ಕಾಪಾಡಲಿ, ನೀರಿನರೂಪದಿಂದ ನರರನ್ನು ಬದುಕಿಸುವ ಆ ಶಿವನು ನನ್ನನ್ನು ಜಲದಲ್ಲಿ ಕಾಪಾಡಲಿ.

೮. ಪ್ರಳಯಕಾಲದಲ್ಲಿ ಸಕಲಭುವನಗಳನ್ನೂ ಸುಟ್ಟು ವಿಲಾಸದಿಂದ ನರ್ತನಮಾಡುವ ಆ ಕಾಲರುದ್ರನು ನನ್ನನ್ನು ಕಾಳ್ಗಿಚ್ಚಿನಿಂದಲೂ, ಬಿರುಗಾಳಿ ಮೊದಲಾದವುಗಳ ಭೀತಿಯಿಂದಲೂ, ಸಮಸ್ತತಾಪದಿಂದಲೂ ಕಾಪಾಡಲಿ.

CC-0. Jangamwadi Math Collection. Digitized by eGangotri

ಪ್ರದೀಪ್ತವಿದ್ಯುತ್ಕನಕಾವಭಾಸೋ
ವಿದ್ಯಾವರಾಭೀತಿಕುಠಾರಪಾಣಿಃ ।
ಚತುರ್ಮುಖಸ್ತತ್ಪುರುಷಸ್ತ್ರಿನೇತ್ರಃ
ಪ್ರಾಚ್ಯಾಂ ಸ್ಥಿತೋ ರಕ್ಷತು ಮಾಮಜಸ್ರಂ ॥ ೯ ॥
ಕುಠಾರವೇದಾಂಕುಶಪಾಶಶೂಲ
ಕಪಾಲಢಕ್ಕಾಕ್ಷಗುಣಾನ್ದಧಾನಃ ।
ಚತುರ್ಮುಖೋ ನೀಲರುಚಿಸ್ತ್ರಿಣೇತ್ರಃ
ಪಾಯಾದಘೋರೋ ದಿಶಿ ದಕ್ಷಿಣಸ್ಯಾಂ ॥ ೧೦ ॥
ಕುಂದೇಂದುಶಂಖಸ್ಫಟಿಕಾವಭಾಸೋ
ವೇದಾಕ್ಷಮಾಲಾವರದಾಭಯಾಂಕಃ ।
ತ್ರ್ಯಕ್ಷಶ್ಚತುರ್ವಕ್ತ್ರ ಉರುಪ್ರಭಾವಃ
ಸದ್ಯೋಽಧಿಜಾತೋಽವತು ಮಾಂ ಪ್ರತೀಚ್ಯಾಂ ॥ ೧೧ ॥
ವರಾಕ್ಷಮಾಲಾಭಯಟಂಕಹಸ್ತಃ
ಸರೋಜಕಿಂಜಲ್ಕಸಮಾನವರ್ಣಃ ।
ತ್ರಿಲೋಚನಶ್ಚಾರುಚತುರ್ಮುಖೋ ಮಾಂ
ಪಾಯಾದುದೀಚ್ಯಾಂ ದಿಶಿ ವಾಮದೇವಃ ॥ ೧೨ ॥
ವೇದಾಭಯೇಷ್ಟಾಂಕುಶಟಂಕಪಾಶ
ಕಪಾಲಢಕ್ಕಾಕ್ಷಕ ಶೂಲಪಾಣಿಃ ।

---

೯. ಪ್ರಕಾಶಮಾನವಾದ ಮಿಂಚು, ಚಿನ್ನಗಳಂತೆ ಕಾಂತಿಯುಳ್ಳವನೂ, ವಿದ್ಯಾ, ವರ, ಅಭಯ, ಕೊಡಲಿ ಇವುಗಳನ್ನು ಹಿಡಿದಿರುವವನೂ, ನಾಲ್ಕುಮುಖವುಳ್ಳವನೂ ಆದ ಮುಕ್ಕಣ್ಣನು ಪೂರ್ವದಿಕ್ಕಿನಲ್ಲಿದ್ದು ನನ್ನನ್ನು ಯಾವಾಗಲೂ ರಕ್ಷಿಸಲಿ.

೧೦. ಕೊಡಲಿ, ವೇದ, ಅಂಕುಶ, ಪಾಶ, ತ್ರಿಶೂಲ, ಬ್ರಹ್ಮಕಪಾಲ, ಢಕ್ಕೆ, ಜಪಮಾಲೆ ಇವುಗಳನ್ನು ಧರಿಸಿದವನೂ, ನೀಲವರ್ಣವುಳ್ಳವನೂ, ಸೌಮ್ಯನೂ ಆಗಿರುವ ಮುಕ್ಕಣ್ಣನು ದಕ್ಷಿಣದಿಕ್ಕಿನಲ್ಲಿದ್ದು ನನ್ನನ್ನು ಕಾಪಾಡಲಿ.

೧೧. ಮಲ್ಲಿಗೆಹೂವು, ಶಂಖ, ಸ್ಫಟಿಕ ಇವುಗಳಂತೆ ಕಾಂತಿಯುಳ್ಳವನೂ, ವೇದ, ಜಪಸರ, ವರ, ಅಭಯ ಇವುಗಳನ್ನು ಧರಿಸಿದವನೂ, ಅತಿಶಯ ಪ್ರಭಾವವುಳ್ಳವನೂ ಆದ ಸದ್ಯೋಜಾತನು ಪಶ್ಚಿಮದಿಕ್ಕಿನಲ್ಲಿದ್ದು ನನ್ನನ್ನು ಕಾಪಾಡಲಿ.

೧೨. ವರ, ಅಕ್ಷಮಾಲೆ, ಅಭಯ, ಟಂಕ (ಉಳಿ) ಗಳನ್ನು ಹಿಡಿದವನೂ, ಕಮಲಕೇಸರದಂತೆ ಬಣ್ಣವುಳ್ಳವನೂ ಆದ ವಾಮದೇವನು ಉತ್ತರದಿಕ್ಕಿನಲ್ಲಿ ಕಾಪಾಡಲಿ.

೧೩. ವೇದ, ಅಭಯ, ವರ, ಅಂಕುಶ, ಟಂಕ, ಪಾಶ, ಕಪಾಲ,

CC-0. Jangamwadi Math Collection. Digitized by eGangotri

ಸಿತದ್ಯುತಿಃ ಪಂಚಮುಖೋಽವತಾನ್ಮಾ
ಮೀಶಾನ ಊರ್ಧ್ವಂ ಪರಮಪ್ರಕಾಶಃ ॥ ೧೩ ॥
ಮೂರ್ಧಾನಮವ್ಯಾನ್ಮಮ ಚಂದ್ರಮೌಲಿ
ರ್ಭಾಲಂ ಮಮಾವ್ಯಾದಥ ಭಾಲನೇತ್ರಃ ।
ನೇತ್ರೇ ಮಮಾವ್ಯಾದ್ಭಗನೇತ್ರಹಾರೀ
ನಾಸಾಂ ಸದಾ ರಕ್ಷತು ವಿಶ್ವನಾಥಃ ॥ ೧೪ ॥
ಪಾಯಾಚ್ಛ್ರುತೀ ಮೇ ಶ್ರುತಿಗೀತಕೀರ್ತಿಃ
ಕಪೋಲಮವ್ಯಾತ್ಸತತಂ ಕಪಾಲೀ ।
ವಕ್ತ್ರಂ ಸದಾ ರಕ್ಷತು ಪಂಚವಕ್ತ್ರೋ
ಜಿಹ್ವಾಂ ಸದಾ ರಕ್ಷತು ವೇದಜಿಹ್ವಃ ॥ ೧೫ ॥
ಕಂಠಂ ಗಿರೀಶೋಽವತು ನೀಲಕಂಠಃ
ಪಾಣಿದ್ವಯಂ ಪಾತು ಪಿನಾಕಪಾಣಿಃ ।
ದೋರ್ಮೂಲಮವ್ಯಾನ್ಮಮ ಧರ್ಮಬಾಹು
ರ್ವಕ್ಷಸ್ಥಲಂ ದಕ್ಷಮಖಾಂತಕೋಽವ್ಯಾತ್ ॥ ೧೬ ॥
ಮಮೋದರಂ ಪಾತು ಗಿರೀಂದ್ರಧನ್ವಾ
ಮಧ್ಯಂ ಮಮಾವ್ಯಾನ್ಮದನಾಂತಕಾರೀ ।
ಹೇರಂಬತಾತೋ ಮಮ ಪಾತು ನಾಭಿಂ ।
ಪಾಯಾತ್ಕಟೀ ಧೂರ್ಜಟಿರೀಶ್ವರೋ ಮೇ ॥ ೧೭ ॥

---

ಢಕ್ಕೆ, ಜಪಮಾಲೆ, ತ್ರಿಶೂಲಗಳನ್ನು ಕೈಯಲ್ಲುಳ್ಳವನೂ, ಶ್ವೇತವರ್ಣನೂ, ಐದು ಮುಖವುಳ್ಳವನೂ, ಬಹುಪ್ರಕಾಶವುಳ್ಳವನೂ ಆದ ಈಶ್ವರನು ಮೇಲ್ಗಡೆಯಲ್ಲಿ ನನ್ನನ್ನು ಕಾಪಾಡಲಿ.

೧೪. ಚಂದ್ರಮೌಳೀಶ್ವರನು ನನ್ನ ತಲೆಯನ್ನೂ, ಹಣೆಗಣ್ಣನು ಹಣೆಯನ್ನೂ, ಸೂರ್ಯನೆಂಬ ಕಣ್ಣಿನಿಂದ ಮನೋಹರನಾದವನು ಕಣ್ಣುಗಳನ್ನೂ, ವಿಶ್ವನಾಥನು ಮೂಗನ್ನೂ ಯಾವಾಗಲೂ ರಕ್ಷಿಸಲಿ.

೧೫. ವೇದಪ್ರತಿಪಾದ್ಯವಾದ ಕೀರ್ತಿಯುಳ್ಳ ಶಿವನು ನನ್ನ ಕಿವಿಗಳನ್ನೂ, ಕಪಾಲಧಾರಿಯು ಕಪೋಲಗಳನ್ನೂ, ಪಂಚಮುಖನು ಮುಖವನ್ನೂ, ವೇದಗಳನ್ನು ನಾಲಿಗೆಯಲ್ಲಿ ಧರಿಸಿರುವವನು ನಾಲಿಗೆಯನ್ನೂ ರಕ್ಷಿಸಲಿ.

೧೬. ನೀಲವಾದ ಕುತ್ತಿಗೆಯುಳ್ಳ ಶಿವನು ಕಂಠವನ್ನೂ, ಪಿನಾಕಧನುವನು ಕೈಯಲ್ಲಿ ಹಿಡಿದಿರುವ ಶಿವನು ಕೈಗಳನ್ನೂ, ಪುಣ್ಯಕರವಾದ ತೋಳುಳ್ಳ ಶಿವನು ಭುಜಮೂಲವನ್ನೂ, ದಕ್ಷನ ಯಜ್ಞವನ್ನು ನಾಶಗೊಳಿಸಿದ ಶಿವನು ಎದೆಯನ್ನೂ ಕಾಪಾಡಲಿ.

೧೭. ಮೇರುಪರ್ವತವೇ ಬಿಲ್ಲಾಗುಳ್ಳವನು ಹೊಟ್ಟೆಯನ್ನೂ, ಮದನಾಂ

CC-0. Jangamwadi Math Collection. Digitized by eGangotri

ಊರುದ್ವಯಂ ಪಾತು ಕುಬೇರಮಿತ್ರೋ
ಜಾನುದ್ವಯಂ ಮೇ ಜಗದೀಶ್ವರೋಽವ್ಯಾತ್ ।
ಜಂಘಾಯುಗಂ ಪುಂಗವಕೇತುರವ್ಯಾ
ತ್ಪಾದೌ ಮಮಾವ್ಯಾತ್ಸುರವಂದ್ಯಪಾದಃ ॥ ೧೮ ॥
ಮಹೇಶ್ವರಃ ಪಾತು ದಿನಾದಿಯಾಮೇ
ಮಾಂ ಮಧ್ಯಯಾಮೇಽವತು ವಾಮದೇವಃ ।
ತ್ರಿಯಂಬಕಃ ಪಾತು ತೃತೀಯಯಾಮೇ
ವೃಷಧ್ವಜಃ ಪಾತು ದಿನಾಂತ್ಯಯಾಮೇ ॥ ೧೯ ॥
ಪಾಯಾನ್ನಿಶಾದೌ ಶಶಿಶೇಖರೋ ಮಾಂ
ಗಂಗಾಧರೋ ರಕ್ಷತು ಮಾಂ ನಿಶೀಥೇ ।
ಗೌರೀಪತಿಃ ಪಾತು ನಿಶಾಽವಸಾನೇ
ಮೃತ್ಯುಂಜಯೋ ರಕ್ಷತು ಸರ್ವಕಾಲಂ ॥ ೨೦ ॥
ಅಂತಃಸ್ಥಿತೋ ರಕ್ಷತು ಶಂಕರೋ ಮಾಂ
ಸ್ಥಾಣುಃ ಸದಾ ಪಾತು ಬಹಿಃಸ್ಥಿತೋ ಮಾಂ ।
ತದಂತರೇ ಪಾತು ಪತಿಃ ಪಶೂನಾಂ
ಸದಾಶಿವೋ ರಕ್ಷತು ಮಾಂ ಸಮಂತಾತ್ ॥ ೨೧ ॥

---

ತಕನು ನಡುವನ್ನೂ, ಗಣೇಶಪಿತನು ಹೊಕ್ಕಳನ್ನೂ, ಧೂರ್ಜಟಿಯು ಸೊಂಟವನ್ನೂ ಕಾಪಾಡಲಿ.

೧೮. ಕುಬೇರನ ಸ್ನೇಹಿತನು ತೊಡೆಗಳೆರಡನ್ನೂ, ಜಗದೊಡೆಯನು ಮೊಣಕಾಲುಗಳನ್ನೂ, ವೃಷಭಧ್ವಜನು ಜಂಘೆಗಳನ್ನೂ, ದೇವತೆಗಳಿಂದ ವಂದಿಸಲು ಯೋಗ್ಯವಾದ ಪಾದವುಳ್ಳ ಶಿವನು ಪಾದಗಳನ್ನೂ ಕಾಪಾಡಲಿ.

೧೯. ದಿವಸದ ಮೊದಲಿನ ಜಾಮದಲ್ಲಿ ಮಹೇಶ್ವರನೂ, ಎರಡನೆಯ ಜಾಮದಲ್ಲಿ ವಾಮದೇವನೂ, ಮೂರನೆಯ ಜಾಮದಲ್ಲಿ ತ್ರ್ಯಂಬಕನೂ, ನಾಲ್ಕನೆಯ ಜಾಮದಲ್ಲಿ ವೃಷಭಧ್ವಜನೂ ಕಾಪಾಡಲಿ.

೨೦. ರಾತ್ರಿಯ ಆದಿಭಾಗದಲ್ಲಿ ಚಂದ್ರಮೌಳಿಯೂ, ಅರ್ಧರಾತ್ರಿಯಲ್ಲಿ ಗಂಗಾಧರನೂ, ರಾತ್ರಿಯಕೊನೆಯಲ್ಲಿ ಗೌರೀಪತಿಯೂ, ಸಮಸ್ತಕಾಲದಲ್ಲಿಯೂ ಮೃತ್ಯುಂಜಯನೂ ಕಾಪಾಡಲಿ.

೨೧. ಒಳಗಿನಿಂದ ನನ್ನನ್ನು ಶಂಕರನೂ, ಹೊರಗಿನಿಂದ ನನ್ನನ್ನು ಸ್ಥಾಣುವೂ, ಒಳಹೊರಗಿನ ಸ್ಥಳಗಳ ಮಧ್ಯದಲ್ಲಿ ನನ್ನನ್ನು ಪಶುಪತಿಯೂ, ಎಲ್ಲೆಡೆಯಲ್ಲಿಯೂ ಸದಾಶಿವನೂ ಕಾಪಾಡಲಿ.

CC-0. Jangamwadi Math Collection. Digitized by eGangotri

ತಿಷ್ಠಂತಮವ್ಯಾದ್ಭುವನೈಕನಾಥಃ
ಪಾಯಾದ್ವ್ರಜಂತಂ ಪ್ರಮಥಾಧಿನಾಥಃ ।
ವೇದಾಂತವೇದ್ಯೋಽವತು ಮಾಂ ನಿಷಣ್ಣಂ
ಮಾಮವ್ಯಯಃ ಪಾತು ಶಿವಃ ಶಯಾನಂ ॥ ೨೨ ॥
ಮಾರ್ಗೇಷು ಮಾಂ ರಕ್ಷತು ನೀಲಕಂಠಃ
ಶೈಲಾದಿದುರ್ಗೇಷು ಪುರತ್ರಯಾರಿಃ ।
ಅರಣ್ಯವಾಸಾದಿಮಹಾಪ್ರವಾಸೇ
ಪಾಯಾನ್ಮೃಗವ್ಯಾಧ ಉದಾರಶಕ್ತಿಃ ॥ ೨೩ ॥
ಕಲ್ಪಾಂತಕಾಟೋಪಪಟುಪ್ರಕೋಪಃ
ಸ್ಫುಟಾಟ್ಟಹಾಸೋಚ್ಚಲಿತಾಂಡಕೋಶಃ ।
ಘೋರಾರಿಸೇನಾರ್ಣವದುರ್ನಿವಾರೇ
ಮಹಾಭಯಾದ್ರಕ್ಷತು ವೀರಭದ್ರಃ ॥ ೨೪ ॥
ಪತ್ತ್ಯಶ್ವಮಾತಂಗಘಟಾವರೂಥ
ಸಹಸ್ರಲಕ್ಷಾಯುತಕೋಟಿಭೀಷಣಂ ।
ಅಕ್ಷೌಹಿಣೀನಾಂ ಶತಮಾತತಾಯಿನಾಂ
ಛಿಂದ್ಯಾನ್ಮೃಡೋ ಘೋರಕುಠಾರಧಾರಯಾ ॥ ೨೫ ॥
ನಿಹಂತು ದಸ್ಯೂನ್ಪ್ರಲಯಾನಲಾರ್ಚಿ
ರ್ಜ್ವಲತ್ತ್ರಿಶೂಲಂ ತ್ರಿಪುರಾಂತಕಸ್ಯ ।

---

೨೨. ನಿಂತಿರುವ ನನ್ನನ್ನು ಜಗದೀಶನೂ, ಹೋಗುತ್ತಿರುವವನ್ನು ಪ್ರಮಥ ಗಣಗಳ ಒಡೆಯನೂ, ಕುಳಿತಿರುವ ನನ್ನನ್ನು ವೇದಾಂತಗಳಿಂದ ತಿಳಿಯಲು ಶಕ್ಯನಾದ ಪರಮೇಶ್ವರನೂ, ಮಲಗಿರುವವನನ್ನು ಅವ್ಯಯನಾದ ಶಿವನೂ ಕಾಪಾಡಲಿ.

೨೩. ದಾರಿಗಳಲ್ಲಿ ನೀಲಕಂಠನೂ, ಪರ್ವತವೇ ಮೊದಲಾದ ದುರ್ಗಪ್ರದೇಶ ಗಳಲ್ಲಿ ತ್ರಿಪುರಾರಿಯೂ, ಅರಣ್ಯವಾಸದಲ್ಲಿ ಮೃಗವ್ಯಾಧನೂ ಕಾಪಾಡಲಿ.

೨೪. ಭಯಂಕರವಾದ ಶತ್ರುಸೇನೆಯೆಂಬ ಸಮುದ್ರದ ಮಹಾಭಯದಿಂದ ಪ್ರಳಯಕಾಲದ ಯಮನಂತೆ ಕೋಪವುಳ್ಳವನೂ, ಸ್ಪಷ್ಟವಾದ ಅಟ್ಟಹಾಸದಿಂದ ಬ್ರಹ್ಮಾಂಡವನ್ನಲ್ಲಾಡಿಸುವವನೂ ಆದ ವೀರಭದ್ರನು ಕಾಪಾಡಲಿ.

೨೫. ಶಿವನು ಭಯಂಕರವಾದ ಕೊಡಲಿಯ ಅಲಗಿನಿಂದ ಶತ್ರುಗಳ ಕಾಲಾಳು, ಕುದುರೆ, ಆನೆಗಳ ಹಿಂಡು, ಗುರಾಣಿ ಇವುಗಳ ಕೋಟಿಯಿಂದ ಕೂಡಿದ ಭಯಂಕರವಾದ ಅನೇಕ ಸೈನ್ಯಗಳನ್ನು ಛೇದಿಸಲಿ.

೨೬. ಶಿವನ ಪ್ರಳಯಕಾಲದ ಬೆಂಕಿಯಂತೆ ಕಾಂತಿಯುಳ್ಳ ತ್ರಿಶೂಲವು

CC-0. Jangamwadi Math Collection. Digitized by eGangotri

ಶಾರ್ದೂಲಸಿಂಹರ್ಕ್ಷವೃಕಾದಿಹಿಂಸ್ರಾ
ನ್ಸಂತ್ರಾಸಯತ್ವೀಶಧನುಃ ಪಿನಾಕಂ ॥ ೨೬ ॥
ದುಃಸ್ವಪ್ನದುಃಶಕುನದುರ್ಗತಿದೌರ್ಮನಸ್ಯ
ದುರ್ಭಿಕ್ಷದುರ್ವ್ಯಸನದುಃಸಹದುರ್ಯಶಾಂಸಿ ।
ಉತ್ಪಾತತಾಪವಿಷಭೀತಿಮಸದ್ಗ್ರಹಾರ್ತಿ
ವ್ಯಾಧೀಂಶ್ಚ ನಾಶಯತು ಮೇ ಜಗತಾಮಧೀಶಃ ॥ ೨೭ ॥

ಓಂ ನಮೋ ಭಗವತೇ ಸದಾಶಿವಾಯ, ಸಕಲ ತತ್ತ್ವಾತ್ಮಕಾಯ, ಸಕಲತತ್ವವಿಹಾರಾಯ, ಸಕಲಲೋಕೈಕಕರ್ತ್ರೇ, ಸಕಲಲೋಕೈಕ ಭರ್ತ್ರೇ, ಸಕಲಲೋಕೈಕಹರ್ತ್ರೇ, ಸಕಲಲೋಕೈಕಗುರುವೇ, ಸಕಲ ಲೋಕೈಕಸಾಕ್ಷಿಣೇ, ಸಕಲನಿಗಮಗುಹ್ಯಾಯ, ಸಕಲವರಪ್ರದಾಯ, ಸಕಲದುರಿತಾರ್ತಿಭಂಜನಾಯ, ಸಕಲಜಗದಭಯಂಕರಾಯ, ಸಕಲ ಲೋಕೈಕಶಂಕರಾಯ, ಶಶಾಂಕಶೇಖರಾಯ, ಶಾಶ್ವತನಿಜಾಭಾಸಾಯ, ನಿರ್ಗುಣಾಯ, ನಿರುಪಮಾಯ, ನೀರೂಪಾಯ, ನಿರಾಭಾಸಾಯ, ನಿರಾಮಯಾಯ, ನಿಷ್ಪ್ರಪಂಚಾಯ, ನಿಷ್ಕಲಂಕಾಯ, ನಿರ್ದ್ವಂದ್ವಾಯ, ನಿಃಸಂಗಾಯ, ನಿರ್ಮಲಾಯ, ನಿರ್ಗಮಾಯ, ನಿತ್ಯರೂಪವಿಭವಾಯ, ನಿರುಪಮವಿಭವಾಯ, ನಿರಾಧಾರಾಯ, ನಿತ್ಯಶುದ್ಧಬುದ್ಧಪರಿಪೂರ್ಣ

---

ಶತ್ರುಗಳನ್ನು ಕೊಲ್ಲಲಿ. ಈಶ್ವರನ ಪಿನಾಕವೆಂಬ ಬಿಲ್ಲು ಹುಲಿ, ಸಿಂಹ, ಕರಡಿ, ತೋಳ ಮೊದಲಾದ ಘಾತುಕ ಪ್ರಾಣಿಗಳನ್ನು ಹೆದರಿಸಲಿ.

೨೭. ಜಗದೀಶ್ವರನಾದ ಶಿವನು ನನ್ನ ದುಃಸ್ವಪ್ನ, ದುಶ್ಶಕುನ, ಬಡತನ, ವ್ಯಥೆ, ದುರ್ಭಿಕ್ಷ, ಜೂಜಾಟ ಮೊದಲಾದ ದುರ್ನಡತೆ, ಸಹಿಸಲಾಗದ ಅಪಕೀರ್ತಿ, ಉತ್ಪಾತ, ಸಂತಾಪ, ವಿಷದಭಯ, ದುಷ್ಟಗ್ರಹಪೀಡೆ, ರೋಗ ಇವುಗಳನ್ನು ಹೋಗಲಾಡಿಸಲಿ.

ಸದಾಮಂಗಳಕರನೂ, ಸಕಲತತ್ವಸ್ವರೂಪನೂ, ಸಕಲತತ್ವಗಳಿಂದ ವಿಹರಿಸುವವನೂ, ಸಮಸ್ತ ಲೋಕಗಳ ಕರ್ತನೂ, ಸಕಲಲೋಕರಕ್ಷಕನೂ, ಸಮಸ್ತಲೋಕನಾಶಕನೂ, ಸಕಲಲೋಕಗಳಿಗೆ ಮುಖ್ಯಗುರುವೂ, ಸಕಲಲೋಕ ಗಳಿಗೆ ಸಾಕ್ಷಿಭೂತನೂ, ಸಕಲಶಾಸ್ತ್ರರಹಸ್ಯನೂ, ಸಕಲವರದಾತನೂ, ಸಕಲ ಪಾಪಗಳ ದುಃಖನಾಶಕನೂ, ಸಕಲ ಜಗತ್ತುಗಳಿಗೆ ಅಭಯದಾತನೂ, ಸಕಲ ಲೋಕಗಳಿಗೆ ಶುಭಕರನೂ, ಚಂದ್ರಮೌಲಿಯೂ, ಸ್ಥಿರವಾದ ತೇಜಸ್ಸುಳ್ಳವನೂ, ನಿರ್ಗುಣನೂ, ಅಸದೃಶನೂ, ರೂಪರಹಿತನೂ, ಭ್ರಾಂತಿರಹಿತನೂ, ನೀರೋಗನೂ, ಪ್ರಪಂಚಬಾಹ್ಯನೂ, ದೋಷರಹಿತನೂ, ಸುಖದುಃಖದೂರನೂ, ಸಂಗ ರಹಿತನೂ, ನಿರ್ಮಲನೂ, ತಿಳಿಯಲಾಗದವನೂ, ನಿತ್ಯವಾದ ರೂಪವೈಭವ

CC-0. Jangamwadi Math Collection. Digitized by eGangotri

ಸಚ್ಚಿದಾನಂದಾದ್ವಯಾಯ, ಪರಮಶಾಂತಪ್ರಕಾಶತೇಜೋರೂಪಾಯ, ಜಯ ಜಯ ಮಹಾರುದ್ರ, ಮಹಾರೌದ್ರ, ಭದ್ರಾವತಾರ, ದುಃಖ ದಾವದಾರಣ, ಮಹಾಭೈರವ, ಕಾಲಭೈರವ, ಕಲ್ಪಾಂತಭೈರವ, ಕಪಾಲ ಮಾಲಾಧರ, ಖಟ್ವಾಂಗ ಖಡ್ಗ ಚರ್ಮಪಾಶಾಂಕುಶ ಡಮರುಶೂಲ ಚಾಪ ಬಾಣ ಗದಾ ಶಕ್ತಿ ಭಿಂಡಿಪಾಲ ತೋಮರ ಮುಸಲ ಮುದ್ಗರ ಪಟ್ಟಿಶ ಪರಶು ಪರಿಘ ಭುಶುಂಡೀ ಶತಘ್ನೀ ಚಕ್ರಾದ್ಯಾಯುಧಭೀಷಣಕರ ಸಹಸ್ರ, ಮುಖದಂಷ್ಟ್ರಾಕರಾಲ, ವಿಕಟಾಟ್ಟಹಾಸವಿಸ್ಫಾರಿತಬ್ರಹ್ಮಾಂಡ ಮಂಡಲ, ನಾಗೇಂದ್ರಕುಂಡಲ, ನಾಗೇಂದ್ರಹಾರ, ನಾಗೇಂದ್ರವಲಯ, ನಾಗೇಂದ್ರ ಚರ್ಮಧರ, ಮೃತ್ಯುಂಜಯ, ತ್ರ್ಯಂಬಕ, ತ್ರಿಪುರಾಂತಕ, ವಿರೂಪಾಕ್ಷ, ವಿಶ್ವೇಶ್ವರ, ವಿಶ್ವರೂಪ, ವೃಷಭವಾಹನ, ವಿಷಭೂಷಣ, ವಿಶ್ವತೋಮುಖ, ಸರ್ವತೋ ರಕ್ಷ ರಕ್ಷ ಮಾಂ ಜ್ವಲ ಜ್ವಲ, ಮಹಾ ಮೃತ್ಯುಭಯಮಪಮೃತ್ಯುಭಯಂ ನಾಶಯ ನಾಶಯ, ರೋಗಭಯ ಮುತ್ಸಾದಯೋತ್ಸಾದಯ, ವಿಷಸರ್ಪಭಯಂ ಶಮಯ ಶಮಯ, ಚೋರಭಯಂ ಮಾರಯ ಮಾರಯ, ಮಮ ಶತ್ರೂನುಚ್ಚಾಟಯೋ

---

ವುಳ್ಳವನೂ, ಅಸದೃಶವೈಭವನೂ, ನಿರಾಶ್ರಯನೂ, ನಿತ್ಯಶುದ್ಧನೂ, ಜ್ಞಾನಿಯೂ, ಪೂರ್ಣಸಚ್ಚಿದಾನಂದರೂಪನೂ, ಅತ್ಯಂತ ಶಾಂತವಾದ ಪ್ರಕಾಶ ವುಳ್ಳ ತೇಜೋರೂಪಿಯೂ ಆದ ಮಹೇಶ್ವರನೆ! ನಿನಗೆ ನಮಸ್ಕಾರವು. ಅತಿ ಭಯಂಕರನೂ, ಮಂಗಳಕರವಾದ ಅವತಾರವುಳ್ಳವನೂ, ದುಃಖವೆಂಬ ಕಾಡನ್ನು ಭೇದಿಸುವವನೂ, ಪ್ರಲಯಕಾಲದಲ್ಲಿ ಭಯಂಕರನೂ, ರುಂಡ ಮಾಲೆ ಗಳನ್ನು ಧರಿಸಿದವನೂ, ಖಟ್ವಾಂಗ, ಶಕ್ತಿ, ಗುರಾಣಿ, ಪಾಶ, ಅಂಕುಶ, ಡಮರು, ತ್ರಿಶೂಲ, ಬಿಲ್ಲು, ಬಾಣ, ಗದೆ, ಶಕ್ತ್ಯಾಯುಧ, ಭಿಂಡಿಪಾಲ, ತೋಮರ, ಮುಸಲ, ಮುದ್ಗರ, ಪಟ್ಟಿಶ, ಕೊಡಲಿ, ಅಗ್ಗಣಿ, ಭುಶುಂಡಿ, ಫಿರಂಗಿ, ಚಕ್ರಗಳೇ ಮೊದಲಾದ ಆಯುಧಗಳಿಂದ ಭಯಂಕರವಾದ ಸಹಸ್ರಹಸ್ತ ವುಳ್ಳವನೂ, ಮುಖದಿಂದಲೂ ಹಲ್ಲುಗಳಿಂದಲೂ ಭಯಂಕರನೂ, ಭಯಂಕರ ಅಟ್ಟಹಾಸದಿಂದ ಪ್ರತಿಧ್ವನಿಸುವ ಬ್ರಹ್ಮಾಂಡವುಳ್ಳವನೂ, ನಾಗೇಂದ್ರ ಕುಂಡಲನೂ, ನಾಗೇಂದ್ರಹಾರನೂ, ನಾಗೇಂದ್ರಕಂಕಣನೂ, ಗಜಚರ್ಮವನ್ನು ಹೊದ್ದವನೂ, ಯಮನನ್ನು ಜಯಿಸಿದವನೂ, ಮುಕ್ಕಣ್ಣನೂ, ತ್ರಿಪುರ ದಾಹಿಯೂ, ವಿಕಾರವಾದ ಕಣ್ಣುಳ್ಳವನೂ, ಜಗದೊಡೆಯನೂ, ವಿಶ್ವರೂಪನೂ, ವೃಷಭವಾಹನನೂ, ವಿಷಕಂಠನೂ, ಸಕಲದಿಕ್ಕುಗಳಲ್ಲಿ ಮುಖವುಳ್ಳವನೂ ಆದ ಮಹಾದೇವನೆ! ಜಯಿಸು, ಜಯಿಸು. ನನ್ನನ್ನು ಸರ್ವವಿಧದಿಂದಲೂ ಕಾಪಾಡು. ಮಹಾಮೃತ್ಯು ಅಪಮೃತ್ಯುಗಳ ಭಯವನ್ನು ಸುಡು. ರೋಗಭಯವನ್ನು

CC-0. Jangamwadi Math Collection. Digitized by eGangotri

ಚ್ಚಾಟಯ, ಶೂಲೇನ ವಿದಾರಯ ವಿದಾರಯ, ಕುಠಾರೇಣ ಭಿಂಧಿ ಭಿಂಧಿ, ಖಡ್ಗೇನ ಛಿಂಧಿ ಛಿಂಧಿ, ಖಟ್ವಾಂಗೇನ ವಿಪೋಥಯ ವಿಪೋಥಯ, ಮುಸಲೇನ ನಿಷ್ಪೇಷಯ ನಿಷ್ಪೇಷಯ, ಬಾಣೈಃ ಸಂತಾಡಯ ಸಂತಾಡಯ, ರಕ್ಷಾಂಸಿ ಭೀಷಯ ಭೀಷಯ, ಭೂತಾನಿ ವಿದ್ರಾವಯ ವಿದ್ರಾವಯ, ಕೂಷ್ಮಾಂಡ ವೇತಾಲ ಮಾರೀಗಣ ಬ್ರಹ್ಮರಾಕ್ಷಸಾನ್ಸಂತ್ರಾಸಯ ಸಂತ್ರಾಸಯ, ಮಮಾಽಭಯಂ ಕುರು ಕುರು, ವಿತ್ರಸ್ತಂ ಮಾಮಾ ಶ್ವಾಸಯಾಶ್ವಾಸಯ, ನರಕಭಯಾನ್ಮಾಮುದ್ಧಾರಯೋದ್ಧಾರಯ, ಸಂಜೀವಯ ಸಂಜೀವಯ, ಕ್ಷುತ್ತೃಡ್ಭ್ಯಾಂ ಮಾಮಾಪ್ಯಾಯಯಾಪ್ಯಾಯಯ, ದುಃಖಾತುರಂ ಮಾಮಾನಂದಯಾನಂದಯ, ಶಿವಕವಚೇನ ಮಾಮಾ ಚ್ಛಾದಯಾಚ್ಛಾದಯ, ತ್ರ್ಯಂಬಕ, ಸದಾಶಿವ ನಮಸ್ತೇ ನಮಸ್ತೇ ನಮಸ್ತೇ.

ಋಷಭ ಉವಾಚ :—

ಇತ್ಯೇತತ್ಕವಚಂ ಶೈವಂ ವರದಂ ವ್ಯಾಹೃತಂ ಮಯಾ ।
ಸರ್ವಬಾಧಾಪ್ರಶಮನಂ ರಹಸ್ಯಂ ಸರ್ವದೇಹಿನಾಂ ॥ ೨೮ ॥
ಯಃ ಸದಾ ಧಾರಯೇನ್ಮರ್ತ್ಯಃ ಶೈವಂ ಕವಚಮುತ್ತಮಂ ।
ನ ತಸ್ಯ ಜಾಯತೇ ಕ್ವಾಽಪಿ ಭಯಂ ಶಂಭೋರನುಗ್ರಹಾತ್ ॥ ೨೯ ॥

---

ನಾಶಗೊಳಿಸು. ವಿಷಸರ್ಪದಭಯವನ್ನು ಶಾಂತಿಗೊಳಿಸು. ಕಳ್ಳರ ಭಯವನ್ನು ನಿವಾರಿಸು. ಶತ್ರುಗಳನ್ನು ಕೊಲ್ಲು, ದೂರ ಓಡಿಸು. ತ್ರಿಶೂಲಗಳಿಂದಸೀಳು. ಕೊಡಲಿಯಿಂದ ಛೇದಿಸು. ಕತ್ತಿಯಿಂದ ಕತ್ತರಿಸು. ಖಟ್ವಾಂಗದಿಂದ ತಳ್ಳು. ಒನಕೆಯಿಂದ ಪುಡಿಮಾಡು, ಬಾಣಗಳಿಂದ ಹೊಡೆ. ರಾಕ್ಷಸರನ್ನು ಹೆದರಿಸು. ಭೂತಗಳನ್ನು ಓಡಿಸು. ಕೂಷ್ಮಾಂಡ, ಬೇತಾಳ, ಮಾರೀ, ಬ್ರಹ್ಮರಾಕ್ಷಸರನ್ನು ಭಯಗೊಳಿಸು. ನನಗೆ ಅಭಯದಾನಮಾಡು. ಭಯಗೊಂಡ ನನ್ನನ್ನು ಸಮಾಧಾನಗೊಳಿಸು. ನರಕಭಯದಿಂದ ನನ್ನನ್ನು ಉದ್ಧರಿಸು. ಬದುಕಿಸು. ಹಸಿವು ಬಾಯಾರಿಕೆಗಳನ್ನು ಪರಿಹರಿಸಿ ನನ್ನನ್ನು ಸಂತೋಷಗೊಳಿಸು. ದುಃಖ ಪೀಡಿತನಾದ ನನ್ನನ್ನು ಆನಂದಗೊಳಿಸು. ಶಿವಕವಚದಿಂದ ನನ್ನನ್ನು ಹೊದ್ದಿಸು, ಮುಕ್ಕಣ್ಣ, ಸದಾಶಿವ! ನಿನಗೆ ನಮಸ್ಕಾರವು, ಪುನಃ ಪುನಃ ನಮಸ್ಕಾರವು.

೨೮. ಋಷಭನು ಹೇಳುತ್ತಾನೆ:—ಮನುಷ್ಯರ ಸಕಲಕಷ್ಟಗಳನ್ನು ಹೋಗ ಲಾಡಿಸುವುದೂ, ಇಷ್ಟಾರ್ಥವನ್ನೀಯುವುದೂ, ರಹಸ್ಯವೂ ಆದ ಈ ಶಿವಕವಚ ವನ್ನು ನಿನಗೆ ಹೇಳಿರುತ್ತೇನೆ.

೨೯. ಉತ್ತಮವಾದ ಈ ಶಿವಕವಚವನ್ನು ಧರಿಸಿರುವ ಮನುಷ್ಯನಿಗೆ ಶಿವನ ಅನುಗ್ರಹದಿಂದ ಎಲ್ಲಿಯೂ ಭಯವುಂಟಾಗುವುದಿಲ್ಲ.

CC-0. Jangamwadi Math Collection. Digitized by eGangotri

ಕ್ಷೀಣಾಯುರ್ಮೃತ್ಯುಮಾಪನ್ನೋ ಮಹಾರೋಗಹತೋಽಪಿ ವಾ ।
ಸದ್ಯಃ ಸುಖಮವಾಪ್ನೋತಿ ದೀರ್ಘಮಾಯುಶ್ಚ ವಿಂದತಿ ॥ ೩೦ ॥
ಸರ್ವ ದಾರಿದ್ರ್ಯಶಮನಂ ಸೌಮಂಗಲ್ಯವಿವರ್ಧನಂ ।
ಯೋ ಧತ್ತೇ ಕವಚಂ ಶೈವಂ ಸ ದೇವೈರಪಿ ಪೂಜ್ಯತೇ ॥ ೩೧ ॥
ಮಹಾಪಾತಕಸಂಘಾತೈರ್ಮುಚ್ಯತೇ ಚೋಪಪಾತಕೈಃ ।
ದೇಹಾಂತೇ ಶಿವಮಾಪ್ನೋತಿ ಶಿವವರ್ಮಾಽನುಭಾವತಃ ॥ ೩೨ ॥
ತ್ವಮಪಿ ಶ್ರದ್ಧಯಾ ವತ್ಸ ಶೈವಂ ಕವಚಮುತ್ತಮಂ ।
ಧಾರಯಸ್ವ ಮಯಾ ದತ್ತಂ ಸದ್ಯಃ ಶ್ರೇಯೋ ಹ್ಯವಾಪ್ಸ್ಯಸಿ ॥ ೩೩ ॥

ಸೂತ ಉವಾಚ :—

ಇತ್ಯುಕ್ತ್ವಾ ಋಷಭೋ ಯೋಗೀ ತಸ್ಮೈ ಪಾರ್ಥಿವಸೂನವೇ ।
ದದೌ ಶಂಖಂ ಮಹಾರಾವಂ ಖಡ್ಗಂ ಚಾಽರಿನಿಷೂದನಂ ॥ ೩೪ ॥
ಪುನಶ್ಚ ಭಸ್ಮ ಸಂಮಂತ್ರ್ಯ ತದಂಗಂ ಸರ್ವತೋಽಸ್ಪೃಶತ್ ।
ಗಜಾನಾಂ ಷಟ್ಸಹಸ್ರಸ್ಯ ದ್ವಿಗುಣಂ ಚ ಬಲಂ ದದೌ ॥ ೩೫ ॥

---

೩೦. ಅಲ್ಪಾಯುಷ್ಯವುಳ್ಳವನಾಗಿ ಮೃತ್ಯುವಿನ ಬಾಯಿಗೆ ಸಿಕ್ಕಿದರೂ, ರೋಗಪೀಡಿತನಾದರೂ ಕೂಡಲೆ ದೀರ್ಘಾಯುಷ್ಯವನ್ನು ಪಡೆದು ಸುಖಿಯಾಗುವನು.

೩೧. ಸಮಸ್ತದಾರಿದ್ರ್ಯವನ್ನು ನಿವಾರಿಸುವುದೂ ಮಂಗಳವನ್ನು ಹೆಚ್ಚಿಸುವುದೂ ಆಗಿರುವ ಈ ಶಿವಕವಚವನ್ನು ತೊಟ್ಟಿರುವ ಮನುಷ್ಯನನ್ನು ದೇವತೆಗಳೂ ಪೂಜಿಸುವರು.

೩೨. ಶಿವಕವಚದ ಮಾಹಾತ್ಮ್ಯದಿಂದ ನರನು ಮಹಾಪಾಪ, ಉಪಪಾಪಗಳಿಂದ ಬಿಡಲ್ಪಟ್ಟು ಕೊನೆಯಲ್ಲಿ ಶಿವನನ್ನು ಸೇರುವನು.

೩೩. ಮಗು! ನೀನೂ ನಾನು ಉಪದೇಶಿಸಿರುವ ಉತ್ತಮವಾದ ಈ ಶಿಕವಚವನ್ನು ಧರಿಸು. ಕೂಡಲೆ, ಶ್ರೇಯಸ್ಸನ್ನು ಪಡೆಯುವೆ.

೩೪. ಸೂತನು ಹೇಳುತ್ತಾನೆ:—ಹೀಗೆಂದು ಋಷಭಯೋಗಿಯು ಆ ರಾಜಕುಮಾರನಿಗೆ ಮಹಾಧ್ವನಿಯುಳ್ಳ ಶಂಖವನ್ನೂ, ಶತ್ರುಗಳನ್ನು ಕೊಲ್ಲುವ ಖಡ್ಗವನ್ನೂ ಕೊಟ್ಟನು.

೩೫. ಮತ್ತೆ ಭಸ್ಮವನ್ನು ಅಭಿಮಂತ್ರಿಸಿ ಅವನ ಅವಯವಗಳ ಎಲ್ಲ ಕಡೆಯಲ್ಲಿಯೂ ಸ್ಪರ್ಶಮಾಡಿಸಿ ಹನ್ನೆರಡುಸಾವಿರ ಆನೆಗಳ ಬಲವನ್ನು ಸಹ ಕೊಟ್ಟನು.

CC-0. Jangamwadi Math Collection. Digitized by eGangotri

ಭಸ್ಮಪ್ರಭಾವಾತ್ಸಂಪ್ರಾಪ್ಯ ಬಲೈಶ್ವರ್ಯಧೃತಿಸ್ಮೃತೀಃ ।
ಸ ರಾಜಪುತ್ರಃ ಶುಶುಭೇ ಶರದರ್ಕ ಇವ ಶ್ರಿಯಾ ॥ ೩೬ ॥
ತಮಾಹ ಪ್ರಾಂಜಲಿಂ ಭೂಯಃ ಸ ಯೋಗೀ ರಾಜನಂದನಂ ।
ಏಷ ಖಡ್ಗೋ ಮಯಾ ದತ್ತಸ್ತಪೋಮಂತ್ರಾನುಭಾವತಃ ॥ ೩೭ ॥
ಶಿತಧಾರಮಿಮಂ ಖಡ್ಗಂ ಯಸ್ಮೈ ದರ್ಶಯಸಿ ಸ್ಫುಟಂ ।
ಸ ಸದ್ಯೋ ಮ್ರಿಯತೇ ಶತ್ರುಃ ಸಾಕ್ಷಾನ್ಮೃತ್ಯುರಪಿ ಸ್ವಯಂ ॥ ೩೮ ॥
ಅಸ್ಯ ಶಂಖಸ್ಯ ನಿಹ್ರಾದಂ ಯೇ ಶೃಣ್ವಂತಿ ತವಾಹಿತಾಃ ।
ತೇ ಮೂರ್ಛಿತಾಃ ಪತಿಷ್ಯಂತಿ ನ್ಯಸ್ತಶಸ್ತ್ರಾ ವಿಚೇತನಾಃ ॥ ೩೯ ॥
ಖಡ್ಗಶಂಖಾವಿಮೌ ದಿವ್ಯೌ ಪರಸೈನ್ಯವಿನಾಶಿನೌ ।
ಆತ್ಮಸೈನ್ಯಸ್ವಪಕ್ಷಾಣಾಂ ಶೌರ್ಯತೇಜೋವಿವರ್ಧನೌ ॥ ೪೦ ॥
ಏತಯೋಶ್ಚ ಪ್ರಭಾವೇಸ ಶೈವೇನ ಕವಚೇನ ಚ ।
ದ್ವಿಷಟ್ಸಹಸ್ರನಾಗಾನಾಂ ಬಲೇನ ಮಹತಾಽಪಿ ಚ ॥ ೪೧ ॥
ಭಸ್ಮಧಾರಣಸಾಮರ್ಥ್ಯಾಚ್ಛತ್ರುಸೈನ್ಯಂ ವಿಜೇಷ್ಯಸಿ ।
ಪ್ರಾಪ್ಯ ಸಿಂಹಾಸನಂ ಪೈತ್ರ್ಯಂ ಗೋಪ್ತಾಽಸಿ ಪೃಥಿವೀಮಿಮಾಂ ॥ ೪೨ ॥

---

೩೬. ಆ ರಾಜಕುಮಾರನು ಭಸ್ಮಪ್ರಭಾವದಿಂದ ಬಲ, ಐಶ್ವರ್ಯ, ಧೈರ್ಯ, ಸ್ಮರಣೆಗಳನ್ನು ಹೊಂದಿ ಕಾಂತಿಯಿಂದ ಶರತ್ಕಾಲದ ಸೂರ್ಯನಂತೆ ಪ್ರಕಾಶಿಸಿದನು.

೩೭. ಆ ಋಷಭಯೋಗಿಯು ಮತ್ತೆ ಕೈಮುಗಿದುಕೊಂಡಿರುವ ರಾಜ ಕುಮಾರನನ್ನು ಕುರಿತು ಇಂತೆಂದನು. ತಪಸ್ಸು ಮಂತ್ರ ಇವುಗಳ ಪ್ರಭಾವ ಗಳಿಂದ ಕೂಡಿದ ಈ ಖಡ್ಗವನ್ನು ನಿನಗೆ ಕೊಟ್ಟಿರುವೆನು.

೩೮. ಹರಿತವಾದ ಅಲಗುಳ್ಳ ಈ ಕತ್ತಿಯನ್ನು ಹಿರಿದು ಯಾರಿಗೆ ತೋರಿಸು ವೆಯೊ, ಆ ಶತ್ರುವು ಪ್ರತ್ಯಕ್ಷ ಮೃತ್ಯುವಾದರೂ ಕೂಡಲೆ ಸಾಯುವನು.

೩೯. ಈ ಶಂಖದ ಧ್ವನಿಯನ್ನು ಕೇಳಿದ ನಿನ್ನ ಶತ್ರುಗಳೆಲ್ಲರೂ ಶಸ್ತ್ರಗಳನ್ನು ತ್ಯಜಿಸಿ ಮೂರ್ಛೆಗೊಂಡು ಜ್ಞಾನವಿಲ್ಲದೆ ಬೀಳುವರು.

೪೦. ದೇವತೆಗಳಿಗೆ ಯೋಗ್ಯಗಳಾದ ಈ ಖಡ್ಗಶಂಖಗಳು ಪರಸೈನ್ಯವನ್ನು ನಾಶಗೊಳಿಸುವವೂ, ನಿನ್ನ ಸೈನ್ಯ ಮತ್ತು ಪಕ್ಷದವರ ಶೌರ್ಯಪ್ರತಾಪಗಳನ್ನು ಹೆಚ್ಚಿಸುವುವೂ ಆಗಿರುವುವು.

೪೧-೪೨. ಇವುಗಳ ಸಾಮರ್ಥ್ಯದಿಂದಲೂ, ಶಿವಕವಚದಿಂದಲೂ, ಹನ್ನೆರಡುಸಾವಿರ ಆನೆಗಳ ಅಧಿಕವಾದ ಬಲದಿಂದಲೂ, ಭಸ್ಮಧಾರಣೆಯ ಶಕ್ತಿ ಯಿಂದಲೂ ಶತ್ರುಸೈನ್ಯವನ್ನು ಗೆಲ್ಲುವೆ. ವಂಶಾನುಗತವಾದ ಸಿಂಹಾಸನವನ್ನು ಪಡೆದು ಈ ಭೂಮಿಯನ್ನು ಕಾಪಾಡುವೆ.

CC-0. Jangamwadi Math Collection. Digitized by eGangotri

ಇತಿ ಭದ್ರಾಯುಷಂ ಸಮ್ಯಗನುಶಾಸ್ಯ ಸಮಾತೃಕಂ ।
ತಾಭ್ಯಾಂ ಸಂಪೂಜಿತಃ ಸೋಽಥ ಯೋಗೀ ಸ್ವೈರಗತಿರ್ಯಯೌ ॥ ೪೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ ಭದ್ರಾಯ್ವಾಖ್ಯಾನೇ "ಶಿವಕವಚಕಥನಂ" ನಾಮ ದ್ವಾದಶೋಽಧ್ಯಾಯಃ

---

೪೩. ಶಿವಯೋಗಿಯು ಹೀಗೆ ತಾಯಿಯಿಂದ ಸಹಿತನಾದ ಭದ್ರಾಯುವಿಗೆ ಉಪದೇಶ ಮಾಡಿ ಅವರಿಂದ ಪೂಜಿಸಲ್ಪಟ್ಟವನಾಗಿ ಸ್ವೇಚ್ಛೆಯಾಗಿ ಹೊರಟು ಹೋದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ ಭದ್ರಾಯ್ವಾಖ್ಯಾನದಲ್ಲಿ "ಶಿವಕವಚಕಥನ" ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ತ್ರಯೋದಶೋಽಧ್ಯಾಯಃ

### ಭದ್ರಾಯುವಿವಾಹಕಥನಂ

ಸೂತ ಉವಾಚ :—

ದಶಾರ್ಣಾಽಧಿಪತೇಸ್ತಸ್ಯ ವಜ್ರಬಾಹೋರ್ಮಹಾಭುಜಃ ।
ಬಭೂವ ಶತ್ರುರ್ಬಲವಾನ್ರಾಜಾ ಮಗಧರಾಟ್ತತಃ ॥ ೧ ॥
ಸ ವೈ ಹೇಮರಥೋ ನಾಮ ಬಾಹುಶಾಲೀ ರಣೋತ್ಕಟಃ ।
ಬಲೇನ ಮಹತಾವೃತ್ಯ ದಶಾರ್ಣಂ ನ್ಯರುಧದ್ಬಲೀ ॥ ೨ ॥
ಚಮೂಪಾಸ್ತಸ್ಯ ದುರ್ಧರ್ಷಾಃ ಪ್ರಾಪ್ಯ ದೇಶಂ ದಶಾರ್ಣಕಂ ।
ವ್ಯಲುಂಪನ್ವಸುರತ್ನಾನಿ ಗೃಹಾಣಿ ದದಹುಃ ಪರೇ ॥ ೩ ॥
ಕೇಚಿದ್ಧನಾನಿ ಜಗೃಹುಃ ಕೇಚಿದ್ಬಾಲಾನ್ ಸ್ತ್ರಿಯೋಽಪರೇ ।
ಗೋಧನಾನ್ಯಪರೇ ಗೃಹ್ಣನ್ಕೇಚಿದ್ಧಾನ್ಯಪರಿಚ್ಛದಾನ್ ।
ಕೇಚಿದಾರಾಮಸಸ್ಯಾನಿ ಗೃಹೋದ್ಯಾನಾನ್ಯನಾಶಯನ್ ॥ ೪ ॥
ಏವಂ ವಿನಾಶ್ಯ ತದ್ರಾಜ್ಯಂ ಸ್ತ್ರೀಗೋಧನಜಿಘೃಕ್ಷವಃ ।
ಆವೃತ್ಯ ತಸ್ಯ ನಗರೀಂ ವಜ್ರಬಾಹೋಸ್ತು ಮಾಗಧಃ ॥ ೫ ॥

---

### ಕನ್ನಡದ ಅನುವಾದ

#### ಭದ್ರಾಯುವಿವಾಹಕಥನ

೧. ಸೂತನು ಹೇಳುತ್ತಾನೆ :—ಅನಂತರ ದಶಾರ್ಣದೇಶದ ದೊರೆಯಾದ ಆ ವಜ್ರಬಾಹುವಿಗೆ ಶೂರನಾದ ಮಗಧರಾಜನು ಶತ್ರುವಾದನು.

೨. ಯುದ್ಧದಲ್ಲಿ ನಿಪುಣನಾದ ಆ ಹೇಮರಥನೆಂಬ ಬಲಿಷ್ಠನಾದ ಮಗಧ ರಾಜನು ದೊಡ್ಡ ಸೈನ್ಯದೊಡನೆ ದಶಾರ್ಣದೇಶವನ್ನು ಮುತ್ತಿದನು.

೩. ಶೂರರಾದ ಅವನ ಸೈನ್ಯಾಧಿಪತಿಗಳಲ್ಲಿ ಕೆಲವರು ದಶಾರ್ಣದೇಶವನ್ನು ಪ್ರವೇಶಿಸಿ ದ್ರವ್ಯ, ರತ್ನಗಳನ್ನು ಕಿತ್ತುಕೊಂಡರು. ಕೆಲವರು ಮನೆಗಳನ್ನು ಸುಟ್ಟರು.

೪. ಇನ್ನು ಕೆಲವರು ಕಾಡುಗಳನ್ನು ಹಿಡಿದರು. ಮತ್ತೆ ಕೆಲವರು ಹುಡುಗರನ್ನೂ, ಕೆಲವರು ಹೆಂಗಸರನ್ನೂ, ಇನ್ನು ಕೆಲವರು ಗೋವುಗಳನ್ನೂ, ಕೆಲವರು ಧಾನ್ಯ ಸಾಮಗ್ರಿಗಳನ್ನೂ ಕಿತ್ತುಕೊಂಡರು. ಕೆಲವರು ತೋಟಗಳ ಸಸ್ಯಗಳನ್ನೂ ಮನೆಯ ಉದ್ಯಾನಗಳನ್ನೂ ನಾಶಗೊಳಿಸಿದರು.

೫. ಮಗಧರಾಜನು ವಜ್ರಬಾಹುವಿನ ಪಟ್ಟಣವನ್ನು ಆಕ್ರಮಿಸಲು ಸ್ತ್ರೀಯರನ್ನೂ, ಗೋಧನವನ್ನೂ ಅಪಹರಿಸಲಿಚ್ಛೆಯುಳ್ಳ ಅವನ ಸೈನಿಕರು ಹೀಗೆ ಅವನ ರಾಜ್ಯವನ್ನು ಹಾಳುಮಾಡಿದರು.

CC-0. Jangamwadi Math Collection. Digitized by eGangotri

ಏವಂ ಪರ್ಯಾಕುಲಂ ವೀಕ್ಷ್ಯ ರಾಜಾ ನಗರಮೇವ ಚ ।
ಯುದ್ಧಾಯ ನಿರ್ಜಗಾಮಾಶು ವಜ್ರಬಾಹುಃ ಸಸೈನಿಕಃ ॥ ೬ ॥
ವಜ್ರಬಾಹುಶ್ಚ ಭೂಪಾಲಸ್ತಥಾ ಮಂತ್ರಿಪುರಸ್ಸರಾಃ ।
ಯುಯುಧುರ್ಮಾಗಧೈಃ ಸಾರ್ಧಂ ನಿಜಘ್ನುಃ ಶತ್ರುವಾಹಿನೀಂ ॥ ೭ ॥
ವಜ್ರಬಾಹುರ್ಮಹೇಷ್ವಾಸೋ ದಂಶಿತೋ ರಥಮಾಸ್ಥಿತಃ ।
ವಿಕಿರನ್ಬಾಣವರ್ಷಾಣಿ ಚಕಾರ ಕದನಂ ಮಹತ್ ॥ ೮ ॥
ದಶಾರ್ಣರಾಜಂ ಯುಧ್ಯಂತಂ ದೃಷ್ಟ್ವಾ ಯುದ್ಧೇ ಸುದುಃಸಹಂ ।
ತಮೇವ ತರಸಾ ವವ್ರುಃ ಸರ್ವೇ ಮಾಗಧಸೈನಿಕಾಃ ॥ ೯ ॥
ಕೃತ್ವಾ ತು ಸುಚಿರಂ ಯುದ್ಧಂ ಮಾಗಧಾ ದೃಢವಿಕ್ರಮಾಃ ।
ತತ್ಸೈನ್ಯಂ ನಾಶಯಾಮಾಸುರ್ಲೇಭಿರೇ ಚ ಜಯಶ್ರಿಯಂ ॥ ೧೦ ॥
ಕೇಚಿತ್ತಸ್ಯ ರಥಂ ಜಘ್ನುಃ ಕೇಚತ್ತದ್ಧನುರಾಚ್ಛಿನನ್ ।
ಸೂತಂ ತಸ್ಯ ಜಘಾನೈಕಸ್ತ್ವಪರಃ ಖಡ್ಗಮಾಚ್ಛಿನತ್ ॥ ೧೧ ॥
ಸಂಛಿನ್ನಖಡ್ಗಧನ್ವಾನಂ ವಿರಥಂ ಹತಸಾರಥಿಂ ।
ಬಲಾದ್ಗೃಹೀತ್ವಾ ಬಲಿನೋ ಬಬಂಧುರ್ನೃಪತಿಂ ರುಷಾ ॥ ೧೨ ॥

---

೬. ವಜ್ರಬಾಹುವು ಹೀಗೆ ವ್ಯಾಕುಲಗೊಂಡ ತನ್ನ ಪಟ್ಟಣವನ್ನು ಕಂಡು ಸೈನ್ಯದೊಡನೆ ಯುದ್ಧಕ್ಕೆ ಹೊರಟನು.

೭. ವಜ್ರಬಾಹುವೂ ಅವನ ಮಂತ್ರಿ ಮೊದಲಾದವರೂ ಮಗಧರೊಡನೆ ಯುದ್ಧಮಾಡಿ ಶತ್ರುಸೈನ್ಯವನ್ನು ಸದೆಬಡಿದರು.

೮. ವಜ್ರಬಾಹುವು ಕವಚವನ್ನು ತೊಟ್ಟು ರಥದಲ್ಲಿ ಕುಳಿತು ಮಹಾಧನುಸ್ಸನ್ನು ಹಿಡಿದುಕೊಂಡು ಬಾಣಗಳ ಮಳೆಯನ್ನು ಸುರಿಸುತ್ತ ಘೋರಯುದ್ಧವನ್ನು ಮಾಡಿದನು.

೯. ಮಗಧನ ಸೈನಿಕರೆಲ್ಲರೂ ಯುದ್ಧಮಾಡುತ್ತಿರುವ ಸಹಿಸಲಾಗದವನಾದ ವಜ್ರಬಾಹುವನ್ನು ಬಲದಿಂದ ಸುತ್ತಿಕೊಂಡರು.

೧೦. ಅತಿ ಪರಾಕ್ರಮಶಾಲಿಗಳಾದ ಮಗಧಸೈನಿಕರು ಬಹಳಕಾಲ ಸಮರಗೈದು ವಜ್ರಬಾಹುವಿನ ಸೈನ್ಯವನ್ನು ನಾಶಮಾಡಿ ಜಯಸಂಪತ್ತನ್ನು ಪಡೆದರು.

೧೧. ಕೆಲವರು ವಜ್ರಬಾಹುವಿನ ರಥವನ್ನು ಪುಡಿಮಾಡಿದರು. ಇನ್ನು ಕೆಲವರು ಅವನ ಬಿಲ್ಲನ್ನು ಮುರಿದರು. ಮತ್ತೊಬ್ಬನು ಅವನ ಸಾರಥಿಯನ್ನು ಕೊಂದನು. ಇನ್ನೊಬ್ಬನು ಕತ್ತಿಯನ್ನು ತುಂಡುಮಾಡಿದನು.

೧೨. ಬಲಿಷ್ಠರಾದ ಆ ಸೈನಿಕರು ಕೋಪದಿಂದ ಮುತ್ತಿಕೊಂಡು ತುಂಡಾದ ಕತ್ತಿ, ಬಿಲ್ಲುಗಳುಳ್ಳವನೂ, ರಥ, ಸಾರಥಿಗಳಿಲ್ಲದವನೂ ಆದ ಆ ರಾಜನನ್ನು ಬಲಾತ್ಕಾರದಿಂದ ಹಿಡಿದು ಬಂಧಿಸಿದರು.

CC-0. Jangamwadi Math Collection. Digitized by eGangotri

ತಸ್ಯ ಮಂತ್ರಿಗಣಂ ಸರ್ವಂ ತತ್ಸೈನ್ಯಂ ಚ ವಿಜಿತ್ಯ ತೇ ।
ಮಾಗಧಾಸ್ತಸ್ಯ ನಗರೀಂ ವಿವಿಶುರ್ಜಯಕಾಶಿನಃ ॥ ೧೩ ॥
ಅಶ್ವಾನ್ನರಾನ್ಗಜಾನುಷ್ಟ್ರಾನ್ಪಶೂಂಶ್ಚೈವ ಧನಾನಿ ಚ ।
ಜಗೃಹುರ್ಯುವತೀಃ ಸರ್ವಾಃಶ್ಚಾರ್ವಂಗೀಶ್ಚೈವ ಕನ್ಯಕಾಃ ॥ ೧೪ ॥
ರಾಜ್ಞೀಃ ಬಬಂಧುರ್ಮಹಿಷೀರ್ದಾಸೀಶ್ಚೈವ ಸಹಸ್ರಶಃ ।
ಕೋಶಂ ಚ ರತ್ನಸಂಪೂರ್ಣಂ ಜಹ್ರುಸ್ತೇಽಪ್ಯಾತತಾಯಿನಃ ॥ ೧೫ ॥
ಏವಂ ವಿನಾಶ್ಯ ನಗರೀಂ ಹೃತ್ವಾ ಸ್ತ್ರೀಗೋಧನಾದಿಕಂ ।
ವಜ್ರಬಾಹುಂ ಬಲಾದ್ಬದ್ಧ್ವಾ ರಥೇ ಸ್ಥಾಪ್ಯ ವಿನಿರ್ಯಯುಃ ॥ ೧೬ ॥
ಏವಂ ಕೋಲಾಹಲೇ ಜಾತೇ ರಾಷ್ಟ್ರನಾಶೇ ಚ ದಾರುಣೇ ।
ರಾಜಪುತ್ರೋಽಥ ಭದ್ರಾಯುಸ್ತದ್ವಾರ್ತಾಮಶೃಣೋದ್ಬಲೀ ॥ ೧೭ ॥
ಪಿತರಂ ಶತ್ರುನಿರ್ಬದ್ಧಂ ಪಿತೃಪತ್ನೀಸ್ತಥಾ ಹೃತಾಃ ।
ನಷ್ಟಂ ದಶಾರ್ಣರಾಷ್ಟ್ರಂ ಚ ಶ್ರುತ್ವಾ ಚುಕ್ರೋಶ ಸಿಂಹವತ್ ॥ ೧೮ ॥
ಸ ಖಡ್ಗಶಂಖಾವಾದಾಯ ವೈಶ್ಯಪುತ್ರಸಹಾಯವಾನ್ ।
ದಂಶಿತೋ ಹಯಮಾರುಹ್ಯ ಕುಮಾರೋ ವಿಜಿಗೀಷಯಾ ॥ ೧೯ ॥

---

೧೩. ಅವನ ಮಂತ್ರಿಗಳನ್ನೂ, ಸೈನ್ಯವನ್ನೂ ಜಯಿಸಿ ವಿಜಯಸಂಪತ್ತಿನಿಂದ ಪ್ರಕಾಶಿಸುತ್ತ ಅವನ ಪಟ್ಟಣವನ್ನು ಪ್ರವೇಶಿಸಿದರು.

೧೪. ಆ ಶತ್ರುಗಳು ವಜ್ರಬಾಹುವಿನ ಅಶ್ವಗಳನ್ನೂ, ಮನುಷ್ಯರನ್ನೂ, ಆನೆಗಳನ್ನೂ, ಒಂಟೆಗಳನ್ನೂ, ಪಶುಗಳನ್ನೂ, ದ್ರವ್ಯಗಳನ್ನೂ, ಸಕಲ ಯುವತಿಯರನ್ನೂ, ಸುಂದರಿಯರಾದ ಕನ್ಯೆಯರನ್ನೂ ಅಪಹರಿಸಿದರು.

೧೫. ರಾಣಿಯರನ್ನೂ, ಸಾವಿರಾರು ದಾಸಿಯರನ್ನೂ ಸೆರೆಯಲ್ಲಿಟ್ಟರು. ರತ್ನಗಳಿಂದ ತುಂಬಿದ ಬೊಕ್ಕಸವನ್ನೂ ಅಪಹರಿಸಿದರು.

೧೬. ಹೀಗೆ ಆ ಶತ್ರುಗಳು ಪಟ್ಟಣವನ್ನು ಹಾಳುಮಾಡಿ ಹೆಂಗಸರು ಗೋವುಗಳೇ ಮೊದಲಾದುವನ್ನು ಅಪಹರಿಸಿ ವಜ್ರಬಾಹುವನ್ನು ಬಲಾತ್ಕಾರದಿಂದ ಕಟ್ಟಿ ರಥದಲ್ಲಿಟ್ಟುಕೊಂಡು ಹೊರಟುಹೋದರು.

೧೭. ಹೀಗೆ ರಾಷ್ಟ್ರವು ನಾಶವಾಗಿ ಕೋಲಾಹಲವುಂಟಾಗಲು ಬಲಿಷ್ಠನಾದ ಭದ್ರಾಯುವು ಆ ಸಮಾಚಾರವನ್ನು ಕೇಳಿದನು.

೧೮. ತಂದೆಯನ್ನು ಶತ್ರುಗಳು ಸೆರೆ ಹಿಡಿದುದನ್ನೂ, ತಂದೆಯ ರಾಣಿಯರನ್ನು ಅಪಹರಿಸಿರುವುದನ್ನೂ, ದಶಾರ್ಣದೇಶವು ಹಾಳಾದುದನ್ನೂ ಕೇಳಿ ಸಿಂಹದಂತೆ ಗರ್ಜಿಸಿದನು.

೧೯–೨೧. ಅವನು ವೈಶ್ಯಸುತನ ಸಹಾಯವುಳ್ಳವನಾಗಿ ಖಡ್ಗ ಶಂಖಗಳನ್ನು ತೆಗೆದುಕೊಂಡು ಯುದ್ಧಸಾಮಗ್ರಿಗಳೊಡನೆ ಕುದುರೆಯನ್ನೇರಿ ಜಯಿಸ

CC-0. Jangamwadi Math Collection. Digitized by eGangotri

ಜವೇನಾಗತ್ಯ ತಂ ದೇಶಂ ಮಾಗಧೈರಭಿಪೂರಿತಂ ।
ದಹ್ಯಮಾನಂ ಕ್ರಂದಮಾನಂ ಹೃತಸ್ತ್ರೀಸುತಗೋಧನಂ ॥ ೨೦ ॥
ದೃಷ್ಟ್ವಾ ರಾಜಜನಂ ಸರ್ವಂ ರಾಜ್ಯಂ ಶೂನ್ಯಂ ಭಯಾಕುಲಂ ।
ಕ್ರೋಧಾಧ್ಮಾತಮನಾಸ್ತೂರ್ಣಂ ಪ್ರವಿಶ್ಯ ರಿಪುವಾಹಿನೀಂ ।
ಆಕರ್ಣಾಕೃಷ್ಟಕೋದಂಡೋ ವವರ್ಷ ಶರಸಂತತೀಃ ॥ ೨೧ ॥
ತೇ ಹನ್ಯಮಾನಾ ರಿಪವೋ ರಾಜಪುತ್ರೇಣ ಸಾಯಕೈಃ ।
ತಮಭಿದ್ರುತ್ಯ ವೇಗೇನ ಶರೈರ್ವಿವ್ಯಧುರುಲ್ಬಣೈಃ ॥ ೨೨ ॥
ಹನ್ಯಮಾನೋಽಸ್ತ್ರಪೂಗೇನ ರಿಪುಭಿರ್ಯುದ್ಧದುರ್ಮದೈಃ ।
ನ ಚಚಾಲ ರಣೇ ಧೀರಃ ಶಿವವರ್ಮಾಽಭಿರಕ್ಷಿತಃ ॥ ೨೩ ॥
ಸೋಽಸ್ತ್ರವರ್ಷಂ ಪ್ರಸಹ್ಯಾಶು ಪ್ರವಿಶ್ಯ ಗಜಲೀಲಯಾ ।
ಜಘಾನಾಶು ರಥಾನ್ನಾಗಾನ್ಪದಾತೀನಪಿ ಭೂರಿಶಃ ॥ ೨೪ ॥
ತತ್ರೈಕಂ ರಥಿನಂ ಹತ್ವಾ ಸಸೂತಂ ನೃಪನಂದನಃ ।
ತಮೇವ ರಥಮಾಸ್ಥಾಯ ವೈಶ್ಯನಂದನಸಾರಥಿಃ ।
ವಿಚಚಾರ ರಣೇ ಧೀರಃ ಸಿಂಹೋ ಮೃಗಕುಲಂ ಯಥಾ ॥ ೨೫ ॥

---

ಲಿಚ್ಛೆಯಿಂದ ಮಾಗಧರು ತುಂಬಿರುವ ಆ ದಶಾರ್ಣದೇಶಕ್ಕೆ ವೇಗದಿಂದ ಬಂದು, ಸುಡುತ್ತಿರುವುದೂ, ಸ್ತ್ರೀ, ಗೋವುಗಳನ್ನು ಅಪಹಾರಮಾಡಿದುದೂ, ಶೂನ್ಯವಾದುದೂ ಆಗಿರುವ ಭಯಗ್ರಸ್ತವಾದ ರಾಜ್ಯವನ್ನು ಕಂಡು ಕುಪಿತನಾಗಿ ಕೂಡಲೆ ಶತ್ರುಸೈನ್ಯವನ್ನು ಹೊಕ್ಕು ಬಿಲ್ಲನ್ನು ಎಳೆದು ಬಾಣಗಳ ಮಳೆಯನ್ನು ಸುರಿಸಿದನು.

೨೨. ಆ ರಾಜಕುಮಾರನು ಬಾಣಗಳಿಂದ ಶತ್ರುಗಳನ್ನು ಹೊಡೆಯಲು ಅವರು ವೇಗವಾಗಿ ಅವನನ್ನು ಅಟ್ಟಿಸಿಕೊಂಡು ಬಂದು ಕ್ರೂರವಾದ ಬಾಣಗಳಿಂದ ಹೊಡೆದರು.

೨೩. ಶಿವಕವಚದಿಂದ ರಕ್ಷಣೆಹೊಂದಿದ ಧೀರನಾದ ಆ ರಾಜಕುಮಾರನು ಮತ್ತರಾದ ಶತ್ರುಗಳು ಬಾಣಗಳ ಸಮೂಹದಿಂದ ಹೊಡೆದರೂ ಯುದ್ಧಾಂಗಣದಿಂದ ಅಲ್ಲಾಡಲಿಲ್ಲ.

೨೪. ಆ ಕುಮಾರನು ಶತ್ರುಗಳ ಆಯುಧಗಳನ್ನು ಸಹಿಸಿಕೊಂಡು ಆನೆಯಂತೆ ಮುನ್ನುಗ್ಗಿ ಕೂಡಲೆ ಬಹಳವಾಗಿ ರಥ, ಆನೆ, ಕಾಲಾಳುಗಳನ್ನು ಕೊಂದನು.

೨೫. ಅವನು ಅಲ್ಲೊಬ್ಬ ರಥಿಕನನ್ನು ಸಾರಥಿಯೊಡನೆ ಕೊಂದು ಅವನ ರಥದಲ್ಲಿಯೇ ಕುಳಿತು ವೈಶ್ಯಕುಮಾರನನ್ನು ಸಾರಥಿಯನ್ನಾಗಿ ಮಾಡಿಕೊಂಡು ಜಿಂಕೆಗಳ ನಡುವೆ ಸಿಂಹದಂತೆ ಯುದ್ಧಾಂಗಣದಲ್ಲಿ ಧೈರ್ಯದಿಂದ ಸಂಚರಿಸಿದನು.

CC-0. Jangamwadi Math Collection. Digitized by eGangotri

ಅಥ ಸರ್ವೇ ಸುಸಂರಬ್ಧಾಃ ಶೂರಾಃ ಪ್ರೋದ್ಯತಕಾರ್ಮುಕಾಃ ।
ಅಭಿಸಸ್ರುಸ್ತಮೇವೈಕಂ ಚಮೂಪಾ ಬಲಶಾಲಿನಃ ॥ ೨೬ ॥
ತೇಷಾಮಾಪತತಾಮಗ್ರೇ ಖಡ್ಗಮುದ್ಯಮ್ಯ ದಾರುಣಂ ।
ಅಭ್ಯುದ್ಯಯೌ ಮಹಾವೀರಾನ್ದರ್ಶಯನ್ನಿವ ಪೌರುಷಂ ॥ ೨೭ ॥
ಕರಾಲಾಂತಕಜಿಹ್ವಾಭಂ ತಸ್ಯ ಖಡ್ಗಂ ಮಹೋಜ್ವಲಂ ।
ದೃಷ್ಟ್ವೈವ ಸಹಸಾ ಮಮ್ರುಶ್ಚಮೂಪಾಸ್ತತ್ಪ್ರಭಾವತಃ ॥ ೨೮ ॥
ಯೇ ಯೇ ಪಶ್ಯಂತಿ ತಂ ಖಡ್ಗಂ ಪ್ರಸ್ಫುರಂತಂ ರಣಾಂಗಣೇ ।
ತೇ ಸರ್ವೇ ನಿಧನಂ ಜಗ್ಮುರ್ವಜ್ರಂ ಪ್ರಾಪ್ಯೇವ ಕೀಟಕಾಃ ॥ ೨೯ ॥
ಅಥಾಽಸೌ ಸರ್ವಸೈನ್ಯಾನಾಂ ವಿನಾಶಾಯ ಮಹಾಭುಜಃ ।
ಶಂಖಂ ದಧ್ಮೌ ಮಹಾರಾವಂ ಪೂರಯನ್ನಿವ ರೋದಸೀ ॥ ೩೦ ॥
ತೇನ ಶಂಖನಿನಾದೇನ ವಿಷಾಕ್ತೇನೈವ ಭೂಯಸಾ ।
ಶ್ರುತಮಾತ್ರೇಣ ರಿಪವೋ ಮೂರ್ಛಿತಾಃ ಪತಿತಾ ಭುವಿ ॥ ೩೧ ॥
ಯೇಽಶ್ವಪೃಷ್ಠೇ ರಥೇ ಯೇಚ ಯೇಚ ದಂತಿಷು ಸಂಸ್ಥಿತಾಃ ।
ತೇ ವಿಸಂಜ್ಞಾಃ ಕ್ಷಣಾತ್ಪೇತುಃ ಶಂಖನಾದಹತೌಜಸಃ ॥ ೩೨ ॥

---

೨೬. ಬಳಿಕ ಬಲಶಾಲಿಗಳಾದ ಸೈನ್ಯನಾಯಕರು ಅತಿ ಕೋಪದಿಂದ ಬಿಲ್ಲನ್ನು ಎತ್ತಿಕೊಂಡು ಒಬ್ಬಂಟಿಗನಾದ ಆ ಕುಮಾರನನ್ನು ಅಟ್ಟಿಸಿಕೊಂಡು ಬಂದರು.

೨೭. ಆ ಕುಮಾರನು ನುಗ್ಗುತ್ತಿರುವ ಅವರ ಮುಂದೆ ದಾರುಣಖಡ್ಗವನ್ನು ಎತ್ತಿಕೊಂಡು ಪೌರುಷವನ್ನು ತೋರಿಸುವವನಂತೆ ಆ ವೀರರನ್ನು ಎದುರುಗೊಂಡನು.

೨೮. ಆ ಸೈನ್ಯಾಧಿಪತಿಗಳು ಅಂತಕನ ಭಯಂಕರವಾದ ನಾಲಿಗೆಯಂತಿರುವ ಅವನ ಉಜ್ವಲ ಖಡ್ಗವನ್ನು ನೋಡಿದ ಕೂಡಲೆ ಅದರ ಪ್ರಭಾವದಿಂದ ಮಡಿದರು.

೨೯. ವಜ್ರಾಯುಧಕ್ಕೆ ಸಿಕ್ಕಿದ ಕೀಟದಂತೆ ಯುದ್ಧಾಂಗಣದಲ್ಲಿ ವಿರಾಜಿಸುತ್ತಿರುವ ಆ ಕತ್ತಿಯನ್ನು ಕಂಡವರೆಲ್ಲರೂ ಸತ್ತರು.

೩೦. ಬಳಿಕ ಆ ರಾಜಕುಮಾರನು ಸಮಸ್ತ ಶತ್ರುಸೈನ್ಯದ ನಾಶಕ್ಕಾಗಿ ಆಕಾಶ ಭೂಮಿಗಳನ್ನು ತುಂಬುವಂತೆ ಮಹಾಧ್ವನಿಯುಳ್ಳ ಶಂಖವನ್ನೂದಿದನು.

೩೧. ವಿಷದಂತಿರುವ ಆ ಶಂಖದ ಶಬ್ದವನ್ನು ಕೇಳಿದ ಕೂಡಲೆ ಶತ್ರುಗಳು ಮೂರ್ಛೆಗೊಂಡು ಭೂಮಿಯಲ್ಲಿ ಬಿದ್ದರು.

೩೨. ಕುದುರೆಯ ಮೇಲೆಯೂ, ಆನೆಯ ಮೇಲೆಯೂ, ರಥದಲ್ಲಿಯೂ

CC-0. Jangamwadi Math Collection. Digitized by eGangotri

ತಾನ್ಭೂಮೌ ಪತಿತಾನ್ಸರ್ವಾನ್ನಷ್ಟಸಂಜ್ಞಾನ್ನಿರಾಯುಧಾನ್ ।
ವಿಗಣಯ್ಯ ಶವಪ್ರಾಯಾನ್ನಾಽವಧೀದ್ಧರ್ಮಶಾಸ್ತ್ರವಿತ್ ॥ ೩೩ ॥
ಆತ್ಮನಃ ಪಿತರಂ ಬದ್ಧಂ ಮೋಚಯಿತ್ವಾ ರಣಾಜಿರೇ ।
ತತ್ಪತ್ನೀಃ ಶತ್ರುವಶಗಾಃ ಸರ್ವಾಃ ಸದ್ಯೋ ವ್ಯಮೋಚಯತ್ ॥ ೩೪ ॥
ಪತ್ನೀಶ್ಚ ಮಂತ್ರಿಮುಖ್ಯಾನಾಂ ತಥಾಽನ್ಯೇಷಾಂ ಪುರೌಕಸಾಂ ।
ಸ್ತ್ರಿಯೋ ಬಾಲಾಂಶ್ಚ ಕನ್ಯಾಶ್ಚ ಗೋಧನಾದೀನ್ಯನೇಕಶಃ ॥ ೩೫ ॥
ಮೋಚಯಿತ್ವಾ ರಿಪುಭಯಾತ್ತಮಾಶ್ವಾಸಯದಾಕುಲಃ ।
ಅಥಾಽರಿಸೈನ್ಯೇಷು ಚರಂಸ್ತೇಷಾಂ ಜಗ್ರಾಹ ಯೋಷಿತಃ ॥ ೩೬ ॥
ಮರುನ್ಮನೋಜವಾನಶ್ವಾನ್ಮಾತಂಗಾನ್ಗಿರಿಸನ್ನಿಭಾನ್ ।
ಸ್ಯಂದನಾನಿ ಚ ರೌಕ್ಮಾಣಿ ದಾಸೀಶ್ಚ ರುಚಿರಾನನಾಃ ॥ ೩೭ ॥
ಸರ್ವಮಾಹೃತ್ಯ ವೇಗೇನ ಗೃಹೀತ್ವಾ ತದ್ಧನಂ ಬಹು ।
ಮಾಗಧೇಶಂ ಹೇಮರಥಂ ನಿರ್ಬಬಂಧ ಪರಾಜಿತಂ ॥ ೩೮ ॥
ತನ್ಮಂತ್ರಿಣಶ್ಚ ಭೂಪಾಂಶ್ಚ ತತ್ರ ಮುಖ್ಯಾಂಶ್ಚ ನಾಯಕಾನ್ ।
ಗೃಹೀತ್ವಾ ತರಸಾ ಬದ್ಧ್ವಾ ಪುರೀಂ ಪ್ರಾವೇಶಯದ್ದ್ರುತಂ ॥ ೩೯ ॥

---

ಕುಳಿತಿರುವ ಶತ್ರುಸೈನಿಕರೆಲ್ಲ ಶಂಖದ ಧ್ವನಿಯಿಂದ ಬಲಗುಂದಿ ಮೂರ್ಛೆಗೊಂಡು ಕೆಳಗೆ ಬಿದ್ದರು.

೩೩. ಧರ್ಮಶಾಸ್ತ್ರವನ್ನರಿತ ಆ ರಾಜಕುಮಾರನು ಮೂರ್ಛೆಗೊಂಡು ಭೂಮಿಯಲ್ಲಿ ಬಿದ್ದವರೂ, ಆಯುಧವಿಲ್ಲದವರೂ ಆದ ಆ ಸೈನಿಕರನ್ನು ಶವಪ್ರಾಯರನ್ನಾಗಿ ಎಣಿಸಿ ಕೊಲ್ಲಲಿಲ್ಲ.

೩೪. ಯುದ್ಧಾಂಗಣದಲ್ಲಿ ಬದ್ಧನಾದ ತನ್ನ ತಂದೆಯನ್ನು ಬಿಡಿಸಿ ಶತ್ರುವಶರಾದ ಅವನ ಪತ್ನಿಯರನ್ನು ಕೂಡಲೆ ಬಿಡಿಸಿದನು.

೩೫–೩೮. ಮುಖ್ಯ ಮಂತ್ರಿಗಳ ಪತ್ನಿಯರನ್ನೂ, ಇತರ ಪಟ್ಟಣಿಗರ ಸ್ತ್ರೀಯರನ್ನೂ, ಬಾಲಕರನ್ನೂ, ಕನ್ಯೆಯರನ್ನೂ, ಅನೇಕ ಗೋವುಗಳನ್ನೂ ಶತ್ರುಗಳಿಂದ ಬಿಡಿಸಿ ಆ ರಾಜನನ್ನು ಸಮಾಧಾನಗೊಳಿಸಿ ತರುವಾಯ ಶತ್ರುಸೈನ್ಯಗಳಲ್ಲಿ ಸಂಚರಿಸುತ್ತ ಅವರ ಹೆಂಗಸರನ್ನೂ, ಗಾಳಿ, ಮನಸ್ಸಿಗಿಂತಲೂ ವೇಗವುಳ್ಳ ಕುದುರೆಗಳನ್ನೂ, ಬೆಟ್ಟದಂತಿರುವ ಆನೆಗಳನ್ನೂ, ಸುವರ್ಣದ ರಥಗಳನ್ನೂ, ಸುಂದರಿಯರಾದ ದಾಸಿಯರನ್ನೂ, ಸಕಲ ಧನವನ್ನೂ ತೆಗೆದುಕೊಂಡು ಸೋತಿರುವ ಮಗಧರಾಜನಾದ ಹೇಮರಥನನ್ನು ಬಂಧಿಸಿದನು.

೩೯. ಆ ಹೇಮರಥನ ಮಂತ್ರಿಗಳನ್ನೂ, ಸಾಮಂತರಾಜರನ್ನೂ, ಮುಖ್ಯ



CC-0. Jangamwadi Math Collection. Digitized by eGangotri

ಪೂರ್ವಂ ಯೇ ಸಮರೇ ಭಗ್ನಾ ವಿಪ್ರವೃತ್ತಾಃ ಸರ್ವತೋದಿಶಂ ।
ತೇ ಮಂತ್ರಿಮುಖ್ಯಾ ವಿಶ್ವಸ್ತಾ ನಾಯಕಾಶ್ಚ ಸಮಾಯಯುಃ ॥ ೪೦ ॥
ಕುಮಾರವಿಕ್ರಮಂ ದೃಷ್ಟ್ವಾ ಸರ್ವೇ ವಿಸ್ಮಿತಮಾನಸಾಃ ।
ತಂ ಮೇನಿರೇ ಸುರಶ್ರೇಷ್ಠಂ ಕಾರಣಾದಾಗತಂ ಭುವಂ ॥ ೪೧ ॥
ಅಹೋ ನಃ ಸುಮಹಾಭಾಗ್ಯಮಹೋ ನಸ್ತಪಸಃ ಫಲಂ ।
ಕೇನಾಪ್ಯನೇನ ವೀರೇಣ ಮೃತಾಃ ಸಂಜೀವಿತಾಃ ಖಲು ॥ ೪೨ ॥
ಏಷ ಕಿಂ ಯೋಗಸಿದ್ಧೋ ವಾ ತಪಃ ಸಿದ್ಧೋಽಥವಾಽಮರಃ ।
ಅಮಾನುಷಮಿದಂ ಕರ್ಮ ಯದನೇನ ಕೃತಂ ಮಹತ್ ॥ ೪೩ ॥
ನೂನಮಸ್ಯ ಭವೇನ್ಮಾತಾ ಸಾ ಗೌರೀತಿ ಶಿವಃ ಪಿತಾ ।
ಅಕ್ಷೌಹಿಣೀನಾಂ ನವಕಂ ಜಿಗಾಯಾಽನಂತಶಕ್ತಿಧೃಕ್ ॥ ೪೪ ॥
ಇತ್ಯಾಶ್ಚರ್ಯಯುತೈರ್ಹೃಷ್ಟೈಃ ಪ್ರಶಂಸದ್ಭಿಃ ಪರಸ್ಪರಂ ।
ಪೃಷ್ಟೋಽಮಾತ್ಯಜನೇನಾಽಸಾವಾತ್ಮಾನಂ ಪ್ರಾಹ ತತ್ವತಃ ॥ ೪೫ ॥

---

ನಾಯಕರನ್ನೂ ಬಲದಿಂದ ಹಿಡಿದು ಕಟ್ಟಿ ಶೀಘ್ರವಾಗಿ ತನ್ನ ಪಟ್ಟಣಕ್ಕೆ ಸಾಗಿಸಿದನು.

೪೦. ಹಿಂದೆ ಯುದ್ಧದಲ್ಲಿ ಹೊಡೆಯಲ್ಪಟ್ಟು ನಾನಾ ದಿಕ್ಕಿಗೆ ಓಡಿಹೋದ ಅವನ ಮುಖ್ಯ ಮಂತ್ರಿಗಳೂ, ಸೇನಾನಾಯಕರೂ ನಂಬಿಕೆಗೊಂಡು ಹಿಂದಿರುಗಿದರು.

೪೧. ಆ ಕುಮಾರನ ಪರಾಕ್ರಮವನ್ನು ನೋಡಿ ಎಲ್ಲರೂ ಅಚ್ಚರಿಗೊಂಡು ಅವನನ್ನು ಯಾವುದೊ ಒಂದು ಕಾರಣದಿಂದ ಭೂಮಿಗಿಳಿದುಬಂದಿರುವ ಶ್ರೇಷ್ಠ ದೇವತೆಯನ್ನಾಗಿ ತಿಳಿದರು.

೪೨. "ಯಾವನೊ ಒಬ್ಬ ವೀರನಾದ ಇವನಿಂದ, ಮಡಿದ ನಾವು ತಿರುಗಿ ಬದುಕಿಸಲ್ಪಟ್ಟುದರಿಂದ ನಮ್ಮ ಪುಣ್ಯವೂ ತಪಸ್ಸಿನ ಫಲವೂ ಅದ್ಭುತವಾದುದು.

೪೩. ಮನುಷ್ಯರಿಂದ ಮಾಡಲಾಗದ ಕಾರ್ಯವನ್ನೆಸಗಿದ ಇವನು ಯೋಗ ಸಿದ್ಧಿಯುಳ್ಳವನೊ, ತಪಸ್ಸಿದ್ಧಿಯುಳ್ಳವನೊ, ಅಥವಾ ದೇವತೆಯೊ ಆಗಿರಬೇಕು.

೪೪. ನಿಜವಾಗಿಯೂ ಇವನ ತಾಯಿಯು ಗೌರೀದೇವಿಯು. ತಂದೆಯು ಮಹೇಶ್ವರನೇ ಆಗಿರಬೇಕು. ಆದುದರಿಂದಲೆ ಇವನು ಅಪರಿಮಿತ ಶಕ್ತಿಯುಳ್ಳವನಾಗಿ ಒಂಬತ್ತು ಅಕ್ಷೌಹಿಣೀಸೇನೆಗಳನ್ನು ಗೆದ್ದನು."

೪೫. ಹೀಗೆ ಆಶ್ಚರ್ಯಗೊಂಡವರೂ, ಸಂತೋಷವುಳ್ಳವರೂ, ಪರಸ್ಪರವಾಗಿ ಹೊಗಳುವವರೂ ಆದ ಮಂತ್ರಿಗಳು ಅವನನ್ನು ನೀನಾರೆಂದು ಕೇಳಲು ಅವನು ತನ್ನ ನಿಜವಾದ ವೃತ್ತಾಂತವನ್ನರುಹಿದನು.

CC-0. Jangamwadi Math Collection. Digitized by eGangotri

ಸಮಾಗತಂ ಸ್ವಪಿತರಂ ವಿಸ್ಮಯಾಹ್ಲಾದವಿಪ್ಲುತಂ ।
ಮುಂಚಂತಮಾನಂದಜಲಂ ವವಂದೇ ಪ್ರೇಮವಿಹ್ವಲಃ ॥ ೪೭ ॥
ಸ ರಾಜಾ ನಿಜಪುತ್ರೇಣ ಪ್ರಣಯಾದಭಿವಂದಿತಃ ।
ಆಶ್ಲಿಷ್ಯ ಗಾಢಂ ತರಸಾ ಬಭಾಷೇ ಪ್ರೇಮಕಾತರಃ ॥ ೪೭ ॥
ಕಸ್ತ್ವಂ ದೇವೋ ಮನುಷ್ಯೋ ವಾ ಗಂಧರ್ವೋ ವಾ ಮಹಾಮತೇ ।
ಕಾ ಮಾತಾ ಜನಕಃ ಕೋ ವಾ ಕೋ ದೇಶಸ್ತವ ನಾಮ ಕಿಂ ॥ ೪೮ ॥
ಕಸ್ಮಾನ್ನಃ ಶತ್ರುಭಿರ್ಬದ್ಧಾನ್ಮೃತಾನಿವ ಹತೌಜಸಃ ।
ಕಾರುಣ್ಯಾದಿವ ಸಂಪ್ರಾಪ್ಯ ಸಪತ್ನೀಕಾನ್ಮುಮೋಚಯಃ ॥ ೪೯ ॥
ಕುತೋ ಲಬ್ಧಮಿದಂ ಧೈರ್ಯಂ ಶೌರ್ಯಂ ತೇಜೋಬಲೋನ್ನತಿಃ ।
ಜಿಗೀಷಸೀವ ಲೋಕಾಂಸ್ತ್ರೀನ್ಸದೇವಾಽಸುರಮಾನುಷಾನ್ ॥ ೫೦ ॥
ಅಪಿ ಜನ್ಮಸಹಸ್ರೇಣ ತವಾನೃಣ್ಯಂ ಮಹೌಜಸಃ ।
ಕರ್ತುಂ ನಾಽಹಂ ಸಮರ್ಥೋಽಸ್ಮಿ ಸಹೈಭಿರ್ದಾರಬಾಂಧವೈಃ ॥ ೫೧ ॥
ಇಮಾನ್ಪುತ್ರಾನಿಮಾಃ ಪತ್ನೀರಿದಂ ರಾಜ್ಯಮಿದಂ ಪುರಂ ।
ಸರ್ವಂ ವಿಹಾಯ ಮಚ್ಚಿತ್ತಂ ತ್ವಯ್ಯೇವ ಪ್ರೇಮಬಂಧನಂ ॥ ೫೨ ॥

---

೪೬. ಆಶ್ಚರ್ಯಸಂತೋಷಗಳಲ್ಲಿ ಮುಳುಗಿ ಆನಂದಬಾಷ್ಪಗಳನ್ನು ಸುರಿಸುತ್ತ ಅಲ್ಲಿ ಬಂದಿರುವ ತಂದೆಯನ್ನು ಪ್ರೀತಿಯಿಂದ ವಂದಿಸಿದನು.

೪೭. ಆ ರಾಜನು ತನ್ನ ಮಗನು ಪ್ರೀತಿಯಿಂದ ನಮಸ್ಕಾರಮಾಡಲು ಅವನನ್ನು ಪ್ರೇಮದಿಂದ ಬಿಗಿಯಾಗಿ ತಬ್ಬಿಕೊಂಡು ಇಂತೆಂದನು.

೪೮–೪೯. "ಎಲೈ ಪ್ರಾಜ್ಞನೆ! ನೀನಾರು? ದೇವತೆಯೊ? ಮನುಷ್ಯನೊ? ಗಂಧರ್ವನೊ? ನಿನ್ನ ತಾಯಿಯಾರು? ತಂದೆಯಾರು? ನಿನ್ನ ದೇಶವಾವುದು? ನಿನ್ನ ಹೆಸರೇನು? ನೀನು ಯಾವ ಕಾರಣದಿಂದ ದಯೆಗೊಂಡು ಇಲ್ಲಿಗೆ ಬಂದು ಶತ್ರುಗಳಿಂದ ಬಂಧಿತರಾಗಿ ಸತ್ತವರಂತೆ ಶಕ್ತಿಯಿಲ್ಲದಿದ್ದ ನಮ್ಮನ್ನು ಪತ್ನಿಯರೊಡನೆ ಬಿಡಿಸಿದೆ?

೫೦. ಈ ಶೌರ್ಯವೂ, ಧೈರ್ಯವೂ, ತೇಜಸ್ಸೂ, ಅತಿ ಬಲವೂ ನಿನಗೆ ಎಲ್ಲಿಂದ ಬಂದಿತು? ದೇವತೆಗಳು, ಅಸುರರು, ಮನುಷ್ಯರು ಇವರಿಂದ ಸಹಿತವಾದ ಮೂರು ಲೋಕಗಳನ್ನು ಜಯಿಸಲಿಚ್ಛಿಸುವಂತಿರುವೆ.

೫೧. ಅತಿ ಬಲಿಷ್ಠನಾದ ನಿನ್ನ ಋಣವನ್ನು ತೀರಿಸಲು ನಾನು ಅನೇಕ ಜನ್ಮಗಳಿಂದಲೂ ಈ ಪತ್ನಿ ಬಂಧುಗಳೊಡನೆ ಸಮರ್ಥನಲ್ಲ.

೫೨. ಈ ನನ್ನ ಮನಸ್ಸು ಈ ಮಕ್ಕಳನ್ನೂ, ಈ ಹೆಂಡತಿಯರನ್ನೂ, ಈ ರಾಜ್ಯವನ್ನೂ, ಈ ನಗರವನ್ನೂ ಇವೆಲ್ಲವನ್ನೂ ಬಿಟ್ಟು ನಿನ್ನಲ್ಲಿಯೇ ಪ್ರೀತಿಯಿಂದ ಆಸಕ್ತವಾಗಿರುವುದು.

CC-0. Jangamwadi Math Collection. Digitized by eGangotri

ಸರ್ವಂ ಕಥಯ ಮೇ ತಾತ ಮತ್ಪ್ರಾಣಪರಿರಕ್ಷಕ ।
ಏತಾಸಾಂ ಮಮ ಪತ್ನೀನಾಂ ತ್ವದಧೀನಂ ಹಿ ಜೀವಿತಂ ॥ ೩೩ ॥

ಸೂತ ಉವಾಚ :—

ಇತಿ ಪೃಷ್ಟಃ ಸ ಭದ್ರಾಯುಃ ಸ್ವಪಿತ್ರಾ ತಮಭಾಷತ ।
ಏಷ ವೈಶ್ಯಸುತೋ ರಾಜನ್ಸುನಯೋ ನಾಮ ಮತ್ಸಖಾ ॥ ೩೪ ॥
ಅಹಮಸ್ಯ ಗೃಹೇ ರಮ್ಯೇ ವಸಾಮಿ ಸಹಮಾತೃಕಃ ।
ಭದ್ರಾಯುರ್ನಾಮ ಮದ್ವೃತ್ತಂ ಪಶ್ಚಾದ್ವಿಜ್ಞಾಪಯಾಮಿ ತೇ ॥ ೩೫ ॥
ಪುರಂ ಪ್ರವಿಶ್ಯ ಭದ್ರಂ ತೇ ಸದಾರಃ ಸಸುಹೃಜ್ಜನಃ ।
ತ್ಯಕ್ತ್ವಾ ಭಯಮರಾತಿಭ್ಯೋ ವಿಹರಸ್ವ ಯಥಾಸುಖಂ ॥ ೩೬ ॥
ನೈತಾನ್ಮುಂಚ ರಿಪೂಂಸ್ತಾವದ್ಯಾವದಾಗಮನಂ ಮಮ ।
ಅಹಮದ್ಯ ಗಮಿಷ್ಯಾಮಿ ಶೀಘ್ರಮಾತ್ಮನಿವೇಶನಂ ॥ ೩೭ ॥
ಇತ್ಯುಕ್ತ್ವಾ ನೃಪಮಾಮಂತ್ರ್ಯ ಭದ್ರಾಯುರ್ನೃಪನಂದನಃ ।
ಆಜಗಾಮ ಸ್ವಭವನಂ ಮಾತ್ರೇ ಸರ್ವಂ ನ್ಯವೇದಯತ್ ॥ ೩೮ ॥
ಸಾಽಪಿ ಹೃಷ್ಟಾ ಸ್ವತನಯಂ ಪರಿರೇಭೇಽಶ್ರುಲೋಚನಾ ।
ಸ ಚ ವೈಶ್ಯಪತಿಃ ಪ್ರೇಮ್ಣಾ ಪರಿಷ್ವಜ್ಯಾಽಭ್ಯಪೂಜಯತ್ ॥ ೩೯ ॥

---

೩೩. ನನ್ನ ಪ್ರಾಣವನ್ನು ರಕ್ಷಿಸಿದ ಮಗುವೆ! ನನಗೆಲ್ಲವನ್ನೂ ತಿಳಿಸು. ಈ ನನ್ನ ಪತ್ನಿಯರ ಜೀವವು ನಿನ್ನಧೀನವಾಗಿರುವುದು."

೩೪. ಸೂತನು ಹೇಳುತ್ತಾನೆ:—ತಂದೆಯು ಹೀಗೆ ಕೇಳಲು ಆ ಭದ್ರಾಯುವು ಅವನನ್ನು ಕುರಿತು ಇಂತೆಂದನು. "ದೊರೆಯೆ! ಇವನು ವೈಶ್ಯತನಯನಾಗಿರುವ ನನ್ನ ಗೆಳೆಯನಾದ ಸುನಯನು.

೩೫. ನಾನು ತಾಯಿಯೊಡನೆ ರಮ್ಯವಾದ ಇವನ ಮನೆಯಲ್ಲಿ ವಾಸ ಮಾಡುತ್ತಿದ್ದೇನೆ. ನನ್ನ ಹೆಸರು ಭದ್ರಾಯುವೆಂದು. ನನ್ನ ವೃತ್ತಾಂತವನ್ನು ಆ ಮೇಲೆ ನಿನಗೆ ಅರಿಕೆಮಾಡಿಕೊಳ್ಳುತ್ತೇನೆ.

೩೬. ನೀನು ನಿನ್ನ ಮಂಗಳ ನಗರವನ್ನು ಪತ್ನಿ, ಸ್ನೇಹಿತರು ಇವರೊಡನೆ ಪ್ರವೇಶಿಸಿ ಶತ್ರುಗಳಿಂದ ಭಯಗೊಳ್ಳದೆ ಸುಖವಾಗಿ ವಿಹರಿಸು.

೩೭. ಈ ಶತ್ರುಗಳನ್ನು ನಾನು ಮರಳಿ ಬರುವವರೆಗೆ ಬಿಡಬೇಡ. ನಾನೀಗ ಜಾಗ್ರತೆಯಾಗಿ ನನ್ನ ಮನೆಗೆ ಹೋಗುವೆನು."

೩೮. ಭದ್ರಾಯುವು ಹೀಗೆಂದು ರಾಜನನ್ನು ಕೇಳಿಕೊಂಡು ತನ್ನ ಮನೆಗೆ ಬಂದು ನಡೆದ ವೃತ್ತಾಂತವನ್ನೆಲ್ಲ ತಾಯಿಗೆ ತಿಳಿಸಿದನು.

೩೯. ಅವಳೂ ಸಂತೋಷಗೊಂಡು ಆನಂದಬಾಷ್ಪವನ್ನು ಸುರಿಸುತ್ತ ಮಗನನ್ನು ಅಪ್ಪಿಕೊಂಡಳು. ಆ ವೈಶ್ಯರೊಡೆಯನೂ ಅವನನ್ನು ಪ್ರೀತಿಯಿಂದ ಆಲಿಂಗಿಸಿ ಪೂಜಿಸಿದನು.

CC-0. Jangamwadi Math Collection. Digitized by eGangotri

ವಜ್ರಬಾಹುಶ್ಚ ರಾಜೇಂದ್ರಃ ಪ್ರವಿಷ್ಟೋ ನಿಜಮಂದಿರಂ ।
ಸ್ತ್ರೀಪುತ್ರಾಽಮಾತ್ಯಸಹಿತಃ ಪ್ರಹರ್ಷಮತುಲಂ ಯಯೌ ॥ ೬೦ ॥
ತಸ್ಯಾಂ ನಿಶಾಯಾಂ ವ್ಯುಷ್ಟಾಯಾಮೃಷಭೋ ಯೋಗಿನಾಂ ವರಃ ।
ಚಂದ್ರಾಂಗದಂ ಸಮಾಗತ್ಯ ಸೀಮಂತಿನ್ಯಾಃ ಪತಿಂ ನೃಪಂ ॥ ೬೧ ॥
ಭದ್ರಾಯುಷಃ ಸಮುತ್ಪತ್ತಿಂ ತಸ್ಯ ಕರ್ಮಾಽಪ್ಯಮಾನುಷಂ ।
ಆವೇದ್ಯ ರಹಸಿ ಪ್ರೇಮ್ಣಾ ತ್ವತ್ಸುತಾಂ ಕೀರ್ತಿಮಾಲಿನೀಂ ॥ ೬೨ ॥
ಭದ್ರಾಯುಷೇ ಪ್ರಯಚ್ಛೇತಿ ಬೋಧಯಿತ್ವಾ ಚ ನೈಷಧಂ ।
ಋಷಭೋ ನಿರ್ಜಗಾಮಾಽಥ ದೇಶಕಾಲಾಽರ್ಥತತ್ವವಿತ್ ॥ ೬೩ ॥

॥ ವಿಶೇಷಕಂ ॥

ಅಥ ಚಂದ್ರಾಂಗದೋ ರಾಜಾ ಮುಹೂರ್ತೇ ಮಂಗಲೋಚಿತೇ ।
ಭದ್ರಾಯುಷಂ ಸಮಾಹೂಯ ಪ್ರಾಯಚ್ಛತ್ಕೀರ್ತಿಮಾಲಿನೀಂ ॥ ೬೪ ॥
ಕೃತೋದ್ವಾಹಃ ಸ ರಾಜೇಂದ್ರತನಯಃ ಸಹ ಭಾರ್ಯಯಾ ।
ಹೇಮಾಸನಸ್ಥಃ ಶುಶುಭೇ ರೋಹಿಣ್ಯೇವ ನಿಶಾಕರಃ ॥ ೬೫ ॥
ವಜ್ರಬಾಹುಂ ತತ್ಪಿತರಂ ಸಮಾಹೂಯ ಸ ನೈಷಧಃ ।
ಪುರಂ ಪ್ರವೇಶ್ಯ ಸಾಽಮಾತ್ಯಃ ಪ್ರತ್ಯುದ್ಗಮ್ಯಾಽಭ್ಯಪೂಜಯತ್ ॥ ೬೬ ॥

---

೬೦. ವಜ್ರಬಾಹುರಾಜನೂ ತನ್ನ ಮಂದಿರವನ್ನು ಪ್ರವೇಶಿಸಿ ಪತ್ನೀ, ಪುತ್ರ, ಮಂತ್ರಿಗಳೊಡನೆ ಅತ್ಯಂತವಾಗಿ ಸಂತೋಷಗೊಂಡನು.

೬೧–೬೩. ಆ ರಾತ್ರಿ ಬೆಳಗಾಗಲು ದೇಶಕಾಲವನ್ನರಿತ ಋಷಭಯೋಗಿಯು ಸೀಮಂತಿನಿಯ ಪತಿಯಾದ ಚಂದ್ರಾಂಗದನ ಬಳಿಗೆ ಬಂದು ಭದ್ರಾಯುವಿನ ಉತ್ಪತ್ತಿಯನ್ನೂ, ಅವನ ಮನುಷ್ಯವಿಲಕ್ಷಣವಾದ ಕಾರ್ಯವನ್ನೂ ಪ್ರೀತಿಯಿಂದ ಗುಟ್ಟಿನಲ್ಲಿ ತಿಳಿಸಿ ನಿನ್ನ ಮಗಳಾದ ಕೀರ್ತಿಮಾಲಿನಿಯನ್ನು ಅವನಿಗೆ ಕೊಟ್ಟು ವಿವಾಹಮಾಡೆಂದು ಹೇಳಿ ಹೊರಟುಹೋದನು.

೬೪. ತರುವಾಯ ಚಂದ್ರಾಂಗದನು ವಿವಾಹೋಚಿತ ಮುಹೂರ್ತದಲ್ಲಿ ಭದ್ರಾಯುವನ್ನು ಕರೆಯಿಸಿ ಅವನಿಗೆ ಕೀರ್ತಿಮಾಲಿನಿಯನ್ನು ಕೊಟ್ಟನು.

೬೫. ಮದುವೆಮಾಡಿಕೊಂಡ ಆ ರಾಜಕುಮಾರನು ಭಾರ್ಯೆಯೊಡನೆ ಸುವರ್ಣಾಸನದಲ್ಲಿ ಕುಳಿತು ರೋಹಿಣಿಯೊಡನಿರುವ ಚಂದ್ರನಂತೆ ವಿರಾಜಿಸಿದನು.

೬೬. ನಿಷಧರಾಜನು ಕುಮಾರನ ತಂದೆಯಾದ ವಜ್ರಬಾಹುವನ್ನು ತನ್ನ ಪಟ್ಟಣಕ್ಕೆ ಕರೆಯಿಸಿ ಮಂತ್ರಿಯೊಡನೆ ಅವನನ್ನು ಎದುರುಗೊಂಡು ಪೂಜಿಸಿದನು.

CC-0. Jangamwadi Math Collection. Digitized by eGangotri

ತತ್ರಾಽಪಶ್ಯತ್ಕೃತೋದ್ವಾಹಂ ಭದ್ರಾಯುಷಮರಿಂದಮಂ ।
ಪಾದಯೋಃ ಪತಿತಂ ಪ್ರೇಮ್ಣಾ ಹರ್ಷಾರ್ತ್ತಂ ಪರಿಷಸ್ವಜೇ ॥ ೭೭ ॥
ಏಷ ಮೇ ಪ್ರಾಣದೋ ವೀರ ಏಷ ಶತ್ರುನಿಷೂದನಃ ।
ಅಥಾಽಪ್ಯಜ್ಞಾತವಂಶೋಽಯಂ ಮಯಾಽನಂತಪರಾಕ್ರಮಃ ॥ ೭೮ ॥
ಏಷ ತೇ ನೃಪ ಜಾಮಾತಾ ಚಂದ್ರಾಂಗದಮಹಾಬಲಃ ।
ಅಸ್ಯ ವಂಶಮಥೋತ್ಪತ್ತಿಂ ಶ್ರೋತುಮಿಚ್ಛಾಮಿ ತತ್ತ್ವತಃ ॥ ೭೯ ॥
ಇತ್ಥಂ ದಶಾರ್ಣರಾಜೇನ ಪ್ರಾರ್ಥಿತೋ ನಿಷಧಾಧಿಪಃ ।
ವಿವಿಕ್ತ ಉಪಸಂಗಮ್ಯ ಪ್ರಹಸನ್ನಿದಮಬ್ರವೀತ್ ॥ ೮೦ ॥
ಏಷ ತೇ ತನಯೋ ರಾಜಂಛೈಶವೇ ರೋಗಪೀಡಿತಃ ।
ತ್ವಯಾ ವನೇ ಪರಿತ್ಯಕ್ತಃ ಸಹ ಮಾತ್ರಾ ರುಜಾರ್ತಯಾ ॥ ೮೧ ॥
ಪರಿಭ್ರಮಂತೀ ವಿಪಿನೇ ಸಾ ನಾರೀ ಶಿಶುನಾಽಮುನಾ ।
ದೈವಾದ್ವೈಶ್ಯಗೃಹಂ ಪ್ರಾಪ್ತಾ ತೇನ ವೈಶ್ಯೇನ ರಕ್ಷಿತಾ ॥ ೮೨ ॥
ಅಥಾಽಸೌ ಬಹುರೋಗಾರ್ತೋಽ ಮೃತಸ್ತವ ಕುಮಾರಕಃ ।
ಕೇನಾಽಪಿ ಯೋಗಿರಾಜೇನ ಮೃತಃ ಸಂಜೀವಿತಃ ಪುನಃ ॥ ೮೩ ॥

---

೭೭. ಅಲ್ಲಿ ವಿವಾಹಿತನಾಗಿ ತನಗೆ ನಮಸ್ಕಾರಮಾಡಿದ ಭದ್ರಾಯುವನ್ನು ವಜ್ರಬಾಹುವು ಸಂತೋಷದಿಂದ ಆಲಿಂಗಿಸಿದನು.

೭೮. "ಇವನು ನನಗೆ ಪ್ರಾಣದಾನಮಾಡಿದವನೂ, ವೀರನೂ, ಶತ್ರುನಾಶಕನೂ ಆಗಿದ್ದಾನೆ. ಆದರೆ ಈ ಶೂರನ ವಂಶವನ್ನು ನಾನರಿಯೆನು.

೭೯. ಚಂದ್ರಾಂಗದ! ಮಹಾಬಲಶಾಲಿಯಾದ ಈ ನಿನ್ನ ಅಳಿಯನ ವಂಶವನ್ನೂ, ಹುಟ್ಟಿದ ಕ್ರಮವನ್ನೂ ಕೇಳಲು ಬಯಸುವೆನು."

೮೦. ಹೀಗೆ ದಶಾರ್ಣರಾಜನಾದ ವಜ್ರಬಾಹುವು ಪ್ರಾರ್ಥಿಸಲು ನಿಷಧ ದೇಶದ ದೊರೆಯಾದ ಚಂದ್ರಾಂಗದನು ಗುಟ್ಟಾದ ಸ್ಥಳಕ್ಕೆ ಅವನನ್ನು ಕರೆದು ನಗುತ್ತ ಹೀಗೆಂದನು.

೮೧. "ಇವನು ಬಾಲ್ಯದಲ್ಲಿ ರೋಗಪೀಡಿತನಾದುದರಿಂದ ನೀನು ರುಗ್ಣಳಾದ ತಾಯಿಯೊಡನೆ ಕಾಡಿನಲ್ಲಿ ತ್ಯಜಿಸಿದ ನಿನ್ನ ಮಗನು.

೮೨. ಇವನ ತಾಯಿಯು ಇವನೊಡನೆ ಕಾಡಿನಲ್ಲಿ ಅಲೆಯುತ್ತ ದೈವವಶದಿಂದ ವೈಶ್ಯನ ಮನೆಯನ್ನು ಸೇರಲು ಆ ವೈಶ್ಯರಾಜನು ಇವಳನ್ನು ಕಾಪಾಡಿದನು.

೮೩. ಬಳಿಕ ಅತಿ ರೋಗದಿಂದ ಪೀಡಿತನಾದ ಈ ನಿನ್ನ ಮಗನು ಮಡಿಯಲು ಇವನನ್ನು ಒಬ್ಬ ಶಿವಯೋಗಿಯು ಬದುಕಿಸಿದನು.

CC-0. Jangamwadi Math Collection. Digitized by eGangotri

ಋಷಭಾಖ್ಯಸ್ಯ ತಸ್ಯೈವ ಪ್ರಭಾವಾಚ್ಛಿವಯೋಗಿನಃ ।
ರೂಪಂ ಚ ದೇವಸದೃಶಂ ಪ್ರಾಪ್ತೌ ಮಾತೃಕುಮಾರಕೌ ॥ ೭೪ ॥
ತೇನ ದತ್ತೇನ ಖಡ್ಗೇನ ಶಂಖೇನ ರಿಪುಘಾತಿನಾ ।
ಜಿಗಾಯ ಸಮರೇ ಶತ್ರೂಂಛಿವವರ್ಮಾಭಿರಕ್ಷಿತಃ ॥ ೭೫ ॥
ದ್ವಿಷಟ್ಸಹಸ್ರನಾಗಾನಾಂ ಬಲಮೇಕೋ ಬಿಭರ್ತ್ಯಸೌ ।
ಸರ್ವವಿದ್ಯಾಸು ನಿಷ್ಣಾತೋ ಮಮ ಜಾಮಾತೃತಾಂ ಗತಃ ॥ ೭೬ ॥
ಅತ ಏನಂ ಸಮಾದಾಯ ಮಾತರಂ ಚಾಸ್ಯ ಸುವ್ರತಾಂ ।
ಗಚ್ಛ ಸ್ವನಗರೀಂ ರಾಜನ್ಪ್ರಾಪ್ಸ್ಯಸಿ ಶ್ರೇಯ ಉತ್ತಮಂ ॥ ೭೭ ॥
ಇತಿ ಚಂದ್ರಾಂಗದಃ ಸರ್ವಮಾಖ್ಯಾಯಾಂತರ್ಗೃಹೇ ಸ್ಥಿತಾಂ ।
ತಸ್ಯಾಗ್ರಪತ್ನೀಮಾಹೂಯ ದರ್ಶಯಾಮಾಸ ಭೂಷಿತಾಂ ॥ ೭೮ ॥
ಇತ್ಯಾದಿ ಸರ್ವಮಾಕರ್ಣ್ಯ ದೃಷ್ಟ್ವಾ ಚ ಸ ಮಹೀಪತಿಃ ।
ವ್ರೀಡಿತೋ ನಿತರಾಂ ಮೌಢ್ಯಾತ್ಸ್ವಕೃತಂ ಕರ್ಮ ಗರ್ಹಯನ್ ॥ ೭೯ ॥
ಪ್ರಾಪ್ತಶ್ಚ ಪರಮಾನಂದಂ ತಯೋರ್ದರ್ಶನಕೌತುಕಾತ್ ।
ಪುಲಕಾಂಕಿತಸರ್ವಾಂಗಸ್ತಾವುಭೌ ಪರಿಷಸ್ವಜೇ ॥ ೮೦ ॥
ಏವಂ ನಿಷಧರಾಜೇನ ಪೂಜಿತಶ್ಚಾಽಭಿನಂದಿತಃ ।
ಸ ಭೋಜಯಿತ್ವಾ ತಂ ಸಮ್ಯಕ್ಸ್ವಯಂ ಚ ಸಹಮಂತ್ರಿಭಿಃ ॥ ೮೧ ॥

---

೭೪. ಋಷಭನೆಂಬ ಆ ಶಿವಯೋಗಿಯ ಪ್ರಭಾವದಿಂದಲೆ ಈ ತಾಯಿ ಮಕ್ಕಳು ದೇವತೆಗಳಿಗೆ ಸಮಾನವಾದ ಆಕೃತಿಯನ್ನು ಪಡೆದರು.

೭೫. ಆ ಯೋಗಿಯು ಕೊಟ್ಟ ಕತ್ತಿ, ಶಂಖ ಇವುಗಳಿಂದಲೂ, ಶಿವಕವಚ ದಿಂದಲೂ ರಕ್ಷಿತನಾದ ಇವನು ಯುದ್ಧದಲ್ಲಿ ಶತ್ರುಗಳನ್ನು ಗೆದ್ದನು.

೭೬–೭೭. ಹನ್ನೆರಡು ಸಾವಿರ ಆನೆಗಳ ಬಲವುಳ್ಳ ಸಕಲ ವಿದ್ಯಾಕುಶಲನಾದ ಇವನು ನನ್ನ ಅಳಿಯನಾದನು. ಆದುದರಿಂದ ಇವನನ್ನೂ ಪತಿವ್ರತೆಯಾದ ಇವನ ತಾಯಿಯನ್ನೂ ಕರೆದುಕೊಂಡು ನಿನ್ನ ಪಟ್ಟಣಕ್ಕೆ ಹೋಗು. ನೀನು ಉತ್ತಮ ವಾದ ಶ್ರೇಯಸ್ಸನ್ನು ಹೊಂದುವೆ."

೭೮. ಚಂದ್ರಾಂಗದನು ಹೀಗೆ ಎಲ್ಲವನ್ನೂ ಹೇಳಿ ಒಳಮನೆಯಲ್ಲಿ ಅಲಂಕೃತಳಾಗಿದ್ದ ಅವನ ಜ್ಯೇಷ್ಠಭಾರ್ಯೆಯನ್ನು ಕರೆಯಿಸಿ ದಶಾರ್ಣರಾಜನಿಗೆ ತೋರಿಸಿದನು.

೭೯–೮೩. ಆ ವಜ್ರಬಾಹುವು ಈ ಎಲ್ಲ ಮಾತನ್ನೂ ಕೇಳಿ ಪತ್ನೀಪುತ್ರರನ್ನು ಕಂಡು ನಾಚಿಕೆಗೊಂಡು ತಾನು ಮೂಢತನದಿಂದೆಸಗಿದ ಕೆಲಸವನ್ನು ನಿಂದಿಸುತ್ತ ಅವರ ದರ್ಶನದಿಂದ ಅತ್ಯಾನಂದಭರಿತನಾಗಿ ರೋಮಾಂಚಗೊಂಡು ಆ ಇಬ್ಬ ರನ್ನು ತಬ್ಬಿಕೊಂಡನು. ಹೀಗೆ ನಿಷಧರಾಜನು ಪೂಜಿಸಿ ಸಂತೋಷಗೊಳಿಸಲು

CC-0. Jangamwadi Math Collection. Digitized by eGangotri

ತಾಮಾತ್ಮನೋಽಗ್ರಮಹಿಷೀಂ ಪುತ್ರಂ ತಮಪಿ ತಾಂ ಸ್ನುಷಾಂ ।
ಆದಾಯ ಸಪರೀವಾರೋ ವಜ್ರಬಾಹುಃ ಪುರೀಂ ಯಯೌ ॥ ೮೨ ॥
ಸ ಸಂಭ್ರಮೇಣ ಮಹತಾ ಭದ್ರಾಯುಃ ಪಿತೃಮಂದಿರಂ ।
ಸಂಪ್ರಾಪ್ಯ ಪರಮಾನಂದಂ ಚಕ್ರೇ ಸರ್ವಪುರೌಕಸಾಂ ॥ ೮೩ ॥
ಕಾಲೇನ ದಿವಮಾರೂಢೇ ಪಿತರಿ ಪ್ರಾಪ್ತಯೌವನಃ ।
ಭದ್ರಾಯುಃ ಪೃಥಿವೀಂ ಸರ್ವಾಂ ಶಶಾಸಾದ್ಭುತವಿಕ್ರಮಃ ॥ ೮೪ ॥
ಮಾಗಧೇಶಂ ಹೇಮರಥಂ ಮೋಚಯಾಮಾಸ ಬಂಧನಾತ್ ।
ಸಂಧಾಯ ಮೈತ್ರೀಂ ಪರಮಾಂ ಬ್ರಹ್ಮರ್ಷೀಣಾಂ ಚ ಸನ್ನಿಧೌ ॥ ೮೫ ॥

ಇತ್ಥಂ ತ್ರಿಲೋಕಮಹಿತಾಂ ಶಿವಯೋಗಿಪೂಜಾಂ
ಕೃತ್ವಾ ಪುರಾತನಭವೇಽಪಿ ಸ ರಾಜಸೂನುಃ ।
ನಿಸ್ತೀರ್ಯ ದುಃಸಹವಿಪದ್ಗಣಮಾಪ್ತರಾಜ್ಯ
ಶ್ಚಂದ್ರಾಂಗದಸ್ಯ ಸುತಯಾ ಸಹ ಸಾಧು ರೇಮೇ ॥ ೮೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಭದ್ರಾಯು ವಿವಾಹ ಕಥನಂ" ನಾಮ ತ್ರಯೋದಶೋಽಧ್ಯಾಯಃ

---

ವಜ್ರಬಾಹುವು ಆ ಪುತ್ರನಿಗೆ ಭೋಜನಮಾಡಿಸಿ ತಾನೂ ಮಂತ್ರಿಗಳೊಡನೆ ಊಟ ಮಾಡಿ ತನ್ನ ಜ್ಯೇಷ್ಠಭಾರ್ಯೆಯನ್ನೂ, ಆ ತನಯನನ್ನೂ, ಸೊಸೆಯಾದ ಕೀರ್ತಿ ಮಾಲಿನಿಯನ್ನೂ ಕರೆದುಕೊಂಡು ಪರಿವಾರ ಸಹಿತನಾಗಿ ತನ್ನ ಪಟ್ಟಣಕ್ಕೆ ಹೋದನು. ಆ ಭದ್ರಾಯುವು ಮಹಾ ಸಂಭ್ರಮದಿಂದ ತಂದೆಯ ಮನೆಯನ್ನು ಸೇರಿ ಸಮಸ್ತ ಪಟ್ಟಣಿಗರಿಗೂ ಅತ್ಯಾನಂದವನ್ನುಂಟುಮಾಡಿದನು.

೮೪. ಕಾಲಕ್ರಮದಿಂದ ವಜ್ರಬಾಹುವು ದಿವಂಗತನಾಗಲು ಯುವಕನಾದ ಭದ್ರಾಯುವು ಅತ್ಯಂತ ಪರಾಕ್ರಮವುಳ್ಳವನಾಗಿ ಸಕಲ ಭೂಮಂಡಲವನ್ನೂ ಆಳಿದನು.

೮೫. ಬ್ರಹ್ಮರ್ಷಿಗಳ ಮುಂದೆ ಹೇಮರಥನೊಡನೆ ಸಂಧಿಮಾಡಿಕೊಂಡು ಅವನನ್ನು ಬಂಧನದಿಂದ ಬಿಡಿಸಿದನು.

೮೬. ಹೀಗೆ ಆ ರಾಜಕುಮಾರನು ಹಿಂದಿನ ಜನ್ಮದಲ್ಲಿ ಅತಿ ಪೂಜ್ಯವಾದ ಶಿವಯೋಗಿಯ ಪೂಜೆಯನ್ನೆಸಗಿ ಸಹಿಸಲಾಗದ ಆಪತ್ತುಗಳನ್ನು ದಾಟಿ ರಾಜ್ಯ ವನ್ನು ಪಡೆದು ಕೀರ್ತಿಮಾಲಿನಿಯೊಡನೆ ವಿನೋದಪಡುತ್ತಿದ್ದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಭದ್ರಾಯು ವಿವಾಹಕಥನ" ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಭದ್ರಾಯುಶಿವಪ್ರಸಾದಕಥನಂ

ಸೂತ ಉವಾಚ :—

ಪ್ರಾಪ್ತಸಿಂಹಾಸನೋ ವೀರೋ ಭದ್ರಾಯುಃ ಸ ಮಹೀಪತಿಃ ।
ಪ್ರವಿವೇಶ ವನಂ ರಮ್ಯಂ ಕದಾಚಿದ್ಭಾರ್ಯಯಾ ಸಹ ॥ ೧ ॥
ತಸ್ಮಿನ್ವಿಕಸಿತಾಽಶೋಕಪ್ರಸೂನನವಪಲ್ಲವೇ ।
ಪ್ರೋತ್ಫುಲ್ಲಮಲ್ಲಿಕಾಖಂಡಕೂಜದ್ಭ್ರಮರಸಂಕುಲೇ ॥ ೨ ॥
ನವಕೇಸರಸೌರಭ್ಯಬದ್ಧರಾಗಿಜನೋತ್ಸವೇ ।
ಸದ್ಯಃ ಕೋರಕಿತಾಽಶೋಕತಮಾಲಗಹನಾಂತರೇ ॥ ೩ ॥
ಪ್ರಸೂನಪ್ರಕರಾನಮ್ರಮಾಧವೀನವಮಂಡಪೇ ।
ಪ್ರವಾಲಕುಸುಮೋದ್ಯೋತಚೂತಶಾಖಿಭಿರಂಚಿತೇ ॥ ೪ ॥
ಪುನ್ನಾಗವನವಿಭ್ರಾಂತಪುಂಸ್ಕೋಕಿಲವಿರಾವಿಣಿ ।
ವಸಂತಸಮಯೇ ರಮ್ಯೇ ವಿಜಹಾರ ಸ್ತ್ರಿಯಾ ಸಹ ॥ ೫ ॥

---

### ಕನ್ನಡದ ಅನುವಾದ

#### ಭದ್ರಾಯುಶಿವಪ್ರಸಾದಕಥನ

೧. ಸೂತನು ಹೇಳುತ್ತಾನೆ:—ತಂದೆಯ ಸಿಂಹಾಸನವನ್ನು ಪಡೆದ ವೀರನಾದ ಆ ಭದ್ರಾಯುರಾಜನು ಒಂದಾನೊಂದು ದಿನ ಹೆಂಡತಿಯೊಡನೆ ರಮ್ಯವಾದ ಅರಣ್ಯವನ್ನು ಹೊಕ್ಕನು.

೨–೫. ಅರಳಿದ ಪುಷ್ಪ ಮತ್ತು ಹೊಸತಳಿರುಗಳುಳ್ಳ ಅಶೋಕವೃಕ್ಷಗಳಿಂದ ತುಂಬಿ ವಿಕಾಸಗೊಂಡ ಮಲ್ಲಿಗೆಯ ಹೂವುಗಳ ಸಮೂಹದಲ್ಲಿ ಝೇಂಕರಿಸುತ್ತಿರುವ ದುಂಬಿಗಳಿಂದ ವ್ಯಾಪ್ತವಾಗಿ, ಹೊಸತಾದ ಕೇಸರಪುಷ್ಪದ ಸುವಾಸನೆಯಲ್ಲಿ ಆಸಕ್ತರಾದ ಕಾಮಿಗಳಿಗೆ ಸಂತೋಷವನ್ನುಂಟುಮಾಡುತ್ತ, ಆಗಲೆ ಮೊಗ್ಗಾಗಿರುವ ಅಶೋಕ, ತಮಾಲತರುಗಳ ವನಗಳುಳ್ಳದಾಗಿ, ಹೂಗಳ ಸಮೂಹದಿಂದ ಬಗ್ಗಿದ ಮಲ್ಲಿಗೆಯ ಮಂಟಪವುಳ್ಳದಾಗಿ, ಚಿಗುರು, ಹೂವುಗಳಿಂದ ಕಂಗೊಳಿಸುತ್ತಿರುವ ಮಾವಿನ ಕೊಂಬೆಗಳಿಂದಲೂ ಮನೋಹರವಾಗಿ, ಸುರಗಿಯ ವನದಲ್ಲಿ ಸಂಚರಿಸುತ್ತಿರುವ ಗಂಡು ಕೋಗಿಲೆಗಳ ಧ್ವನಿಯುಳ್ಳದಾಗಿ ರಮ್ಯವಾಗಿರುವ ವಸಂತಕಾಲದಲ್ಲಿ ಪತ್ನಿಯೊಡನೆ ವಿಹರಿಸಿದನು.

CC-0. Jangamwadi Math Collection. Digitized by eGangotri

ಅಥಾವಿದೂರೇ ಕ್ರೋಶಂತೌ ಧಾವಂತೌ ದ್ವಿಜದಂಪತೀ ।
ಅನ್ವೀಯಮಾನೌ ವ್ಯಾಘ್ರೇಣ ದದರ್ಶ ನೃಪಸತ್ತಮಃ ॥ ೬ ॥
ತ್ರಾಹಿ ತ್ರಾಹಿ ಮಹಾರಾಜ ಹಾ ರಾಜನ್ಕರುಣಾನಿಧೇ ।
ಏಷ ಧಾವತಿ ಶಾರ್ದೂಲೋ ಜಗ್ಧುಮಾವಾಂ ಮಹಾರಯಃ ॥ ೭ ॥
ಏಷ ಪರ್ವತಸಂಕಾಶಃ ಸರ್ವಪ್ರಾಣಿಭಯಂಕರಃ ।
ಯಾವನ್ನ ಖಾದತಿ ಪ್ರಾಪ್ಯ ತಾವನ್ನೌ ರಕ್ಷ ಭೂಪತೇ ॥ ೮ ॥
ಇತ್ಥಮಾಕ್ರಂದಿತಂ ಶ್ರುತ್ವಾ ಸ ರಾಜಾ ಧನುರಾದದೇ ।
ತಾವದಾಗತ್ಯ ಶಾರ್ದೂಲೋ ಮಧ್ಯೇ ಜಗ್ರಾಹ ತಾಂ ವಧೂಂ ॥ ೯ ॥
ಹಾ ನಾಥ ನಾಥ ಹಾ ಕಾಂತ ಹಾ ಶಂಭೋ ಜಗತಃ ಪತೇ ।
ಇತಿ ರೋರೂಯಮಾಣಾಂ ತಾಂ ಯಾವಜ್ಜಗ್ರಾಹ ಭೀಷಣಃ ॥ ೧೦ ॥
ತಾವತ್ಸ ರಾಜಾ ನಿಶಿತೈರ್ಭಲ್ಲೈರ್ವ್ಯಾಘ್ರಮತಾಡಯತ್ ।
ನ ಚ ತೈರ್ವಿವ್ಯಥೇ ಕಿಂಚಿದ್ಗಿರೀಂದ್ರ ಇವ ವೃಷ್ಟಿಭಿಃ ॥ ೧೧ ॥
ಸ ಶಾರ್ದೂಲೋ ಮಹಾಸತ್ವೋ ರಾಜ್ಞೋಽಸ್ತ್ರೈರಕೃತವ್ಯಥಃ ।
ಬಲಾದಾಕೃಷ್ಯ ತಾಂ ನಾರೀಮುಪಾಕ್ರಾಮತ ಸತ್ವರಃ ॥ ೧೨ ॥

---

೬. ರಾಜನು ಆ ಕಾಡಿನಲ್ಲಿ ಹತ್ತಿರದಲ್ಲಿಯೆ ಹುಲಿಯಿಂದ ಹಿಂಬಾಲಿಸಲ್ಪಟ್ಟು ಕೂಗುತ್ತ ಓಡುತ್ತಿರುವ ಬ್ರಾಹ್ಮಣದಂಪತಿಗಳನ್ನು ಕಂಡನು.

೭. "ದಯಾಳುವಾದ ದೊರೆಯೆ! ಕಾಪಾಡು. ಈ ಹುಲಿಯು ನಮ್ಮನ್ನು ತಿನ್ನುವುದಕ್ಕಾಗಿ ಅತಿವೇಗದಿಂದ ಓಡಿಬರುತ್ತಿದೆ.

೮. ಮಹಾರಾಜ! ಪರ್ವತದಂತಿರುವ, ಸಮಸ್ತಪ್ರಾಣಿಗಳಿಗೂ ಭಯವನ್ನುಂಟುಮಾಡುವ ಈ ಹುಲಿಯು ನಮ್ಮನ್ನು ತಿನ್ನುವುದಕ್ಕಿಂತ ಮುಂಚೆಯೆ ರಕ್ಷಿಸು."

೯. ಆ ರಾಜನು ಈ ಕೂಗನ್ನು ಕೇಳಿ ಬಿಲ್ಲನ್ನು ತೆಗೆದುಕೊಂಡನು. ಅಷ್ಟರಲ್ಲಿಯೇ ಹುಲಿಯೂ ಆ ಬ್ರಾಹ್ಮಣ ಸ್ತ್ರೀಯನ್ನು ಹಿಡಿದುಕೊಂಡಿತು.

೧೦–೧೧. "ಹಾ! ನಾಥ! ಹಾ! ಪ್ರಿಯ! ಹಾ! ಜಗದೊಡೆಯ, ಶಂಭೊ!" ಎಂದು ಗೋಳಾಡುತ್ತಿರುವ ಆ ಬ್ರಾಹ್ಮಣಭಾರ್ಯೆಯನ್ನು ಭಯಂಕರವಾದ ಆ ಹುಲಿಯು ಹಿಡಿಯುವಷ್ಟರಲ್ಲಿಯೆ ಆ ರಾಜನು ಹರಿತವಾದ ಬಾಣಗಳಿಂದ ಅದನ್ನು ಹೊಡೆದನು. ಆದರೆ ಆ ಹುಲಿಯು ಮಳೆಗೆ ಸಿಕ್ಕಿದ ಬೆಟ್ಟದಂತೆ ಆ ಬಾಣಗಳಿಂದ ಏನೂ ವ್ಯಥೆಪಡಲಿಲ್ಲ.

೧೨. ಆ ವ್ಯಾಘ್ರವು ರಾಜನ ಬಾಣದಿಂದ ವ್ಯಥೆಪಡದೆ ಆ ಬ್ರಾಹ್ಮಣ ಸ್ತ್ರೀಯನ್ನು ಬಲಾತ್ಕಾರವಾಗಿ ಎಳೆದುಕೊಂಡು ಶೀಘ್ರವಾಗಿ ಹೊರಟು ಹೋಯಿತು.

CC-0. Jangamwadi Math Collection. Digitized by eGangotri

ವ್ಯಾಘ್ರೇಣಾಽಪಹೃತಾಂ ಪತ್ನೀಂ ವೀಕ್ಷ್ಯ ವಿಪ್ರೋಽತಿದುಃಖಿತಃ ।
ರುರೋದ ಹಾ ಪ್ರಿಯೇ ಬಾಲೇ ಹಾ ಕಾಂತೇ ಹಾ ಪತಿವ್ರತೇ ॥ ೧೩ ॥
ಏಕಂ ಮಾಮಿಹ ಸಂತ್ಯಜ್ಯ ಕಥಂ ಲೋಕಾಂತರಂ ಗತಾ ।
ಪ್ರಾಣೇಭ್ಯೋಽಪಿ ಪ್ರಿಯಾಂ ತ್ಯಕ್ತ್ವಾ ಕಥಂ ಜೀವಿತುಮುತ್ಸಹೇ ॥ ೧೪ ॥
ರಾಜನ್ಕ್ವ ತೇ ಮಹಾಸ್ತ್ರಾಣಿ ಕ್ವ ತೇ ಶ್ಲಾಘ್ಯಂ ಮಹದ್ಧನುಃ ।
ಕ್ವ ತೇ ದ್ವಾದಶಸಾಹಸ್ರಮಹಾನಾಗಾಽತಿಗಂ ಬಲಂ ॥ ೧೫ ॥
ಕಿಂ ತೇ ಶಂಖೇನ ಖಡ್ಗೇನ ಕಿಂ ತೇ ಮಂತ್ರಾಽಸ್ತ್ರವಿದ್ಯಯಾ ।
ಕಿಂ ಚ ತೇನ ಪ್ರಯತ್ನೇನ ಕಿಂ ಪ್ರಭಾವೇಣ ಭೂಯಸಾ ॥ ೧೬ ॥
ತತ್ಸರ್ವಂ ವಿಫಲಂ ಜಾತಂ ಯಚ್ಚಾಽನ್ಯತ್ತ್ವಯಿ ತಿಷ್ಠತಿ ।
ಯಸ್ತ್ವಂ ವನೌಕಸಂ ಜಂತುಂ ನಿವಾರಯಿತುಮಕ್ಷಮಃ ॥ ೧೭ ॥
ಕ್ಷಾತ್ರಸ್ಯಾಽಯಂ ಪರೋ ಧರ್ಮಃ ಕ್ಷತಾದ್ಯತ್ಪರಿರಕ್ಷಣಂ ।
ತಸ್ಮಾತ್ಕುಲೋಚಿತೇ ಧರ್ಮೇ ನಷ್ಟೇ ತ್ವಜ್ಜೀವಿತೇನ ಕಿಂ ॥ ೧೮ ॥
ಆರ್ತಾನಾಂ ಶರಣಾರ್ತಾನಾಂ ತ್ರಾಣಂ ಕುರ್ವಂತಿ ಪಾರ್ಥಿವಾಃ ।
ಪ್ರಾಣೈರರ್ಥೈಶ್ಚ ಧರ್ಮಜ್ಞಾಸ್ತದ್ವಿಹೀನಾ ಮೃತೋಪಮಾಃ ॥ ೧೯ ॥

---

೧೩. ವ್ಯಾಘ್ರವು ಪತ್ನಿಯನ್ನು ಅಪಹರಿಸಿದುದನ್ನು ಕಂಡು ಬ್ರಾಹ್ಮಣನು ಅತಿ ದುಃಖದಿಂದ, "ಅಯ್ಯೊ ಪ್ರಿಯಳೆ! ಅಯ್ಯೊ ಬಾಲೆಯೆ! ಅಯ್ಯೊ ಕಾಂತೆ! ಅಯ್ಯೋ ಪತಿವ್ರತೆ!" ಎಂದು ಗೋಳಾಡಿದನು.

೧೪. "ನನ್ನನ್ನು ಒಂಟಿಯಾಗಿ ಇಲ್ಲಿ ಬಿಟ್ಟು ನೀನೊಬ್ಬಳೇ ಹೇಗೆ ಪರಲೋಕವನ್ನೈದಿದೆ? ಪ್ರಾಣಕ್ಕಿಂತಲೂ ಪ್ರಿಯಳಾದ ನಿನ್ನನ್ನು ತ್ಯಜಿಸಿ ನಾನು ಹೇಗೆ ಜೀವಿಸಲಿಚ್ಛಿಸುವೆನು?

೧೫. ಮಹಾರಾಜ! ನಿನ್ನ ಮಹಾಸ್ತ್ರಗಳೆಲ್ಲಿ? ನಿನ್ನ ಶ್ಲಾಘ್ಯವಾದ ಮಹಾ ಧನುಸ್ಸೆಲ್ಲಿ? ನಿನ್ನ ಹನ್ನೆರಡು ಸಾವಿರ ಆನೆಗಳ ಬಲವೆಲ್ಲಿ?

೧೬. ನಿನ್ನ ಶಂಖ, ಕತ್ತಿ, ಮಂತ್ರವಿದ್ಯೆ, ಅಸ್ತ್ರವಿದ್ಯೆ, ಪ್ರಯತ್ನ, ಮಹಾ ಸಾಮರ್ಥ್ಯ ಇವುಗಳಿಂದೇನು ಪ್ರಯೋಜನವಾದಂತಾಯಿತು?

೧೭. ಈಗ ನೀನು ಕಾಡಿನಲ್ಲಿ ವಾಸವಾಗಿರುವ ಪ್ರಾಣಿಯನ್ನು ಕೊಲ್ಲಲಶಕ್ತನಾದುದರಿಂದ ನಿನ್ನಲ್ಲಿರುವ ಶಂಖ ಮೊದಲಾದವುಗಳೂ, ಇತರ ಶಕ್ತಿಗಳೂ ಪ್ರಯೋಜನವಿಲ್ಲದುವು.

೧೮. ದೀನರನ್ನು ಹಿಂಸೆಯಿಂದ ರಕ್ಷಿಸುವುದೇ ಕ್ಷತ್ರಿಯನ ಉತ್ತಮ ಧರ್ಮವು. ಆದುದರಿಂದ ಕುಲೋಚಿತವಾದ ಧರ್ಮವು ಹಾಳಾಗಲು ನೀನು ಬದುಕಿರುವುದರಿಂದೇನು ಪ್ರಯೋಜನ?

೧೯. ಧರ್ಮಗಳನ್ನರಿತ ಪಾರ್ಥಿವರು ದುಃಖಗೊಂಡು ಮರೆಹೊಕ್ಕವರನ್ನು

CC-0. Jangamwadi Math Collection. Digitized by eGangotri

ಧನಿನಾಂ ದಾನಹೀನಾನಾಂ ಗಾರ್ಹಸ್ಥ್ಯಾದ್ಭಿಕ್ಷುತಾ ವರಾ ।
ಆರ್ತತ್ರಾಣವಿಹೀನಾನಾಂ ಜೀವಿತಾನ್ಮರಣಂ ವರಂ ॥ ೨೦ ॥
ವರಂ ವಿಷಾದನಂ ರಾಜ್ಞೋ ವರಮಗ್ನೌ ಪ್ರವೇಶನಂ ।
ಅನಾಥಾನಾಂ ಪ್ರಪನ್ನಾನಾಂ ಕೃಪಣಾನಾಮರಕ್ಷಣಾತ್ ॥ ೨೧ ॥
ಇತ್ಥಂ ವಿಲಪಿತಂ ತಸ್ಯ ಸ್ವವೀರ್ಯಸ್ಯ ಚ ಗರ್ಹಣಂ ।
ನಿಶಮ್ಯ ನೃಪತಿಃ ಶೋಕಾದಾತ್ಮನ್ಯೇವಮಚಿಂತಯತ್ ॥ ೨೨ ॥
ಅಹೋ ಮೇ ಪೌರುಷಂ ನಷ್ಟಮದ್ಯ ದೈವವಿಪರ್ಯಯಾತ್ ।
ಅದ್ಯ ಕೀರ್ತಿಶ್ಚ ಮೇ ನಷ್ಟಾ ಪಾತಕಂ ಪ್ರಾಪ್ತಮುತ್ಕಟಂ ॥ ೨೩ ॥
ಧರ್ಮಃ ಕಾಲೋಚಿತೋ ನಷ್ಟೋ ಮಂದಭಾಗ್ಯಸ್ಯ ದುರ್ಮತೇಃ ।
ನೂನಂ ಮೇ ಸಂಪದೋ ರಾಜ್ಯಮಾಯುಷ್ಯಂ ಕ್ಷಯಮೇಷ್ಯತಿ ॥ ೨೪ ॥
ಅಪುಂಸಾಂ ಸಂಪದೋ ಭೋಗಾಃ ಪುತ್ರದಾರಧನಾನಿ ಚ ।
ದೈವೇನ ಕ್ಷಣಮುದ್ಯಂತಿ ಕ್ಷಣಾದಸ್ತಂ ವ್ರಜಂತಿ ಚ ॥ ೨೫ ॥

---

ತಮ್ಮ ಪ್ರಾಣದಿಂದಲೂ, ದ್ರವ್ಯದಿಂದಲೂ ರಕ್ಷಿಸುತ್ತಾರೆ. ಹಾಗೆ ಮಾಡದ ರಾಜರು ಸತ್ತಂತೆಯೇ.

೨೦. ದಾನಮಾಡದ ಹಣಗಾರರ ಗೃಹಸ್ಥಾಶ್ರಮಕ್ಕಿಂತ ಸನ್ಯಾಸಾಶ್ರಮವೇ ಉತ್ತಮವಾದುದು. ಆರ್ತರನ್ನು ರಕ್ಷಿಸದವರ ಬದುಕಿಗಿಂತ ಸಾವು ಶ್ರೇಷ್ಠವಾದುದು.

೨೧. ಅನಾಥರಾಗಿ ಶರಣಾಗತರಾದ ದೀನರನ್ನು ಕಾಪಾಡದಿರುವ ರಾಜರು ವಿಷವನ್ನು ಕುಡಿಯುವುದೂ, ಅಗ್ನಿಯನ್ನು ಪ್ರವೇಶಿಸುವುದೂ ಒಳ್ಳೆಯದು."

೨೨. ರಾಜನು ಆ ಬ್ರಾಹ್ಮಣನ ಈ ರೀತಿಯಾದ ಗೋಳಾಟವನ್ನೂ, ತನ್ನ ಶಕ್ತಿಯ ನಿಂದೆಯನ್ನೂ ಕೇಳಿ ದುಃಖದಿಂದ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು.

೨೩. "ಈಗ ಅದೃಷ್ಟದ ವ್ಯತ್ಯಾಸದಿಂದ ನನ್ನ ಪೌರುಷವು ಹಾಳಾಯಿತು. ನನ್ನ ಕೀರ್ತಿಯೂ ನಷ್ಟವಾಯಿತು. ಮಹಾಪಾಪವು ಸಂಘಟಿಸಿತು. ಇದು ಆಶ್ಚರ್ಯಕರವಾಗಿದೆ.

೨೪. ದುರದೃಷ್ಟವುಳ್ಳವನೂ, ದುಷ್ಟನೂ ಆದ ನನ್ನ ಸಮಯೋಚಿತವಾದ ಧರ್ಮವು ಹಾಳಾಯಿತು. ನಿಶ್ಚಯವಾಗಿಯೂ ನನ್ನ ಸಂಪತ್ತುಗಳೂ, ರಾಜ್ಯವೂ, ಆಯುಷ್ಯವೂ ನಾಶವಾಗುವುವು.

೨೫. ಪೌರುಷವಿಲ್ಲದ ಮಾನವರ ಸಂಪತ್ತುಗಳೂ, ಭೋಗಗಳೂ, ಮಕ್ಕಳೂ, ಹೆಂಡತಿಯೂ, ದ್ರವ್ಯಗಳೂ ಅದೃಷ್ಟದಿಂದ ಕ್ಷಣಕಾಲ ಹೆಚ್ಚುತ್ತವೆ. ಕ್ಷಣಕಾಲದಲ್ಲಿಯೇ ಹಾಳಾಗುತ್ತವೆ.

CC-0. Jangamwadi Math Collection. Digitized by eGangotri

ಅತ ಏನಂ ದ್ವಿಜನ್ಮಾನಂ ಹತದಾರಂ ಶುಚಾರ್ದಿತಂ ।
ಗತಶೋಕಂ ಕರಿಷ್ಯಾಮಿ ದತ್ವಾ ಪ್ರಾಣಾನಪಿ ಪ್ರಿಯಾನ್ ॥ ೨೬ ॥
ಇತಿ ನಿಶ್ಚಿತ್ಯ ಮನಸಾ ಭದ್ರಾಯುರ್ನೃಪಸತ್ತಮಃ ।
ಪತಿತ್ವಾ ಪಾದಯೋಸ್ತಸ್ಯ ಬಭಾಷೇ ಪರಿಸಾಂತ್ವಯನ್ ॥ ೨೭ ॥
ಕೃಪಾಂ ಕುರು ಮಯಿ ಬ್ರಹ್ಮನ್ಸ್ವತ್ರಬಂಧೌ ಹತೌಜಸಿ ।
ಶೋಕಂ ತ್ಯಜ ಮಹಾಬುದ್ಧೇ ದಾಸ್ಯಾಮ್ಯರ್ಥಂ ತವೇಪ್ಸಿತಂ ॥ ೨೮ ॥
ಇದಂ ರಾಜ್ಯಮಿಯಂ ರಾಜ್ಞೀ ಮಮೇದಂ ಚ ಕಲೇವರಂ ।
ತ್ವದಧೀನಮಿದಂ ಸರ್ವಂ ಕಿಂ ತೇಽಭಿಲಷಿತಂ ವದ ॥ ೨೯ ॥

ಬ್ರಾಹ್ಮಣ ಉವಾಚ :—

ಕಿಮಾದರ್ಶೇನ ಚಾಽಂಧಸ್ಯ ಕಿಂ ಗೃಹೈರ್ಭೈಕ್ಷ್ಯಜೀವಿನಃ ।
ಕಿಂ ಪುಸ್ತಕೇನ ಮೂರ್ಖಸ್ಯ ಹ್ಯಸ್ತ್ರೀಕಸ್ಯ ಧನೇನ ಕಿಂ ॥ ೩೦ ॥
ಅಹೋಽಹಂ ಗತಪತ್ನೀಕೋ ಮುಕ್ತಭೋಗೋ ನ ಕರ್ಹಿಚಿತ್ ।
ಇಮಾಂ ತವಾಗ್ರಮಹಿಷೀಂ ಕಾಮಾರ್ಥಂ ದೀಯತಾಂ ಮಮ ॥ ೩೧ ॥

ರಾಜೋವಾಚ :—

ಬ್ರಹ್ಮನ್ಕಿಮೇಷ ಧರ್ಮಸ್ತೇ ಕಿಮೇತದ್ಗುರುಶಾಸನಂ ।
ಅಸ್ವರ್ಗ್ಯಮಯಶಸ್ಯಂ ಚ ಪರದಾರಾಭಿಮರ್ಶನಂ ॥ ೩೨ ॥

---

೨೬. ಆದುದರಿಂದ ನನಗೆ ಪ್ರಿಯಗಳಾದ ಪ್ರಾಣಗಳನ್ನು ಕೊಟ್ಟಾದರೂ ಹೆಂಡತಿಯನ್ನು ಕಳೆದುಕೊಂಡು ದುಃಖಿಸುತ್ತಿರುವ ಈ ಬ್ರಾಹ್ಮಣನ ಶೋಕವನ್ನು ಪರಿಹರಿಸುವೆನು.''

೨೭. ಭದ್ರಾಯುರಾಜನು ಹೀಗೆ ಆಲೋಚಿಸಿ ಬ್ರಾಹ್ಮಣನ ಅಡಿಗಳಿಗೆರಗಿ ಅವನನ್ನು ಸಮಾಧಾನಗೊಳಿಸುತ್ತ ಹೀಗೆಂದನು.

೨೮-೨೯. ''ಬ್ರಾಹ್ಮಣವರ್ಯ! ಪ್ರತಾಪವಿಲ್ಲದ ಕ್ಷತ್ರಿಯನೆನಿಸಿಕೊಂಡ ನನ್ನಲ್ಲಿ ದಯೆಮಾಡು. ಎಲೈ ಪ್ರಾಜ್ಞನೇ! ಶೋಕವನ್ನು ಬಿಡು. ನಿನ್ನ ಇಷ್ಟಾರ್ಥವನ್ನೀಯುವೆನು. ಈ ನನ್ನ ರಾಜ್ಯ, ಈ ರಾಣಿ, ಈ ನನ್ನ ದೇಹ ಇವೆಲ್ಲವೂ ನಿನ್ನ ಅಧೀನವಾಗಿವೆ. ನಿನ್ನ ಅಭೀಪ್ಸಿತವನ್ನು ಹೇಳು.''

೩೦. ಬ್ರಾಹ್ಮಣನು ಹೇಳುತ್ತಾನೆ:—''ಕುರುಡನಿಗೆ ಕನ್ನಡಿಯಿಂದಲೂ, ಭಿಕ್ಷುಕನಿಗೆ ಮನೆಗಳಿಂದಲೂ, ಮೂರ್ಖನಿಗೆ ಪುಸ್ತಕದಿಂದಲೂ, ಹೆಂಡತಿಯಿಲ್ಲದವನಿಗೆ ಧನದಿಂದಲೂ ಏನುಪ್ರಯೋಜನ?

೩೧. ಯಾವ ವಿಷಯವನ್ನೂ ಭೋಗಿಸದೆ ಹೆಂಡತಿಯನ್ನು ಕಳೆದುಕೊಂಡ ನನಗೆ ಈ ನಿನ್ನ ಪಟ್ಟದರಾಣಿಯನ್ನು ಕಾಮೋಪಭೋಗಕ್ಕಾಗಿ ಕೊಡು.''

೩೨. ರಾಜನು ಹೇಳುತ್ತಾನೆ:–''ಎಲೈ ಬ್ರಾಹ್ಮಣನೆ! ನಿನಗಿದು ಧರ್ಮವೆ?

CC-0. Jangamwadi Math Collection. Digitized by eGangotri

ದಾತಾರಃ ಸಂತಿ ವಿತ್ತಸ್ಯ ರಾಜ್ಯಸ್ಯ ಗಜವಾಜಿನಾಂ ।
ಆತ್ಮದೇಹಸ್ಯ ವಾ ಕ್ವಾಽಪಿ ನ ಕಲತ್ರಸ್ಯ ಕರ್ಹಿಚಿತ್ ॥ ೩೩ ॥
ಪರದಾರೋಪಭೋಗೇನ ಯತ್ಪಾಪಂ ಸಮುಪಾರ್ಜಿತಂ ।
ನ ತತ್ಕ್ಷಾಲಯಿತುಂ ಶಕ್ಯಂ ಪ್ರಾಯಶ್ಚಿತ್ತಶತೈರಪಿ ॥ ೩೪ ॥

ಬ್ರಾಹ್ಮಣ ಉವಾಚ :—

ಅಪಿ ಬ್ರಹ್ಮವಧಂ ಘೋರಮಪಿ ಮದ್ಯನಿಷೇವಣಂ ।
ತಪಸಾ ನಾಶಯಿಷ್ಯಾಮಿ ಕಿಂ ಪುನಃ ಪಾರದಾರಿಕಂ ।
ತಸ್ಮಾತ್ಪ್ರಯಚ್ಛ ಮೇ ಭಾರ್ಯಾಮಿಮಾಂ ತ್ವಂ ಧ್ರುವಮನ್ಯಥಾ ॥ ೩೫ ॥
ಅರಕ್ಷಣಾದ್ಭಯಾರ್ತಾನಾಂ ಗಂತಾಸಿ ನಿರಯಂ ಧ್ರುವಂ ।
ಇತಿ ವಿಪ್ರಗಿರಾ ಭೀತಶ್ಚಿಂತಯಾಮಾಸ ಪಾರ್ಥಿವಃ ।
ಅರಕ್ಷಣಾನ್ಮಹತ್ಪಾಪಂ ಪತ್ನೀದಾನಂ ತತೋ ವರಂ ॥ ೩೬ ॥
ಅತಃ ಪತ್ನೀಂ ದ್ವಿಜಾಗ್ರ್ಯಾಯ ದತ್ವಾ ನಿರ್ಮುಕ್ತಕಿಲ್ಬಿಷಃ ।
ಸದ್ಯೋ ವಹ್ನಿಂ ಪ್ರವೇಕ್ಷ್ಯಾಮಿ ಕೀರ್ತಿಶ್ಚ ನಿಹಿತಾ ಭವೇತ್ ॥ ೩೭ ॥

---

ನಿನ್ನ ಗುರುಗಳು ಹೀಗೆ ನಿನಗೆ ಉಪದೇಶಮಾಡಿರುವರೆ? ಪರರ ಪತ್ನಿಯರ ಸ್ಪರ್ಶದಿಂದ ನರಕವೂ ಅಪಕೀರ್ತಿಯೂ ಉಂಟಾಗುವುದು.

೩೩. ಲೋಕದಲ್ಲಿ ಹಣ, ರಾಜ್ಯ, ಆನೆ, ಕುದುರೆ, ಕೆಲವೆಡೆಯಲ್ಲಿ ತನ್ನ ದೇಹ ಇವುಗಳನ್ನು ಕೊಡುವರಿರುವರು. ಹೆಂಡತಿಯನ್ನು ದಾನಮಾಡುವವರು ಎಲ್ಲಿಯೂ ಇಲ್ಲ.

೩೪. ಪರಪತ್ನಿಯರ ಉಪಭೋಗದಿಂದುಂಟಾದ ಪಾಪವನ್ನು ಅನೇಕ ಪ್ರಾಯಶ್ಚಿತ್ತಗಳಿಂದಲೂ ತೊಳೆದುಕೊಳ್ಳಲು ಸಾಧ್ಯವಿಲ್ಲ."

೩೫–೩೬. ಬ್ರಾಹ್ಮಣನು ಹೇಳುತ್ತಾನೆ:—"ಮಹಾರಾಜ! ನಾನು ಘೋರವಾದ ಬ್ರಹ್ಮಹತ್ಯೆಯನ್ನೂ, ಸುರಾಪಾನದಿಂದುಂಟಾದ ದೋಷಗಳನ್ನೂ ತಪಸ್ಸಿನಿಂದ ನೀಗಿಸಿಕೊಳ್ಳುವೆನು. ಪರದಾರಗಮನದ ದೋಷದ ವಿಷಯದಲ್ಲಿ ಏನನ್ನು ಹೇಳಲಿ. ಆದುದರಿಂದ ನೀನು ಈ ನಿನ್ನ ಹೆಂಡತಿಯನ್ನು ನನಗೆ ಕೊಟ್ಟುಬಿಡು. ಹಾಗೆ ಮಾಡದಿದ್ದರೆ ಭಯಾರ್ತರನ್ನು ಕಾಪಾಡದಿರುವ ಪಾಪದಿಂದ ನರಕಕ್ಕೆ ಹೋಗುವೆ." ರಾಜನು ಬ್ರಾಹ್ಮಣನ ಮಾತನ್ನು ಕೇಳಿ ಭಯಗೊಂಡು ಆಲೋಚಿಸಿದನು. "ಕಾಪಾಡದಿರುವುದರಿಂದ ಮಹಾಪಾಪವುಂಟಾಗುವುದು. ಅದಕ್ಕಿಂತ ಪತ್ನಿಯನ್ನು ಕೊಡುವುದೇ ಒಳ್ಳೆಯದು.

೩೭. ಆದುದರಿಂದ ಈ ಬ್ರಾಹ್ಮಣೋತ್ತಮನಿಗೆ ಪತ್ನಿಯನ್ನು ದಾನಮಾಡಿ ಪಾಪವನ್ನು ತೊಳೆದುಕೊಂಡು ಕೂಡಲೆ ಅಗ್ನಿಯನ್ನು ಪ್ರವೇಶಿಸುವೆನು. ನನ್ನ ಕೀರ್ತಿಯು ಶಾಶ್ವತವಾಗಿರುವುದು."

CC-0. Jangamwadi Math Collection. Digitized by eGangotri

ಇತಿ ನಿಶ್ಚಿತ್ಯ ಮನಸಾ ಸಮುಜ್ಜ್ವಾಲ್ಯ ಹುತಾಶನಂ ।
ತಂ ಬ್ರಾಹ್ಮಣಂ ಸಮಾಹೂಯ ದದೌ ಪತ್ನೀಂ ಸಹೋದಕಾಂ ॥ ೩೮ ॥
ಸ್ವಯಂ ಸ್ನಾತಃ ಶುಚಿರ್ಭೂತ್ವಾ ಪ್ರಣಮ್ಯ ವಿಬುಧೇಶ್ವರಾನ್ ।
ತಮಗ್ನಿಂ ದ್ವಿಃ ಪರಿಕ್ರಮ್ಯ ಶಿವಂ ದಧ್ಯೌ ಸಮಾಹಿತಃ ॥ ೩೯ ॥
ತಮಥಾಗ್ನೌ ಪತಿಷ್ಯಂತಂ ಸ್ವಪದಾಸಕ್ತಚೇತಸಂ ।
ಪ್ರತ್ಯದೃಶ್ಯತ ವಿಶ್ವೇಶಃ ಪ್ರಾದುರ್ಭೂತೋ ಜಗತ್ಪತಿಃ ॥ ೪೦ ॥

ತಮೀಶ್ವರಂ ಪಂಚವಕ್ತ್ರಂ ತ್ರಿಣೇತ್ರಂ
ಪಿನಾಕಿನಂ ಚಂದ್ರಕಲಾವತಂಸಂ ।
ಆಲಂಬಿತಾಪಿಂಗಜಟಾಕಪಾಲಂ
ಮಧ್ಯಂ ಗತಂ ಭಾಸ್ಕರಕೋಟಿತೇಜಸಂ ॥ ೪೧ ॥
ಮೃಣಾಲಗೌರಂ ಗಜಚರ್ಮವಾಸಸಂ
ಗಂಗಾತರಂಗೋಕ್ಷಿತಮೌಲಿದೇಶಂ ।
ನಾಗೇಂದ್ರಹಾರಾವಲಿಕಂಕಣೋರ್ಮಿಕಾ
ಕಿರೀಟಕೋಟ್ಯಂಗದಕುಂಡಲೋಜ್ಜ್ವಲಂ ॥ ೪೨ ॥
ತ್ರಿಶೂಲಖಟ್ವಾಂಗಕುಠಾರಚರ್ಮ
ಮೃಗಾಭಯೇಷ್ಟಾರ್ಥಪಿನಾಕಹಸ್ತಂ ।

---

೩೮. ಹೀಗೆ ನಿಶ್ಚಯಿಸಿ ಬೆಂಕಿಯನ್ನು ಉರಿಸಿ ಆ ಬ್ರಾಹ್ಮಣನನ್ನು ಕರೆದು ಉದಕಸಹಿತವಾಗಿ ಹೆಂಡತಿಯನ್ನು ದಾನಮಾಡಿದನು.

೩೯. ತಾನೂ ಸ್ನಾನಮಾಡಿ ಶುದ್ಧನಾಗಿ ದೇವತೆಗಳನ್ನು ವಂದಿಸಿ ಆ ಅಗ್ನಿಯನ್ನು ಎರಡಾವೃತ್ತಿ ಪ್ರದಕ್ಷಿಣೆಗೈದು ಒಮ್ಮನಸ್ಸಿನಿಂದ ಶಿವನನ್ನು ಚಿಂತಿಸಿದನು.

೪೦. ತರುವಾಯ ಅಗ್ನಿಯಲ್ಲಿ ಬೀಳುತ್ತಿರುವವನ್ನೂ, ತನ್ನ ಚರಣದಲ್ಲಿ ಮನಸ್ಸನ್ನಿಟ್ಟವನೂ ಆದ ಆ ದೊರೆಯನ್ನು ತಡೆಯುವುದಕ್ಕಾಗಿ ಜಗದೊಡೆಯನಾದ ಶಂಕರನು ಪ್ರತ್ಯಕ್ಷನಾದನು.

೪೧–೪೩. ಆ ರಾಜನು ಐದು ಮುಖವುಳ್ಳವನೂ, ಮುಕ್ಕಣ್ಣನೂ, ಪಿನಾಕವನ್ನು ಹಿಡಿದವನೂ, ಚಂದ್ರಕಲಾಧರನೂ, ಜೋಲಾಡುತ್ತಿರುವ ಹಳದಿಯ ಜಟೆಯುಳ್ಳವನೂ, ಅನೇಕ ಸೂರ್ಯರ ತೇಜಸ್ಸುಳ್ಳವನೂ, ತಾವರೆದಂಟಿನಂತೆ ಬೆಳ್ಳಗಿರುವವನೂ, ಗಜಚರ್ಮಧಾರಿಯೂ, ಗಂಗೆಯ ಅಲೆಗಳಿಂದ ಒದ್ದೆಯಾದ ತಲೆಯುಳ್ಳವನೂ, ಸರ್ಪದಮಾಲೆ, ಕಂಕಣ, ಉಂಗುರ, ಕಿರೀಟ, ಭುಜಕೀರ್ತಿ, ಕುಂಡಲ ಇವುಗಳಿಂದ ಉಜ್ವಲನೂ, ತ್ರಿಶೂಲ, ಖಟ್ವಾಂಗ, ಕೊಡಲಿ, ಗುರಾಣಿ, ಮೃಗ, ಅಭಯ, ವರ, ಇವುಗಳನ್ನು ಹಸ್ತದಲ್ಲುಳ್ಳವನೂ, ವೃಷಭಾ

CC-0. Jangamwadi Math Collection. Digitized by eGangotri

ವೃಷೋಪರಿಸ್ಥಂ ಶಿತಿಕಂಠಮೀಶಂ
ಪ್ರೋದ್ಭೂತಮಗ್ರೇ ನೃಪತಿರ್ದದರ್ಶ ॥ ೪೩ ॥
ಅಥಾಂಬರಾದ್ದ್ರುತಂ ಪೇತುಃ ದಿವ್ಯಾಃ ಕುಸುಮವೃಷ್ಟಯಃ ।
ಪ್ರಣೇದುರ್ದೇವತೂರ್ಯಾಣಿ ದೇವಾಶ್ಚ ನನೃತುರ್ಜಗುಃ ॥ ೪೪ ॥
ತತ್ರಾಜಗ್ಮುರ್ನಾರದಾದ್ಯಾಃ ಸನಕಾದ್ಯಾಃ ಸುರರ್ಷಯಃ ।
ಇಂದ್ರಾದಯಶ್ಚ ಲೋಕೇಶಾಸ್ತಥಾ ಬ್ರಹ್ಮರ್ಷಯೋಽಮಲಾಃ ॥ ೪೫ ॥
ತೇಷಾಂ ಮಧ್ಯೇ ಸಮಾಸೀನೋ ಮಹಾದೇವಃ ಸಹೋಮಯಾ ।
ವವರ್ಷ ಕರುಣಾಸಾರಂ ಭಕ್ತಿನಮ್ರೇ ಮಹೀಪತೌ ॥ ೪೬ ॥
ತದ್ದರ್ಶನಾನಂದವಿಜೃಂಭಿತಾಶಯಃ
ಪ್ರವೃದ್ಧಬಾಷ್ಪಾಂಬುಪರಿಪ್ಲುತಾಂಗಃ ।
ಪ್ರಹೃಷ್ಟರೋಮಾ ಗಲಗದ್ಗದಾಕ್ಷರಂ
ತುಷ್ಟಾವ ಗೀರ್ಭಿರ್ಮುಕುಲೀಕೃತಾಂಜಲಿಃ ॥ ೪೭ ॥

ರಾಜೋವಾಚ :—

ನತೋಽಸ್ಮ್ಯಹಂ ದೇವಮನಾಥಮವ್ಯಯಂ
ಪ್ರಧಾನಮವ್ಯಕ್ತಗುಣಂ ಮಹಾಂತಂ ।
ಅಕಾರಣಂ ಕಾರಣಕಾರಣಂ ಪರಂ
ಶಿವಂ ಚಿದಾನಂದಮಯಂ ಪ್ರಶಾಂತಂ ॥ ೪೮ ॥

---

ರೂಢನೂ, ನೀಲಕಂಠನೂ ಆಗಿ ಮುಂದೆ ಆವಿರ್ಭವಿಸಿದ ಮಹಾದೇವನನ್ನು ಕಂಡನು.

೪೪. ಬಳಿಕ ಆಕಾಶದಿಂದ ದಿವ್ಯವಾದ ಹೂಮಳೆಯು ಸುರಿಯಿತು. ದೇವವಾದ್ಯಗಳು ಮೊಳಗಿದುವು. ದೇವತೆಗಳು ಕುಣಿದರು ಮತ್ತು ಗಾನಮಾಡಿದರು.

೪೫. ಅಲ್ಲಿಗೆ ನಾರದ ಸನಕಾದಿ ದೇವರ್ಷಿಗಳೂ, ಇಂದ್ರಾದಿ ದಿಕ್ಪಾಲಕರೂ, ಶುದ್ಧರಾದ ಬ್ರಹ್ಮರ್ಷಿಗಳೂ ಬಂದರು.

೪೬. ಅವರ ನಡುವೆ ಮಹಾದೇವನು ಪಾರ್ವತಿಯೊಡನೆ ಕುಳಿತು ಭಕ್ತಿಯಿಂದ ಮಣಿದ ಆ ರಾಜನಲ್ಲಿ ದಯೆಯ ಧಾರೆಯನ್ನು ಸುರಿಸಿದನು.

೪೭. ಅವನ ದರ್ಶನದಿಂದುಂಟಾದ ಆನಂದದಿಂದ ವೃದ್ಧಿಗೊಂಡ ಸದ್ಭಾವನೆಯುಳ್ಳವನೂ, ಕಣ್ಣೀರಿನಿಂದ ಒದ್ದೆಯಾದ ಅಂಗಗಳುಳ್ಳವನೂ, ರೋಮಾಂಚಗೊಂಡವನೂ ಆದ ದೊರೆಯು ಕೈಮುಗಿದುಕೊಂಡು ಗದ್ಗದ ಧ್ವನಿಯ ಮಾತಿನಿಂದ ಈ ರೀತಿಯಾಗಿ ಸ್ತುತಿಸಿದನು.

೪೮. ರಾಜನು ಹೇಳುತ್ತಾನೆ:— "ನಾನು ಏಕೈಕಪ್ರಭುವೂ, ವಿಕಾರ

CC-0. Jangamwadi Math Collection. Digitized by eGangotri

ತ್ವಂ ವಿಶ್ವಸಾಕ್ಷೀ ಜಗತೋಽಸ್ಯ ಕರ್ತಾ
ವಿರೂಢಧಾಮಾ ಹೃದಿ ಸನ್ನಿವಿಷ್ಟಃ ।
ಅತೋ ವಿಚಿನ್ವಂತಿ ವಿಧೌ ವಿಪಶ್ಚಿತೋ
ಯೋಗೈರನೇಕೈಃ ಕೃತಚಿತ್ತರೋಧೈಃ ॥ ೬೯ ॥
ಏಕಾತ್ಮತಾಂ ಭಾವಯತಾಂ ತ್ವಮೇಕೋ
ನಾನಾಧಿಯಾಂ ಯಸ್ತ್ವಮನೇಕರೂಪಃ ।
ಅತೀಂದ್ರಿಯಂ ಸಾಕ್ಷ್ಯುದಯಾಸ್ತವಿಭ್ರಮಂ
ಮನಃಪಥಾತ್ಸಂಹ್ರಿಯತೇ ಪದಂ ತೇ ॥ ೩೦ ॥
ತಂ ತ್ವಾಂ ದುರಾಪಂ ವಚಸೋ ಧಿಯಾಶ್ಚ
ವ್ಯಪೇತಮೋಹಂ ಪರಮಾತ್ಮರೂಪಂ ।
ಗುಣೈಕನಿಷ್ಠಾಃ ಪ್ರಕೃತೌ ವಿಲೀನಾಃ
ಕಥಂ ವಪುಃ ಸ್ತೋತುಮಲಂ ಗಿರೋ ಮೇ ॥ ೩೧ ॥
ತಥಾಽಪಿ ಭಕ್ತ್ಯಾಶ್ರಯತಾಮುಪೇತ
ಸ್ತವಾಂಘ್ರಿಪದ್ಮಂ ಪ್ರಣತಾರ್ತಿಭಂಜನಂ ।
ಸುಘೋರಸಂಸಾರದವಾಗ್ನಿಪೀಡಿತೋ
ಭಜಾಮಿ ನಿತ್ಯಂ ಭವಭೀತಿಶಾಂತಯೇ ॥ ೩೨ ॥

---

ರಹಿತನೂ, ಮುಖ್ಯನೂ, ಅಸ್ಪಷ್ಟಗುಣನೂ, ಕಾರಣವಿಲ್ಲದವನೂ, ಜಗತ್ತಿಗೆ ಕಾರಣರಾದವರಿಗೆ ಕಾರಣನೂ, ಚಿದಾನಂದಸ್ವರೂಪನೂ, ಶಾಂತನೂ ಆದ ಪರಶಿವನನ್ನು ನಮಸ್ಕರಿಸುತ್ತೇನೆ.

೬೯. ನೀನು ಸಮಸ್ತವನ್ನೂ ಪ್ರತ್ಯಕ್ಷವಾಗಿ ನೋಡುವವನೂ, ಈ ಜಗತ್ತಿಗೆ ಕಾರಣನೂ, ಸ್ಥಿರವಾದ ಬೆಲೆಯುಳ್ಳವನೂ, ಪ್ರಾಣಿಗಳ ಹೃದಯಕಮಲದಲ್ಲಿರುವವನೂ ಆಗಿರುವೆ. ಆದುದರಿಂದ ಜ್ಞಾನಿಗಳು ಚಿತ್ತನಿರೋಧಮಾಡಿ ಅನೇಕ ಯೋಗಗಳಿಂದ ನಿನ್ನನ್ನು ಹುಡುಕುತ್ತಾರೆ.

೩೦. ನೀನು ಏಕರೂಪದಿಂದ ಧ್ಯಾನಿಸುವವರಿಗೆ ಏಕರೂಪನೂ, ನಾನಾ ಬುದ್ಧಿಗಳಿಂದ ಭಾವಿಸುವವರಿಗೆ ಅನೇಕರೂಪನೂ ಆಗಿ ಕಾಣಿಸುವೆ. ಇಂದ್ರಿಯಗಳಿಗೆ ಅಗೋಚರವೂ, ಉದಯ, ಅಸ್ತಗಳ ಭ್ರಾಂತಿಯುಳ್ಳುದೂ ಆಗಿರುವ ನಿನ್ನ ಸ್ಥಾನವು ಆಲೋಚಿಸಲಸಾಧ್ಯವಾದುದು.

೩೧–೩೨. ಮಾತು ಬುದ್ಧಿಗಳಿಗೆ ಹೊಂದಲಶಕ್ಯವೂ, ಮೋಹರಹಿತನೂ, ಪರಮಾತ್ಮರೂಪವೂ ಆಗಿರುವ ನಿನ್ನ ದೇಹವನ್ನು ಗುಣಗಳಲ್ಲಿ ನಿರತವೂ, ಪ್ರಕೃತಿಯಲ್ಲಿ ಅಡಗಿರುವುದೂ ಆಗಿರುವ ನನ್ನ ಮಾತುಗಳು ಸ್ತುತಿಸಲು ಹೇಗೆ ಸಮರ್ಥವಾದಾವು? ಹಾಗಾದರೂ ಘೋರಸಂಸಾರವೆಂಬ ಕಾಳ್ಗಿಚ್ಚಿನಿಂದ ಪೀಡಿತನಾದ

CC-0. Jangamwadi Math Collection. Digitized by eGangotri

ನಮಸ್ತೇ ದೇವದೇವಾಯ ಮಹಾದೇವಾಯ ಶಂಭವೇ ।
ನಮಸ್ತ್ರಿಮೂರ್ತಿರೂಪಾಯ ಸರ್ಗಸ್ಥಿತ್ಯಂತಕಾರಿಣೇ ॥ ೫೩ ॥
ನಮೋ ವಿಶ್ವಾದಿರೂಪಾಯ ವಿಶ್ವಪ್ರಥಮಸಾಕ್ಷಿಣೇ ।
ನಮಸ್ಸನ್ಮಾತ್ರತತ್ವಾಯ ಬೋಧಾನಂದಘನಾಯ ಚ ॥ ೫೪ ॥
ಸರ್ವಕ್ಷೇತ್ರನಿವಾಸಾಯ ಕ್ಷೇತ್ರಭಿನ್ನಾತ್ಮಶಕ್ತಯೇ ।
ಅಶಕ್ತಾಯ ನಮಸ್ತುಭ್ಯಂ ಶಕ್ತಾಭಾಸಾಯ ಭೂಯಸೇ ॥ ೫೫ ॥
ನಿರಾಭಾಸಾಯ ನಿತ್ಯಾಯ ಸತ್ಯಜ್ಞಾನಾಂತರಾತ್ಮನೇ ।
ವಿಶುದ್ಧಾಯ ವಿದೂರಾಯ ವಿಮುಕ್ತಾಽಶೇಷಕರ್ಮಣೇ ॥ ೫೬ ॥
ನಮೋ ವೇದಾಂತವೇದ್ಯಾಯ ವೇದಮೂಲನಿವಾಸಿನೇ ।
ನಮೋ ವಿವಿಕ್ತಚೇಷ್ಟಾಯ ನಿವೃತ್ತಗುಣವೃತ್ತಯೇ ॥ ೫೭ ॥
ನಮಃ ಕಲ್ಯಾಣವೀರ್ಯಾಯ ಕಲ್ಯಾಣಫಲದಾಯಿನೇ ।
ನಮೋಽನಂತಾಯ ಮಹತೇ ಶಾಂತಾಯ ಶಿವರೂಪಿಣೇ ॥ ೫೮ ॥

---

ನಾನು ಸಂಸಾರದ ಭಯಶಾಂತಿಗಾಗಿ ಭಕ್ತಿಯಿಂದ ಆಶ್ರಯಿಸುವವರ ದುಃಖವನ್ನು ನಿವಾರಿಸುವ ನಿನ್ನ ಪಾದಕಮಲವನ್ನು ಯಾವಾಗಲೂ ಸೇವಿಸುತ್ತೇನೆ.

೫೩. ತ್ರಿಮೂರ್ತಿರೂಪನೂ, ಸೃಷ್ಟಿ, ಸ್ಥಿತಿ, ಲಯಕಾರಣನೂ, ದೇವತೆಗಳಿಗೆ ದೇವನೂ ಆದ ಓ ಶಂಕರನೆ! ನಿನಗೆ ನಮಸ್ಕಾರವು.

೫೪. ವಿಶ್ವಾದಿರೂಪನೂ, ಪ್ರಪಂಚದಲ್ಲಿ ಮೊದಲನೆಯ ಸಾಕ್ಷಿಯೂ, ತನ್ಮಾತ್ರತತ್ವರೂಪನೂ, ಜ್ಞಾನಾನಂದಸ್ವರೂಪನೂ ಆದ ನಿನಗೆ ನಮಸ್ಕಾರವು.

೫೫. ಸಕಲಪ್ರಾಣಿಗಳ ದೇಹಗಳಲ್ಲಿ ವಾಸಿಸುವವನೂ, ದೇಹಕ್ಕಿಂತ ಭಿನ್ನವಾದ ಆತ್ಮಶಕ್ತಿಯುಳ್ಳವನೂ, ಅಶಕ್ತನೂ, ಶಕ್ತನಂತೆ ಕಾಣುವವನೂ ಆಗಿರುವ ನಿನಗೆ ನಮಸ್ಕಾರವು.

೫೬–೫೭. ಅತ್ಯಂತಪ್ರಕಾಶಮಾನನೂ, ಶಾಶ್ವತನೂ, ಸತ್ಯ, ಜ್ಞಾನಸ್ವರೂಪನೂ, ಪವಿತ್ರನೂ, ಪಾಪಿಗಳಿಗೆ ಅತ್ಯಂತದೂರನಾದವನೂ, ಸಕಲಕರ್ಮಗಳನ್ನು ತ್ಯಜಿಸಿದವನೂ, ಉಪನಿಷತ್ತುಗಳಿಂದ ಪ್ರತಿಪಾದ್ಯನೂ, ವೇದಕ್ಕೆ ಮೂಲಕಾರಣನಾದ ಬ್ರಹ್ಮನಲ್ಲಿ ವಾಸಿಸುವವನೂ, ರಹಸ್ಯವಾದ ಕಾರ್ಯವುಳ್ಳವನೂ, ಸತ್ವಾದಿಗುಣಗಳ ವ್ಯಾಪಾರದಿಂದ ಬಾಹ್ಯನೂ ಆದ ನಿನಗೆ ನಮಸ್ಕಾರವು.

೫೮. ಮಂಗಳಕರವಾದ ಸಾಮರ್ಥ್ಯವುಳ್ಳವನೂ, ಮಂಗಳಕರವಾದ ಫಲಗಳನ್ನೀಯುವವನೂ, ನಾಶವಿಲ್ಲದವನೂ, ಶಾಂತನೂ, ಶಿವರೂಪಿಯೂ ಆದ ನಿನಗೆ ನಮಸ್ಕಾರವು.

CC-0. Jangamwadi Math Collection. Digitized by eGangotri

ಅಘೋರಾಯ ಸುಘೋರಾಯ ಘೋರಾಘೌಘವಿದಾರಿಣೇ ।
ಭರ್ಗಾಯ ಭವಬೀಜಾಯ ಭಂಜನಾಯ ಗರೀಯಸೇ ।
ನಮೋ ವಿಧ್ವಸ್ತಮೋಹಾಯ ವಿಶದಾತ್ಮಗುಣಾಯ ಚ ॥ ೫೯ ॥
ಪಾಹಿ ಮಾಂ ಜಗತಾಂ ನಾಥ ಪಾಹಿ ಶಂಕರ ಶಾಶ್ವತ ।
ಪಾಹಿ ರುದ್ರ ವಿರೂಪಾಕ್ಷ ಪಾಹಿ ಮೃತ್ಯುಂಜಯಾಽವ್ಯಯ ॥ ೬೦ ॥
ಶಂಭೋ ಶಶಾಂಕಕೃತಶೇಖರ ಶಾಂತಮೂರ್ತೇ
ಗೌರೀಶ ಗೋಪತಿನಿಶಾಪಹುತಾಶನೇತ್ರ ।
ಗಂಗಾಧರಾಂಧಕವಿದಾರಣ ಪುಣ್ಯಕೀರ್ತೇ
ಭೂತೇಶ ಭೂಧರನಿವಾಸ ಸದಾ ನಮಸ್ತೇ ॥ ೬೧ ॥

ಸೂತ ಉವಾಚ :—

ಏವಂ ಸ್ತುತಃ ಸ ಭಗವಾನ್ರಾಜ್ಞಾ ದೇವೋ ಮಹೇಶ್ವರಃ ।
ಪ್ರಸನ್ನಃ ಸಹ ಪಾರ್ವತ್ಯಾ ಪ್ರತ್ಯುವಾಚ ದಯಾನಿಧಿಃ ॥ ೬೨ ॥

ಈಶ್ವರ ಉವಾಚ :—

ರಾಜಂಸ್ತೇ ಪರಿತುಷ್ಟೋಽಸ್ಮಿ ಭಕ್ತ್ಯಾ ಪುಣ್ಯಸ್ತವೇನ ಚ ।
ಅನನ್ಯಚೇತಾ ಯೋ ನಿತ್ಯಂ ಸದಾ ಮಾಂ ಪರ್ಯಪೂಜಯಃ ॥ ೬೩ ॥

---

೫೯. ಭಯಂಕರನಲ್ಲದವನೂ, ಅತ್ಯಂತ ಭಯಂಕರನೂ, ಭಯಂಕರವಾದ ಪಾಪಗಳ ಸಮೂಹವನ್ನು ಹೋಗಲಾಡಿಸುವವನೂ, ಸಂಸಾರಕ್ಕೆ ಕಾರಣವಾದ ಪಾಪವನ್ನು ಪರಿಹರಿಸುವವನೂ, ಅಜ್ಞಾನನಾಶಕನೂ, 'ಶುದ್ಧವಾದ ಆತ್ಮಗುಣವುಳ್ಳವನೂ ಆದ ಶಂಕರ! ನಿನಗೆ ನಮಸ್ಕಾರವು.

೬೦. ಜಗದೊಡೆಯನೂ, ಶಾಶ್ವತನೂ, ತ್ರಿನೇತ್ರನೂ, ಮೃತ್ಯುವನ್ನು ಜಯಿಸಿದವನೂ, ವಿಕಾರವಿಲ್ಲದವನೂ ಆದ ಶಂಕರ! ನನ್ನನ್ನು ರಕ್ಷಿಸು.

೬೧. ಚಂದ್ರಮೌಳಿಯೂ, ಶಾಂತಸ್ವರೂಪನೂ, ಗೌರೀಪತಿಯೂ, ಸೂರ್ಯ, ಚಂದ್ರ, ಅಗ್ನಿರೂಪವಾದ ಮೂರು ಕಣ್ಣುಗಳುಳ್ಳವನೂ, ಗಂಗೆಯನ್ನು ತಲೆಯಲ್ಲಿ ಹೊತ್ತಿರುವವನೂ, ಅಂಧಕಾಸುರನನ್ನು ಸದೆಬಡಿದವನೂ, ಪುಣ್ಯಕರವಾದ ಕೀರ್ತಿಯುಳ್ಳವನೂ, ಪ್ರಾಣಿಗಳಿಗೆ ಒಡೆಯನೂ, ಕೈಲಾಸ ಪರ್ವತದಲ್ಲಿ ವಾಸಮಾಡುವವನೂ ಆದ ಓ ಶಂಕರ! ನಿನಗೆ ನಮಸ್ಕಾರವು."

೬೨. ಸೂತನು ಹೇಳುತ್ತಾನೆ:—ರಾಜನು ಹೀಗೆ ಸ್ತುತಿಸಲು ದಯಾಳುವಾದ ಮಹೇಶ್ವರನು ಪಾರ್ವತಿಯೊಡನೆ ಪ್ರಸನ್ನನಾಗಿ ಹೀಗೆಂದನು.

೬೩. ಈಶ್ವರನು ಹೇಳುತ್ತಾನೆ:—"ಮಹಾರಾಜ! ನೀನು ಯಾವಾಗಲೂ ಅನನ್ಯಚಿತ್ತನಾಗಿ ನನ್ನನ್ನು ಪೂಜಿಸಿರುವೆ. ಈಗ ನಾನು ನಿನ್ನ ಭಕ್ತಿಯಿಂದಲೂ, ಪವಿತ್ರಸ್ತೋತ್ರದಿಂದಲೂ ಆನಂದಗೊಂಡಿದ್ದೇನೆ.

CC-0. Jangamwadi Math Collection. Digitized by eGangotri

ತವ ಭಾವಪರೀಕ್ಷಾರ್ಥಂ ದ್ವಿಜೋ ಭೂತ್ವಾಽಹಮಾಗತಃ ।
ವ್ಯಾಘ್ರೇಣ ಯಾ ಪರಿಗ್ರಸ್ತಾ ಸೈಷಾ ದೇವೀ ಗಿರೀಂದ್ರಜಾ ॥ ೬೪ ॥
ವ್ಯಾಘ್ರೋ ಮಾಯಾಮಯೋ ಯಸ್ತೇ ಶರೈರಕ್ಷತವಿಗ್ರಹಃ ।
ಧೀರತಾಂ ದ್ರಷ್ಟುಕಾಮಸ್ತೇ ಪತ್ನೀಂ ಯಾಚಿತವಾನಹಂ ॥ ೬೫ ॥
ಅಸ್ಯಾಶ್ಚ ಕೀರ್ತಿಮಾಲಿನ್ಯಾಸ್ತವ ಭಕ್ತ್ಯಾಶ್ಚ ಮಾನದ ।
ತುಷ್ಟೋಽಹಂ ಸಂಪ್ರಯಚ್ಛಾಮಿ ವರಂ ವರಯ ದುರ್ಲಭಂ ॥ ೬೬ ॥

ರಾಜೋವಾಚ :—

ಏಷ ಏವ ವರೋ ದೇವ ಯದ್ಭವಾನ್ಪರಮೇಶ್ವರಃ ।
ಭವತಾಪಪರೀತಸ್ಯ ಮಮ ಪ್ರತ್ಯಕ್ಷತಾಂ ಗತಃ ॥ ೬೭ ॥
ನಾಽನ್ಯಂ ವರಂ ವೃಣೇ ದೇವ ಭವತೋ ವರದರ್ಷಭಾತ್ ।
ಅಹಂ ಚ ಸೇಯಂ ಸಾ ರಾಜ್ಞೀ ಮಮ ಮಾತಾ ಚ ಮತ್ಪಿತಾ ॥ ೬೮ ॥
ವೈಶ್ಯಃ ಪದ್ಮಾಕರೋ ನಾಮ ತತ್ಪುತ್ರಃ ಸುನಯಾಽಭಿಧಃ ।
ಸರ್ವಾನೇತಾನ್ಮಹಾದೇವ ಸದಾ ತ್ವತ್ಪಾರ್ಶ್ವಗಾನ್ಕುರು ॥ ೬೯ ॥

ಸೂತ ಉವಾಚ :—

ಅಥ ರಾಜ್ಞೀ ಮಹಾಭಾಗಾ ಪ್ರಣತಾ ಕೀರ್ತಿಮಾಲಿನೀ ।
ಭಕ್ತ್ಯಾ ಪ್ರಸಾದ್ಯ ಗಿರಿಶಂ ಯಯಾಚೇ ವರಮುತ್ತಮಂ ॥ ೭೦ ॥

---

೬೪. ನಿನ್ನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ನಾನು ಬ್ರಾಹ್ಮಣನಾಗಿ ಬಂದಿದ್ದೇನೆ. ಹುಲಿಯಿಂದ ಹಿಡಿಯಲ್ಪಟ್ಟವಳೇ ನನ್ನ ಮಡದಿಯಾದ ಗಿರಿಜೆಯು.

೬೫. ನಿನ್ನ ಬಾಣಗಳಿಂದ ಘಾಯಗೊಳ್ಳದಿದ್ದ ಆ ಹುಲಿಯು ಮಾಯಾ ರೂಪವಾದುದು. ನಿನ್ನ ಧೈರ್ಯವನ್ನು ನೋಡಲಪೇಕ್ಷೆಯಿಂದ ನಾನು ನಿನ್ನ ಪತ್ನಿಯನ್ನು ಬೇಡಿದೆನು.

೬೬. ಈ ಕೀರ್ತಿಮಾಲಿನಿಯ ಮತ್ತು ನಿನ್ನ ಭಕ್ತಿಯಿಂದ ಸಂತುಷ್ಟನಾದ ನಾನು ನಿನಗೆ ದುರ್ಲಭವಾದ ವರವನ್ನು ಕೊಡುತ್ತೇನೆ, ಕೇಳಿಕೊ."

೬೭. ರಾಜನು ಹೇಳುತ್ತಾನೆ:—"ಸಂಸಾರತಾಪದಿಂದ ಪೀಡಿತನಾದ ನನಗೆ ಪರಮೇಶ್ವರನಾದ ನೀನು ಪ್ರತ್ಯಕ್ಷನಾದುದೇ ನನಗೆ ವರವು.

೬೮–೬೯. ವರವನ್ನೀಯುವವರಲ್ಲಿ ಶ್ರೇಷ್ಠನಾದ ನಿನ್ನಲ್ಲಿ ಬೇರೆ ವರವನ್ನು ನಾನು ಕೇಳಿಕೊಳ್ಳುವುದಿಲ್ಲ. ನನ್ನ ಈ ರಾಣಿಯು, ನನ್ನ ತಾಯಿತಂದೆಗಳು, ಪದ್ಮಾಕರನೆಂಬ ವೈಶ್ಯನು, ಅವನ ಮಗನಾದ ಸುನಯನು ಇವರೆಲ್ಲರನ್ನೂ ನಿನ್ನ ಬಳಿಯಲ್ಲಿ ವಾಸಿಸುವಂತೆ ಮಾಡು."

೭೦. ಬಳಿಕ ಭಾಗ್ಯವಂತಳಾದ ಕೀರ್ತಿಮಾಲಿನಿಯು ನಮಸ್ಕಾರಮಾಡಿ ಭಕ್ತಿಯಿಂದ ಶಿವನನ್ನು ಸಂತೋಷಗೊಳಿಸಿ ಉತ್ತಮವರವನ್ನು ಬೇಡಿದಳು.

CC-0. Jangamwadi Math Collection. Digitized by eGangotri

ರಾಜ್ಞ್ಯುವಾಚ:—
ಚಂದ್ರಾಂಗದೋ ಮಮ ಪಿತಾ ಮಾತಾ ಸೀಮಂತಿನೀ ಚ ಮೇ ।
ತಯೋರ್ಯಾಚೇ ಮಹಾದೇವ ತ್ವತ್ಪಾರ್ಶ್ವೇ ಸನ್ನಿಧಿಂ ಸದಾ ॥ ೭೧ ॥
ಏವಮಸ್ತ್ವಿತಿ ಗೌರೀಶಃ ಪ್ರಸನ್ನೋ ಭಕ್ತವತ್ಸಲಃ ।
ತಯೋಃ ಕಾಮವರಂ ದತ್ವಾ ಕ್ಷಣಾದಂತರ್ಹಿತೋಽಭವತ್ ॥ ೭೨ ॥
ಸೋಽಪಿ ರಾಜಾ ಸುರೈಃ ಸಾರ್ಧಂ ಪ್ರಸಾದಂ ಪ್ರಾಪ್ಯ ಶೂಲಿನಃ ।
ಸಹಿತಃ ಕೀರ್ತಿಮಾಲಿನ್ಯಾ ಬುಭುಜೇ ವಿಷಯಾನ್ಪ್ರಿಯಾನ್ ॥ ೭೩ ॥
ಕೃತ್ವಾ ವರ್ಷಾಽಯುತಂ ರಾಜ್ಯಮವ್ಯಾಹತಬಲೋನ್ನತಿಃ ।
ರಾಜ್ಯಂ ಪುತ್ರೇಷು ವಿನ್ಯಸ್ಯ ಭೇಜೇ ಶಂಭೋಃ ಪರಂ ಪದಂ ॥ ೭೪ ॥
ಚಂದ್ರಾಂಗದೋಽಪಿ ರಾಜೇಂದ್ರೋ ರಾಜ್ಞೀ ಸೀಮಂತಿನೀ ಚ ಸಾ ।
ಭಕ್ತ್ಯಾ ಸಂಪೂಜ್ಯ ಗಿರಿಶಂ ಜಗ್ಮತುಃ ಶಾಂಭವಂ ಪದಂ ॥ ೭೫ ॥
ಏತತ್ಪವಿತ್ರಮಘನಾಶಕರಂ ವಿಚಿತ್ರಂ
ಶಂಭೋರ್ಗುಣಾನುಕಥನಂ ಪರಮಂ ರಹಸ್ಯಂ ।
ಯಃ ಶ್ರಾವಯೇದ್ಬುಧಜನಾನ್ಪ್ರಯತಃ ಪಠೇದ್ವಾ
ಸಂಪ್ರಾಪ್ಯ ಭೋಗವಿಭವಂ ಶಿವಮೇತಿ ಸೋಽಂತೇ ॥ ೭೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಭದ್ರಾಯು ಶಿವಪ್ರಸಾದಕಥನಂ" ನಾಮ ಚತುರ್ದಶೋಽಧ್ಯಾಯಃ

---

೭೧. ರಾಣಿಯು ಹೇಳುತ್ತಾಳೆ:—ಮಹಾದೇವ! ನನ್ನ ತಂದೆ ತಾಯಿಗಳಾದ ಚಂದ್ರಾಂಗದ ಸೀಮಂತಿನಿಯರನ್ನು ನಿನ್ನ ಬಳಿಯಿರುವಂತೆ ಮಾಡಬೇಕೆಂದು ಬೇಡುತ್ತೇನೆ.

೭೨—೭೩. ಭಕ್ತರಲ್ಲಿ ಪ್ರೀತಿಯುಳ್ಳ ಶಂಕರನು ಪ್ರಸನ್ನನಾಗಿ ಹಾಗೆಯೇ ಆಗಲೆಂದು ಅವರಿಗೆ ಇಷ್ಟವಾದ ವರವನ್ನಿತ್ತು ಕ್ಷಣಕಾಲದಲ್ಲಿಯೇ ಅಂತರ್ಧಾನವಾದನು. ಆ ರಾಜನೂ ದೇವತೆಗಳ ಸನ್ನಿಧಿಯಲ್ಲಿ ಶಿವನ ಅನುಗ್ರಹವನ್ನು ಪಡೆದು ಕೀರ್ತಿಮಾಲಿನಿಯೊಡನೆ ಪ್ರಿಯವಾದ ವಿಷಯಗಳನ್ನನುಭವಿಸಿದನು.

೭೪. ಹತ್ತುಸಾವಿರ ವರ್ಷಗಳಕಾಲ ಬಲಗುಂದದೆ ರಾಜ್ಯಭಾರ ಮಾಡಿ ಮಕ್ಕಳಿಗೆ ರಾಜ್ಯವನ್ನು ಒಪ್ಪಿಸಿ ಶಿವನ ಉತ್ತಮ ಸ್ಥಾನವನ್ನು ಪಡೆದನು.

೭೫—೭೬. ಚಂದ್ರಾಂಗದನೂ, ಸೀಮಂತಿನಿಯೂ ಭಕ್ತಿಯಿಂದ ಶಿವನನ್ನು ಆರಾಧಿಸಿ ಅವನ ಸ್ಥಾನಕ್ಕೆ ತೆರಳಿದರು. ಪವಿತ್ರವೂ, ಪಾಪನಾಶಕವೂ, ಆಶ್ಚರ್ಯಕರವೂ ಆಗಿರುವ ಶಿವನ ಗುಣಕಥನರೂಪವಾದ ಈ ಪರಮರಹಸ್ಯವನ್ನು ಹೇಳುವವನೂ, ಶುದ್ಧನಾಗಿ ಪಠಿಸುವವನೂ ಅನೇಕ ಸುಖಗಳನ್ನನುಭವಿಸಿ ಕೊನೆಯಲ್ಲಿ ಶಿವನನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರಖಂಡದಲ್ಲಿ "ಭದ್ರಾಯುಶಿವಪ್ರಸಾದಕಥನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ಪಂಚದಶೋಽಧ್ಯಾಯಃ

## ಭಸ್ಮಮಾಹಾತ್ಮ್ಯಕಥನಂ

ಸೂತ ಉವಾಚ :—

ಋಷಭಸ್ಯಾಽನುಭಾವೋಽಯಂ ವರ್ಣಿತಃ ಶಿವಯೋಗಿನಃ ।
ಅಥಾಽನ್ಯಸ್ಯಾಽಪಿ ವಕ್ಷ್ಯಾಮಿ ಪ್ರಭಾವಂ ಶಿವಯೋಗಿನಃ ॥ ೧ ॥
ಭಸ್ಮನಶ್ಚಾಽಪಿ ಮಾಹಾತ್ಮ್ಯಂ ವರ್ಣಯಾಮಿ ಸಮಾಸತಃ ।
ಕೃತಕೃತ್ಯಾ ಭವಿಷ್ಯಂತಿ ಯಚ್ಛ್ರುತ್ವಾ ಪಾಪಿನೋ ಜನಾಃ ॥ ೨ ॥
ಅಸ್ತ್ಯೇಕೋ ವಾಮದೇವಾಖ್ಯಃ ಶಿವಯೋಗೀ ಮಹಾತಪಾಃ ।
ನಿರ್ದ್ವಂದ್ವೋ ನಿರ್ಗುಣಃ ಶಾಂತೋ ನಿಃಸಂಗಃ ಸಮದರ್ಶನಃ ॥ ೩ ॥
ಆತ್ಮಾರಾಮೋ ಜಿತಕ್ರೋಧೋ ಗೃಹದಾರವಿವರ್ಜಿತಃ ।
ಅತರ್ಕಿತಗತಿರ್ಮೌನೀ ಸಂತುಷ್ಟೋ ನಿಷ್ಪರಿಗ್ರಹಃ ॥ ೪ ॥
ಭಸ್ಮೋದ್ಧೂಲಿತಸರ್ವಾಂಗೋ ಜಟಾಮಂಡಲಮಂಡಿತಃ ।
ವಲ್ಕಲಾಽಜಿನಸಂವೀತೋ ಭಿಕ್ಷಾಮಾತ್ರಪರಿಗ್ರಹಃ ॥ ೫ ॥

---

## ಕನ್ನಡದ ಅನುವಾದ

### ಭಸ್ಮಮಾಹಾತ್ಮ್ಯಕಥನ

೧. ಸೂತನು ಹೇಳುತ್ತಾನೆ:—ಈಗ ಋಷಭಯೋಗಿಯ ಮಾಹಾತ್ಮ್ಯೆಯನ್ನು ವರ್ಣಿಸಿರುವೆನು. ಇನ್ನೊಬ್ಬ ಶಿವಯೋಗಿಯ ಪ್ರಭಾವವನ್ನು ಇನ್ನು ಮುಂದೆ ಹೇಳುವೆನು.

೨. ಭಸ್ಮದ ಮಾಹಾತ್ಮ್ಯೆಯನ್ನೂ ಸಂಕ್ಷೇಪವಾಗಿ ವರ್ಣಿಸುವೆನು. ಇದನ್ನು ಕೇಳಿ ಪಾಪಿಗಳಾದ ಜನರೆಲ್ಲರೂ ಧನ್ಯರಾಗುವರು.

೩–೫. ಮಹಾ ತಪಸ್ವಿಯೂ, ದ್ವಂದ್ವ (ಶೀತೋಷ್ಣ) ಸಹಿಷ್ಣುವೂ, ರಜಸ್ತಮೋಗುಣಗಳ ಕಾರ್ಯವಿಲ್ಲದವನೂ, ಶಾಂತನೂ, ವಿಷಯಗಳ ಸಂಬಂಧವನ್ನು ಬಿಟ್ಟವನೂ, ಎಲ್ಲರಲ್ಲಿಯೂ ಸಮದೃಷ್ಟಿಯುಳ್ಳವನೂ, ಪರಮಾತ್ಮನಲ್ಲಿ ಆಸಕ್ತವಾದ ಮನಸ್ಸುಳ್ಳವನೂ, ಕೋಪವನ್ನು ಜಯಿಸಿದವನೂ, ಮನೆ, ಪತ್ನಿ ಮುಂತಾದುವೇನೂ ಇಲ್ಲದಿರುವವನೂ, ಆಕಸ್ಮಿಕ ಗಮನವುಳ್ಳವನೂ, ಮೌನವಾಗಿರುವವನೂ, ಸಂತುಷ್ಟನೂ, ದಾನವನ್ನು ಸ್ವೀಕರಿಸದವನೂ, ಭಸ್ಮದಿಂದ ಲಿಪ್ತವಾದ ಸಮಸ್ತಾವಯವವುಳ್ಳವನೂ, ಜಟೆಯ ಸಮೂಹದಿಂದ ಅಲಂಕೃತನೂ, ನಾರುಬಟ್ಟೆ, ಕೃಷ್ಣಾಜಿನವನ್ನು ಧರಿಸಿದವನೂ, ಭಿಕ್ಷೆಯನ್ನು ತೆಗೆದುಕೊಳ್ಳುವವನೂ ಆದ ವಾಮದೇವನೆಂಬ ಶಿವಯೋಗಿಯೊಬ್ಬನಿದ್ದನು.

CC-0. Jangamwadi Math Collection. Digitized by eGangotri

ಸ ಏಕದಾ ಚರಂಲ್ಲೋಕೇ ಸರ್ವಾಽನುಗ್ರಹತತ್ಪರಃ ।
ಕ್ರೌಂಚಾಽರಣ್ಯಂ ಮಹಾಘೋರಂ ಪ್ರವಿವೇಶ ಯದೃಚ್ಛಯಾ ॥ ೬ ॥
ತಸ್ಮಿನ್ನಿರ್ಮನುಜೇಽರಣ್ಯೇ ತಿಷ್ಠತ್ಯೇಕೋಽತಿಭೀಷಣಃ ।
ಕ್ಷುತ್ತೃಷಾಕುಲಿತೋ ನಿತ್ಯಂ ಯಃಕಶ್ಚಿದ್ಬ್ರಹ್ಮರಾಕ್ಷಸಃ ॥ ೭ ॥
ತಂ ಪ್ರವಿಷ್ಟಂ ಶಿವಾತ್ಮಾನಂ ಸ ದೃಷ್ಟ್ವಾ ಬ್ರಹ್ಮರಾಕ್ಷಸಃ ।
ಅಭಿದುದ್ರಾವ ವೇಗೇನ ಜಗ್ಧುಂ ಕ್ಷುತ್ಪರಿಪೀಡಿತಃ ॥ ೮ ॥
ವ್ಯಾತ್ತಾನನಂ ಮಹಾಕಾಯಂ ಭೀಮದಂಷ್ಟ್ರಂ ಭಯಾನಕಂ ।
ತಮಾಯಾಂತಮಭಿಪ್ರೇಕ್ಷ್ಯ ಯೋಗೀಶೋ ನ ಚಚಾಲ ಸಃ ॥ ೯ ॥
ಅಥಾಽಭಿದ್ರುತ್ಯ ತರಸಾ ಸ ಘೋರೋ ವನಗೋಚರಃ ।
ದೋರ್ಭ್ಯಾಂ ನಿಷ್ಪೀಡ್ಯ ಜಗ್ರಾಹ ನಿಷ್ಕಂಪಂ ಶಿವಯೋಗಿನಂ ॥ ೧೦ ॥
ತದಂಗಸ್ಪರ್ಶನಾದೇವ ಸದ್ಯೋ ವಿಧ್ವಸ್ತಕಿಲ್ಬಿಷಃ ।
ಸ ಬ್ರಹ್ಮರಾಕ್ಷಸೋ ಘೋರೋ ವಿಷಣ್ಣಃ ಸ್ಮೃತಿಮಾಯಯೌ ॥ ೧೧ ॥
ಯಥಾ ಚಿಂತಾಮಣಿಂ ಸ್ಪೃಷ್ಟ್ವಾ ಲೋಹಂ ಕಾಂಚನತಾಂ ವ್ರಜೇತ್ ।
ಯಥಾ ಜಂಬೂನದೀಂ ಪ್ರಾಪ್ಯ ಮೃತ್ತಿಕಾ ಸ್ವರ್ಣತಾಂ ವ್ರಜೇತ್ ॥ ೧೨ ॥

---

೬. ಅವನು ಒಂದು ವೇಳೆ ಎಲ್ಲರಿಗೂ ಅನುಗ್ರಹಮಾಡಲು ನಿರತನಾಗಿ ಪ್ರಪಂಚದಲ್ಲಿ ಸಂಚರಿಸುತ್ತ ಘೋರವಾದ ಕ್ರೌಂಚಾರಣ್ಯವನ್ನು ಆಕಸ್ಮಿಕವಾಗಿ ಹೊಕ್ಕನು.

೭. ಆ ಮನುಷ್ಯರಿಲ್ಲದ ಕಾಡಿನಲ್ಲಿ ಅತಿ ಭಯಂಕರನೂ, ಹಸಿವು, ಬಾಯಾರಿಕೆಗಳಿಂದ ವ್ಯಥೆಗೊಂಡವನೂ ಆದ ಒಬ್ಬ ಬ್ರಹ್ಮರಾಕ್ಷಸನಿದ್ದನು.

೮. ಅವನು ಹಸಿವಿನಿಂದ ಪೀಡಿತನಾಗಿ ಆ ಕಾಡಿನಲ್ಲಿ ಪ್ರವೇಶಿಸಿದ ಆ ಶಿವಯೋಗಿಯನ್ನು ಕಂಡು ತಿನ್ನುವುದಕ್ಕೋಸ್ಕರ ಬೇಗನೆ ಅಟ್ಟಿಸಿಕೊಂಡು ಬಂದನು.

೯. ಬಾಯಿಯನ್ನು ತೆರೆದುಕೊಂಡಿರುವವನೂ, ದೊಡ್ಡದೇಹವುಳ್ಳವನೂ, ಭಯಂಕರವಾದ ಹಲ್ಲುಳ್ಳವನೂ ಆಗಿ ಬರುತ್ತಿರುವ ಆ ಬ್ರಹ್ಮರಾಕ್ಷಸನನ್ನು ಕಂಡು ಯೋಗೀಶ್ವರನು ಚಲಿಸಲಿಲ್ಲ.

೧೦. ಭಯಂಕರನಾದ ಆ ಬ್ರಹ್ಮರಾಕ್ಷಸನು ಬೇಗನೆ ಓಡಿಬಂದು ಅಲ್ಲಾಡದಿರುವ ಆ ಶಿವಯೋಗಿಯನ್ನು ತೋಳುಗಳಿಂದ ತಿಕ್ಕಿ ಹಿಡಿದುಕೊಂಡನು.

೧೧. ಅವನ ಅವಯವಗಳ ಸ್ಪರ್ಶದಿಂದ ಕೂಡಲೆ ಆ ಬ್ರಹ್ಮರಾಕ್ಷಸನು ಪಾಪವನ್ನು ಕಳೆದುಕೊಂಡು ವ್ಯಥೆಗೊಂಡವನಾಗಿ ಜನ್ಮಾಂತರವನ್ನು ಜ್ಞಾಪಿಸಿಕೊಂಡನು.

೧೨-೧೪. ಚಿಂತಾಮಣಿಯನ್ನು ಮುಟ್ಟಿ ಕಬ್ಬಿಣವು ಚಿನ್ನವಾಗು

CC-0. Jangamwadi Math Collection. Digitized by eGangotri

ಯಥಾ ಮಾನಸಮಭ್ಯೇತ್ಯ ವಾಯಸಾ ಯಾಂತಿ ಹಂಸತಾಂ ।
ಯಥಾಽಮೃತಂ ಸಕೃತ್ಪೀತ್ವಾ ನರೋ ದೇವತ್ವಮಾಪ್ನುಯಾತ್ ॥ ೧೩ ॥
ತಥೈವ ಹಿ ಮಹಾತ್ಮನೋ ದರ್ಶನಸ್ಪರ್ಶನಾದಿಭಿಃ ।
ಸದ್ಯಃ ಪುನಂತ್ಯಘೋಪೇತಾನ್ಸತ್ಸಂಗೋ ದುರ್ಲಭೋ ಹ್ಯತಃ ॥ ೧೪ ॥
ಯಃ ಪೂರ್ವಂ ಕ್ಷುತ್ಪಿಪಾಸಾರ್ತೋ ಘೋರಾತ್ಮಾ ವಿಪಿನೇಚರಃ ।
ಸ ಸದ್ಯಸ್ತೃಪ್ತಿಮಾಯಾತಃ ಪೂರ್ಣಾನಂದೋ ಬಭೂವ ಹ ॥ ೧೫ ॥

ತದ್ಗಾತ್ರಲಗ್ನಸಿತಭಸ್ಮಕಣಾನುವಿದ್ಧಃ
ಸದ್ಯೋ ವಿಧೂತಘನಪಾಪತನುಃಸ್ವಭಾವಃ ।
ಸಂಪ್ರಾಪ್ತಪೂರ್ವಭವಸಂಸ್ಮೃತಿರುಗ್ರಕಾರ್ಯ
ಸ್ತತ್ಪಾದಪದ್ಮಯುಗಲೇ ಪ್ರಣತೋ ಬಭಾಷೇ ॥ ೧೬ ॥

ರಾಕ್ಷಸ ಉವಾಚ :—

ಪ್ರಸೀದ ಮೇ ಮಹಾಯೋಗಿನ್ಪ್ರಸೀದ ಕರುಣಾನಿಧೇ ।
ಪ್ರಸೀದ ಭವತಪ್ತಾನಾಮಾನಂದಾಽಮೃತವಾರಿಧೇ ॥ ೧೭ ॥
ಕ್ವಾಽಹಂ ಪಾಪಮತಿರ್ಘೋರಃ ಸರ್ವಪ್ರಾಣಿಭಯಂಕರಃ ।
ಕ್ವ ತೇ ಮಹಾನುಭಾವಸ್ಯ ದರ್ಶನಂ ಕರುಣಾತ್ಮನಃ ॥ ೧೮ ॥

---

ವಂತೆಯೂ, ಜಂಬೂನದಿಯನ್ನು ಹೊಂದಿ ಮಣ್ಣು ಚಿನ್ನವಾಗುವಂತೆಯೂ, ಮಾನಸ ಸರೋವರವನ್ನು ಸೇರಿ ಕಾಗೆಯು ಹಂಸವಾಗುವಂತೆಯೂ, ಮನುಷ್ಯನು ಅಮೃತವನ್ನು ಒಂದು ಸಾರಿ ಕುಡಿದು ದೇವತೆಯಾಗುವಂತೆಯೂ, ಮಹಾತ್ಮರು ದರ್ಶನ ಸ್ಪರ್ಶನಾದಿಗಳಿಂದ ಪಾಪಿಷ್ಠರನ್ನು ಕೂಡಲೆ ಶುದ್ಧಮಾಡುತ್ತಾರೆ. ಆದುದರಿಂದ ಆ ಮಹಾತ್ಮರ ಸಹವಾಸವು ದುರ್ಲಭವಾದುದು.

೧೫. ಹಿಂದೆ ಹಸಿವು ಬಾಯಾರಿಕೆಗಳಿಂದ ಸಂಕಟಗೊಂಡು ಕಾಡಿನಲ್ಲಿ ಸಂಚರಿಸುತ್ತಿದ್ದ ಆ ಘೋರ ಬ್ರಹ್ಮರಾಕ್ಷಸನು ಕೂಡಲೆ ತೃಪ್ತನಾಗಿ ಆನಂದ ಗೊಂಡನು.

೧೬. ಆ ಶಿವಯೋಗಿಯ ದೇಹದಲ್ಲಿರುವ ಧವಳಭಸ್ಮಕಣಗಳಿಂದ ಲಿಪ್ತನೂ, ಕೂಡಲೆ ಕಳೆದ ಪಾಪಸ್ವಭಾವವುಳ್ಳವನೂ, ಹಿಂದಿನ ಜನ್ಮದ ಸ್ಮರಣೆಯುಳ್ಳವನೂ, ಕಠಿನ ಕಾರ್ಯವುಳ್ಳವನೂ ಆದ ಆ ಬ್ರಹ್ಮರಾಕ್ಷಸನು ಆ ಯೋಗಿಯ ಚರಣ ಗಳಿಗೆ ನಮಸ್ಕರಿಸಿ ಇಂತೆಂದನು.

೧೭. ರಾಕ್ಷಸನು ಹೇಳುತ್ತಾನೆ:—ದಯಾಳುವೂ, ಸಂಸಾರದಿಂದ ದುಃಖ ಗೊಂಡವರಿಗೆ ಆನಂದವೆಂಬ ಅಮೃತಸಮುದ್ರಸ್ವರೂಪನೂ ಆದ ಮಹಾ ಯೋಗಿಯೆ! ನೀನು ನನ್ನಲ್ಲಿ ಪ್ರಸನ್ನನಾಗಬೇಕು.

೧೮. ಪಾಪಬುದ್ಧಿಯುಳ್ಳವನೂ, ಸಕಲ ಪ್ರಾಣಿಗಳಿಗೆ ಭಯವನ್ನುಂಟು

CC-0. Jangamwadi Math Collection. Digitized by eGangotri

ಉದ್ಧರೋದ್ಧರ ಮಾಂ ಘೋರೇ ಪತಿತಂ ದುಃಖಸಾಗರೇ ।
ತವ ಸನ್ನಿಧಿಮಾತ್ರೇಣ ಮಹಾನಂದೋಽಭಿವರ್ಧತೇ ॥ ೧೯ ॥
ವಾಮದೇವ ಉವಾಚ :—
ಕಸ್ತ್ವಂ ವನೇಚರೋ ಘೋರೋ ರಾಕ್ಷಸೋಽತ್ರ ಕಿಮಾಸ್ಥಿತಃ ।
ಕಥಮೇತಾಂ ಮಹಾಘೋರಾಂ ಕಷ್ಟಾಂ ಗತಿಮವಾಪ್ತವಾನ್ ॥ ೨೦ ॥
ರಾಕ್ಷಸ ಉವಾಚ :—
ರಾಕ್ಷಸೋಽಹಮಿತಃ ಪೂರ್ವಂ ಪಂಚವಿಂಶತಿಮೇ ಭವೇ ।
ಗೋಪ್ತಾ ಯವನರಾಷ್ಟ್ರಸ್ಯ ದುರ್ಜಯೋ ನಾಮ ವೀರ್ಯವಾನ್ ॥೨೧॥
ಸೋಽಹಂ ದುರಾತ್ಮಾ ಪಾಪೀಯಾನ್ಸ್ವೈರಚಾರೀ ಮದೋತ್ಕಟಃ ।
ದಂಡಧಾರೀ ದುರಾಚಾರಃ ಪ್ರಚಂಡೋ ನಿರ್ಘೃಣಃ ಖಲಃ ॥ ೨೨ ॥
ಯುವಾ ಬಹುಕಲತ್ರೋಽಪಿ ಕಾಮಾಸಕ್ತೋಽಜಿತೇಂದ್ರಿಯಃ ।
ಇಮಾಂ ಪಾಪೀಯಸೀಂ ಚೇಷ್ಟಾಂ ಪುನರೇಕಾಂ ಗತೋಽಸ್ಮ್ಯಹಂ॥ ೨೩ ॥
ಪ್ರತ್ಯಹಂ ನೂತನಾಮನ್ಯಾಂ ನಾರೀಂ ಭೋಕ್ತುಮನಾಃ ಸದಾ ।
ಆಹೃತಾಃ ಸರ್ವದೇಶೇಭ್ಯೋ ನಾರ್ಯೋ ಭೃತ್ಯೈರ್ಮದಾಜ್ಞಯಾ॥ ೨೪ ॥

---

ಮಾಡುವವನೂ ಆದ ನಾನೆಲ್ಲಿ? ದಯಾಳುವೂ, ಮಹಾನುಭಾವನೂ ಆದ ನಿನ್ನ ದರ್ಶನವೆಲ್ಲಿ?

೧೯. ಘೋರವಾದ ದುಃಖಸಮುದ್ರದಲ್ಲಿ ಬಿದ್ದಿರುವ ನನ್ನನ್ನು ಉದ್ಧಾರ ಮಾಡು. ನಿನ್ನ ಸನ್ನಿಧಾನದಿಂದಲೇ ನನಗೆ ಅತಿಶಯಾನಂದವು ಹೆಚ್ಚುತ್ತಿದೆ.

೨೦. ವಾಮದೇವನು ಹೇಳುತ್ತಾನೆ:—ಅರಣ್ಯದಲ್ಲಿ ಸಂಚರಿಸುವ ಘೋರ ರಾಕ್ಷಸನಾದ ನೀನಾರು? ಇಲ್ಲಿ ಏಕೆ ಇರುವೆ? ನೀನು ಇಂತಹ ಅತಿ ಭಯಂಕರವಾದ ಸ್ಥಿತಿಯನ್ನು ಹೇಗೆ ಹೊಂದಿದೆ?

೨೧. ರಾಕ್ಷಸನು ಹೇಳುತ್ತಾನೆ:—ರಾಕ್ಷಸನಾದ ನಾನು ಇದಕ್ಕಿಂತ ಹಿಂದೆ ಇಪ್ಪತ್ತೈದನೆಯ ಜನ್ಮದಲ್ಲಿ ದುರ್ಜಯನೆಂಬ ಪರಾಕ್ರಮಶಾಲಿಯಾದ ಯವನರಾಜ್ಯದ ದೊರೆಯಾಗಿದ್ದೆನು.

೨೨—೨೩. ದುರಾತ್ಮನೂ, ಪಾಪಿಯೂ, ಸ್ವೇಚ್ಛೆಯಾದ ನಡತೆಯುಳ್ಳವನೂ, ಮದದಿಂದ ಕೊಬ್ಬಿದವನೂ, ಶಿಕ್ಷೆಮಾಡುವವನೂ, ದುರ್ನಡತೆಯುಳ್ಳವನೂ, ಕಠಿನನೂ, ಕರುಣೆಯಿಲ್ಲದವನೂ, ಯುವಕನೂ ಆದ ನಾನು ಅನೇಕ ಜನ ಪತ್ನಿಯರಿದ್ದರೂ ಇಂದ್ರಿಯಗಳನ್ನು ಜಯಿಸದೆ ಕಾಮದಲ್ಲಿ ಆಸಕ್ತನಾಗಿ ಈ ಪಾಪದ ಕೆಲಸವೊಂದನ್ನು ಮಾಡುತ್ತಿದ್ದೆನು.

೨೪. ಪ್ರತಿದಿನವೂ ಹೊಸ ಹೆಂಗಸೊಬ್ಬಳನ್ನು ಅನುಭವಿಸಲಿಚ್ಛೆಯುಳ್ಳವನಾಗಿ ಸೇವಕರಿಂದ ಸಮಸ್ತ ದೇಶಗಳಿಂದಲೂ ಹೆಂಗಸರನ್ನು ಹಿಡಿದುತರಿಸಿದೆನು.

CC-0. Jangamwadi Math Collection. Digitized by eGangotri

ಭುಕ್ತ್ವಾ ಭುಕ್ತ್ವಾ ಪರಿತ್ಯಕ್ತ್ವಾಮೇಕಾಮೇಕಾಂ ದಿನೇ ದಿನೇ ।
ಅಂತರ್ಗೃಹೇಷು ಸಂಸ್ಥಾಪ್ಯ ಪುನರನ್ಯಾಃ ಸ್ತ್ರಿಯೋ ಧೃತಾಃ ॥ ೨೫ ॥
ಏವಂ ಸ್ವರಾಷ್ಟ್ರಾತ್ಪರರಾಷ್ಟ್ರತಶ್ಚ
ದೇಶಾಕರಗ್ರಾಮಪುರವ್ರಜೇಭ್ಯಃ ।
ಆಹೃತ್ಯ ನಾರ್ಯೋ ರಮಿತಾ ದಿನೇ ದಿನೇ
ಭುಕ್ತಾ ಪುನಃ ಕಾಽಪಿ ನ ಭುಜ್ಯತೇ ಮಯಾ ॥ ೨೬ ॥
ಅಥಾಽನ್ಯೈಶ್ಚ ನ ಭುಜ್ಯಂತೇ ಮಯಾ ಭುಕ್ತಾಸ್ತಥಾ ಸ್ತ್ರಿಯಃ ।
ಅಂತರ್ಗೃಹೇಷು ನಿಹಿತಾಃ ಶೋಚಂತೇ ಚ ದಿವಾನಿಶಂ ॥ ೨೭ ॥
ಬ್ರಹ್ಮವಿಟ್ಕ್ಷತ್ರಶೂದ್ರಾಣಾಂ ಯದಾ ನಾರ್ಯೋ ಮಯಾ ಹೃತಾಃ ।
ಮಮ ರಾಜ್ಯೇ ಸ್ಥಿತಾ ವಿಪ್ರಾಃ ಸಹದಾರೈಃ ಪ್ರದುದ್ರುವುಃ ॥ ೨೮ ॥
ಸಭರ್ತೃಕಾಶ್ಚ ಕನ್ಯಾಶ್ಚ ವಿಧವಾಶ್ಚ ರಜಸ್ವಲಾಃ ।
ಆಹೃತ್ಯ ನಾರ್ಯೋ ರಮಿತಾ ಮಯಾ ಕಾಮಹತಾತ್ಮನಾ ॥ ೨೯ ॥
ತ್ರಿಶತಂ ದ್ವಿಜನಾರೀಣಾಂ ರಾಜಸ್ತ್ರೀಣಾಂ ಚತುಃಶತಂ ।
ಷಟ್ಶತಂ ವೈಶ್ಯನಾರೀಣಾಂ ಸಹಸ್ರಂ ಶೂದ್ರಯೋಷಿತಾಂ ॥ ೩೦ ॥
ಶತಂ ಚಾಂಡಾಲನಾರೀಣಾಂ ಪುಲಿಂದೀನಾಂ ಸಹಸ್ರಕಂ ।
ಶೈಲೂಷೀಣಾಂ ಪಂಚಶತಂ ರಜಕೀನಾಂ ಚತುಃಶತಂ ॥ ೩೧ ॥

---

೨೫. ಒಂದೊಂದು ದಿನ ಒಬ್ಬೊಬ್ಬಳನ್ನು ಅನುಭವಿಸಿ ಅವಳನ್ನು ಮನೆಯೊಳಗಿಟ್ಟು ಮರಳಿ ಬೇರೆ ಸ್ತ್ರೀಯರನ್ನು ಕರೆಯಿಸಿದೆನು.

೨೬. ಹೀಗೆ ನನ್ನ ದೇಶದಿಂದಲೂ, ಪರದೇಶದಿಂದಲೂ ಗ್ರಾಮ, ನಗರ, ಗೊಲ್ಲರ ಹಳ್ಳಿಗಳಿಂದಲೂ ಹೆಂಗಸರನ್ನು ಕರೆತಂದು ಅವರೊಡನೆ ರಮಿಸಿದೆನು.

೨೭. ನಾನು ಅನುಭವಿಸಿ ಬಿಟ್ಟ ಹೆಂಗಸರನ್ನು ಇತರರು ಭೋಗಿಸದಿರುವುದರಿಂದ ಆ ಹೆಂಗಸರನ್ನೆಲ್ಲ ಮನೆಯೊಳಗಿಡಲು ಅವರು ಹಗಲು ರಾತ್ರಿ ದುಃಖಿಸುತ್ತಿದ್ದರು.

೨೮. ಬ್ರಾಹ್ಮಣಾದಿ ನಾಲ್ಕು ಜಾತಿಯವರ ಹೆಂಗಸರನ್ನೂ ನಾನು ಅಪಹರಿಸಿದುದರಿಂದ ನನ್ನ ರಾಜ್ಯದಲ್ಲಿ ನೆಲಸಿದ್ದ ಬ್ರಾಹ್ಮಣರು ತಮ್ಮ ಪತ್ನಿಯರೊಡನೆ ಓಡಿಹೋದರು.

೨೯. ಕಾಮಾಂಧನಾದ ನಾನು ಗಂಡನಿರುವವರೂ, ಕನ್ಯೆಯರೂ, ವಿಧವೆಯರೂ, ರಜಸ್ವಲೆಯರೂ ಆದ ಹೆಂಗಸರನ್ನು ತಂದು ರಮಿಸಿದೆನು.

೩೦–೩೨. ದುರಾತ್ಮನಾದ ನಾನು ಮುನ್ನೂರು ಜನ ಬ್ರಾಹ್ಮಣ ಸ್ತ್ರೀಯರನ್ನೂ, ನಾನೂರು ಮಂದಿ ಕ್ಷತ್ರಿಯ ಹೆಂಗಸರನ್ನೂ, ಆರುನೂರು ಮಂದಿ ವೈಶ್ಯಸ್ತ್ರೀಯರನ್ನೂ, ಸಾವಿರ ಜನ ಶೂದ್ರ ಸ್ತ್ರೀಯರನ್ನೂ, ನೂರು ಮಂದಿ

CC-0. Jangamwadi Math Collection. Digitized by eGangotri

ಅಸಂಖ್ಯಾ ವಾರಮುಖ್ಯಾಶ್ಚ ಮಯಾ ಭುಕ್ತಾ ದುರಾತ್ಮನಾ ।
ತಥಾಽಪಿ ಮಯಿ ಕಾಮಸ್ಯ ನ ತೃಪ್ತಿಃ ಸಮಜಾಯತ ॥ ೩೨ ॥
ಏವಂ ದುರ್ವಿಷಯಾಸಕ್ತಂ ಮತ್ತಂ ಪಾನರತಂ ಸದಾ ।
ಯೌವನೇಽಪಿ ಮಹಾರೋಗಾ ವಿವಿಶುರ್ಯಕ್ಷ್ಮಕಾದಯಃ ॥ ೩೩ ॥
ರೋಗಾರ್ದಿತೋಽನಪತ್ಯಶ್ಚ ಶತ್ರುಭಿಶ್ಚಾಪಿ ಪೀಡಿತಃ ।
ತ್ಯಕ್ತೋಽಮಾತ್ಯೈಶ್ಚ ಭೃತ್ಯೈಶ್ಚ ಮೃತೋಽಹಂ ಸ್ವೇನ ಕರ್ಮಣಾ ॥ ೩೪ ॥
ಆಯುರ್ವಿನಶ್ಯತ್ಯಯಶೋ ವಿವರ್ಧತೇ
ಭಾಗ್ಯಂ ಕ್ಷಯಂ ಯಾತ್ಯತಿದುರ್ಗತಿಂ ವ್ರಜೇತ್ ।
ಸ್ವರ್ಗಾಚ್ಚ್ಯವಂತೇ ಪಿತರಃ ಪುರಾತನಾ
ಧರ್ಮವ್ಯಪೇತಸ್ಯ ನರಸ್ಯ ನಿಶ್ಚಿತಂ ॥ ೩೫ ॥
ಅಥಾಽಹಂ ಕಿಂಕರೈರ್ಯಾಮ್ಯೈರ್ನೀತೋ ವೈವಸ್ವತಾಲಯಂ ।
ತತೋಽಹಂ ನರಕೇ ಘೋರೇ ತತ್ಕುಂಡೇ ವಿನಿಪಾತಿತಃ ॥ ೩೬ ॥
ತತ್ರಾಽಹಂ ನರಕೇ ಘೋರೇ ವರ್ಷಾಣಾಮಯುತತ್ರಯಂ ।
ರೇತಃ ಪಿಬನ್ಪೀಡ್ಯಮಾನೋ ನ್ಯವಸಂ ಯಮಕಿಂಕರೈಃ ॥ ೩೭ ॥

---

ಚಂಡಾಲ ಮಹಿಳೆಯರನ್ನೂ, ಸಾವಿರ ಮಂದಿ ಬೇಡರ ಹೆಂಗಸರನ್ನೂ, ಐನೂರು ಮಂದಿ ನಟಿಯರನ್ನೂ, ನಾನೂರು ಮಂದಿ ಅಗಸಗಿತ್ತಿಯರನ್ನೂ, ಲೆಕ್ಕವಿಲ್ಲದಷ್ಟು ಸೂಳೆಯರನ್ನೂ ಉಪಭೋಗಿಸಿದರೂ ನನಗೆ ಕಾಮದ ತೃಪ್ತಿಯಾಗಲಿಲ್ಲ.

೩೩. ಹೀಗೆ ದುಷ್ಟ ವಿಷಯಗಳಲ್ಲಿ ಆಸಕ್ತನೂ, ಮತ್ತನೂ, ಕುಡಿತದಲ್ಲಿ ನಿರತನೂ ಆದ ನನ್ನನ್ನು ಯೌವನದಲ್ಲಿಯೇ ಕ್ಷಯ ಮೊದಲಾದ ಮಹಾ ರೋಗಗಳು ಪೀಡಿಸಿದುವು.

೩೪. ರೋಗದಿಂದ ಬಂಧಿಸಲ್ಪಟ್ಟ ನಾನು ಮಕ್ಕಳಿಲ್ಲದವನೂ, ವೈರಿಗಳಿಂದ ಪೀಡಿತನೂ, ಮಂತ್ರಿಗಳಿಂದಲೂ, ಸೇವಕರಿಂದಲೂ ಬಿಡಲ್ಪಟ್ಟವನೂ ಆಗಿ ನನ್ನ ದುಷ್ಟ ಕರ್ಮದಿಂದಲೇ ಮಡಿದೆನು.

೩೫. "ಧರ್ಮವನ್ನು ಬಿಟ್ಟ ಮನುಷ್ಯನ ಆಯುಸ್ಸು ನಾಶವಾಗುವುದು. ಅಪಕೀರ್ತಿಯು ಹೆಚ್ಚುವುದು. ಸಂಪತ್ತು ಹಾಳಾಗುವುದು. ಅವನು ಅತ್ಯಂತ ದುರವಸ್ಥೆಯನ್ನು ಹೊಂದುವನು. ಅವನ ಹಿಂದಿನ ಪಿತೃಗಳು ನಿಶ್ಚಯವಾಗಿಯೂ ಸ್ವರ್ಗದಿಂದ ಭ್ರಷ್ಟರಾಗುವರು."

೩೬. ಆ ಮೇಲೆ ನನ್ನನ್ನು ಯಮಕಿಂಕರರು ಯಮನ ಮನೆಗೆ ಕರೆದು ಕೊಂಡು ಹೋಗಿ ಘೋರ ನರಕದಲ್ಲಿ ಕೆಡವಿದರು.

೩೭. ಆ ಘೋರ ನರಕದಲ್ಲಿ ನಾನು ಮೂವತ್ತು ಸಾವಿರ ವರ್ಷ ರೇತಸ್ಸನ್ನು ಕುಡಿಯುತ್ತ ಯಮನ ಸೇವಕರಿಂದ ಪೀಡಿತನಾಗಿ ವಾಸಿಸಿದೆನು.

CC-0. Jangamwadi Math Collection. Digitized by eGangotri

ತತಃ ಪಾಪಾಽವಶೇಷೇಣ ಪಿಶಾಚೋ ನಿರ್ಜನೇ ವನೇ ।
ಸಹಸ್ರಶಿಶ್ನಃ ಸಂಜಾತೋ ನಿತ್ಯಂ ಕ್ಷುತ್ತೃಷಯಾಕುಲಃ ॥ ೩೮ ॥
ಪೈಶಾಚೀಂ ಗತಿಮಾಶ್ರಿತ್ಯ ನೀತಂ ದಿವ್ಯಂ ಶರಚ್ಛತಂ ।
ದ್ವಿತೀಯೇಽಹಂ ಭವೇ ಜಾತೋ ವ್ಯಾಘ್ರಃ ಪ್ರಾಣಿಭಯಂಕರಃ ॥ ೩೯ ॥
ತೃತೀಯೇಽಜಗರೋ ಘೋರಶ್ಚತುರ್ಥೇಽಹಂ ಭವೇ ವೃಕಃ ।
ಪಂಚಮೇ ವಿಡ್ವರಾಹಶ್ಚ ಷಷ್ಠೇಽಹಂ ಕೃಕಲಾಸಕಃ ॥ ೪೦ ॥
ಸಪ್ತಮೇಽಹಂ ಸಾರಮೇಯಃ ಸೃಗಾಲಶ್ಚಾಽಷ್ಟಮೇ ಭವೇ ।
ನವಮೇ ಗವಯೋ ಭೀಮೋ ಮೃಗೋಽಹಂ ದಶಮೇ ಭವೇ ॥ ೪೧ ॥
ಏಕಾದಶೇ ಮರ್ಕಟಶ್ಚ ಗೃಧ್ರೋಽಹಂ ದ್ವಾದಶೇ ಭವೇ ।
ತ್ರಯೋದಶೇಽಹಂ ನಕುಲೋ ವಾಯಸಶ್ಚ ಚತುರ್ದಶೇ ॥ ೪೨ ॥
ಅಚ್ಛಭಲ್ಲಃ ಪಂಚದಶೇ ಷೋಡಶೇ ವನಕುಕ್ಕುಟಃ ।
ಗರ್ದಭೋಽಹಂ ಸಪ್ತದಶೇ ಮಾರ್ಜಾರೋಽಷ್ಟಾದಶೇ ಭವೇ ॥ ೪೩ ॥
ಏಕೋನವಿಂಶೇ ಮಂಡೂಕಃ ಕೂರ್ಮೋ ವಿಂಶತಿಮೇ ಭವೇ ।
ಏಕವಿಂಶೇ ಭವೇ ಮತ್ಸ್ಯೋ ದ್ವಾವಿಂಶೇ ಮೂಷಕೋಽಭವಂ ॥ ೪೪ ॥
ಉಲೂಕೋಽಹಂ ತ್ರಯೋವಿಂಶೇ ಚತುರ್ವಿಂಶೇ ವನದ್ವಿಪಃ ।
ಪಂಚವಿಂಶೇ ಭವೇ ಚಾಽಸ್ಮಿನ್ ಜಾತೋಽಹಂ ಬ್ರಹ್ಮರಾಕ್ಷಸಃ ॥ ೪೫ ॥

---

೩೮. ಬಳಿಕ ಉಳಿದ ಪಾಪದಿಂದ ನಿರ್ಜನವಾದ ಕಾಡಿನಲ್ಲಿ ಸಾವಿರ ಶಿಶ್ನವುಳ್ಳ ಪಿಶಾಚನಾಗಿ ಹಸಿವು, ಬಾಯಾರಿಕೆಗಳಿಂದ ಕಷ್ಟಪಡುತ್ತಿದ್ದೆನು.

೩೯. ಹೀಗೆ ಪಿಶಾಚನಾಗಿ ದೇವತೆಗಳ ನೂರು ವರ್ಷಗಳನ್ನು ಕಳೆದು ಎರಡನೆ ಜನ್ಮದಲ್ಲಿ ಭಯಂಕರವಾದ ಹುಲಿಯಾದೆನು.

೪೦–೪೫. ಮೂರನೆಯ ಜನ್ಮದಲ್ಲಿ ಭಯಂಕರವಾದ ದಾಸರಹಾವೂ, ನಾಲ್ಕನೆಯ ಜನ್ಮದಲ್ಲಿ ತೋಳನೂ, ಐದನೆಯ ಜನ್ಮದಲ್ಲಿ ಹಂದಿಯೂ, ಆರನೆಯ ಜನ್ಮದಲ್ಲಿ ಓತಿಕೇತನೂ, ಏಳನೆಯ ಜನ್ಮದಲ್ಲಿ ನಾಯಿಯೂ, ಎಂಟನೆಯದರಲ್ಲಿ ನರಿಯೂ, ಒಂಭತ್ತನೆಯದರಲ್ಲಿ ಕಾಡೆತ್ತೂ, ಹತ್ತನೆಯ ಜನ್ಮದಲ್ಲಿ ಜಿಂಕೆಯೂ, ಹನ್ನೊಂದನೆಯದರಲ್ಲಿ ಕೋತಿಯೂ, ಹನ್ನೆರಡನೆಯದರಲ್ಲಿ ಹದ್ದೂ, ಹದಿಮೂರನೆಯದರಲ್ಲಿ ಮುಂಗಸಿಯೂ, ಹದಿನಾಲ್ಕನೆಯದರಲ್ಲಿ ಕಾಗೆಯೂ, ಹದಿನೈದನೆಯ ಜನ್ಮದಲ್ಲಿ ಕರಡಿಯೂ, ಹದಿನಾರನೆಯ ಜನ್ಮದಲ್ಲಿ ಕಾಡುಕೋಳಿಯೂ, ಹದಿನೇಳನೆಯದರಲ್ಲಿ ಕತ್ತೆಯೂ, ಹದಿನೆಂಟನೆಯ ಜನ್ಮದಲ್ಲಿ ಬೆಕ್ಕೂ, ಹತ್ತೊಂಭತ್ತನೆಯ ಜನ್ಮದಲ್ಲಿ ಕಪ್ಪೆಯೂ, ಇಪ್ಪತ್ತನೆಯ ಜನ್ಮದಲ್ಲಿ ಆಮೆಯೂ, ಇಪ್ಪತ್ತೊಂದನೆಯ ಜನ್ಮದಲ್ಲಿ ಮೀನೂ, ಇಪ್ಪತ್ತೆರಡನೆಯ ಜನ್ಮದಲ್ಲಿ ಇಲಿಯೂ, ಇಪ್ಪತ್ತಮೂರನೆಯ ಜನ್ಮದಲ್ಲಿ ಗೂಬೆಯೂ, ಇಪ್ಪತ್ತನಾಲ್ಕನೆಯ ಜನ್ಮದಲ್ಲಿ ಕಾಡಾನೆಯೂ, ಇಪ್ಪತ್ತೈದನೆಯ ಜನ್ಮದಲ್ಲಿ ಈ ಬ್ರಹ್ಮರಾಕ್ಷಸನೂ ಆದೆನು.

CC-0. Jangamwadi Math Collection. Digitized by eGangotri

ಕ್ಷುತ್ಪರೀತೋ ನಿರಾಹಾರೋ ವಸಾಮ್ಯತ್ರ ಮಹಾವನೇ ।
ಇದಾನೀಮಾಗತಂ ದೃಷ್ಟ್ವಾ ಭವಂತಂ ಜಗ್ಧುಮುತ್ಸುಕಃ ।
ತ್ವದ್ದೇಹಸ್ಪರ್ಶಮಾತ್ರೇಣ ಜಾತಾ ಪೂರ್ವಭವಸ್ಮೃತಿಃ ॥ ೪೬ ॥
ಗತಜನ್ಮಸಹಸ್ರಾಣಿ ಸ್ಮರಾಮ್ಯದ್ಯ ತ್ವದಂತಿಕೇ ।
ನಿರ್ವೇದಶ್ಚ ಪರೋ ಜಾತಃ ಪ್ರಸನ್ನಂ ಹೃದಯಂ ಚ ಮೇ ॥ ೪೭ ॥
ಈದೃಶೋಽಯಂ ಪ್ರಭಾವಸ್ತೇ ಕಥಂ ಲಬ್ಧೋ ಮಹಾಮತೇ ।
ತಪಸಾ ವಾಽಪಿ ತೀವ್ರೇಣ ಕಿಮು ತೀರ್ಥನಿಷೇವಣಾತ್ ॥ ೪೮ ॥
ಯೋಗೇನ ದೇವಶಕ್ತ್ಯಾ ವಾ ಮಂತ್ರೈರ್ವಾಽನಂತಶಕ್ತಿಭಿಃ ।
ತತ್ವತೋ ಬ್ರೂಹಿ ಭಗವಂಸ್ತ್ವಾಮಹಂ ಶರಣಂ ಗತಃ ॥ ೪೯ ॥

ವಾಮದೇವ ಉವಾಚ :—

ಏಷ ಮದ್ಗಾತ್ರಲಗ್ನಸ್ಯ ಪ್ರಭಾವೋ ಭಸ್ಮನೋ ಮಹಾನ್ ।
ಯತ್ಸಂಪರ್ಕಾತ್ತಮೋವೃತ್ತೇಸ್ತವೇಯಂ ಮತಿರುತ್ತಮಾ ॥ ೫೦ ॥
ಕೋ ವೇದ ಭಸ್ಮಸಾಮರ್ಥ್ಯಂ ಮಹಾದೇವಾದೃತೇ ಪರಃ ।
ದುರ್ವಿಭಾವ್ಯಂ ಯಥಾ ಶಂಭೋರ್ಮಾಹಾತ್ಮ್ಯಂ ಭಸ್ಮನಸ್ತಥಾ ॥ ೫೧ ॥

---

೪೬. ಈ ಗೊಂಡಾರಣ್ಯದಲ್ಲಿ ಆಹಾರವಿಲ್ಲದೆ ಹಸಿವಿನಿಂದ ವ್ಯಥೆಗೊಂಡು ಈಗ ಇಲ್ಲಿಗೆ ಬಂದ ನಿನ್ನನ್ನು ತಿನ್ನಲಿಚ್ಛಿಸಿದೆನು. ಈ ನಿನ್ನ ದೇಹದ ಸ್ಪರ್ಶದಿಂದಲೇ ನನಗೆ ಹಿಂದಿನ ಜನ್ಮಗಳ ಸ್ಮರಣೆಯುಂಟಾಯಿತು.

೪೭. ಈಗ ನಿನ್ನ ಬಳಿಯಿರುವ ನಾನು ಕಳೆದ ಸಾವಿರ ಜನ್ಮಗಳನ್ನು ಸ್ಮರಿಸುವೆನು. ನನಗೆ ಬಹಳ ವೈರಾಗ್ಯವುಂಟಾಗಿದೆ. ನನ್ನ ಮನಸ್ಸು ಪ್ರಸನ್ನವಾಗಿದೆ.

೪೮–೪೯. ಜ್ಞಾನಿಯೆ! ನಿನಗೆ ಇಂತಹ ಸಾಮರ್ಥ್ಯವು ತೀವ್ರ ತಪಸ್ಸಿನಿಂದಲೊ, ತೀರ್ಥಸೇವೆಯಿಂದಲೊ, ಯೋಗಶಕ್ತಿಯಿಂದಲೊ, ದೈವಿಕ ಸಾಮರ್ಥ್ಯದಿಂದಲೊ, ಅಪರಿಮಿತ ಸಾಮರ್ಥ್ಯವುಳ್ಳ ಮಂತ್ರಗಳಿಂದಲೊ ಯಾವುದರಿಂದುಂಟಾಯಿತು ?

೫೦. ವಾಮದೇವನು ಹೇಳುತ್ತಾನೆ:—ಈ ನನ್ನ ದೇಹದಲ್ಲಿ ಲಿಪ್ತವಾದ ಭಸ್ಮದ ಶಕ್ತಿಯು ಮಹತ್ತಾದುದು. ಇದರ ಸಂಬಂಧದಿಂದಲೇ ತಾಮಸ ಸ್ವಭಾವವುಳ್ಳ ನಿನಗೆ ಉತ್ತಮವಾದ ಈ ಜ್ಞಾನವುಂಟಾಗಿದೆ.

೫೧. ಶಂಕರನ ಹೊರತು ಭಸ್ಮದ ಸಾಮರ್ಥ್ಯವನ್ನು ತಿಳಿದವರಾರು? ಶಿವನ ಮಾಹಾತ್ಮ್ಯಯನ್ನರಿಯಲು ಹೇಗೆ ಸಾಧ್ಯವಿಲ್ಲವೊ, ಹಾಗೆಯೇ ಭಸ್ಮದ ಮಾಹಾತ್ಮ್ಯಯನ್ನು ತಿಳಿಸಲೂ ಸಾಧ್ಯವಿಲ್ಲ.

CC-0. Jangamwadi Math Collection. Digitized by eGangotri

ಪುರಾ ಭವಾದೃಶಃ ಕಶ್ಚಿದ್ಬ್ರಾಹ್ಮಣೋ ಧರ್ಮವರ್ಜಿತಃ ।
ದ್ರಾವಿಡೇಷು ಸ್ಥಿತೋ ಮೂಢಃ ಕರ್ಮಣಾ ಶೂದ್ರತಾಂ ಗತಃ ॥ ೫೨ ॥
ಚೌರ್ಯವೃತ್ತಿರ್ನೈಷ್ಕೃತಿಕೋ ವೃಷಲೀರತಿಲಾಲಸಃ ।
ಕದಾಚಿಜ್ಜಾರತಾಂ ಪ್ರಾಪ್ತಃ ಶೂದ್ರೇಣ ನಿಹತೋ ನಿಶಿ ॥ ೫೩ ॥
ತಚ್ಛವಸ್ಯ ಬಹಿರ್ಗ್ರಾಮಾತ್ಕ್ಷಿಪ್ತಸ್ಯ ಪ್ರೇತಕರ್ಮಣಃ ।
ಚಚಾರ ಸಾರಮೇಯೋಽಂಗೇ ಭಸ್ಮಪಾದೋ ಯದೃಚ್ಛಯಾ ॥ ೫೪ ॥
ಅಥ ತಂ ನರಕೇ ಘೋರೇ ಪತಿತಂ ಶಿವಕಿಂಕರಾಃ ।
ನಿನ್ಯುರ್ವಿಮಾನಮಾರೋಪ್ಯ ಪ್ರಸಹ್ಯ ಯಮಕಿಂಕರಾನ್ ॥ ೫೫ ॥
ಶಿವದೂತಾನ್ಸಮಭ್ಯೇತ್ಯ ಯಮೋಽಪಿ ಪರಿಪೃಷ್ಟವಾನ್ ।
ಮಹಾಪಾತಕಕರ್ತಾರಂ ಕಥಮೇನಂ ನಿನೀಷಥ ॥ ೫೬ ॥
ಅಥೋಚುಃ ಶಿವದೂತಾಸ್ತೇ ಪಶ್ಯಾಸ್ಯ ಶಿವವಿಗ್ರಹಂ ।
ವಕ್ಷೋ ಲಲಾಟದೋರ್ಮೂಲಾನ್ಯಂಕಿತಾನಿ ಸುಭಸ್ಮನಾ ॥ ೫೭ ॥
ಅತ ಏನಂ ಸಮಾನೇತುಮಾಗತಾಃ ಶಿವಶಾಸನಾತ್ ।
ನಾಽಸ್ಮಾನ್ನಿಷೇದ್ಧುಂ ಶಕ್ತೋಽಸಿ ಮಾಸ್ತ್ವತ್ರ ತವ ಸಂಶಯಃ ॥ ೫೮ ॥

---

೫೨. ಹಿಂದೆ ದ್ರವಿಡದೇಶದಲ್ಲಿ (ತಮಿಳು ನಾಡಿನಲ್ಲಿ) ಕರ್ಮದಿಂದ ಶೂದ್ರನಾದ ನಿನ್ನಂತಹ ಧರ್ಮಬಾಹ್ಯನಾದ ಬ್ರಾಹ್ಮಣನೊಬ್ಬನಿದ್ದನು.

೫೩–೫೪. ಕಳ್ಳನೂ, ಅಲಸನೂ, ಶೂದ್ರಸ್ತ್ರೀರತಿಯಲ್ಲಿ ಆಸಕ್ತನೂ ಆದ ಅವನು ಒಂದಾನೊಂದು ದಿನ ರಾತ್ರಿ ಜಾರನಾಗಿರುವಾಗ ಶೂದ್ರನೊಬ್ಬನು ಅವನನ್ನು ಕೊಂದನು. ಗ್ರಾಮದ ಹೊರಗೆ ಎಸೆದ ಅವನ ಶವದಮೇಲೆ ಕಾಲಿನಲ್ಲಿ ಬೂದಿಯುಳ್ಳ ಒಂದು ನಾಯಿಯು ಆಕಸ್ಮಿಕವಾಗಿ ಸಂಚರಿಸಿತು.

೫೫. ಅನಂತರ ಘೋರ ನರಕದಲ್ಲಿ ಬಿದ್ದಿರುವ ಅವನನ್ನು ಶಿವನ ಸೇವಕರು ಯಮನ ಸೇವಕರನ್ನು ಬಲಾತ್ಕಾರದಿಂದ ತಡೆದು ವಿಮಾನದಲ್ಲಿ ಕುಳ್ಳಿರಿಸಿ ಕರೆದುಕೊಂಡು ಹೋದರು.

೫೬. ಯಮನು ಶಿವಕಿಂಕರರ ಬಳಿ ಬಂದು "ಮಹಾಪಾಪಿಯಾದ ಇವನನ್ನು ಹೇಗೆ ನೀವು ಕರೆದುಕೊಂಡು ಹೋಗಲಿಚ್ಛಿಸುತ್ತೀರಿ" ಎಂದು ಕೇಳಿದನು.

೫೭. ಶಿವಕಿಂಕರರು ಯಮನನ್ನು ಕುರಿತು ಇಂತೆಂದರು:—ಇವನ ಶವವನ್ನು ನೋಡು. ಎದೆ, ಹಣೆ, ಕಂಕಳುಗಳಲ್ಲಿ ಭಸ್ಮವು ಲಿಪ್ತವಾಗಿದೆ.

೫೮. ಆದುದರಿಂದಲೇ ಶಿವನ ಅಪ್ಪಣೆಯಿಂದ ಇವನನ್ನು ಕರೆದುಕೊಂಡು ಹೋಗಲು ಬಂದಿದ್ದೇವೆ. ನಮ್ಮನ್ನು ತಡೆಯಲು ನೀನು ಶಕ್ತನಲ್ಲ. ನೀನು ಸಂದೇಹಪಡಬೇಡ.

CC-0. Jangamwadi Math Collection. Digitized by eGangotri

ಇತ್ಯಾಭಾಷ್ಯ ಯಮಂ ಶಂಭೋರ್ದೂತಾಸ್ತಂ ಬ್ರಾಹ್ಮಣಂ ತತಃ ।
ಪಶ್ಯತಾಂ ಸರ್ವಲೋಕಾನಾಂ ನಿನ್ಯುರ್ಲೋಕಮನಾಮಯಂ ॥ ೫೯ ॥
ತಸ್ಮಾದಶೇಷಪಾಪಾನಾಂ ಸದ್ಯಃ ಸಂಶೋಧನಂ ಪರಂ ।
ಶಂಭೋರ್ವಿಭೂಷಣಂ ಭಸ್ಮ ಸತತಂ ಧ್ರಿಯತೇ ಮಯಾ ॥ ೬೦ ॥
ಇತ್ಥಂ ನಿಶಮ್ಯ ಮಾಹಾತ್ಮ್ಯಂ ಭಸ್ಮನೋ ಬ್ರಹ್ಮರಾಕ್ಷಸಃ ।
ವಿಸ್ತರೇಣ ಪುನಃ ಶ್ರೋತುಮೌತ್ಸುಕ್ಯಾದಿತ್ಯಭಾಷತ ॥ ೬೧ ॥
ಸಾಧು ಸಾಧು ಮಹಾಯೋಗಿನ್ಧನ್ಯೋಽಸ್ಮಿ ತವ ದರ್ಶನಾತ್ ।
ಮಾಂ ವಿಮೋಚಯ ಧರ್ಮಾತ್ಮನ್ಘೋರಾದಸ್ಮಾದ್ಧಿ ಜನ್ಮನಃ ॥ ೬೨ ॥
ಕಿಂಚಿದಸ್ತೀಹ ಮೇ ಭಾತಿ ಮಹಾಪುಣ್ಯಂ ಪುರಾಕೃತಂ ।
ಅತೋಽಹಂ ತ್ವತ್ಪ್ರಸಾದೇನ ಮುಕ್ತೋಽಸ್ಮ್ಯದ್ಯ ದ್ವಿಜೋತ್ತಮ ॥ ೬೩ ॥
ಏಕಸ್ಮೈ ಶಿವಭಕ್ತಾಯ ತಸ್ಮಿನ್ಪಾರ್ಥಿವಜನ್ಮನಿ ।
ಭೂಮಿರ್ವೃತ್ತಿಕರೀ ದತ್ತಾ ಸಸ್ಯಾರಾಮಾನ್ವಿತಾ ಮಯಾ ॥ ೬೪ ॥
ಯಮೇನಾಽಪಿ ತದೈವೋಕ್ತಂ ಪಂಚವಿಂಶತಿಮೇ ಭವೇ ।
ಕಸ್ಯಚಿದ್ಯೋಗಿನಃ ಸಂಗಾನ್ಮೋಕ್ಷ್ಯಸೇ ಸಂಸೃತೇರಿತಿ ॥ ೬೫ ॥

---

೫೯. ಶಿವದೂತರು ಹೀಗೆಂದು ಆ ಬ್ರಾಹ್ಮಣನನ್ನು ಸಮಸ್ತ ಜನರು ನೋಡುತ್ತಿರುವಾಗಲೆ ಶಾಶ್ವತ ಲೋಕಕ್ಕೆ ಕರೆದುಕೊಂಡುಹೋದರು.

೬೦. ಆದುದರಿಂದ ಸಕಲ ಪಾಪಗಳನ್ನೂ ಕೂಡಲೆ ಪರಿಹರಿಸುವ ಶಿವನ ಅಲಂಕಾರವಾದ ಭಸ್ಮವನ್ನು ನಾನು ಯಾವಾಗಲೂ ಧರಿಸುತ್ತಿದ್ದೇನೆ.

೬೧. ಬ್ರಹ್ಮರಾಕ್ಷಸನು ಈ ರೀತಿ ಭಸ್ಮದ ಮಾಹಾತ್ಮ್ಯೆಯನ್ನು ಕೇಳಿ ಮರಳಿ ಅದನ್ನು ವಿಸ್ತಾರವಾಗಿ ಕೇಳಲು ಕುತೂಹಲದಿಂದ ಹೀಗೆಂದನು.

೬೨. ಮಹಾ ಯೋಗಿಯೆ! ಒಳ್ಳೆಯದು. ನಿನ್ನ ದರ್ಶನದಿಂದ ನಾನು ಧನ್ಯನಾಗಿದ್ದೇನೆ. ಧರ್ಮಿಷ್ಠನೆ! ಈ ಘೋರವಾದ ದುಷ್ಟ ಜನ್ಮದಿಂದ ನನ್ನನ್ನು ಪಾರುಮಾಡು.

೬೩. ಬ್ರಾಹ್ಮಣವರ್ಯನೆ! ನಾನು ಹಿಂದೆಸಗಿದ ಪುಣ್ಯಲೇಶವಿದೆಯೆಂದು ತೋರುತ್ತದೆ. ಅದರಿಂದಲೆ ಈಗ ನಿನ್ನ ಅನುಗ್ರಹದಿಂದ ಪಾಪಮುಕ್ತನಾಗುವೆನು.

೬೪. ನಾನು ಆ ರಾಜನ ಜನ್ಮದಲ್ಲಿ ಓರ್ವ ಶಿವಭಕ್ತನಿಗೆ ಜೀವನವನ್ನು ಮಾಡಿಸುವ ತೋಟಗಳಿರುವ ಭೂಮಿಯನ್ನು ದಾನಮಾಡಿರುವೆನು.

೬೫. ಯಮನೂ "ನೀನು ಇಪ್ಪತ್ತೈದನೆಯ ಜನ್ಮದಲ್ಲಿ ಒಬ್ಬ ಯೋಗಿಯ ಸಂಬಂಧದಿಂದ ಈ ಸಂಸಾರದಿಂದ ಮುಕ್ತನಾಗುವೆ" ಎಂದಿರುವನು.

CC-0. Jangamwadi Math Collection. Digitized by eGangotri

ತದದ್ಯ ಫಲಿತಂ ಪುಣ್ಯಂ ಯತ್ಕಿಂಚಿತ್ಪ್ರಾಗ್ಭವಾರ್ಜಿತಂ ।
ಅತೋ ನಿರ್ಜನಸುಜಾಽರಣ್ಯೇ ಸಂಪ್ರಾಪ್ತಸ್ತವ ಸಂಗಮಃ ॥ ೬೬ ॥
ಅತೋ ಮಾಂ ಘೋರಪಾಪ್ಮಾನಂ ಸಂಸರಂತಂ ಕುಜನ್ಮನಿ ।
ಸಮುದ್ಧರ ಕೃಪಾಸಿಂಧೋ ದತ್ವಾ ಭಸ್ಮ ಸಮಂತ್ರಕಂ ॥ ೬೭ ॥
ಕಥಂ ಧಾರ್ಯಮಿದಂ ಭಸ್ಮ ಕೋ ಮಂತ್ರಃ ಕೋ ವಿಧಿಃ ಶುಭಃ ।
ಕಃ ಕಾಲಃ ಕಶ್ಚ ವಾ ದೇಶಃ ಸರ್ವಂ ಕಥಯ ಮೇ ಗುರೋ ॥ ೬೮ ॥
ಭವಾದೃಶಾ ಮಹಾತ್ಮಾನಃ ಸದಾ ಲೋಕಹಿತೇ ರತಾಃ ।
ನಾತ್ಮನೋ ಹಿತಮಿಚ್ಛಂತಿ ಕಲ್ಪವೃಕ್ಷಸಧರ್ಮಿಣಃ ॥ ೬೯ ॥

ಸೂತ ಉವಾಚ :—

ಇತ್ಯುಕ್ತಸ್ತೇನ ಯೋಗೀಶೋ ಘೋರೇಣ ವನಚಾರಿಣಾ ।
ಭೂಯೋಽಪಿ ಭಸ್ಮಮಾಹಾತ್ಮ್ಯಂ ವರ್ಣಯಾಮಾಸ ತತ್ವವಿತ್ ॥ ೭೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಭಸ್ಮಮಾಹಾತ್ಮ್ಯ ಕಥನಂ"ನಾಮ ಪಂಚದಶೋಽಧ್ಯಾಯಃ

---

೬೬. ಆ ಹಿಂದಿನ ಜನ್ಮದಲ್ಲಿ ಸಂಪಾದಿಸಿದ ಅಲ್ಪ ಪುಣ್ಯವು ಈಗ ಫಲಿಸಿತು. ಆದುದರಿಂದ ನಿರ್ಜನಾರಣ್ಯದಲ್ಲಿ ನಿನ್ನ ಸಮಾಗಮವಾಯಿತು.

೬೭. ಕರುಣಾಸಾಗರನಾದ ಯೋಗಿಯೆ! ಈ ದುಷ್ಟಜನ್ಮದಲ್ಲಿ ತೊಳಲುತ್ತಿರುವ ಘೋರ ಪಾಪಿಯಾದ ನನಗೆ ಮಂತ್ರಿಸಿದ ಭಸ್ಮವನ್ನಿತ್ತು ಉದ್ಧಾರ ಮಾಡು.

೬೮. ಗುರುವೆ! ಈ ಭಸ್ಮವನ್ನು ಹೇಗೆ ಧರಿಸಬೇಕು? ಮಂತ್ರ, ವಿಧಿ, ಕಾಲ, ದೇಶ ಇವುಗಳಾವುವು? ಎಲ್ಲವನ್ನೂ ಹೇಳು.

೬೯. ಕಲ್ಪವೃಕ್ಷದಂತೆ ಯಾವಾಗಲೂ ಜನಗಳಿಗೆ ಹಿತವನ್ನುಂಟು ಮಾಡುವುದರಲ್ಲಿ ನಿರತರಾದ ನಿನ್ನಂತಹ ಮಹಾತ್ಮರು ತಮ್ಮ ಹಿತವನ್ನು ಇಚ್ಛಿಸುವುದಿಲ್ಲ.

೭೦. ಸೂತನು ಹೇಳುತ್ತಾನೆ :—ಹೀಗೆ ಘೋರನಾದ ಆ ಬ್ರಹ್ಮರಾಕ್ಷಸನು ಹೇಳಲು ತತ್ವವನ್ನರಿತ ಶಿವಯೋಗಿಯು ಮರಳಿ ಭಸ್ಮದ ಮಾಹಾತ್ಮ್ಯವನ್ನು ವರ್ಣಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಭಸ್ಮಮಾಹಾತ್ಮ್ಯಕಥನ"ವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥ ಷೋಡಶೋಽಧ್ಯಾಯಃ

## ಭಸ್ಮಮಾಹಾತ್ಮ್ಯಕಥನಂ

ಸೂತ ಉವಾಚ :—

ಶೃಣುಧ್ವಂ ಮುನಯಃ ಶ್ರೇಷ್ಠಾ ವಾಮದೇವಸ್ಯ ಭಾಷಿತಂ ॥ ೧ ॥

ವಾಮದೇವ ಉವಾಚ :—

ಪುರಾ ಮಂದರಶೈಲೇಂದ್ರೇ ನಾನಾಧಾತುವಿಚಿತ್ರಿತೇ ।
ನಾನಾಸತ್ವಸಮಾಕೀರ್ಣೇ ನಾನಾದ್ರುಮಲತಾಕುಲೇ ॥ ೨ ॥
ಕಾಲಾಗ್ನಿರುದ್ರೋ ಭಗವಾನ್ಕದಾಚಿದ್ವಿಶ್ವವಂದಿತಃ ।
ಸಮಾಸಸಾದ ಭೂತೇಶಃ ಸ್ವೇಚ್ಛಯಾ ಪರಮೇಶ್ವರಃ ॥ ೩ ॥
ಸಮಂತಾತ್ಸಮುಪಾತಿಷ್ಠನ್ರುದ್ರಾಣಾಂ ಶತಕೋಟಯಃ ।
ತೇಷಾಂ ಮಧ್ಯೇ ಸಮಾಸೀನೋ ದೇವದೇವಸ್ತ್ರಿಲೋಚನಃ ॥ ೪ ॥
ತತ್ರಾಗಚ್ಛತ್ಸುರಶ್ರೇಷ್ಠೋ ದೇವೈಃ ಸಹ ಪುರಂದರಃ ।
ತಥಾಽಗ್ನಿರ್ವರುಣೋ ವಾಯುರ್ಯಮೋ ವೈವಸ್ವತಸ್ತಥಾ ॥ ೫ ॥
ಗಂಧರ್ವಾಶ್ಚಿತ್ರಸೇನಾದ್ಯಾಃ ಖೇಚರಾಃ ಪನ್ನಗಾದಯಃ ।
ವಿದ್ಯಾಧರಾಃ ಕಿಂಪುರುಷಾಃ ಸಿದ್ಧಾಃ ಸಾಧ್ಯಾಶ್ಚ ಗುಹ್ಯಕಾಃ ॥ ೬ ॥

---

## ಕನ್ನಡದ ಅನುವಾದ

### ಭಸ್ಮಮಾಹಾತ್ಮ್ಯಕಥನ

೧. ಸೂತನು ಹೇಳುತ್ತಾನೆ :—ಅಯ್ಯಾ ಶ್ರೇಷ್ಠರಾದ ಮುನಿಗಳೆ! ವಾಮದೇವನ ಮಾತನ್ನು ಕೇಳಿರಿ.

೨-೩. ವಾಮದೇವನು ಹೇಳುತ್ತಾನೆ :—ಹಿಂದೆ ಅನೇಕ ಗೈರಿಕಾದಿ ಧಾತುಗಳಿಂದ ಬಗೆ ಬಗೆಯ ಬಣ್ಣಗಳಿಂದ ಸೊಗಸುಗೊಂಡು, ಅನೇಕ ಬಗೆಯ ಪ್ರಾಣಿಗಳಿಂದ ವ್ಯಾಪ್ತವಾದುದಾಗಿ, ಅನೇಕ ವೃಕ್ಷಗಳಿಂದಲೂ, ಬಳ್ಳಿಗಳಿಂದಲೂ ಒತ್ತಾಗಿರುವ ಮಂದರಪರ್ವತಕ್ಕೆ ಒಂದಾನೊಂದು ದಿನ ಸಕಲ ಜನರಿಂದ ವಂದಿತನಾದ ಕಾಲಾಗ್ನಿರುದ್ರನು ಬಂದನು.

೪. ಅಲ್ಲಿ ಶತಕೋಟಿರುದ್ರರು ಸುತ್ತಲೂ ಕುಳಿತುಕೊಳ್ಳಲು ಅವರ ಮಧ್ಯದಲ್ಲಿ ಮುಕ್ಕಣ್ಣನಾದ ಶಂಕರನು ಕುಳಿತನು.

೫-೧೮. ಅಲ್ಲಿಗೆ ದೇವತೆಗಳೊಡನೆ ದೇವೇಂದ್ರನು ಬಂದನು. ಹಾಗೆಯೇ ಅಗ್ನಿ, ವರುಣ, ವಾಯು, ಯಮ ಮೊದಲಾದ ದೇವತೆಗಳೂ, ಚಿತ್ರಸೇನ ಮೊದಲಾದ ಗಂಧರ್ವರೂ, ಪಕ್ಷಿಗಳು, ಹಾವುಗಳು, ವಿದ್ಯಾಧರರು, ಕಿಂಪುರುಷರು,



CC-0. Jangamwadi Math Collection. Digitized by eGangotri

ಬ್ರಹ್ಮರ್ಷಯೋ ವಸಿಷ್ಠಾದ್ಯಾ ನಾರದಾದ್ಯಾಃ ಸುರರ್ಷಯಃ ।
ಪಿತರಶ್ಚ ಮಹಾತ್ಮಾನೋ ದಕ್ಷಾದ್ಯಾಶ್ಚ ಪ್ರಜೇಶ್ವರಾಃ ॥ ೭ ॥
ಉರ್ವಶ್ಯಾದ್ಯಾಶ್ಚಾಪ್ಸರಸಶ್ಚಂಡಿಕಾದ್ಯಾಶ್ಚ ಮಾತರಃ ।
ಆದಿತ್ಯಾ ವಸವೋ ದಸ್ರೌ ವಿಶ್ವೇದೇವಾ ಮಹೌಜಸಃ ॥ ೮ ॥
ಅಥಾಽನ್ಯೇ ಭೂತಪತಯೋ ಲೋಕಸಂಹರಣೇ ಕ್ಷಮಾಃ ।
ಮಹಾಕಾಲಶ್ಚ ನಂದೀ ಚ ತಥಾ ವೈ ಶಂಖಪಾಲಕೌ ॥ ೯ ॥
ವೀರಭದ್ರೋ ಮಹಾತೇಜಾಃ ಶಂಕುಕರ್ಣೋ ಮಹಾಬಲಃ ।
ಘಂಟಾಕರ್ಣಶ್ಚ ದುರ್ಧರ್ಷೋ ಮಣಿಭದ್ರೋ ವೃಕೋದರಃ ॥ ೧೦ ॥
ಕುಂಡೋದರಶ್ಚ ವಿಕಟಾಸ್ತಥಾ ಕುಂಭೋದರೋ ಬಲೀ ।
ಮಂದೋದರಃ ಕರ್ಣಧಾರಃ ಕೇತುರ್ಭೃಂಗಿರಿಟಿಸ್ತಥಾ ॥ ೧೧ ॥
ಭೂತನಾಥಾಸ್ತಥಾಽನ್ಯೇ ಚ ಮಹಾಕಾಯಾ ಮಹೌಜಸಃ ।
ಕೃಷ್ಣವರ್ಣಾಸ್ತಥಾ ಶ್ವೇತಾಃ ಕೇಚಿನ್ಮಂಡೂಕಸಪ್ರಭಾಃ ॥ ೧೨ ॥
ಹರಿತಾ ಧೂಸರಾ ಧೂಮ್ರಾಃ ಕರ್ಬುರಾಃ ಪೀತಲೋಹಿತಾಃ ।
ಚಿತ್ರವರ್ಣಾ ವಿಚಿತ್ರಾಂಗಾಶ್ಚಿತ್ರಲೀಲಾ ಮದೋತ್ಕಟಾಃ ॥ ೧೩ ॥
ನಾನಾಯುಧೋದ್ಯತಕರಾ ನಾನಾವಾಹನಭೂಷಣಾಃ ।
ಕೇಚಿದ್ವ್ಯಾಘ್ರಮುಖಾಃ ಕೇಚಿತ್ಸೂಕರಾಸ್ಯಾ ಮೃಗಾನನಾಃ ॥ ೧೪ ॥

---

ಸಿದ್ಧರು, ಸಾಧ್ಯರು, ಗುಹ್ಯಕರು, ವಸಿಷ್ಠಾದಿ ಬ್ರಹ್ಮರ್ಷಿಗಳು, ನಾರದಾದಿ ಸುರರ್ಷಿಗಳು, ಮಹಾತ್ಮರಾದ ಪಿತೃಗಳು, ದಕ್ಷಾದಿ ಪ್ರಜಾಪತಿಗಳು, ಉರ್ವಶ್ಯಾದಿ ಅಪ್ಸರಸ್ತ್ರೀಯರು, ಚಂಡಿಕಾದಿ ಮಾತೃಗಳು, ವಸುಗಳು, ಅಶ್ವಿನೀದೇವತೆಗಳು, ವಿಶ್ವೇದೇವರು, ಲೋಕಸಂಹಾರದಲ್ಲಿ ಶಕ್ತರಾದ ಇತರ ಭೂತಪತಿಗಳು, ಮಹಾಕಾಲ, ನಂದಿ, ಶಂಖ, ವೀರಭದ್ರ, ಶಂಕುಕರ್ಣ, ಘಂಟಾಕರ್ಣ, ಮಣಿಭದ್ರ, ವೃಕೋದರ, ಕುಂಭೋದರ, ಮಂದೋದರ, ಕರ್ಣಧಾರ, ಕೇತು, ಭೃಂಗಿರಿಟಿ ಇವರೂ, ಮತ್ತು ಇತರ ಮಹಾಕಾಯರೂ, ಮಹಾತೇಜಸ್ವಿಗಳೂ, ಕರಿಬಣ್ಣದವರೂ ಆದ ಭೂತಾಧಿಪತಿಗಳೂ, ಕೆಲವರು ಕಪ್ಪೆಯಂತಿರುವವರೂ, ಹಸುರು ಬಣ್ಣದವರೂ, ಮಲಿನರೂ, ಬೂದು ಬಣ್ಣದವರೂ, ನಾನಾಬಣ್ಣದವರೂ, ಹಳದಿ ಕೆಂಪಗಿರುವವರೂ, ಚಿತ್ರವರ್ಣರೂ, ವಿಚಿತ್ರವಾದ ಅವಯವವುಳ್ಳವರೂ, ಆಶ್ಚರ್ಯಕರವಾದ ವಿಲಾಸವುಳ್ಳವರೂ, ಮತ್ತರೂ, ಕೆಲವರು ಹುಲಿ ಮುಖದವರೂ, ಕೆಲವರು ಹಂದಿ ಮುಖದವರೂ, ಕೆಲವರು ಜಿಂಕೆ ಮುಖದವರೂ, ಕೆಲವರು ಮೊಸಳೆಮುಖದವರೂ, ಕೆಲವರು ನಾಯಿ ಮುಖದವರೂ, ಕೆಲವರು ಒಂಟೆ ಮುಖದವರೂ, ಕೆಲವರು ಶರಭ, ಭೇರುಂಡ, ಸಿಂಹ, ಕುದುರೆ, ಒಂಟೆ, ಕೊಕ್ಕರೆಗಳಂತೆ ಮುಖವುಳ್ಳವರೂ, ಒಂದು ಮುಖದವರೂ, ಎರಡು ಮುಖ

CC-0. Jangamwadi Math Collection. Digitized by eGangotri

ಕೇಚಿಚ್ಚ ನಕ್ರವದನಾಃ ಸಾರಮೇಯಮುಖಾಃ ಪರೇ ।
ಸೃಗಾಲವದನಾಶ್ಚಾಽನ್ಯ ಉಷ್ಟ್ರಾಭವದನಾಃ ಪರೇ ॥ ೧೫ ॥
ಕೇಚಿಚ್ಛರಭಭೇರುಂಡಸಿಹ್ಮಾಸ್ಯಾಶ್ಚೋಽಷ್ಟ್ರಬಕಾನನಾಃ ।
ಏಕವಕ್ತ್ರಾ ದ್ವಿವಕ್ತ್ರಾಶ್ಚ ತ್ರಿಮುಖಾಶ್ಚೈವ ನಿರ್ಮುಖಾಃ ॥ ೧೬ ॥
ಏಕಹಸ್ತಾಸ್ತ್ರಿಹಸ್ತಾಶ್ಚ ಪಂಚಹಸ್ತಾಸ್ತ್ವಹಸ್ತಕಾಃ ।
ಅಪಾದಾ ಬಹುಪಾದಾಶ್ಚ ಬಹುಕರ್ಣೈಕಕರ್ಣಕಾಃ ॥ ೧೭ ॥
ಏಕನೇತ್ರಾಶ್ಚತುರ್ನೇತ್ರಾ ದೀರ್ಘಾಃ ಕೇಚನ ವಾಮನಾಃ ।
ಸಮಂತಾತ್ಪರಿವಾರ್ಯೇಶಂ ಭೂತನಾಥಮುಪಾಸತೇ ॥ ೧೮ ॥
ಅಥಾಗಚ್ಛನ್ಮಹಾತೇಜಾ ಮುನೀನಾಂ ಪ್ರವರಃ ಸುಧೀಃ ।
ಸನತ್ಕುಮಾರೋ ಧರ್ಮಾತ್ಮಾ ತಂ ದ್ರಷ್ಟುಂ ಜಗದೀಶ್ವರಂ ॥ ೧೯ ॥
ತಂ ದೇವದೇವಂ ವಿಶ್ವೇಶಂ ಸೂರ್ಯಕೋಟಿಸಮಪ್ರಭಂ ।
ಮಹಾಪ್ರಲಯಸಂಕ್ಷುಬ್ಧಸಪ್ತಾರ್ಣವಘನಸ್ವನಂ ॥ ೨೦ ॥
ಸಂವರ್ತಾಗ್ನಿಸಮಾಟೋಪಂ ಜಟಾಮಂಡಲಶೋಭಿತಂ ।
ಅಕ್ಷೀಣಭಾಲಾನಯನಂ ಜ್ವಾಲಾಮ್ಲಾನಮುಖತ್ವಿಷಂ ॥ ೨೧ ॥
ಪ್ರದೀಪ್ತಚೂಡಾಮಣಿನಾ ಶಶಿಖಂಡೇನ ಶೋಭಿತಂ ।
ತಕ್ಷಕಂ ವಾಮಕರ್ಣೇನ ದಕ್ಷಿಣೇನ ಚ ವಾಸುಕಿಂ ॥ ೨೨ ॥

---

ದವರೂ, ಮೂರು ಮುಖದವರೂ, ಮುಖವಿಲ್ಲದವರೂ, ಒಂದು ಕೈಯುಳ್ಳವರೂ, ಮೂರು ಕೈಯುಳ್ಳವರೂ, ಐದು ಕೈಯುಳ್ಳವರೂ, ಕೈಗಳಿಲ್ಲದವರೂ, ಕಾಲುಗಳಿಲ್ಲದವರೂ, ಅನೇಕ ಕಾಲುಳ್ಳವರೂ, ಅನೇಕ ಕಿವಿಯುಳ್ಳವರೂ, ಒಂದು ಕಿವಿಯುಳ್ಳವರೂ, ಒಂದು ಕಣ್ಣುಳ್ಳವರೂ, ನಾಲ್ಕು ಕಣ್ಣುಳ್ಳವರೂ, ಉದ್ದವಾದವರೂ, ಕೆಲವರು ಕುಳ್ಳರಾದವರೂ ಆಗಿರುವ ಅನೇಕ ಮಂದಿ ಕಿಂಕರರೂ ಶಿವನನ್ನು ಸುತ್ತಿಕೊಂಡು ಸೇವಿಸುತ್ತಿದ್ದರು.

೧೯. ಬಳಿಕ ಮಹಾತೇಜಸ್ವಿಯೂ, ಮುನಿಶ್ರೇಷ್ಠನೂ, ವಿದ್ವಾಂಸನೂ, ಧರ್ಮಿಷ್ಠನೂ ಆದ ಸನತ್ಕುಮಾರನು ಆ ಜಗದೊಡೆಯನಾದ ಶಿವನನ್ನು ನೋಡಲು ಬಂದನು.

೨೦–೨೭. ಅವನು ಅನೇಕ ಕೋಟಿ ಸೂರ್ಯರಂತೆ ಕಾಂತಿಯುಳ್ಳವನೂ, ಮಹಾಪ್ರಳಯಕಾಲದಲ್ಲಿ ಅಲ್ಲೋಲಕಲ್ಲೋಲವಾದ ಸಪ್ತಸಮುದ್ರಗಳಂತೆ ಧ್ವನಿಯುಳ್ಳವನೂ, ಪ್ರಳಯಕಾಲದ ಅಗ್ನಿಯಂತೆ ಆಡಂಬರವುಳ್ಳವನೂ, ಜಡೆಯ ಸಮೂಹಗಳಿಂದ ಶೋಭಿತನೂ, ತೆರೆದ ಹಣೆಗಣ್ಣುಳ್ಳವನೂ, ಆ ಕಣ್ಣಿನ ಜ್ವಾಲೆಯಿಂದ ಬಾಡಿದ ಮುಖಕಾಂತಿಯುಳ್ಳವನೂ, ಪ್ರಕಾಶಮಾನವಾದ ಚೂಡಾಮಣಿಯಿಂದಲೂ ಚಂದ್ರನ ಖಂಡದಿಂದಲೂ ವಿರಾಜಿತನೂ, ಎಡಗಿವಿಯಿಂದ ತಕ್ಷಕನನ್ನೂ, ಬಲಗಿವಿಯಿಂದ ವಾಸುಕಿಯನ್ನೂ ಧರಿಸಿದವನೂ, ನೀಲರತ್ನ

CC-0. Jangamwadi Math Collection. Digitized by eGangotri

ಬಿಭ್ರಾಣಂ ಕುಂಡಲಯುಗಂ ನೀಲರತ್ನಮಹಾಹನುಂ ।
ನೀಲಗ್ರೀವಂ ಮಹಾಬಾಹುಂ ನಾಗಹಾರವಿರಾಜಿತಂ ॥ ೨೩ ॥
ಫಣಿರಾಜಪರಿಭ್ರಾಜತ್ಕಂಕಣಾಂಗದಮುದ್ರಿಕಂ ।
ಅನಂತಗುಣಸಾಹಸ್ರಮಣಿರಂಜಿತಮೇಖಲಂ ॥ ೨೪ ॥
ವ್ಯಾಘ್ರಚರ್ಮಪರೀಧಾನಂ ಘಂಟಾದರ್ಪಣಭೂಷಿತಂ ।
ಕರ್ಕೋಟಕಮಹಾಪದ್ಮಧೃತರಾಷ್ಟ್ರಧನಂಜಯೈಃ ॥ ೨೫ ॥
ಕೂಜನ್ನೂಪುರಸಂಘುಷ್ಟಪಾದಪದ್ಮವಿರಾಜಿತಂ ।
ಪ್ರಾಸತೋಮರಖಟ್ವಾಂಗಶೂಲಟಂಕಧನುರ್ಧರಂ ॥ ೨೬ ॥
ಅಪ್ರಧೃಷ್ಯಮನಿರ್ದೇಶ್ಯಮಚಿಂತ್ಯಾಕಾರಮೀಶ್ವರಂ ।
ರತ್ನಸಿಂಹಾಸನಾರೂಢಂ ಪ್ರಣನಾಮ ಮಹಾಮುನಿಃ ॥ ೨೭ ॥

ತಂ ಭಕ್ತಿಭಾರೋಚ್ಛ್ವಸಿತಾಂತರಾತ್ಮಾ
ಸಂಸ್ತೂಯ ವಾಗ್ಭಿಃ ಶ್ರುತಿಸಮ್ಮಿತಾಭಿಃ ।
ಕೃತಾಂಜಲಿಃ ಪ್ರಶ್ರಯನಮ್ರಕಂಧರಃ
ಪಪ್ರಚ್ಛ ಧರ್ಮಾನಖಿಲಾಂಛುಭಪ್ರದಾನ್ ॥ ೨೮ ॥

ಯಾನ್ಯಾನಪೃಚ್ಛತ ಮುನಿಸ್ತಾಂಸ್ತಾನ್ಧರ್ಮಾನಶೇಷತಃ ।
ಪ್ರೋವಾಚ ಭಗವಾನ್ರುದ್ರೋ ಭೂಯೋ ಮುನಿರಪೃಚ್ಛತ ॥ ೨೯ ॥

---

ದಂತಿರುವ ಕಪೋಲವುಳ್ಳವನೂ, ನೀಲಕಂಠನೂ, ಉದ್ದವಾದ ತೋಳುಗಳುಳ್ಳವನೂ, ಸರ್ಪದ ಮಾಲೆಯಿಂದ ಪ್ರಕಾಶಿಸುವವನೂ, ನಾಗರಾಜನಿಂದ ಪ್ರಕಾಶಿಸುವ ಕಂಕಣ, ಭುಜಕೀರ್ತಿಗಳುಳ್ಳವನೂ, ಅತಿಶಯ ಗುಣಗಳುಳ್ಳ ಸಾವಿರಾರು ರತ್ನಗಳಿಂದ ಕಂಗೊಳಿಸುವ ಉಡೆನೂಲುಳ್ಳವನೂ, ಹುಲಿಚರ್ಮವನ್ನು ಹೊದ್ದವನೂ, ಘಂಟೆ, ಕನ್ನಡಿಗಳಿಂದ ಅಲಂಕೃತನೂ, ಕರ್ಕೋಟಕ, ಮಹಾಪದ್ಮ, ಧೃತರಾಷ್ಟ್ರ, ಧನಂಜಯಗಳೆಂಬ ಸರ್ಪಗಳಿಂದ ಕೂಡಿ ಶಬ್ದಗೈಯುತ್ತಿರುವ ಕಾಲ್ಗೆಜ್ಜೆಯುಳ್ಳ ಚರಣಕಮಲಗಳಿಂದ ಪ್ರಕಾಶಮಾನನೂ, ಪ್ರಾಸ, ತೋಮರ, ಖಟ್ವಾಂಗ, ತ್ರಿಶೂಲ, ಉಳಿ, ಬಿಲ್ಲುಗಳನ್ನು ಧರಿಸಿದವನೂ, ತಿರಸ್ಕರಿಸಲಶಕ್ಯನೂ, ಆಲೋಚಿಸಲಾಗದ ಆಕೃತಿಯುಳ್ಳವನೂ, ರತ್ನಸಿಂಹಾಸನದಲ್ಲಿ ಕುಳಿತಿರುವವನೂ ಆಗಿರುವ ಶಂಕರನನ್ನು ವಂದಿಸಿದನು.

೨೮. ಅತಿಶಯಭಕ್ತಿಯಿಂದ ತುಂಬಿದ ಮನಸ್ಸುಳ್ಳ ಆ ಸನತ್ಕುಮಾರನು ಆ ಮಹೇಶ್ವರನನ್ನು ವೇದೋಕ್ತವಾದ ಮಾತುಗಳಿಂದ ಹೊಗಳಿ ವಿನಯದಿಂದ ಬಗ್ಗಿದ ಕುತ್ತಿಗೆಯುಳ್ಳವನಾಗಿ ಕೈಮುಗಿದುಕೊಂಡು ಶುಭವನ್ನೀಯುವ ಸಕಲ ಧರ್ಮಗಳನ್ನು ಕೇಳಿದನು.

೨೯. ಮುನಿಯು ಕೇಳಿದ ಧರ್ಮಗಳನ್ನೆಲ್ಲ ಮಹೇಶನು ಸಂಪೂರ್ಣವಾಗಿ ಹೇಳಲು ತಿರುಗಿ ಮುನಿಯು ಕೇಳಿದನು.

CC-0. Jangamwadi Math Collection. Digitized by eGangotri

ಸನತ್ಕುಮಾರ ಉವಾಚ :—

ಶ್ರುತಾಸ್ತೇ ಭಗವನ್ಧರ್ಮಾಸ್ತ್ವನ್ಮುಖಾನ್ಮುಕ್ತಿಹೇತವಃ ।
ಯೈರ್ಮುಕ್ತಪಾಪಾ ಮನುಜಾಸ್ತರಿಷ್ಯಂತಿ ಭವಾರ್ಣವಂ ॥ ೩೦ ॥
ಅಥಾಽಪರಂ ವಿಭೋ ಧರ್ಮಮಲ್ಪಾಯಾಸಂ ಮಹಾಫಲಂ ।
ಬ್ರೂಹಿ ಕಾರುಣ್ಯತೋ ಮಹ್ಯಂ ಸದ್ಯೋ ಮುಕ್ತಿಪ್ರದಂ ನೃಣಾಂ ॥ ೩೧ ॥
ಅಭ್ಯಾಸಬಹುಲಾ ಧರ್ಮಾಃ ಶಾಸ್ತ್ರದೃಷ್ಟಾಃ ಸಹಸ್ರಶಃ ।
ಸಮ್ಯಕ್ಸಂಸೇವಿತಾಃ ಕಾಲಾತ್ಸಿದ್ಧಿಂ ಯಚ್ಛಂತಿ ವಾ ನ ವಾ ॥ ೩೨ ॥
ಅತೋ ಲೋಕಹಿತಂ ಗುಹ್ಯಂ ಭುಕ್ತಿಮುಕ್ತ್ಯೋಶ್ಚ ಸಾಧನಂ ।
ಧರ್ಮಂ ವಿಜ್ಞಾತುಮಿಚ್ಛಾಮಿ ತ್ವತ್ಪ್ರಸಾದಾನ್ಮಹೇಶ್ವರ ॥ ೩೩ ॥

ಶ್ರೀರುದ್ರ ಉವಾಚ :—

ಸರ್ವೇಷಾಮಪಿ ಧರ್ಮಾಣಾಮುತ್ತಮಂ ಶ್ರುತಿಚೋದಿತಂ ।
ರಹಸ್ಯಂ ಸರ್ವಜಂತೂನಾಂ ಯತ್ತ್ರಿಪುಂಡ್ರಸ್ಯ ಧಾರಣಂ ॥ ೩೪ ॥

ಸನತ್ಕುಮಾರ ಉವಾಚ :—

ತ್ರಿಪುಂಡ್ರಸ್ಯ ವಿಧಿಂ ಬ್ರೂಹಿ ಭಗವನ್ ಜಗತಾಂ ಪತೇ ।
ತತ್ತ್ವತೋ ಜ್ಞಾತುಮಿಚ್ಛಾಮಿ ತ್ವತ್ಪ್ರಸಾದಾನ್ಮಹೇಶ್ವರ ॥ ೩೫ ॥

---

೩೦–೩೨. ಸನತ್ಕುಮಾರನು ಹೇಳುತ್ತಾನೆ:—ಪೂಜ್ಯನಾದ ಮಹೇಶ್ವರನೆ! ನಿನ್ನಿಂದ ಮುಕ್ತಿಗೆ ಕಾರಣಗಳಾದ ಧರ್ಮಗಳನ್ನು ಕೇಳಿದೆನು. ಇವುಗಳನ್ನು ಅನುಷ್ಠಾನಮಾಡುವುದರಿಂದ ಮನುಷ್ಯರು ಪಾಪಮುಕ್ತರಾಗಿ ಸಂಸಾರಸಮುದ್ರವನ್ನು ದಾಟುವರು. ಸ್ವಾಮಿ! ಮನುಷ್ಯರಿಗೆ ಸ್ವಲ್ಪ ಪ್ರಯಾಸದಿಂದಲೇ ಮಹಾಫಲಪ್ರದವಾದುದೂ ಮೋಕ್ಷದಾಯಕವೂ ಆದ ಧರ್ಮವನ್ನು ದಯೆಯಿಟ್ಟು ಹೇಳು. ಶಾಸ್ತ್ರದಲ್ಲಿ ಹೇಳಿರುವ ಸಾವಿರಾರು ಧರ್ಮಗಳು ಚೆನ್ನಾಗಿ ಸೇವಿಸಿದರೆ ಕಾಲಾಂತರದಲ್ಲಿಯಾದರೂ ಫಲವನ್ನು ಕೊಡುವವೊ ಇಲ್ಲವೊ.

೩೩. ಮಹೇಶ್ವರ! ಆದುದರಿಂದ ನಿನ್ನ ಅನುಗ್ರಹದಿಂದ ಜನರಿಗೆ ಹಿತಕರವಾದ ಭುಕ್ತಿಮುಕ್ತಿಗಳಿಗೆ ಸಾಧನವಾದ ರಹಸ್ಯಧರ್ಮವನ್ನು ತಿಳಿಯಲಿಚ್ಛಿಸುವೆನು.

೩೪. ಶ್ರೀ ರುದ್ರನು ಹೇಳುತ್ತಾನೆ:—ಸಮಸ್ತಪ್ರಾಣಿಗಳಿಗೂ ಸಕಲ ಧರ್ಮಗಳಲ್ಲಿ ತ್ರಿಪುಂಡ್ರಧಾರಣೆಯು ರಹಸ್ಯವಾದ ಉತ್ತಮಧರ್ಮವೆಂದು ವೇದಪ್ರತಿಪಾದ್ಯವಾಗಿದೆ.

೩೫. ಸನತ್ಕುಮಾರನು ಹೇಳುತ್ತಾನೆ:—ಜಗದೀಶನಾದ ಮಹೇಶ್ವರ! ತ್ರಿಪುಂಡ್ರದ ವಿಧಿಯನ್ನು ನನಗೆ ಹೇಳು. ನಿನ್ನ ಅನುಗ್ರಹದಿಂದ ಅದನ್ನು ಯಥಾರ್ಥವಾಗಿ ತಿಳಿಯಬಯಸುವೆನು.

CC-0. Jangamwadi Math Collection. Digitized by eGangotri

ಕತಿ ಸ್ಥಾನಾನಿ ಕಿಂ ದ್ರವ್ಯಂ ಕಾ ಶಕ್ತಿಃ ಕಾ ಚ ದೇವತಾ ।
ಕಿಂ ಪ್ರಮಾಣಂ ಚ ಕಃ ಕರ್ತಾ ಕೇ ಮಂತ್ರಾಸ್ತಸ್ಯ ಕಿಂ ಫಲಂ ॥ ೩೬ ॥
ಏತತ್ಸರ್ವಮಶೇಷೇಣ ತ್ರಿಪುಂಡ್ರಸ್ಯ ಚ ಲಕ್ಷಣಂ ।
ಬ್ರೂಹಿ ಮೇ ಜಗತಾಂ ನಾಥ ಲೋಕಾಽನುಗ್ರಹಕಾಮ್ಯಯಾ ॥ ೩೭ ॥

ಶ್ರೀ ರುದ್ರ ಉವಾಚ :—

ಆಗ್ನೇಯಮುಚ್ಯತೇ ಭಸ್ಮ ದಗ್ಧಗೋಮಯಸಂಭವಂ ।
ತದೇವ ದ್ರವ್ಯಮಿತ್ಯುಕ್ತಂ ತ್ರಿಪುಂಡ್ರಸ್ಯ ಮಹಾಮುನೇ ॥ ೩೮ ॥
ಸದ್ಯೋಜಾತಾದಿಭಿರ್ಬ್ರಹ್ಮಮಯೈರ್ಮಂತ್ರೈಶ್ಚ ಪಂಚಭಿಃ ।
ಪರಿಗೃಹ್ಯಾಽಗ್ನಿರಿತ್ಯಾದಿಮಂತ್ರೈರ್ಭಸ್ಮಾಽಭಿಮಂತ್ರಯೇತ್ ॥ ೩೯ ॥
ಮಾನಸ್ತೋಕೇತಿ ಸಂಮೃಜ್ಯ ಶಿರೋ ಲಿಂಪೇಚ್ಚ ತ್ರ್ಯಂಬಕಂ ।
ತ್ರಿಯಾಯುಷಾದಿಭಿರ್ಮಂತ್ರೈರ್ಲಲಾಟೇ ಚ ಭುಜದ್ವಯೇ ।
ಸ್ಕಂಧೇ ಚ ಲೇಪಯೇದ್ಭಸ್ಮ ಸಜಲಂ ಮಂತ್ರಭಾವಿತಂ ॥ ೪೦ ॥
ತ್ರಿಸ್ರೋ ರೇಖಾ ಭವಂತ್ಯೇಷು ಸ್ಥಾನೇಷು ಮುನಿಪುಂಗವ ।
ಭ್ರುವೋರ್ಮಧ್ಯಂ ಸಮಾರಭ್ಯ ಯಾವದಂತೋ ಭ್ರುವೋರ್ಭವೇತ್ ॥ ೪೧ ॥
ಮಧ್ಯಮಾಽನಾಮಿಕಾಽಂಗುಲ್ಯೋರ್ಮಧ್ಯೇ ತು ಪ್ರತಿಲೋಮತಃ ।
ಅಂಗುಷ್ಠೇನ ಕೃತಾ ರೇಖಾ ತ್ರಿಪುಂಡ್ರಸ್ಯಾಽಭಿಧೀಯತೇ ॥ ೪೨ ॥

---

೩೬. ತ್ರಿಪುಂಡ್ರಧಾರಣೆಗೆ ಸ್ಥಾನಗಳೆಷ್ಟು? ದ್ರವ್ಯವಾವುದು? ಶಕ್ತಿ ಎಂತಹುದು? ದೇವತೆಯಾವುದು? ಪ್ರಮಾಣವು ಯಾವುದು? ಅದನ್ನು ಮಾಡ ತಕ್ಕವನು ಯಾವನು? ಮಂತ್ರಗಳಾವುವು? ಅದರ ಫಲವೇನು?

೩೭. ಜಗದೀಶ್ವರ! ಲೋಕಕ್ಕೆ ಹಿತವನ್ನು ಮಾಡಲಿಚ್ಛೆಯಿಂದ ಈ ತ್ರಿಪುಂಡ್ರದ ಲ್ಲಕ್ಷಣವನ್ನೆಲ್ಲ ನನಗೆ ಹೇಳು.

೩೮. ರುದ್ರನು ಹೇಳುತ್ತಾನೆ:—ಎಲೈ ಮುನಿಯೆ! ಬೆಂಕಿಯಲ್ಲಿ ಸುಟ್ಟ ಗೋಮಯದ ಭಸ್ಮವೆ ತ್ರಿಪುಂಡ್ರದ ದ್ರವ್ಯವಾಗಿರುವುದು.

೩೯. ಸದ್ಯೋಜಾತಾದಿ ಐದು ವೇದಮಂತ್ರಗಳಿಂದ ಭಸ್ಮವನ್ನು ತೆಗೆದು ಕೊಂಡು ಅದನ್ನು 'ಅಗ್ನಿ'ರಿತ್ಯಾದಿ ಮಂತ್ರದಿಂದ ಅಭಿಮಂತ್ರಿಸಬೇಕು.

೪೦. 'ಮಾನಸ್ತೋಕೆ'ೀತ್ಯಾದಿ ಮಂತ್ರದಿಂದ ಶಿವನನ್ನು ಅಭಿಮಂತ್ರಿಸಿ ತಲೆಗೂ, ತ್ರಿಯಾಯುಷಾದಿ ಮಂತ್ರಗಳಿಂದ ಹಣೆ, ಎರಡುತೋಳು, ಭುಜ ಗಳಿಗೂ ನೀರಿನಲ್ಲಿ ಕದಡಿದ ಭಸ್ಮವನ್ನು ಹಚ್ಚಿಕೊಳ್ಳಬೇಕು.

೪೧-೪೨. ಈ ಸ್ಥಾನಗಳಲ್ಲಿ ಮೂರು ಭಸ್ಮರೇಖೆಗಳಿರಬೇಕು. ಹುಬ್ಬುಗಳ ಮಧ್ಯವನ್ನಾರಂಭಿಸಿ ಹುಬ್ಬುಗಳ ಕೊನೆಯವರೆಗೆ ಎರಡು ಕಡೆಗಳಲ್ಲಿಯೂ ಎಡ ಗಡೆಯಿಂದ ಬಲಭಾಗದವರೆಗೆ ಮಧ್ಯಮಾ ಅನಾಮಿಕಾ ಬೆರಳುಗಳಿಂದ ರೇಖೆ

CC-0. Jangamwadi Math Collection. Digitized by eGangotri

ತಿಸೃಣಾಮಪಿ ರೇಖಾಣಾಂ ಪ್ರತ್ಯೇಕಂ ನವದೇವತಾಃ ।
ಅಕಾರೋ ಗಾರ್ಹಪತ್ಯಶ್ಚ ಋಗ್ಭೂರ್ಲೋಕೋ ರಜಸ್ತಥಾ ॥ ೪೩ ॥
ಆತ್ಮಾ ಚೈವ ಕ್ರಿಯಾಶಕ್ತಿಃ ಪ್ರಾತಃಸವನಮೇವ ಚ ।
ಮಹಾದೇವಸ್ತು ರೇಖಾಯಾಃ ಪ್ರಥಮಾಯಾಸ್ತು ದೇವತಾಃ ॥ ೪೪ ॥
ಉಕಾರೋ ದಕ್ಷಿಣಾಗ್ನಿಶ್ಚ ನಭಃ ಸತ್ವಂ ಯಜುಸ್ತಥಾ ।
ಮಧ್ಯಂದಿನಂ ಚ ಸವನಮಿಚ್ಛಾಶಕ್ತ್ಯಂತರಾತ್ಮಕೌ ॥ ೪೫ ॥
ಮಹೇಶ್ವರಸ್ಯ ರೇಖಾಯಾ ದ್ವಿತೀಯಾಯಾಶ್ಚ ದೇವತಾ ।
ಮಕಾರಾಹವನೀಯೌ ಚ ಪರಮಾತ್ಮಾ ತಮೋ ದಿವಃ ॥ ೪೬ ॥
ಜ್ಞಾನಶಕ್ತಿಃ ಸಾಮವೇದಸ್ತೃತೀಯಸವನಂ ತಥಾ ।
ಶಿವಶ್ಚೇತಿ ತೃತೀಯಾಯಾ ರೇಖಾಯಾಶ್ಚಾಽಧಿದೇವತಾಃ ॥ ೪೭ ॥
ಏತಾ ನಿತ್ಯಂ ನಮಸ್ಕೃತ್ಯ ತ್ರಿಪುಂಡ್ರಂ ಧಾರಯೇತ್ಸುಧೀಃ ।
ಮಹೇಶ್ವರವ್ರತಮಿದಂ ಸರ್ವವೇದೇಷು ಕೀರ್ತಿತಂ ॥ ೪೮ ॥
ಮುಕ್ತಿಕಾಮೈರ್ನರೈಃ ಸೇವ್ಯಂ ಪುನಸ್ತೇಷಾಂ ನ ಸಂಭವಃ ।
ತ್ರಿಪುಂಡ್ರಂ ಕುರುತೇ ಯಸ್ತು ಭಸ್ಮನಾ ವಿಧಿಪೂರ್ವಕಂ ॥ ೪೯ ॥

---

ಗಳನ್ನು ಉಲ್ಲೇಖಿಸಿ ಅಂಗುಷ್ಠದ ಬೆರಳಿನಿಂದ ಮಧ್ಯದಲ್ಲಿ ಬಲದಿಂದ ಎಡಭಾಗದ ವರೆಗೆ ರೇಖೆಯನ್ನೆಳೆದರೆ ಆ ಮೂರು ರೇಖೆಗಳು ಸೇರಿ ತ್ರಿಪುಂಡ್ರವೆನಿಸುವುವು.

೪೩–೪೭. ಈ ಮೂರು ರೇಖೆಗಳಿಗೂ ಪ್ರತ್ಯೇಕವಾಗಿ ಒಂಬತ್ತುದೇವತೆಗಳಿರುವರು. ಮೊದಲನೆ ರೇಖೆಗೆ ಅಕಾರ, ಗಾರ್ಹಪತ್ಯಾಗ್ನಿ, ಋಗ್ವೇದ, ಭೂಲೋಕ, ರಜೋಗುಣ, ಆತ್ಮಾ, ಕ್ರಿಯಾಶಕ್ತಿ, ಪ್ರಾತಸ್ಸವನ, ಮಹಾದೇವ ಎಂಬ ಒಂಬತ್ತುದೇವತೆಗಳು. ಎರಡನೆ ರೇಖೆಗೆ ಉಕಾರ, ದಕ್ಷಿಣಾಗ್ನಿ, ಆಕಾಶ, ಸತ್ವಗುಣ, ಯಜುರ್ವೇದ, ಮಧ್ಯಂದಿನ ಸವನ, ಇಚ್ಛಾಶಕ್ತಿ, ಅಂತರಾತ್ಮಾ, ಮಹೇಶ್ವರ ಎಂಬ ಒಂಬತ್ತು ದೇವತೆಗಳು. ಮೂರನೆ ರೇಖೆಗೆ ಮಕಾರ, ಆಹವನೀಯಾಗ್ನಿ, ಪರಮಾತ್ಮಾ, ತಮೋಗುಣ, ದ್ಯೌಃ, ಜ್ಞಾನಶಕ್ತಿ, ಸಾಮವೇದ, ಸಾಯಂಸವನ, ಶಿವ ಎಂಬ ಒಂಬತ್ತು ದೇವತೆಗಳು ಅಭಿಮಾನಿಗಳಾಗಿರುವರು.

೪೮. ಜ್ಞಾನಿಯು ಈ ದೇವತೆಗಳನ್ನು ನಿತ್ಯವೂ ನಮಸ್ಕರಿಸಿ ತ್ರಿಪುಂಡ್ರವನ್ನು ಧರಿಸಬೇಕು. ಈ ಮಹೇಶ್ವರವ್ರತವು ಸಮಸ್ತವೇದಗಳಲ್ಲಿಯೂ ಹೇಳಲ್ಪಟ್ಟಿದೆ.

೪೯. ಮುಕ್ತಿಯನ್ನು ಅಪೇಕ್ಷಿಸುವವರು ಈ ವ್ರತವನ್ನು ಅವಶ್ಯವಾಗಿ ಮಾಡಬೇಕು. ಹಾಗೆಮಾಡಿದವರಿಗೆ ತಿರುಗಿ ಜನ್ಮವು ಇರುವುದಿಲ್ಲ.

CC-0. Jangamwadi Math Collection. Digitized by eGangotri

ಬ್ರಹ್ಮಚಾರೀ ಗೃಹಸ್ಥೋ ವಾ ವನಸ್ಥೋ ಯತಿರೇವ ವಾ ।
ಮಹಾಪಾತಕಸಂಘಾತೈರ್ಮುಚ್ಯತೇ ಚೋಪಪಾತಕೈಃ ॥ ೫೦ ॥
ತಥಾಽನ್ಯೈಃ ಕ್ಷತ್ರವಿಟ್ಛೂದ್ರಸ್ತ್ರೀಗೋಹತ್ಯಾದಿಪಾತಕೈಃ ।
ವೀರಹತ್ಯಾಶ್ವಹತ್ಯಾಭ್ಯಾಂ ಮುಚ್ಯತೇ ನಾಽತ್ರ ಸಂಶಯಃ ॥ ೫೧ ॥
ಅಮಂತ್ರೇಣಾಽಪಿ ಯಃ ಕುರ್ಯಾದಜ್ಞಾತ್ವಾ ಮಹಿಮೋನ್ನತಿಂ ।
ತ್ರಿಪುಂಡ್ರಂ ಭಾಲಪಟಲೇ ಮುಚ್ಯತೇ ಸರ್ವಪಾತಕೈಃ ॥ ೫೨ ॥
ಪರದ್ರವ್ಯಾಽಪಹರಣಂ ಪರದಾರಾಽಭಿಮರ್ಶನಂ ।
ಪರನಿಂದಾ ಪರಕ್ಷೇತ್ರಹರಣಂ ಪರಪೀಡನಂ ॥ ೫೩ ॥
ಸಸ್ಯಾರಾಮಾದಿಹರಣಂ ಗೃಹದಾಹಾದಿ ಕರ್ಮ ಚ ।
ಅಸತ್ಯವಾದಂ ಪೈಶುನ್ಯಂ ಪಾರುಷ್ಯಂ ವೇದವಿಕ್ರಯಃ ।
ಕೂಟಸಾಕ್ಷ್ಯಂ ವ್ರತತ್ಯಾಗಃ ಕೈತವಂ ನೀಚಸೇವನಂ ॥ ೫೪ ॥
ಗೋಭೂಹಿರಣ್ಯಮಹಿಷೀತಿಲಕಂಬಲವಾಸಸಾಂ ।
ಅನ್ನಧಾನ್ಯಜಲಾದೀನಾಂ ನೀಚೇಭ್ಯಶ್ಚ ಪರಿಗ್ರಹಃ ॥ ೫೫ ॥
ದಾಸೀವೇಶ್ಯಾಭುಜಂಗೇಷು ವೃಷಲೀಷು ನಟೀಷು ಚ ।
ರಜಸ್ವಲಾಸು ಕನ್ಯಾಸು ವಿಧವಾಸು ಚ ಸಂಗಮಃ ॥ ೫೬ ॥

---

೫೦–೫೧. ಈ ತ್ರಿಪುಂಡ್ರವನ್ನು ಬ್ರಹ್ಮಚಾರಿಯಾಗಲಿ, ಗ್ರಹಸ್ಥನಾಗಲಿ, ವಾನಪ್ರಸ್ಥನಾಗಲಿ, ಸನ್ಯಾಸಿಯಾಗಲಿ ಧರಿಸಿದರೆ ಅವರು ಮಹಾಪಾತಕಗಳಿಂದಲೂ, ಉಪಪಾತಕಗಳಿಂದಲೂ, ಇನ್ನೂ ಇತರ ಕ್ಷತ್ರಿಯ, ವೈಶ್ಯ, ಶೂದ್ರ, ಸ್ತ್ರೀ, ಗೋವು, ವೀರ, ಕುದುರೆ ಇವರನ್ನು ಕೊಂದ ಪಾಪಗಳಿಂದಲೂ ನಿಶ್ಚಯವಾಗಿ ಮುಕ್ತರಾಗುವರು.

೫೨. ಈ ವ್ರತದ ಮಹಿಮಾತಿಶಯವನ್ನರಿಯದೆ ಮಾನವನು ಮಂತ್ರವಿಲ್ಲದೆ ತ್ರಿಪುಂಡ್ರವನ್ನು ಹಣೆಯಲ್ಲಿ ಧರಿಸಿದರೂ ಸಮಸ್ತಪಾಪರಹಿತನಾಗುವನು.

೫೩–೬೨. ಪರರ ದ್ರವ್ಯವನ್ನು ಅಪಹರಿಸುವುದು, ಇತರರ ಪತ್ನಿಯರ ಸಂಗ ಮಾಡುವುದು, ಪರರನಿಂದೆ, ಇನ್ನೊಬ್ಬರ ಹೊಲಗದ್ದೆಗಳನ್ನು ಅಪಹರಿಸುವುದು, ಪರರನ್ನು ಪೀಡಿಸುವುದು, ಸಸ್ಯ ತೋಟ ಮೊದಲಾದುವನ್ನು ಅಪಹರಿಸುವುದು, ಮನೆಸುಡುವುದು, ಸುಳ್ಳು ಹೇಳುವುದು, ಚಾಡಿಹೇಳುವುದು, ಕಠಿನತೆ, ವೇದವನ್ನು ದ್ರವ್ಯ ತೆಗೆದುಕೊಂಡು ಹೇಳಿಕೊಡುವುದು, ಸುಳ್ಳುಸಾಕ್ಷಿ ಹೇಳುವುದು, ವ್ರತವನ್ನು ಬಿಡುವುದು, ಕಪಟ, ನೀಚರಸೇವೆ, ನೀಚರಿಂದ ಗೋವು, ಭೂಮಿ, ಚಿನ್ನ, ಎಮ್ಮೆ, ಎಳ್ಳು, ಕಂಬಳಿ, ಬಟ್ಟೆ, ಅನ್ನ, ಧಾನ್ಯ, ನೀರು ಮೊದಲಾದುವುಗಳನ್ನು ದಾನ ತೆಗೆದುಕೊಳ್ಳುವುದು, ಸೇವಕಳು, ವೇಶ್ಯೆ, ವ್ಯಭಿಚಾರಿಣಿ, ಶೂದ್ರಸ್ತ್ರೀ, ನಟಿ, ರಜಸ್ವಲೆ, ಕನ್ಯೆ, ವಿಧವೆ ಇವರ ಸಂಗಮಾಡುವುದು,

CC-0. Jangamwadi Math Collection. Digitized by eGangotri

ಮಾಂಸಚರ್ಮರಸಾದೀನಾಂ ಲವಣಸ್ಯ ಚ ವಿಕ್ರಯಃ ।
ಏವಮಾದೀನ್ಯಸಂಖ್ಯಾನಿ ಪಾಪಾನಿ ವಿವಿಧಾನಿ ಚ ॥ ೫೭ ॥
ಸದ್ಯ ಏವ ವಿನಶ್ಯಂತಿ ತ್ರಿಪುಂಡ್ರಸ್ಯ ಚ ಧಾರಣಾತ್ ।
ಶಿವದ್ರವ್ಯಾಪಹರಣಂ ಶಿವನಿಂದಾ ಚ ಕುತ್ರಚಿತ್ ॥ ೫೮ ॥
ನಿಂದಾ ಚ ಶಿವಭಕ್ತಾನಾಂ ಪ್ರಾಯಶ್ಚಿತ್ತೈರ್ನ ಶುಧ್ಯತಿ ।
ರುದ್ರಾಕ್ಷಾ ಯಸ್ಯ ಗಾತ್ರೇಷು ಲಲಾಟೇ ಚ ತ್ರಿಪುಂಡ್ರಕಂ ॥ ೫೯ ॥
ಸ ಚಾಂಡಾಲೋಽಪಿ ಸಂಪೂಜ್ಯಃ ಸರ್ವವರ್ಣೋತ್ತಮೋ ಭವೇತ್ ।
ಯಾನಿ ತೀರ್ಥಾನಿ ಲೋಕೇಽಸ್ಮಿನ್ಗಂಗಾದ್ಯಾಃ ಸರಿತಶ್ಚ ಯಾಃ ॥ ೬೦ ॥
ಸ್ನಾತೋ ಭವತಿ ಸರ್ವತ್ರ ಲಲಾಟೇ ಯಸ್ತ್ರಿಪುಂಡ್ರಧೃಕ್ ।
ಸಪ್ತಕೋಟಿಮಹಾಮಂತ್ರಾಃ ಪಂಚಾಕ್ಷರಪುರಃಸರಾಃ ॥ ೬೧ ॥
ತಥಾಽನ್ಯೇ ಕೋಟಿಶೋ ಮಂತ್ರಾಃ ಶೈವಾಃ ಕೈವಲ್ಯಹೇತವಃ ।
ತೇ ಸರ್ವೇ ಯೇನ ಜಪ್ತಾಃ ಸ್ಯುರ್ಯೋ ಬಿಭರ್ತಿ ತ್ರಿಪುಂಡ್ರಕಂ ॥ ೬೨ ॥
ಸಹಸ್ರಂ ಪೂರ್ವಜಾತಾನಾಂ ಸಹಸ್ರಂ ಚ ಜನಿಷ್ಯತಾಂ ।
ಸ್ವವಂಶಜಾನಾಂ ಮರ್ತ್ಯಾನಾಮುದ್ಧರೇದ್ಯಸ್ತ್ರಿಪುಂಡ್ರಧೃಕ್ ॥ ೬೩ ॥
ಇಹ ಭುಕ್ತ್ವಾಽಖಿಲಾನ್ಭೋಗಾನ್ದೀರ್ಘಾಯುರ್ವ್ಯಾಧಿವರ್ಜಿತಃ ।
ಜೀವಿತಾಂತೇ ಚ ಮರಣಂ ಸುಖೇನೈವ ಪ್ರಪದ್ಯತೇ ॥ ೬೪ ॥

---

ಮಾಂಸ, ಚರ್ಮ, ರಸಪದಾರ್ಥಗಳು, ಉಪ್ಪು ಇವುಗಳನ್ನು ಮಾರುವುದು ಇವೇ ಮೊದಲಾದ ಅನೇಕ ಪಾಪಗಳು ತ್ರಿಪುಂಡ್ರಧಾರಣೆಯಿಂದ ಕೂಡಲೆ ನಾಶವಾಗುವುವು. ಶಿವನ ದ್ರವ್ಯವನ್ನು ಕದಿಯುವುದು, ಶಿವ ಮತ್ತು ಅವನ ಭಕ್ತರ ನಿಂದೆಮಾಡುವುದು—ಇವುಗಳು ಪ್ರಾಯಶ್ಚಿತ್ತದಿಂದ ಪರಿಹಾರವಾಗುವುದಿಲ್ಲ. ರುದ್ರಾಕ್ಷಿ, ತ್ರಿಪುಂಡ್ರವನ್ನು ಧರಿಸಿದವನು ಚಂಡಾಲನಾದರೂ ಪೂಜ್ಯನಾಗಿ ಸಕಲ ಜಾತಿಗಳಲ್ಲಿ ಉತ್ತಮನಾಗುವನು. ತ್ರಿಪುಂಡ್ರಧಾರಿಯು ಈ ಲೋಕದಲ್ಲಿರುವ ಸಕಲ ತೀರ್ಥಗಳಲ್ಲಿಯೂ, ಗಂಗಾದಿನದಿಗಳಲ್ಲಿಯೂ ಸ್ನಾನಮಾಡಿದ ಪುಣ್ಯವನ್ನೂ ಪಂಚಾಕ್ಷರಿ ಮೊದಲಾದ ಏಳುಕೋಟಿ ಮಹಾಮಂತ್ರಗಳನ್ನೂ, ಕೈವಲ್ಯಕ್ಕೆ ಕಾರಣಗಳಾದ ಕೋಟಿ ಶಿವಮಂತ್ರಗಳನ್ನೂ ಜಪಿಸಿದ ಪುಣ್ಯವನ್ನೂ ಪಡೆಯುವನು.

೬೩. ತನ್ನ ವಂಶದಲ್ಲಿ ಹಿಂದೆ ಹುಟ್ಟಿದ ಸಾವಿರ ಜನರನ್ನೂ, ಮುಂದೆ ಹುಟ್ಟುವ ಸಾವಿರ ಜನರನ್ನೂ ಉದ್ಧರಿಸುವನು.

೬೪–೬೭. ಅಣಿಮಾದ್ಯಷ್ಟೈಶ್ವರ್ಯಗಳಿಂದ ಕೂಡಿದ ದಿವ್ಯ ದೇಹವನ್ನು ಪಡೆದು ದಿವ್ಯವಿಮಾನವನ್ನೇರಿ ದೇವತಾಸ್ತ್ರೀಯರಿಂದ ಸೇವಿಸಲ್ಪಡುವವನಾಗಿ

CC-0. Jangamwadi Math Collection. Digitized by eGangotri F

ಅಷ್ಟೈಶ್ವರ್ಯಗುಣೋಪೇತಂ ಪ್ರಾಪ್ಯ ದಿವ್ಯಂ ವಪುಃ ಶುಭಂ ।
ದಿವ್ಯಂ ವಿಮಾನಮಾರುಹ್ಯ ದಿವ್ಯಸ್ತ್ರೀಶತಸೇವಿತಃ ॥ ೬೫ ॥
ವಿದ್ಯಾಧರಾಣಾಂ ಸಿದ್ಧಾನಾಂ ಗಂಧರ್ವಾಣಾಂ ಮಹೌಜಸಾಂ ।
ಇಂದ್ರಾದಿಲೋಕಪಾಲಾನಾಂ ಲೋಕೇಷು ಚ ಯಥಾಕ್ರಮಂ ॥ ೬೬ ॥
ಭುಕ್ತ್ವಾ ಭೋಗಾನ್ಸುವಿಪುಲಾನ್ಪ್ರಜೇಶಾನಾಂ ಪುರೇಷು ಚ ।
ಬ್ರಹ್ಮಣಃ ಪದಮಾಸಾದ್ಯ ತತ್ರ ಕಲ್ಪಶತಂ ರಮೇತ್ ॥ ೬೭ ॥
ವಿಷ್ಣೋರ್ಲೋಕೇ ಚ ರಮತೇ ಯಾವದ್ಬ್ರಹ್ಮಶತತ್ರಯಂ ॥ ೬೮ ॥
ಶಿವಲೋಕಂ ತತಃ ಪ್ರಾಪ್ಯ ರಮತೇ ಕಾಲಮಕ್ಷಯಂ ।
ಶಿವಸಾಯುಜ್ಯಮಾಪ್ನೋತಿ ನ ಸ ಭೂಯೋಽಭಿಜಾಯತೇ ॥ ೬೯ ॥
ಸರ್ವೋಪನಿಷದಾಂ ಸಾರಂ ಸಮಾಲೋಚ್ಯ ಮುಹುರ್ಮುಹುಃ ।
ಇದಮೇವ ಹಿ ನಿರ್ಣೀತಂ ಪರಂ ಶ್ರೇಯಸ್ತ್ರಿಪುಂಡ್ರಕಂ ॥ ೭೦ ॥
ಏತತ್ತ್ರಿಪುಂಡ್ರಮಾಹಾತ್ಮ್ಯಂ ಸಮಾಸಾತ್ಕಥಿತಂ ಮಯಾ ।
ರಹಸ್ಯಂ ಸರ್ವಭೂತಾನಾಂ ಗೋಪನೀಯಮಿದಂ ತ್ವಯಾ ॥ ೭೧ ॥
ಇತ್ಯುಕ್ತ್ವಾ ಭಗವಾನ್ರುದ್ರಸ್ತತ್ರೈವಾಂತರಧೀಯತ ।
ಸನತ್ಕುಮಾರೋಽಪಿ ಮುನಿರ್ಜಗಾಮ ಬ್ರಹ್ಮಣಃ ಪದಂ ॥ ೭೨ ॥
ತವಾಽಪಿ ಭಸ್ಮಸಂಪರ್ಕಾತ್ಸಂಜಾತಾ ವಿಮಲಾ ಮತಿಃ ।
ತ್ವಮಪಿ ಶ್ರದ್ಧಯಾ ಪುಣ್ಯಂ ಧಾರಯಸ್ವ ತ್ರಿಪುಂಡ್ರಕಂ ॥ ೭೩ ॥

---

ವಿದ್ಯಾಧರ, ಸಿದ್ಧ, ಗಂಧರ್ವ, ಇಂದ್ರಾದಿಲೋಕಪಾಲಕರು, ಇವರ ಲೋಕಗಳಲ್ಲಿಯೂ, ಪ್ರಜಾಪತಿಗಳ ಪಟ್ಟಣಗಳಲ್ಲಿಯೂ ಅತಿಶಯ ಭೋಗಗಳನ್ನನುಭವಿಸಿ ಬ್ರಹ್ಮನ ಸ್ಥಾನವನ್ನು ಹೊಂದಿ ಅಲ್ಲಿ ನೂರು ಕಲ್ಪಗಳಕಾಲ ಸುಖಿಸುವನು.

೬೮–೬೯. ಮೂರು ಬ್ರಹ್ಮರ ಆಯುಷ್ಯಕಾಲ ವಿಷ್ಣುಲೋಕದಲ್ಲಿ ಸುಖಪಡುವನು. ಬಳಿಕ ಶಿವಲೋಕವನ್ನು ಸೇರಿ ಅಲ್ಲಿ ಶಾಶ್ವತವಾಗಿ ನೆಲಸಿ ಸುಖಿಸುತ್ತ ಶಿವಸಾಯುಜ್ಯವನ್ನು ಪಡೆದು ಮರಳಿ ಜನಿಸುವುದಿಲ್ಲ.

೭೦. ಸಮಸ್ತ ಉಪನಿಷತ್ತುಗಳ ಸಾರವನ್ನು ಬಹಳವಾಗಿ ವಿಮರ್ಶಿಸಿ ತ್ರಿಪುಂಡ್ರಧಾರಣೆಯೆ ಅತ್ಯುತ್ತಮ ಧರ್ಮವೆಂದು ನಿರ್ಣಯಿಸಲ್ಪಟ್ಟಿದೆ.

೭೧. ನಾನು ನಿನಗೆ ತ್ರಿಪುಂಡ್ರದ ಮಾಹಾತ್ಮ್ಯೆಯನ್ನು ಸಂಕ್ಷೇಪವಾಗಿ ಹೇಳಿರುವೆನು. ನೀನು ಈ ರಹಸ್ಯವನ್ನು ಗುಟ್ಟಾಗಿಟ್ಟರಬೇಕು.

೭೨. ಹೀಗೆಂದು ಪೂಜ್ಯನಾದ ಕಾಲಾಗ್ನಿರುದ್ರನು ಅಲ್ಲಿಯೇ ಅದೃಶ್ಯನಾಗಿ ಹೋದನು. ಸನತ್ಕುಮಾರನೂ ಬ್ರಹ್ಮಲೋಕಕ್ಕೆ ಹೋದನು.

೭೩. ನಿನಗೂ ಭಸ್ಮದ ಸಂಬಂಧದಿಂದ ಶುದ್ಧವಾದ ಬುದ್ಧಿಯುಂಟಾಯಿತು. ನೀನೂ ಶ್ರದ್ಧೆಯಿಂದ ಪವಿತ್ರವಾದ ತ್ರಿಪುಂಡ್ರವನ್ನು ಧರಿಸು.

CC-0. Jangamwadi Math Collection. Digitized by eGangotri

ಸೂತ ಉವಾಚ :—

ಇತ್ಯುಕ್ತ್ವಾ ವಾಮದೇವಸ್ತು ಶಿವಯೋಗೀ ಮಹಾತಪಾಃ ।
ಅಭಿಮಂತ್ರ್ಯ ದದೌ ಭಸ್ಮ ಘೋರಾಯ ಬ್ರಹ್ಮರಕ್ಷಸೇ ॥ ೭೪ ॥
ತೇನಾಽಸೌ ಭಾಲಪಟಲೇ ಚಕ್ರೇ ತಿರ್ಯಕ್ತ್ರಿಪುಂಡ್ರಕಂ ।
ಬ್ರಹ್ಮರಾಕ್ಷಸತಾಂ ಸದ್ಯೋ ಜಹೌ ತಸ್ಯಾನುಭಾವತಃ ॥ ೭೫ ॥
ಸ ಬಭೌ ಸೂರ್ಯಸಂಕಾಶಸ್ತೇಜೋಮಂಡಲಮಂಡಿತಃ ।
ದಿವ್ಯಾವಯವರೂಪೈಶ್ಚ ದಿವ್ಯಮಾಲ್ಯಾಂಬರೋಜ್ವಲಃ ॥ ೭೬ ॥
ಭಕ್ತ್ಯಾ ಪ್ರದಕ್ಷಿಣೀಕೃತ್ಯ ತಂ ಗುರುಂ ಶಿವಯೋಗಿನಂ ।
ದಿವ್ಯಂ ವಿಮಾನಮಾರುಹ್ಯ ಪುಣ್ಯಲೋಕಾನ್ ಜಗಾಮ ಸಃ ॥ ೭೭ ॥
ವಾಮದೇವೋ ಮಹಾಯೋಗೀ ದತ್ವಾ ತಸ್ಮೈ ಪರಾಂ ಗತಿಂ ।
ಚಚಾರ ಲೋಕೇ ಗೂಢಾತ್ಮಾ ಸಾಕ್ಷಾದಿವ ಶಿವಃ ಸ್ವಯಂ ॥ ೭೮ ॥
ಯ ಏತದ್ಭಸ್ಮಮಾಹಾತ್ಮ್ಯಂ ತ್ರಿಪುಂಡ್ರಂ ಶೃಣುಯಾನ್ನರಃ ।
ಶ್ರಾವಯೇದ್ವಾ ಪಠೇದ್ವಾಽಪಿ ಸ ಹಿ ಯಾತಿ ಪರಾಂ ಗತಿಂ ॥ ೭೯ ॥
ಕಥಯತಿ ಶಿವಕೀರ್ತಿಂ ಸಂಸೃತೇರ್ಮುಕ್ತಿಹೇತುಂ
ಪ್ರಣಮತಿ ಶಿವಯೋಗಿಧ್ಯೇಯಮೀಶಾಂಘ್ರಿಪದ್ಮಂ ।

---

೭೪. ಸೂತನು ಹೇಳುತ್ತಾನೆ:—ಮಹಾತಪಸ್ವಿಯಾದ ವಾಮದೇವ ಶಿವಯೋಗಿಯು ಹೀಗೆಂದು ಭಸ್ಮವನ್ನಭಿಮಂತ್ರಿಸಿ ಆ ಘೋರ ಬ್ರಹ್ಮರಾಕ್ಷಸನಿಗಿತ್ತನು.

೭೫. ಅವನು ಆ ಭಸ್ಮದಿಂದ ಹಣೆಯಲ್ಲಿ ಅಡ್ಡವಾಗಿ ತ್ರಿಪುಂಡ್ರವನ್ನು ಧರಿಸಿದನು. ಅದರ ಮಾಹಾತ್ಮ್ಯದಿಂದ ಕೂಡಲೆ ಬ್ರಹ್ಮರಾಕ್ಷಸತ್ವವನ್ನು ತ್ಯಜಿಸಿದನು.

೭೬. ಅವನು ದಿವ್ಯಾವಯವರೂಪಗಳುಳ್ಳವನಾಗಿ ಸೂರ್ಯನಂತೆ ಕಾಂತಿ ಸಮೂಹಗಳಿಂದ ಅಲಂಕರಿಸಲ್ಪಟ್ಟವನೂ, ದಿವ್ಯಮಾಲೆ, ವಸ್ತ್ರಗಳಿಂದ ಪ್ರಕಾಶಮಾನನೂ ಆಗಿ ವಿರಾಜಿಸಿದನು.

೭೭. ಅವನು ಭಕ್ತಿಯಿಂದ ಆ ಶಿವಯೋಗಿಯನ್ನು ಪ್ರದಕ್ಷಿಣೆಗೈದು ದಿವ್ಯ ವಿಮಾನವನ್ನೇರಿ ಪುಣ್ಯಲೋಕವನ್ನು ಸೇರಿದನು.

೭೮. ವಾಮದೇವ ಶಿವಯೋಗಿಯು ಆ ಬ್ರಹ್ಮರಾಕ್ಷಸನಿಗೆ ಉತ್ತಮ ಗತಿಯನ್ನಿತ್ತು ಲೋಕದಲ್ಲಿ ಪ್ರತ್ಯಕ್ಷಶಿವನಂತೆ ಗುಟ್ಟಾಗಿ ಸಂಚರಿಸಿದನು.

೭೯. ಈ ಭಸ್ಮಮಾಹಾತ್ಮ್ಯವನ್ನೂ, ತ್ರಿಪುಂಡ್ರವನ್ನೂ ಕೇಳಿದವನೂ, ಹೇಳಿದವನೂ, ಪಠಿಸಿದವನೂ ಉತ್ತಮಗತಿಯನ್ನು ಪಡೆಯುವರು.

೮೦. ಸಂಸಾರದುಃಖವನ್ನು ನೀಗಿಸುವ ಶಿವನ ಕೀರ್ತಿಯನ್ನು ಹೇಳು

CC-0. Jangamwadi Math Collection. Digitized by eGangotri

ರಚಯತಿ ಶಿವಭಕ್ತೋದ್ಭಾಸಿಭಾಲೇ ತ್ರಿಪುಂಡ್ರಂ
ನ ಪುನರಿಹ ಜನನ್ಯಾ ಗರ್ಭವಾಸಂ ಭಜೇತ್ಸಃ ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಭಸ್ಮಮಾಹಾತ್ಮ್ಯ ಕಥನಂ"ನಾಮ ಷೋಡಶೋಽಧ್ಯಾಯಃ

---

ವವನೂ, ಶಿವಯೋಗಿಗಳಿಂದ ಧ್ಯಾನಿಸಲರ್ಹವಾದ ಈಶ್ವರನ ಚರಣಕಮಲವನ್ನು ನಮಸ್ಕರಿಸುವವನೂ, ಶಿವಭಕ್ತರನ್ನು ಪ್ರಕಾಶಗೊಳಿಸುವ ತ್ರಿಪುಂಡ್ರವನ್ನು ಧರಿಸುವವನೂ ತಿರುಗಿ ತಾಯಿಯ ಗರ್ಭದಲ್ಲಿ ವಾಸಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಭಸ್ಮಮಾಹಾತ್ಮ್ಯಕಥನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ಭಸ್ಮಮಾಹಾತ್ಮ್ಯವರ್ಣನಂ

ಋಷಯ ಊಚುಃ:—

ವೇದವೇದಾಂಗತತ್ವಜ್ಞೈರ್ಗುರುಭಿರ್ಬ್ರಹ್ಮವಾದಿಭಿಃ ।
ನೃಣಾಂ ಕೃತೋಪದೇಶಾನಾಂ ಸದ್ಯಃ ಸಿದ್ಧಿರ್ಹಿ ಜಾಯತೇ ॥ ೧ ॥
ಅಥಾಽನ್ಯಜನಸಾಮಾನ್ಯೈರ್ಗುರುಭಿರ್ನೀತಿಕೋವಿದೈಃ ।
ನೃಣಾಂ ಕೃತೋಪದೇಶಾನಾಂ ಸಿದ್ಧಿರ್ಭವತಿ ಕೀದೃಶೀ ॥ ೨ ॥

ಸೂತ ಉವಾಚ:—

ಶ್ರದ್ಧೈವ ಸರ್ವಧರ್ಮಸ್ಯ ಚಾಽತೀವಹಿತಕಾರಿಣೀ ।
ಶ್ರದ್ಧಯೈವ ನೃಣಾಂ ಸಿದ್ಧಿರ್ಜಾಯತೇ ಲೋಕಯೋರ್ದ್ವಯೋಃ ॥ ೩ ॥
ಶ್ರದ್ಧಯಾ ಭಜತಃ ಪುಂಸಃ ಶಿಲಾಽಪಿ ಫಲದಾಯಿನೀ ।
ಮೂರ್ಖೋಽಪಿ ಪೂಜ್ಯತೇ ಭಕ್ತ್ಯಾ ಗುರುರ್ಭವತಿ ಸಿದ್ಧಿದಃ ॥ ೪ ॥
ಶ್ರದ್ಧಯಾ ಪಠಿತೋ ಮಂತ್ರಸ್ತ್ವಬದ್ಧೋಽಪಿ ಫಲಪ್ರದಃ ।
ಶ್ರದ್ಧಯಾ ಪೂಜಿತೋ ದೇವೋ ನೀಚಸ್ಯಾಽಪಿ ಫಲಪ್ರದಃ ॥ ೫ ॥

---

## ಕನ್ನಡದ ಅನುವಾದ

### ಭಸ್ಮಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ವೇದವೇದಾಂಗಗಳ ತತ್ವವನ್ನರಿತವರೂ, ಬ್ರಹ್ಮಜ್ಞಾನಿಗಳೂ ಆದ ಗುರುಗಳಿಂದ ಉಪದೇಶವನ್ನು ಪಡೆದ ಮಾನವರಿಗೆ ಕೂಡಲೆ, ಫಲಸಿದ್ಧಿಯಾಗುವುದು.

೨. ನೀತಿಯಲ್ಲಿ ನಿಪುಣರಾದ ಸಾಮಾನ್ಯಗುರುಗಳಿಂದ ಉಪದೇಶಗೊಂಡ ಮಾನವರಿಗೆ ಎಂತಹ ಫಲಸಿದ್ಧಿಯಾಗುವುದು ?

೩. ಸೂತನು ಹೇಳುತ್ತಾನೆ:— ಶ್ರದ್ಧೆಯಿಂದ ಸಕಲ ಧರ್ಮಗಳನ್ನೂ ಅನುಷ್ಠಾನಮಾಡುವುದೇ ಅತ್ಯಂತ ಹಿತಕರವು. ಮನುಷ್ಯರಿಗೆ ಶ್ರದ್ಧೆಯಿಂದಲೆ ಇಹಪರಗಳಲ್ಲಿ ಫಲಸಿದ್ಧಿಯಾಗುವುದು.

೪. ಮನುಷ್ಯನು ಶ್ರದ್ಧೆಯಿಂದ ಕಲ್ಲನ್ನು ಭಜಿಸಿದರೂ ಅದು ಫಲವನ್ನೀಯುವುದು. ಮೂರ್ಖನನ್ನೂ ಭಕ್ತಿಯಿಂದ ಪೂಜಿಸಿದರೆ ಅವನು ಸಿದ್ಧಿಯನ್ನೀಯುವ ಗುರುವಾಗುವನು.

೫. ಶ್ರದ್ಧೆಯಿಂದ ಪಠಿಸಿದ ಮಂತ್ರವು ಅಬದ್ಧವಾಗಿದ್ದರೂ ಫಲವನ್ನು ಕೊಡುವುದು. ಶ್ರದ್ಧೆಯಿಂದ ಅರ್ಚಿಸಿದರೆ ದೇವರು ನೀಚನಿಗೂ ಫಲವನ್ನೀಯುವನು.

CC-0. Jangamwadi Math Collection. Digitized by eGangotri

ಅಶ್ರದ್ಧಯಾ ಕೃತಾ ಪೂಜಾ ದಾನಂ ಯಜ್ಞಸ್ತಪೋ ವ್ರತಂ ।
ಸರ್ವಂ ನಿಷ್ಫಲತಾಂ ಯಾತಿ ಪುಷ್ಪಂ ವಂಧ್ಯತರೋರಿವ ॥ ೬ ॥
ಸರ್ವತ್ರ ಸಂಶಯಾವಿಷ್ಟಃ ಶ್ರದ್ಧಾಹೀನೋಽತಿಚಂಚಲಃ ।
ಪರಮಾರ್ಥಾತ್ಪರಿಭ್ರಷ್ಟಃ ಸಂಸೃತೇರ್ನ ಹಿ ಮುಚ್ಯತೇ ॥ ೭ ॥
ಮಂತ್ರೇ ತೀರ್ಥೇ ದ್ವಿಜೇ ದೇವೇ ದೈವಜ್ಞೇ ಭೇಷಜೇ ಗುರೌ ।
ಯಾದೃಶೀ ಭಾವನಾ ಯತ್ರ ಸಿದ್ಧಿರ್ಭವತಿ ತಾದೃಶೀ ॥ ೮ ॥
ಅತೋ ಭಾವಮಯಂ ವಿಶ್ವಂ ಪುಣ್ಯಂ ಪಾಪಂ ಚ ಭಾವತಃ ।
ತೇ ಉಭೇ ಭಾವಹೀನಸ್ಯ ನ ಭವೇತಾಂ ಕದಾಚನ ॥ ೯ ॥
ಅತ್ರೇದಂ ಪರಮಾಶ್ಚರ್ಯಮಾಖ್ಯಾನಮನುವರ್ಣ್ಯತೇ ।
ಅಶ್ರದ್ಧಾ ಸರ್ವಮರ್ತ್ಯಾನಾಂ ಯೇನ ಸದ್ಯೋ ನಿವರ್ತತೇ ॥ ೧೦ ॥
ಆಸೀತ್ಪಾಂಚಾಲರಾಜಸ್ಯ ಸಿಂಹಕೇತುರಿತಿಶ್ರುತಃ ।
ಪುತ್ರಃ ಸರ್ವಗುಣೋಪೇತಃ ಕ್ಷಾತ್ರಧರ್ಮರತಃ ಸದಾ ॥ ೧೧ ॥
ಸ ಏಕದಾ ಕತಿಪಯೈರ್ಭೃತ್ಯೈರ್ಯುಕ್ತೋ ಮಹಾಬಲಃ ।
ಜಗಾಮ ಮೃಗಯಾಹೇತೋರ್ಬಹುಸತ್ವಾನ್ವಿತಂ ವನಂ ॥ ೧೨ ॥
ತದ್ಭೃತ್ಯಃ ಶಬರಃ ಕಶ್ಚಿದ್ವಿಚರನ್ಮೃಗಯಾಂ ವನೇ ।
ದದರ್ಶ ಜೀರ್ಣಂ ಸ್ಫುಟಿತಂ ಪತಿತಂ ದೇವತಾಲಯಂ ॥ ೧೩ ॥

---

೬. ಶ್ರದ್ಧೆಯಿಲ್ಲದೆ ಎಸಗಿದಪೂಜೆ, ದಾನ, ಯಜ್ಞ, ತಪಸ್ಸು, ವ್ರತ ಇವೆಲ್ಲವೂ ಬರಡಾದ ಮರದ ಹೂವಿನಂತೆ ನಿಷ್ಫಲವಾಗುವುವು.

೭. ಎಲ್ಲೆಡೆಯಲ್ಲಿಯೂ ಸಂಶಯಗೊಳ್ಳುವವನೂ, ಶ್ರದ್ಧೆಯಿಲ್ಲದವನೂ, ಅತಿಚಂಚಲ ಮನಸ್ಸುಳ್ಳವನೂ ಆದ ಪುರುಷನು ಪರಮಾರ್ಥವಾದ ಮೋಕ್ಷವನ್ನು ಪಡೆಯದೆ ಸಂಸಾರ ಬಂಧನದಿಂದ ಬಿಡುಗಡೆಯನ್ನು ಹೊಂದುವುದಿಲ್ಲ.

೮–೧೦. ಮಂತ್ರ, ತೀರ್ಥ, ಬ್ರಾಹ್ಮಣ, ದೇವತೆ, ಜೋಯಿಸ, ಔಷಧ, ಗುರು ಇವರಲ್ಲಿ ಭಾವನೆಯಿದ್ದಂತೆ ಸಿದ್ಧಿಯಾಗುವುದು. ಭಾವರೂಪವಾದ ಸಕಲ ಪುಣ್ಯಪಾಪಗಳು ಭಾವನೆಯಿಂದಾಗುವುದರಿಂದ ಭಾವನೆಯಿಲ್ಲದವನಿಗೆ ಅವುಗಳು ಸಿದ್ಧಿಸಲಾರವು. ಈ ವಿಷಯದಲ್ಲಿ ಸಕಲ ಮಾನವರ ಅಶ್ರದ್ಧೆಯನ್ನು ಕೂಡಲೆ ತೊಲಗಿಸುವ ಆಶ್ಚರ್ಯಕರವಾದ ಒಂದುಪಾಖ್ಯಾನವನ್ನು ಹೇಳುವೆನು.

೧೧. ಪಾಂಚಾಲದೇಶದ ದೊರೆಗೆ ಸಮಸ್ತಗುಣಗಳುಳ್ಳವನೂ, ಕ್ಷತ್ರಿಯ ಧರ್ಮನಿರತನೂ ಆದ ಸಿಂಹಕೇತುವೆಂಬ ಓರ್ವ ಮಗನಿದ್ದನು.

೧೨. ಅವನು ಒಂದಾನೊಂದು ವೇಳೆ ಕೆಲವು ಸೇವಕರೊಡನೆ ಬೇಟೆಗಾಗಿ ಅನೇಕ ಪ್ರಾಣಿಗಳುಳ್ಳ ಒಂದು ಕಾಡಿಗೆ ಹೋದನು.

೧೩. ಅವನ ಸೇವಕನಾದ ಬೇಡನೊಬ್ಬನು ಕಾಡಿನಲ್ಲಿ ಬೇಟೆಯಾಡುತ್ತ ಒಡೆದು ಬಿದ್ದಿರುವ ಒಂದು ಹಳೆಯ ದೇವಾಲಯವನ್ನು ಕಂಡನು.

CC-0. Jangamwadi Math Collection. Digitized by eGangotri

ತತ್ರಾಽಪಶ್ಯದ್ಭಿನ್ನಪೀಠಂ ಪತಿತಂ ಸ್ಥಂಡಿಲೋಪರಿ ।
ಶಿವಲಿಂಗಮೃಜುಂ ಸೂಕ್ಷ್ಮಂ ಮೂರ್ತಂ ಭಾಗ್ಯಮಿವಾತ್ಮನಃ ॥ ೧೪ ॥
ಸ ಸಮಾದಾಯ ವೇಗೇನ ಪೂರ್ವಕರ್ಮಪ್ರಚೋದಿತಃ ।
ತಸ್ಮೈ ಸಂದರ್ಶಯಾಮಾಸ ರಾಜಪುತ್ರಾಯ ಧೀಮತೇ ॥ ೧೫ ॥
ಪಶ್ಯೇದಂ ರುಚಿರಂ ಲಿಂಗಂ ಮಯಾ ದೃಷ್ಟಮಿಹ ಪ್ರಭೋ ।
ತದೇತತ್ಪೂಜಯಿಷ್ಯಾಮಿ ಯಥಾವಿಭವಮಾದರಾತ್ ॥ ೧೬ ॥
ಅಸ್ಯ ಪೂಜಾವಿಧಿಂ ಬ್ರೂಹಿ ಯಥಾ ದೇವೋ ಮಹೇಶ್ವರಃ ।
ಅಮಂತ್ರಜ್ಞೈಶ್ಚ ಮಂತ್ರಜ್ಞೈಃ ಪ್ರೀತೋ ಭವತಿ ಪೂಜಿತಃ ॥ ೧೭ ॥
ಇತಿ ತೇನ ನಿಷಾದೇನ ಪೃಷ್ಟಃ ಪಾರ್ಥಿವನಂದನಃ ।
ಪ್ರತ್ಯುವಾಚ ಪ್ರಹಸ್ಯೈನಂ ಪರಿಹಾಸವಿಚಕ್ಷಣಃ ॥ ೧೮ ॥
ಸಂಕಲ್ಪೇನ ಸದಾ ಕುರ್ಯಾದಭಿಷೇಕಂ ನವಾಂಭಸಾ ।
ಉಪವೇಶ್ಯಾಸನೇ ಶುದ್ಧೇ ಶುಭ್ರೈರ್ಗಂಧಾಕ್ಷತೈರ್ನವೈಃ ।
ವನ್ಯೈಃ ಪತ್ರೈಶ್ಚ ಕುಸುಮೈರ್ಧೂಪೈರ್ದೀಪೈಶ್ಚ ಪೂಜಯೇತ್ ॥ ೧೯ ॥
ಚಿತಾಭಸ್ಮೋಪಹಾರಂ ಚ ಪ್ರಥಮಂ ಪರಿಕಲ್ಪಯೇತ್ ।
ಆತ್ಮೋಪಭೋಗ್ಯೇನಾಽನ್ನೇನ ನೈವೇದ್ಯಂ ಕಲ್ಪಯೇದ್ಬುಧಃ ॥ ೨೦ ॥

---

೧೪. ಅಲ್ಲಿ ನೆಲದಮೇಲೆ ಬಿದ್ದಿರುವ ಒಡೆದ ಪೀಠವನ್ನೂ, ಅದರಲ್ಲಿರುವ ದೇಹಗೊಂಡ ತನ್ನ ಅದೃಷ್ಟವೆಂಬಂತಿರುವ ಸಣ್ಣ ನೆಟ್ಟಗಿರುವ ಶಿವಲಿಂಗವನ್ನೂ ನೋಡಿದನು.

೧೫. ಹಿಂದಿನ ಕರ್ಮದಿಂದ ಪ್ರೇರಿತನಾದ ಅವನು ಬೇಗನೆ ತೆಗೆದು ಕೊಂಡು ಅದನ್ನು ಆ ರಾಜಕುಮಾರನಿಗೆ ತೋರಿಸಿದನು.

೧೬. ಸ್ವಾಮಿ! ನಾನಿಲ್ಲಿ ಕಂಡ ರಮ್ಯವಾದ ಶಿವಲಿಂಗವನ್ನು ನೋಡು. ನಾನಿದನ್ನು ನನ್ನ ಶಕ್ತ್ಯನುಸಾರ ಪ್ರೀತಿಯಿಂದ ಅರ್ಚಿಸುವೆನು.

೧೭. ಇದರ ಪೂಜೆಯ ಕ್ರಮವನ್ನು ಹೇಳು. ಮಹಾದೇವನು ಮಂತ್ರ ವನ್ನರಿತವರೂ, ಮಂತ್ರವನ್ನರಿಯದವರೂ ಪೂಜಿಸಿದರೂ ಸಂತುಷ್ಟನಾಗುವನು.

೧೮. ಹೀಗೆ ಆ ಬೇಡನು ಕೇಳಲು ಹಾಸ್ಯದಲ್ಲಿ ಚತುರನಾದ ಆ ರಾಜ ಕುಮಾರನು ನಕ್ಕು ಅವನನ್ನು ಕುರಿತು ಇಂತೆಂದನು.

೧೯. ಸಂಕಲ್ಪಮಾಡಿ ಶುದ್ಧಾಸನದಲ್ಲಿ ಲಿಂಗವನ್ನಿಟ್ಟು ಹೊಸ ನೀರಿನಿಂದ ಅಭಿಷೇಕಮಾಡಿ ಮನೋಹರವಾದ ಗಂಧ, ಅಕ್ಷತೆ, ಹೊಸಪತ್ರೆ, ಪುಷ್ಪ, ಧೂಪದೀಪಗಳಿಂದ ಪೂಜಿಸಬೇಕು.

೨೦. ಮೊದಲು ಚಿತೆಯ ಭಸ್ಮವನ್ನರ್ಪಿಸಿ ಅನಂತರ ತಾನು ತಿನ್ನಲು ಯೋಗ್ಯವಾದ ಅನ್ನವನ್ನು ನಿವೇದಿಸಬೇಕು.

CC-0. Jangamwadi Math Collection. Digitized by eGangotri

ಪುನಶ್ಚ ಧೂಪದೀಪಾದೀನುಪಚಾರಾನ್ಪ್ರಕಲ್ಪಯೇತ್ ।
ನೃತ್ಯವಾದಿತ್ರಗೀತಾದೀನ್ಯಥಾವತ್ಪರಿಕಲ್ಪಯೇತ್ ॥ ೨೧ ॥
ನಮಸ್ಕೃತ್ವಾ ತು ವಿಧಿವತ್ಪ್ರಸಾದಂ ಧಾರಯೇದ್ಬುಧಃ ।
ಏಷ ಸಾಧಾರಣಃ ಪ್ರೋಕ್ತಃ ಶಿವಪೂಜಾವಿಧಿಸ್ತವ ॥ ೨೨ ॥
ಚಿತಾಭಸ್ಮೋಪಹಾರೇಣ ಸದ್ಯಸ್ತುಷ್ಯತಿ ಶಂಕರಃ ॥ ೨೩ ॥

ಸೂತ ಉವಾಚ :—

ಪರಿಹಾಸರಸೇನೇತ್ಥಂ ಶಾಸಿತಃ ಸ್ವಾಮಿನಾಽಮುನಾ ।
ಸ ಚಂಡಕಾಖ್ಯಃ ಶಬರೋ ಮೂರ್ಧ್ನಾ ಜಗ್ರಾಹ ತದ್ವಚಃ ॥ ೨೪ ॥
ತತಃ ಸ್ವಭವನಂ ಪ್ರಾಪ್ಯ ಲಿಂಗಮೂರ್ತಿಂ ಮಹೇಶ್ವರಂ ।
ಪ್ರತ್ಯಹಂ ಪೂಜಯಾಮಾಸ ಚಿತಾಭಸ್ಮೋಪಹಾರಕೃತ್ ॥ ೨೫ ॥
ಯಚ್ಚಾತ್ಮನಃ ಪ್ರಿಯಂ ವಸ್ತು ಗಂಧಪುಷ್ಪಾಕ್ಷತಾದಿಕಂ ।
ನಿವೇದ್ಯ ಶಂಭವೇ ನಿತ್ಯಮುಪಾಯುಙ್ಕ್ತ ತತಃ ಸ್ವಯಂ ॥ ೨೬ ॥
ಏವಂ ಮಹೇಶ್ವರಂ ಭಕ್ತ್ಯಾ ಸಹ ಪತ್ನ್ಯಾಽಭ್ಯಪೂಜಯತ್ ।
ಶಬರಃ ಸುಖಮಾಸಾದ್ಯ ನಿನಾಯ ಕತಿಚಿತ್ಸಮಾಃ ॥ ೨೭ ॥
ಏಕದಾ ಶಿವಪೂಜಾಯೈ ಪ್ರವೃತ್ತಃ ಶಬರೋತ್ತಮಃ ।
ನ ದದರ್ಶ ಚಿತಾಭಸ್ಮ ಪಾತ್ರೇ ಪೂರಿತಮಣ್ವಪಿ ॥ ೨೮ ॥

---

೨೧. ತಿರುಗಿ ಧೂಪ, ದೀಪಾದಿಗಳನ್ನೂ, ನೃತ್ಯ, ವಾದ್ಯ, ಸಂಗೀತ ಮೊದಲಾದುವುಗಳನ್ನೂ ಕ್ರಮದಂತೆ ಸಮರ್ಪಿಸಬೇಕು.

೨೨. ಬಳಿಕ ವಿಧಿಯಂತೆ ನಮಸ್ಕರಿಸಿ ಪ್ರಸಾದವನ್ನು ಸ್ವೀಕರಿಸಬೇಕು. ಹೀಗೆ ಸಾಮಾನ್ಯವಾದ ಶಿವಪೂಜಾಕ್ರಮವನ್ನು ನಿನಗೆ ಹೇಳಿರುವೆನು.

೨೩. ಶಂಕರನು ಚಿತೆಯ ಭಸ್ಮವನ್ನರ್ಪಿಸುವುದರಿಂದ ಕೂಡಲೆ ಸಂತುಷ್ಟನಾಗುತ್ತಾನೆ.

೨೪. ಸೂತನು ಹೇಳುತ್ತಾನೆ:—ಸ್ವಾಮಿಯು ಹಾಸ್ಯದಿಂದ ಹೀಗೆ ಉಪದೇಶಿಸಲು ಆ ಚಂಡನೆಂಬ ಬೇಡನು ಅವನ ಮಾತನ್ನು ಶಿರಸಾವಹಿಸಿದನು.

೨೫. ಬಳಿಕ ಅವನು ತನ್ನ ಮನೆಯನ್ನು ಸೇರಿ ಅಲ್ಲಿ ಲಿಂಗಸ್ವರೂಪನಾದ ಶಿವನನ್ನು ಚಿತೆಯ ಭಸ್ಮವನ್ನೊಪ್ಪಿಸುತ್ತ ಅರ್ಚಿಸಿದನು.

೨೬. ಅವನು ನಿತ್ಯವೂ ತನಗೆ ಪ್ರಿಯವಾದ ಗಂಧ, ಪುಷ್ಪ, ಅಕ್ಷತಾದಿಗಳನ್ನು ಶಂಕರನಿಗೆ ಅರ್ಪಿಸಿ ಅನಂತರ ತಾನು ಅದನ್ನು ಉಪಯೋಗಿಸಿದನು.

೨೭. ಹೀಗೆ ಆ ಬೇಡನು ಭಾರ್ಯೆಯೊಡನೆ ಮಹೇಶ್ವರನನ್ನು ಭಕ್ತಿಯಿಂದಾರಾಧಿಸಿ ಸುಖದಿಂದ ಕೆಲವು ವರ್ಷಗಳನ್ನು ಕಳೆದನು.

೨೮. ಒಂದಾನೊಂದುವೇಳೆ ಶಿವಪೂಜೆಯಲ್ಲಿ ತೊಡಗಿದ ಆ ಶಬರಶ್ರೇಷ್ಠನು ಪಾತ್ರೆಯಲ್ಲಿ ಸ್ವಲ್ಪ ಚಿತೆಯ ಬೂದಿಯನ್ನೂ ನೋಡಲಿಲ್ಲ.

CC-0. Jangamwadi Math Collection. Digitized by eGangotri

ಅಥಾಽಸೌ ತ್ವರಿತೋ ದೂರಮನ್ವಿಷ್ಯನ್ಪರಿತೋ ಭ್ರಮನ್ ।
ನ ಲಬ್ಧವಾಂಶ್ಚಿತಾಭಸ್ಮ ಶ್ರಾಂತೋ ಗೃಹಮಗಾತ್ಪುನಃ ॥ ೨೯ ॥
ತತ ಆಹೂಯ ಪತ್ನೀಂ ಸ್ವಾಂ ಶಬರೋ ವಾಕ್ಯಮಬ್ರವೀತ್ ।
ನ ಲಬ್ಧಂ ಮೇ ಚಿತಾಭಸ್ಮ ಕಿಂ ಕರೋಮಿ ವದ ಪ್ರಿಯೇ ॥ ೩೦ ॥
ಶಿವಪೂಜಾಽಂತರಾಯೋ ಮೇ ಜಾತೋಽದ್ಯ ಬತ ಪಾಪ್ಮನಃ ।
ಪೂಜಾಂ ವಿನಾ ಕ್ಷಣಮಪಿ ನಾಽಹಂ ಜೀವಿತುಮುತ್ಸಹೇ ॥ ೩೧ ॥
ಉಪಾಯಂ ನಾಽತ್ರ ಪಶ್ಯಾಮಿ ಪೂಜೋಪಕರಣೇ ಹತೇ ।
ಸ ಗುರೋಶ್ಚ ವಿಹನ್ಯೇತ ಶಾಸನಂ ಸಕಲಾರ್ಥದಂ ॥ ೩೨ ॥
ಇತಿ ವ್ಯಾಕುಲಿತಂ ದೃಷ್ಟ್ವಾ ಭರ್ತಾರಂ ಶಬರಾಂಗನಾ ।
ಪ್ರತ್ಯಭಾಷತ ಮಾಭೈಸ್ತ್ವಮುಪಾಯಂ ಪ್ರವದಾಮಿ ತೇ ॥ ೩೩ ॥
ಇದಮೇವ ಗೃಹಂ ದಗ್ಧ್ವಾ ಬಹುಕಾಲೋಪಬೃಂಹಿತಂ ।
ಅಹಮಗ್ನಿಂ ಪ್ರವೇಕ್ಷ್ಯಾಮಿ ಚಿತಾಭಸ್ಮ ಭವೇತ್ತತಃ ॥ ೩೪ ॥

ಶಬರ ಉವಾಚ :—

ಧರ್ಮಾರ್ಥಕಾಮಮೋಕ್ಷಾಣಾಂ ದೇಹಃ ಪರಮಸಾಧನಂ ।
ಕಥಂ ತ್ಯಜಸಿ ತಂ ದೇಹಂ ಸುಖಾರ್ಥಂ ನವಯೌವನಂ ॥ ೩೫ ॥

---

೨೯. ಆಮೇಲೆ ಇವನು ಬೇಗನೆ ದೂರದಲ್ಲಿ ಸುತ್ತಲೂ ಹುಡುಕುತ್ತ ಚಿತೆಯ ಬೂದಿಯನ್ನು ಪಡೆಯದೆ ಬಳಲಿ ಮರಳಿ ಮನೆಗೆ ಬಂದನು.

೩೦. ಅನಂತರ ಶಬರನು ತನ್ನ ಹೆಂಡತಿಯನ್ನು ಕರೆದು ಇಂತೆಂದನು. "ಪ್ರಿಯಳೆ, ಇಂದು ಚಿತೆಯ ಬೂದಿಯು ದೊರಕಲಿಲ್ಲ. ಏನುಮಾಡಲಿ.

೩೧. ಈ ದಿನ ಪಾಪಿಯಾದ ನನ್ನ ಶಿವಪೂಜೆಗೆ ವಿಘ್ನವುಂಟಾಯಿತು. ನಾನು ಪೂಜೆಮಾಡದೆ ಕ್ಷಣಕಾಲವೂ ಜೀವಿಸಲಿಚ್ಛಿಸುವುದಿಲ್ಲ.

೩೨. ಪೂಜಾಸಾಮಗ್ರಿಯು ಹಾಳಾಗಲು ಏನು ಮಾಡಬೇಕೆಂಬುದನ್ನು ನಾನರಿಯೆನು. ಸಮಸ್ತ ಇಷ್ಟಾರ್ಥವನ್ನೀಯುವ ಗುರುವಿನ ಉಪದೇಶವು ಹಾಳಾಗಕೂಡದು."

೩೩. ಬೇಡರಸ್ತ್ರೀಯು ಹೀಗೆ ವ್ಯಾಕುಲಗೊಂಡ ತನ್ನ ಗಂಡನನ್ನು ಕಂಡು, "ನೀನು ಹೆದರಬೇಡ. ನಿನಗೆ ಒಂದುಪಾಯವನ್ನು ಹೇಳುವೆನು.

೩೪. ಬಹಳಕಾಲದಿಂದ ಬಾಳಿಬಂದ ಈ ಮನೆಯನ್ನೇ ಸುಡು. ನಾನು ಅಗ್ನಿಯನ್ನು ಪ್ರವೇಶಿಸುವೆನು. ಆಗ ಚಿತೆಯ ಭಸ್ಮವಾಗುವುದು" ಎಂದಳು.

೩೫. ಶಬರನು ಹೇಳುತ್ತಾನೆ:—ಪ್ರಿಯಳೆ! ಈ ದೇಹವೇ ಧರ್ಮ, ಅರ್ಥ, ಕಾಮ, ಮೋಕ್ಷಗಳಿಗೆ ಅತ್ಯಂತಸಾಧನವಾದುದು. ಅಂತಹ ಸುಖಸಾಧನವಾದ ಹೊಸ ಯೌವನವುಳ್ಳ ಆ ದೇಹವನ್ನು ಹೇಗೆ ಬಿಡುವೆ?

CC-0. Jangamwadi Math Collection. Digitized by eGangotri

ಅಧುನಾ ತ್ವನಪತ್ಯಾ ತ್ವನುಭುಕ್ತವಿಷಯಾಸವಾ ।
ಭೋಗಯೋಗ್ಯಮಿಮಂ ದೇಹಂ ಕಥಂ ದಗ್ಧುಮಿಹೇಚ್ಛಸಿ ॥ ೩೬ ॥

ಶಬರ್ಯುವಾಚ :—

ಏತಾವದೇವ ಸಾಫಲ್ಯಂ ಜೀವಿತಸ್ಯ ಚ ಜನ್ಮನಃ ।
ಪರಾರ್ಥೇ ಯಸ್ತ್ಯಜೇತ್ಪ್ರಾಣಾಂಛಿವಾರ್ಥೇ ಕಿಮುತ ಸ್ವಯಂ ॥ ೩೭ ॥
ಕಿಂ ನು ತಪ್ತಂ ತಪೋ ಘೋರಂ ಕಿಂ ವಾ ದತ್ತಂ ಮಯಾ ಪುರಾ ।
ಕಿಂ ವಾಽರ್ಚನಂ ಕೃತಂ ಶಂಭೋಃ ಪೂರ್ವಜನ್ಮಶತಾಂತರೇ ॥ ೩೮ ॥
ಕಿಂ ವಾ ಪುಣ್ಯಂ ಮಮ ಪಿತುಃ ಕಾ ವಾ ಮಾತುಃ ಕೃತಾರ್ಥತಾ ।
ಯಚ್ಛಿವಾರ್ಥೇ ಸಮಿದ್ಧೇಽಗ್ನೌ ತ್ಯಜಾಮ್ಯೇತತ್ಕಲೇವರಂ ॥ ೩೯ ॥
ಇತ್ಥಂ ಸ್ಥಿರಾಂ ಮತಿಂ ದೃಷ್ಟ್ವಾ ತಸ್ಯಾಭಕ್ತಿಂ ಚ ಶಂಕರೇ ।
ತಥೇತಿ ದೃಢಸಂಕಲ್ಪಃ ಶಬರಃ ಪ್ರತ್ಯಪೂಜಯತ್ ॥ ೪೦ ॥
ಸಾ ಭರ್ತಾರಮನುಪ್ರಾಪ್ಯ ಸ್ನಾತ್ವಾ ಶುಚಿರಲಂಕೃತಾ ।
ಗೃಹಮಾದೀಪ್ಯ ತಂ ವಹ್ನಿಂ ಭಕ್ತ್ಯಾ ಚಕ್ರೇ ಪ್ರದಕ್ಷಿಣಂ ॥ ೪೧ ॥
ನಮಸ್ಕೃತ್ವಾತ್ಮಗುರವೇ ಧ್ಯಾತ್ವಾ ಹೃದಿ ಸದಾಶಿವಂ ।
ಅಗ್ನಿಪ್ರವೇಶಾಭಿಮುಖೀ ಕೃತಾಂಜಲಿರಿದಂ ಜಗೌ ॥ ೪೨ ॥

---

೩೬. ಈಗ ಮಕ್ಕಳಿಲ್ಲದ, ವಿಷಯಸುಖಗಳನ್ನನುಭವಿಸದಿರುವ ನೀನು ಸುಖಾನುಭವಯೋಗ್ಯವಾದ ಆ ದೇಹವನ್ನು ಹೇಗೆ ಸುಡಲು ಬಯಸುವೆ?

೩೭. ಬೇಡರಸ್ತ್ರೀಯು ಹೇಳುತ್ತಾಳೆ:—ಯಾವನು ಪರರಿಗಾಗಿ ಪ್ರಾಣಗಳನ್ನು ಬಿಡುವನೊ, ಅವನ ಜೀವನವೂ, ಜನ್ಮವೂ ಸಫಲವಾದುವುಗಳು. ಶಿವನ ವಿಷಯದಲ್ಲಿ ಇನ್ನೇನು ಹೇಳಲಿ?

೩೮–೩೯. ಹಿಂದಿನ ಅನೇಕ ಜನ್ಮಗಳಲ್ಲಿ ನಾನು ಎಂತಹ ಘೋರ ತಪಸ್ಸನ್ನು ಮಾಡಿರುವೆನೊ? ಅಥವಾ ಏನನ್ನು ದಾನಮಾಡಿರುವೆನೊ? ಅಥವಾ ಶಿವನನ್ನು ಪೂಜಿಸಿರುವೆನೊ? ಅಥವಾ ನನ್ನ ತಂದೆಯ ಪುಣ್ಯವೊ? ತಾಯಿಯ ಧನ್ಯತೆಯೊ? ಯಾವುದರ ಬಲದಿಂದ ನನಗೆ ಶಿವನಿಗಾಗಿ ಜ್ವಲಿಸುವ ಅಗ್ನಿಯಲ್ಲಿ ಈ ದೇಹವನ್ನು ತ್ಯಜಿಸುವ ಸುಯೋಗವು ಲಭಿಸಿತು?

೪೦–೪೧. ಹೀಗೆ ಅವಳ ದೃಢಮನಸ್ಸನ್ನೂ, ಶಿವನಲ್ಲಿರುವ ಭಕ್ತಿಯನ್ನೂ ಕಂಡು ಆ ಬೇಡನು ಹಾಗೆಯೇ ಆಗಲೆಂದು ಸ್ಥಿರಸಂಕಲ್ಪವುಳ್ಳವನಾಗಿ ಶಿವನನ್ನಾರಾಧಿಸಿದನು. ಅವಳು ಪತಿಯ ಬಳಿಗೈದಿಬಂದು ಸ್ನಾನಮಾಡಿ ಶುದ್ಧಳಾಗಿ ಅಲಂಕಾರಮಾಡಿಕೊಂಡು ಮನೆಗೆ ಬೆಂಕಿಯನ್ನು ಹಚ್ಚಿ ಆ ಬೆಂಕಿಗೆ ಪ್ರದಕ್ಷಿಣೆ ಮಾಡಿದಳು.

೪೨. ಅವಳು ತನ್ನ ಗುರುವಿಗೆ ನಮಸ್ಕಾರಮಾಡಿ ಮನಸ್ಸಿನಲ್ಲಿ ಶಿವನನ್ನು

CC-0. Jangamwadi Math Collection. Digitized by eGangotri

ಶಬರ್ಯುವಾಚ :—

ಪುಷ್ಪಾಣಿ ಸಂತು ತವ ದೇವ ಮಮೇಂದ್ರಿಯಾಣಿ
ಧೂಪೋಽಗುರುರ್ವಪುರಿದಂ ಹೃದಯಂ ಪ್ರದೀಪಃ ।
ಪ್ರಾಣಾ ಹವೀಂಷಿ ಕರಣಾನಿ ತವಾಕ್ಷತಾಶ್ಚ
ಪೂಜಾಫಲಂ ವ್ರಜತು ಸಾಂಪ್ರತಮೇಷ ಜೀವಃ ॥ ೪೩ ॥
ವಾಂಛಾಮಿ ನಾಽಹಮಪಿ ಸರ್ವಧನಾಧಿಪತ್ಯಂ
ನ ಸ್ವರ್ಗಭೂಮಿಮಚಲಾಂ ನ ಪದಂ ವಿಧಾತುಃ ।
ಭೂಯೋ ಭವಾಮಿ ಯದಿ ಜನ್ಮನಿ ಜನ್ಮನಿ ಸ್ಯಾಂ
ತ್ವತ್ಪಾದಪಂಕಜಲಸನ್ಮಕರಂದಭೃಂಗೀ ॥ ೪೪ ॥
ಜನ್ಮಾನಿ ಸಂತು ಮಮ ದೇವ ಶತಾಧಿಕಾನಿ
ಮಾಯಾ ನ ಮೇ ವಿಶತು ಚಿತ್ತಮಬೋಧಹೇತುಃ ।
ಕಿಂಚಿತ್ಕ್ಷಣಾರ್ಧಮಪಿ ತೇ ಚರಣಾರವಿಂದಾ
ನ್ನಾಽಪೈತು ಮೇ ಹೃದಯಮೀಶ ನಮೋ ನಮಸ್ತೇ ॥ ೪೫ ॥
ಇತಿ ಪ್ರಸಾದ್ಯ ದೇವೇಶಂ ಶಬರೀ ದೃಢನಿಶ್ಚಯಾ ।
ವಿವೇಶ ಜ್ವಲಿತಂ ವಹ್ನಿಂ ಭಸ್ಮಸಾದಭವತ್ಕ್ಷಣಾತ್ ॥ ೪೬ ॥

---

ಧ್ಯಾನಿಸಿ ಅಗ್ನಿಯನ್ನು ಪ್ರವೇಶಿಸಲು ಉದ್ಯುಕ್ತಳಾಗಿ ಕೈಮುಗಿದುಕೊಂಡು ಹೀಗೆ ಸ್ತುತಿಸಿದಳು.

೪೩. ಬೇಡರಸ್ತ್ರೀಯು ಹೇಳುತ್ತಾಳೆ:—"ಸ್ವಾಮಿ! ನನ್ನ ಇಂದ್ರಿಯಗಳೇ ನಿನಗೆ ಹೂವುಗಳಾಗಲಿ. ಈ ದೇಹವು ಅಗುರುಧೂಪವಾಗಲಿ. ಹೃದಯವು ದೀಪವಾಗಲಿ. ಪ್ರಾಣವು ಹವಿಸ್ಸಾಗಲಿ. ಕೈಕಾಲುಗಳು ಅಕ್ಷತೆಗಳಾಗಲಿ. ಈ ಜೀವವು ಈಗ ಪೂಜೆಯ ಫಲವನ್ನು ಹೊಂದಲಿ.

೪೪. ನಾನು ಸಕಲೈಶ್ವರ್ಯದ ಒಡೆತನವನ್ನೂ, ಸ್ಥಿರವಾದ ಸ್ವರ್ಗವನ್ನೂ, ಬ್ರಹ್ಮನ ಸ್ಥಾನವನ್ನೂ ಬಯಸುವುದಿಲ್ಲ. ಮರಳಿ ಹುಟ್ಟಿದರೆ ಜನ್ಮಜನ್ಮದಲ್ಲಿಯೂ ನಿನ್ನ ಪಾದಕಮಲದ ಮಕರಂದವನ್ನು ಹೀರುವ ದುಂಬಿಯಾಗುವಂತೆ ಅನುಗ್ರಹಿಸು.

೪೫. ಸ್ವಾಮಿ! ನನಗೆ ನೂರಾರು ಜನ್ಮಗಳಾಗಲಿ. ಆದರೆ ಅಜ್ಞಾನಕ್ಕೆ ಕಾರಣವಾದ ಮಾಯೆಯು ನನ್ನ ಮನಸ್ಸನ್ನು ಆವರಿಸದಿರಲಿ. ಈಶ್ವರ! ನಿನಗೆ ನಮಸ್ಕಾರವು. ಅರ್ಧಕ್ಷಣಕಾಲವೂ ನನ್ನ ಮನಸ್ಸು ನಿನ್ನ ಪಾದಾರವಿಂದದಿಂದ ದೂರವಾಗದಿರಲಿ."

೪೬. ದೃಢನಿಶ್ಚಯವುಳ್ಳ ಆ ಬೇಡರ ಹೆಂಗಸು ಹೀಗೆ ಶಿವನನ್ನು ಸಂತೋಷಗೊಳಿಸಿ ಉರಿಯುತ್ತಿರುವ ಬೆಂಕಿಯನ್ನು ಪ್ರವೇಶಿಸಿ ಸ್ವಲ್ಪಹೊತ್ತಿನಲ್ಲಿಯೇ ಬೂದಿಯಾದಳು.

CC-0. Jangamwadi Math Collection. Digitized by eGangotri

ಶಬರೋಽಪಿ ಚ ತದ್ಭಸ್ಮ ಯತ್ನೇನ ಪರಿಗೃಹ್ಯ ಸಃ ।
ಚಕ್ರೇ ದಗ್ಧಗೃಹೋಪಾಂತೇ ಶಿವಪೂಜಾಂ ಸಮಾಹಿತಃ ॥ ೪೭ ॥
ಅಥ ಸಸ್ಮಾರ ಪೂಜಾಂತೇ ಪ್ರಸಾದಗ್ರಹಣೋಚಿತಾಂ ।
ದಯಿತಾಂ ನಿತ್ಯಮಾಯಾಂತೀಂ ಪ್ರಾಂಜಲಿಂ ವಿನಯಾನ್ವಿತಾಂ ॥ ೪೮ ॥
ಸ್ಮೃತಮಾತ್ರಾಂ ತದಾಽಪಶ್ಯದಾಗತಾಂ ಪೃಷ್ಠತಃ ಸ್ಥಿತಾಂ ।
ಪೂರ್ವೇಣಾಽವಯವೇನೈವ ಭಕ್ತಿನಮ್ರಾಂ ಶುಚಿಸ್ಮಿತಾಂ ॥ ೪೯ ॥
ತಾಂ ವೀಕ್ಷ್ಯ ಶಬರಃ ಪತ್ನೀಂ ಪೂರ್ವವತ್ಪ್ರಾಂಜಲಿಂ ಸ್ಥಿತಾಂ ।
ಭಸ್ಮಾಽವಶೇಷಿತಗೃಹಂ ಯಥಾ ಪೂರ್ವಮುಪಸ್ಥಿತಂ ॥ ೫೦ ॥
ಅಗ್ನಿರ್ದಹತಿ ತೇಜೋಭಿಃ ಸೂರ್ಯೋ ದಹತಿ ರಶ್ಮಿಭಿಃ ।
ರಾಜಾ ದಹತಿ ದಂಡೇನ ಬ್ರಾಹ್ಮಣೋ ಮನಸಾ ದಹೇತ್ ॥ ೫೧ ॥
ಕಿಮಯಂ ಸ್ವಪ್ನ ಆಹೋಸ್ವಿತ್ಕಿಂ ವಾ ಮಾಯಾ ಭ್ರಮಾತ್ಮಿಕಾ ।
ಇತಿ ವಿಸ್ಮಯಸಂಭ್ರಾಂತಸ್ತಾಂ ಭೂಯಃ ಪರ್ಯಪೃಚ್ಛತ ॥ ೫೨ ॥
ಅಪಿ ತ್ವಂ ಚ ಕಥಂ ಪ್ರಾಪ್ತಾ ಭಸ್ಮಭೂತಾಽಸಿ ಪಾವಕೇ ।
ದಗ್ಧಂ ಚ ಭವನಂ ಭೂಯಃ ಕಥಂ ಪೂರ್ವವದಾಸ್ಥಿತಂ ॥ ೫೩ ॥

---

೪೭. ಆ ಶಬರನೂ ಪ್ರಯತ್ನದಿಂದ ಅವಳ ಭಸ್ಮವನ್ನು ತೆಗೆದುಕೊಂಡು ಸುಟ್ಟ ಮನೆಯ ಹತ್ತಿರ ಚಿತ್ತೈಕಾಗ್ರ್ಯದಿಂದ ಶಿವಪೂಜೆಯನ್ನು ಮಾಡಿದನು.

೪೮. ಬಳಿಕ ಪೂಜೆಯ ಕೊನೆಯಲ್ಲಿ ಪ್ರಸಾದವನ್ನು ಸ್ವೀಕರಿಸಲು ಯೋಗ್ಯಳಾದ, ವಿನಯದಿಂದ ಕೈಮುಗಿದುಕೊಂಡು ನಿತ್ಯವೂ ಬರುತ್ತಿದ್ದ ಪ್ರಿಯಳನ್ನು ಸ್ಮರಿಸಿದನು.

೪೯. ಸ್ಮರಿಸಿದಕೂಡಲೆ ಪೂರ್ವದ ಅವಯವಗಳಿಂದಲೇ ಸಹಿತಳಾದ ಹಿಂದೆ ಬಂದು ನಿಂತ ಭಕ್ತಿಯಿಂದ ನಮ್ರಳಾಗಿ ನಗುತ್ತಿರುವ ಆ ಪ್ರಿಯಳನ್ನು ಕಂಡನು.

೫೦–೫೧. ಬೇಡನು ಹಿಂದಿನಂತೆ ಕೈಮುಗಿದುಕೊಂಡು ನಿಂತಿರುವ ಪತ್ನಿಯನ್ನೂ, ಸುಟ್ಟರೂ ಮೊದಲಿನಂತೆಯೇ ಇರುವ ಮನೆಯನ್ನೂ ಕಂಡು "ಬೆಂಕಿಯು ತೇಜಸ್ಸಿನಿಂದಲೂ, ಸೂರ್ಯನು ಕಾಂತಿಗಳಿಂದಲೂ, ರಾಜನು ಶಿಕ್ಷೆಯಿಂದಲೂ, ಬ್ರಾಹ್ಮಣನು ಮನಸ್ಸಿನಿಂದಲೂ ಸುಡುತ್ತಾನೆ.

೫೨. ಇದು ಸ್ವಪ್ನವೊ; ಅಥವಾ ಭ್ರಮರೂಪವಾದ ಮಾಯೆಯೊ?" ಎಂದು ಆಶ್ಚರ್ಯಗೊಂಡವನಾಗಿ ಅವಳನ್ನು ತಿರುಗಿ ಕೇಳಿದನು.

೫೩. "ಪ್ರಿಯಳೆ! ಬೆಂಕಿಯಲ್ಲಿ ಬೂದಿಯಾದ ನೀನು ಹೇಗೆ ಹಿಂತಿರುಗಿ ಬಂದೆ? ಸುಟ್ಟ ಮನೆಯು ಮರಳಿ ಮೊದಲಿನಂತೆ ಹೇಗಾಯಿತು?"

CC-0. Jangamwadi Math Collection. Digitized by eGangotri

ಶಬರ್ಯುವಾಚ :—

ಯದಾ ಗೃಹಂ ಸಮುದ್ದೀಪ್ಯ ಪ್ರವಿಷ್ಟಾಽಹಂ ಹುತಾಶನೇ ।
ತದಾತ್ಮಾನಂ ನ ಜಾನಾಮಿ ನ ಪಶ್ಯಾಮಿ ಹುತಾಶನಂ ॥ ೫೪ ॥
ನ ತಾಪಲೇಶೋಽಪ್ಯಾಸೀನ್ಮೇ ಪ್ರವಿಷ್ಟಾಯಾ ಇವೋದಕಂ ।
ಸುಷುಪ್ತೇವ ಕ್ಷಣಾರ್ಧೇನ ಪ್ರಬುದ್ಧಾಸ್ಮಿ ಪುನಃ ಕ್ಷಣಾತ್ ॥ ೫೫ ॥
ತಾವದ್ಭವನಮುದ್ರಾಕ್ಷಮದಗ್ಧಮಿವ ಸುಸ್ಥಿತಂ ।
ಅಧುನಾ ದೇವಪೂಜಾಂತೇ ಪ್ರಸಾದಂ ಲಬ್ಧುಮಾಗತಾ ॥ ೫೬ ॥
ಏವಂ ಪರಸ್ಪರಂ ಪ್ರೇಮ್ಣಾ ದಂಪತ್ಯೋರ್ಭಾಷಮಾಣಯೋಃ ।
ಪ್ರಾದುರಾಸೀತ್ತಯೋರಗ್ರೇ ವಿಮಾನಂ ದಿವ್ಯಮದ್ಭುತಂ ॥ ೫೭ ॥
ತಸ್ಮಿನ್ನಿಮಾನೇ ಶತಚಂದ್ರಭಾಸ್ವರೇ
ಚತ್ವಾರ ಈಶಾನುಚರಾಃ ಪುರಃಸರಾಃ ।
ಹಸ್ತೇ ಗೃಹೀತ್ವಾಥ ನಿಷಾದದಂಪತೀ
ಆರೋಪಯಾಮಾಸುರಮುಕ್ತವಿಗ್ರಹೌ ॥ ೫೮ ॥
ತಯೋರ್ನಿಷಾದದಂಪತ್ಯೋಸ್ತತ್ಕ್ಷಣಾದೇವ ತದ್ವಪುಃ ।
ಶಿವದೂತಕರಸ್ಪರ್ಶಾತ್ತತ್ಸಾರೂಪ್ಯಮವಾಪ ಹ ॥ ೫೯ ॥
ತಸ್ಮಾಚ್ಛ್ರದ್ಧೈವ ಸರ್ವೇಷು ವಿಧೇಯಾ ಪುಣ್ಯಕರ್ಮಸು ।
ನೀಚೋಽಪಿ ಶಬರಃ ಪ್ರಾಪ ಶ್ರದ್ಧಯಾ ಯೋಗಿನಾಂ ಗತಿಂ ॥ ೬೦ ॥

---

೫೪—೫೫. ಬೇಡರಸ್ತ್ರೀಯು ಹೇಳುತ್ತಾಳೆ:—"ನಾನು ಮನೆಗೆ ಬೆಂಕಿ ಹಚ್ಚಿ ಆ ಅಗ್ನಿಯನ್ನು ಪ್ರವೇಶಿಸಿದ ಮೇಲೆ ನಾನೇನಾದೆನು? ಅಗ್ನಿಯೇನಾಯ್ತು? ಎಂಬುದನ್ನು ಅರಿಯೆನು. ನೀರನ್ನು ಪ್ರವೇಶಿಸಿದಂತೆ ನನಗೆ ಸ್ವಲ್ಪವೂ ತಾಪ ವುಂಟಾಗಲಿಲ್ಲ. ನಿದ್ರೆಮಾಡಿದವಳಂತೆ ಸ್ವಲ್ಪ ಹೊತ್ತಿನಲ್ಲಿಯೆ ಎಚ್ಚರಗೊಂಡೆನು.

೫೬. ಅಷ್ಟರಲ್ಲಿ ಸುಡದಂತಿರುವ ಈ ಮನೆಯನ್ನು ನೋಡಿದೆನು. ಈಗ ದೇವಪೂಜೆಯ ಕೊನೆಯಲ್ಲಿ ಪ್ರಸಾದವನ್ನು ತೆಗೆದುಕೊಳ್ಳಲು ಇಲ್ಲಿ ಬಂದೆನು."

೫೭. ಹೀಗೆ ಆ ದಂಪತಿಗಳು ಪ್ರೀತಿಯಿಂದ ಮಾತಾಡುತ್ತಿರಲು ಅವರ ಮುಂದೆ ಅದ್ಭುತವಾದ ದಿವ್ಯ ವಿಮಾನವು ಬಂದಿತು.

೫೮. ಅನೇಕ ಚಂದ್ರರಂತೆ ಪ್ರಕಾಶಮಾನವಾದ ಆ ವಿಮಾನದಲ್ಲಿ ನಾಲ್ಕು ಜನ ಶಿವಕಿಂಕರರು ಆ ಶಬರ ದಂಪತಿಗಳನ್ನು ಕೈಹಿಡಿದುಕೊಂಡು ದೇಹಸಹಿತ ವಾಗಿ ಹತ್ತಿಸಿದರು.

೫೯. ಶಿವದೂತರ ಹಸ್ತಸ್ಪರ್ಶದಿಂದ ಆ ಬೇಡದಂಪತಿಗಳ ದೇಹಗಳು ಶಿವದೂತರ ದೇಹಗಳಂತಾದುವು.

೬೦. ಹೀಗೆ ನೀಚನಾದ ಬೇಡನೂ ಶ್ರದ್ಧೆಯಿಂದ ಯೋಗಿಗಳ ಗತಿಯನ್ನು ಪಡೆದುದರಿಂದ ಸರ್ವಪುಣ್ಯಕರ್ಮಗಳಲ್ಲಿಯೂ ಶ್ರದ್ಧೆಯನ್ನಿಡಬೇಕು.

CC-0. Jangamwadi Math Collection. Digitized by eGangotri

ಕಿಂ ಜನ್ಮನಾ ಸಕಲವರ್ಣಜನೋತ್ತಮೇನ
ಕಿಂ ವಿದ್ಯಯಾ ಸಕಲಶಾಸ್ತ್ರವಿಚಾರವತ್ಯಾ ।
ಯಸ್ಯಾಽಸ್ತಿ ಚೇತಸಿ ಸದಾ ಪರಮೇಶಭಕ್ತಿಃ
ಕೋಽನ್ಯಸ್ತತಸ್ತ್ರಿಭುವನೇ ಪುರುಷೋಽಸ್ತಿ ಧನ್ಯಃ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಭಸ್ಮಮಾಹಾತ್ಮ್ಯ ವರ್ಣನಂ"ನಾಮ ಸಪ್ತದಶೋಽಧ್ಯಾಯಃ

---

೬೧. ಸಕಲ ಜಾತಿಗಳಲ್ಲಿಯೂ ಉತ್ತಮ ಜಾತಿಯಲ್ಲಿ ಜನಿಸಿದುದರಿಂದ ಏನುಪ್ರಯೋಜನ? ಸಕಲ ಶಾಸ್ತ್ರವಿಚಾರವನ್ನು ತಿಳಿಸುವ ವಿದ್ಯೆಯಿಂದೇನು ಉಪಯೋಗ? ಯಾವನ ಮನಸ್ಸಿನಲ್ಲಿ ಯಾವಾಗಲೂ ಶಿವಭಕ್ತಿಯಿರುವುದೊ, ಮೂರು ಲೋಕಗಳಲ್ಲಿಯೂ ಅವನಿಗಿಂತ ಪುಣ್ಯವಂತನಾರು?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಭಸ್ಮಮಾಹಾತ್ಮ್ಯವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥಾಽಷ್ಟಾದಶೋಽಧ್ಯಾಯಃ

### ಉಮಾಮಹೇಶ್ವರವ್ರತಾಚರಣಂ

ಸೂತ ಉವಾಚ:—

ಅಥಾಽಹಂ ಸಂಪ್ರವಕ್ಷ್ಯಾಮಿ ಸರ್ವಧರ್ಮೋತ್ತಮೋತ್ತಮಂ ।
ಉಮಾಮಹೇಶ್ವರಂ ನಾಮ ವ್ರತಂ ಸರ್ವಾರ್ಥಸಿದ್ಧಿದಂ ॥ ೧ ॥
ಆನರ್ತಸಂಭವಃ ಕಶ್ಚಿನ್ನಾಮ್ನಾ ವೇದರಥೋ ದ್ವಿಜಃ ।
ಕಲತ್ರಪುತ್ರಸಂಪನ್ನೋ ವಿದ್ವಾನುತ್ತಮವಂಶಜಃ ॥ ೨ ॥
ತಸ್ಯೈವಂ ವರ್ತಮಾನಸ್ಯ ಬ್ರಾಹ್ಮಣಸ್ಯ ಗೃಹಾಶ್ರಮೇ ।
ಬಭೂವ ಶಾರದಾ ನಾಮ ಕನ್ಯಾ ಕಮಲಲೋಚನಾ ॥ ೩ ॥
ತಾಂ ರೂಪಲಕ್ಷಣೋಪೇತಾಂ ಬಾಲಾಂ ದ್ವಾದಶಹಾಯನಾಂ ।
ಯಯಾಚೇ ಪದ್ಮನಾಭಾಖ್ಯೋ ಮೃತದಾರಶ್ಚ ಸದ್ದ್ವಿಜಃ ॥ ೪ ॥
ಮಹಾಧನಸ್ಯ ಶಾಂತಸ್ಯ ಸದಾ ರಾಜಸಖಸ್ಯ ಚ ।
ಯಾಚ್ಞಾಭಂಗಭಯಾತ್ತಸ್ಯ ತಾಂ ಕನ್ಯಾಂ ಪ್ರದದೌ ಪಿತಾ ॥ ೫ ॥

---

### ಕನ್ನಡದ ಅನುವಾದ

#### ಉಮಾಮಹೇಶ್ವರವ್ರತಾಚರಣ

೧. ಸೂತನು ಹೇಳುತ್ತಾನೆ:—ತರುವಾಯ ನಾನು ಸರ್ವ ಧರ್ಮಗಳಲ್ಲಿ ಉತ್ತಮವಾದ ಸಕಲೇಷ್ಟಾರ್ಥಗಳನ್ನೀಯುವ ಉಮಾಮಹೇಶ್ವರ ವ್ರತವನ್ನು ಹೇಳುವೆನು.

೨. ಆನರ್ತದೇಶದವನೂ, ಹೆಂಡತಿ ಮಕ್ಕಳುಳ್ಳವನೂ, ವಿದ್ವಾಂಸನೂ, ಉತ್ತಮ ವಂಶದಲ್ಲಿ ಹುಟ್ಟಿದವನೂ ಆದ ವೇದರಥನೆಂಬೊಬ್ಬ ಬ್ರಾಹ್ಮಣನಿದ್ದನು.

೩. ಗ್ರಹಸ್ಥನಾದ ಆ ಬ್ರಾಹ್ಮಣನಿಗೆ ಕಮಲದಂತೆ ಕಣ್ಣುಗಳುಳ್ಳ ಶಾರದೆಯೆಂಬ ಕನ್ಯೆಯೋರ್ವಳಿದ್ದಳು.

೪. ರೂಪಲಕ್ಷಣಗಳಿಂದ ಕಂಗೊಳಿಸುತ್ತಿರುವ ಹನ್ನೆರಡುವರ್ಷದ ಆ ಕನ್ಯೆಯನ್ನು ಹೆಂಡತಿ ಮೃತಳಾಗಿ ವಿಧುರನಾದ ಪದ್ಮನಾಭನೆಂಬೊಬ್ಬ ಬ್ರಾಹ್ಮಣನು ಯಾಚಿಸಿದನು.

೫. ಶಾರದೆಯ ತಂದೆಯು, ಹಣಗಾರನೂ, ಶಾಂತನೂ, ರಾಜನ ಮಿತ್ರನೂ ಆದ ಆ ಬ್ರಾಹ್ಮಣನ ಬೇಡಿಕೆಯನ್ನು ನಿರಾಕರಿಸಲಾರದ ಭಯದಿಂದ ಆ ಕನ್ಯೆಯನ್ನು ಮದುವೆಮಾಡಿಕೊಟ್ಟನು.

CC-0. Jangamwadi Math Collection. Digitized by eGangotri

ಮಧ್ಯಂದಿನೇ ಕೃತೋದ್ವಾಹಃ ಸ ವಿಪ್ರಃ ಶ್ವಶುರಾಲಯೇ ।
ಸಂಧ್ಯಾಮುಪಾಸಿತುಂ ಸಾಯಂ ಸರಸ್ತಟಮುಪಾಯಯೌ ॥ ೬ ॥
ಉಪಾಸ್ಯ ಸಂಧ್ಯಾಂ ವಿಧಿವತ್ಪ್ರತ್ಯಾಗಚ್ಛತ್ತಮೋವೃತೇ ।
ಮಾರ್ಗೇ ದಷ್ಟೋ ಭುಜಂಗೇನ ಮಮಾರ ನಿಜಕರ್ಮಣಾ ॥ ೭ ॥
ತಸ್ಮಿನ್ಮೃತೇ ಕೃತೋದ್ವಾಹೇ ಸಹಸಾ ತಸ್ಯ ಬಾಂಧವಾಃ ।
ಚುಕ್ರುಶುಃ ಶೋಕಸಂತಪ್ತಾ ಶ್ವಶುರಾವಸ್ಯ ಕನ್ಯಕಾ ॥ ೮ ॥
ನಿರ್ಹೃತ್ಯ ತಂ ಬಂಧುಜನಾ ಜಗ್ಮುಃ ಸ್ವಂ ಸ್ವಂ ನಿವೇಶನಂ ।
ಶಾರದಾ ಪ್ರಾಪ್ತವೈಧವ್ಯಾ ಪಿತುರೇವಾಲಯೇ ಸ್ಥಿತಾ ॥ ೯ ॥
ಭೂತಾಚ್ಛಾದನಭೋಜ್ಯೇನ ಭರ್ತ್ರಾ ವಿರಹಿತಾ ಸತೀ ।
ನಿನಾಯ ಕತಿಚಿನ್ಮಾಸಾನ್ಸಾ ಬಾಲಾ ಪಿತೃಮಂದಿರೇ ॥ ೧೦ ॥
ಏಕದಾ ನೈಧ್ರುವೋ ನಾಮ ಕಶ್ಚಿದ್ವೃದ್ಧತರೋ ಮುನಿಃ ।
ಅಂಧಃ ಶಿಷ್ಯಕರಗ್ರಾಹೀ ತನ್ಮಂದಿರಮುಪಾಯಯೌ ॥ ೧೧ ॥
ತಸ್ಮಿನ್ವೃದ್ಧೇ ಗೃಹಂ ಪ್ರಾಪ್ತೇ ಕ್ವಾಽಪಿ ಯಾತೇಷು ಬಂಧುಷು ।
ಸಾಕ್ಷಾದಿವಾತ್ಮನೋ ದೈವಂ ಸಾ ಬಾಲಾ ಸಮುಪಾಗಮತ್ ॥ ೧೨ ॥

---

೬. ಆ ಬ್ರಾಹ್ಮಣನು ಮಾವನ ಮನೆಯಲ್ಲಿ ಮಧ್ಯಾಹ್ನ ಮದುವೆಮಾಡಿಕೊಂಡು ಸಾಯಂಕಾಲ ಸಂಧ್ಯಾವಂದನೆಗಾಗಿ ಸರೋವರದ ದಡಕ್ಕೆ ಹೋದನು.

೭. ವಿಧಿಯಂತೆ ಸಂಧ್ಯಾವಂದನೆ ಮಾಡಿ ಕತ್ತಲೆ ಕವಿದಿರುವ ದಾರಿಯಲ್ಲಿ ಮನೆಗೆ ಬರುತ್ತ ತನ್ನ ಕರ್ಮವಶದಿಂದ ಸರ್ಪದಷ್ಟನಾಗಿ ಮಡಿದನು.

೮. ಮದುವೆಮಾಡಿಕೊಂಡ ಆ ದಿನವೆ ಆ ದ್ವಿಜನು ಮಡಿಯಲು ಅವನ ಬಂಧುಗಳೂ, ಅತ್ತೆಮಾವಂದಿರೂ, ಆ ಕನ್ಯೆಯೂ ಗೋಳಾಡಿದರು.

೯. ಬಂಧು ಜನರು ಅವನನ್ನು ಸಂಸ್ಕರಿಸಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ವೈಧವ್ಯವನ್ನು ಹೊಂದಿದ ಶಾರದೆಯು ತಂದೆಯ ಮನೆಯಲ್ಲಿಯೇ ಇದ್ದಳು.

೧೦. ಆ ಶಾರದೆಯು ತವರುಮನೆಯಲ್ಲಿ ಅನ್ನವಸ್ತ್ರಾದಿಗಳನ್ನನುಭವಿಸದೆ ಸಾಮಾನ್ಯವಾಗಿ ಕೆಲವು ತಿಂಗಳುಗಳನ್ನು ಕಳೆದಳು.

೧೧. ಒಂದಾನೊಂದು ದಿನ ಬಹಳ ಮುದುಕನಾದ ನೈಧ್ರುವನೆಂಬ ಕುರುಡನಾದ ಒಬ್ಬ ಮುನಿಯು ಶಿಷ್ಯನ ಕೈಯನ್ನು ಹಿಡಿದುಕೊಂಡು ಅವಳ ಮನೆಗೆ ಬಂದನು.

೧೨. ಆ ವೃದ್ಧಮುನಿಯು ಮನೆಗೆ ಬರಲು ಬಂಧುಗಳು ಎಲ್ಲಿಯೊ ಹೋಗಿರಲು ಶಾರದೆಯು ಪ್ರತ್ಯಕ್ಷವಾಗಿ ಬಂದಿರುವ ತನ್ನ ಇಷ್ಟದೇವತೆಯಂತಿರುವ ಅವನನ್ನು ಸಮೀಪಿಸಿದಳು.

CC-0. Jangamwadi Math Collection. Digitized by eGangotri

ಸ್ವಾಗತಂ ತೇ ಮಹಾಭಾಗ ಪೀಠೇಽಸ್ಮಿನ್ನುಪವಿಶ್ಯತಾಂ ।
ನಮಸ್ತೇ ಮುನಿನಾಥಾಯ ಪ್ರಿಯಂ ತೇ ಕರವಾಣಿ ಕಿಂ ॥ ೧೩ ॥
ಇತ್ಯುಕ್ತ್ವಾ ಭಕ್ತಿಮಾಸ್ಥಾಯ ಕೃತ್ವಾ ಪಾದಾಽವನೇಜನಂ ।
ವೀಜಯಿತ್ವಾ ಪರಿಶ್ರಾಂತಂ ತಂ ಮುನಿಂ ಪರ್ಯತೋಷಯತ್ ॥ ೧೪ ॥
ಶ್ರಾಂತಂ ಪೀಠೇ ಸಮಾವೇಶ್ಯ ಕೃತ್ವಾಽಭ್ಯಂಗಂ ಸ್ವಪಾಣಿನಾ ।
ಕೃತಸ್ನಾನಂ ಚ ವಿಧಿವತ್ಕೃತದೇವಾರ್ಚನಂ ಮುನಿಂ ॥ ೧೫ ॥
ಸುಖಾಸನೋಪವಿಷ್ಟಂ ತಂ ಧೂಪಮಾಲ್ಯಾಽನುಲೇಪನೈಃ ।
ಅರ್ಚಯಿತ್ವಾ ವರಾಽನ್ನೇನ ಭೋಜಯಾಮಾಸ ಸಾದರಂ ॥ ೧೬ ॥
ಭುಕ್ತ್ವಾ ಚ ಸಮ್ಯಕ್ಛನಕೈಸ್ತೃಪ್ತಶ್ಚಾನಂದನಿರ್ಭರಃ ।
ಚಕಾರಾಂಧಮುನಿಸ್ತಸ್ಯೈ ಸುಪ್ರೀತಃ ಪರಮಾಶಿಷಂ ॥ ೧೭ ॥
ವಿಹೃತ್ಯಭರ್ತ್ರಾ ಸಹಸಾ ಚ ತೇನ
ಲಬ್ಧ್ವಾ ಸುತಂ ಸರ್ವಗುಣೈರ್ವರಿಷ್ಠಂ ।
ಕೀರ್ತಿಂ ಚ ಲೋಕೇ ಮಹತೀಮವಾಪ್ಯ
ಪ್ರಸಾದಯೋಗ್ಯಾ ಭವ ದೇವತಾನಾಂ ॥ ೧೮ ॥
ಇತ್ಯಭಿವ್ಯಾಹೃತಂ ತೇನ ಮುನಿನಾ ಗತಚಕ್ಷುಷಾ ।
ನಿಶಮ್ಯ ವಿಸ್ಮಿತಾ ಬಾಲಾ ಪ್ರತ್ಯುವಾಚ ಕೃತಾಂಜಲಿಃ ॥ ೧೯ ॥

---

೧೩–೧೪. "ಭಾಗ್ಯವಂತನೆ! ನಿನಗೆ ಸುಖಾಗಮನವಾಗಲಿ. ಈ ಆಸನವನ್ನು ಅಲಂಕರಿಸು. ಮುನಿವರ್ಯ! ನಿನಗೆ ನಮಸ್ಕಾರವು. ನಿನಗೆ ಯಾವ ಹಿತವನ್ನುಂಟುಮಾಡಲಿ.'' ಭಕ್ತಿಯಿಂದ ಹೀಗೆಂದು ಆ ಮುನಿಯ ಕಾಲನ್ನು ತೊಳೆದು ಗಾಳಿಯನ್ನು ಬೀಸಿ ಬಳಲಿದ ಅವನನ್ನು ಸಂತೋಷಗೊಳಿಸಿದಳು.

೧೫–೧೬. ಅವನನ್ನು ಆಸನದಲ್ಲಿ ಕುಳ್ಳಿರಿಸಿ ತನ್ನ ಕೈಯಿಂದ ಅಭ್ಯಂಜನ ಮಾಡಿಸಿ ವಿಧಿಯಂತೆ ದೇವಪೂಜೆಯನ್ನು ಮಾಡಿ ಸುಖಾಸನದಲ್ಲಿ ಕುಳಿತಿರುವ ಅವನನ್ನು ಧೂಪಮಾಲ್ಯಾದಿಗಳಿಂದ ಅರ್ಚಿಸಿ ಉತ್ತಮಾನ್ನದಿಂದ ವಿಶ್ವಾಸ ಪೂರ್ವಕವಾಗಿ ಭೋಜನಮಾಡಿಸಿದಳು.

೧೭. ಮೆಲ್ಲಗೆ ಚೆನ್ನಾಗಿ ಊಟಮಾಡಿ ತೃಪ್ತಿಗೊಂಡ ಆ ಕುರುಡಮುನಿಯು ಸಂತೋಷದಿಂದ ಅವಳಿಗೆ ಉತ್ತಮಾಶೀರ್ವಾದವನ್ನು ಮಾಡಿದನು.

೧೮. "ಎಲೌ ನೀನು ಪತಿಯೊಡನೆ ವಿಹರಿಸಿ ಅವನಿಂದ ಸಕಲಗುಣಗಳುಳ್ಳ ಉತ್ತಮ ಸುತನನ್ನು ಪಡೆದು ಲೋಕದಲ್ಲಿ ಅತಿಶಯ ಕೀರ್ತಿಯನ್ನು ಹೊಂದಿ ದೇವತೆಗಳ ಅನುಗ್ರಹಕ್ಕೆ ಪಾತ್ರಳಾಗು.''

೧೯. ಅಂಧನಾದ ಆ ಮುನಿಯು ಹೀಗೆ ಆಶೀರ್ವದಿಸಿದುದನ್ನು ಕೇಳಿ ಆಶ್ಚರ್ಯಗೊಂಡ ಆ ಬಾಲೆಯು ಕೈಮುಗಿದುಕೊಂಡು ಇಂತೆಂದಳು.

CC-0. Jangamwadi Math Collection. Digitized by eGangotri

ಬ್ರಹ್ಮಂಸ್ತ್ವದ್ವಚನಂ ಸತ್ಯಂ ಕದಾಚಿನ್ನ ಮೃಷಾ ಭವೇತ್ ।
ತದೇತನ್ಮಂದಭಾಗ್ಯಾಯಾಃ ಕಥಮೇತತ್ಫಲಿಷ್ಯತಿ ॥ ೨೦ ॥
ಶಿಲಾಸ್ವಗ್ರ್ಯಾಮಿವ ಸದ್ವೃಷ್ಟಿಃ ಶುನಕ್ಯಾಮಿವ ಸತ್ಕ್ರಿಯಾ ।
ವಿಫಲಾ ಮಂದಭಾಗ್ಯಾಯಾಮಾಶೀರ್ಬ್ರಹ್ಮವಿದಾಮಪಿ ॥ ೨೧ ॥
ಸೈಷಾಽಹಂ ವಿಧವಾ ಬ್ರಹ್ಮನ್ದುಷ್ಕರ್ಮಫಲಭಾಗಿನೀ ।
ತ್ವದಾಶೀರ್ವಚನಸ್ಯಾಸ್ಯ ಕಥಂ ಯಾಸ್ಯಾಮಿ ಪಾತ್ರತಾಂ ॥ ೨೨ ॥

ಮುನಿರುವಾಚ :—

ತ್ವಾಮನಾಲಕ್ಷ್ಯ ಯತ್ಪ್ರೋಕ್ತಮಂಧೇನಾಽಪಿ ಮಯಾಽಧುನಾ ।
ತದೇತತ್ಸಾಧಯಿಷ್ಯಾಮಿ ಕುರು ಮಚ್ಛಾಸನಂ ಶುಭೇ ॥ ೨೩ ॥
ಉಮಾಮಹೇಶ್ವರಂ ನಾಮ ವ್ರತಂ ಯದಿ ಚರಿಷ್ಯಸಿ ।
ತೇನ ವ್ರತಾನುಭಾವೇನ ಸದ್ಯಃ ಶ್ರೇಯೋಽನುಭೋಕ್ಷ್ಯಸೇ ॥ ೨೪ ॥

ಶಾರದೋವಾಚ :—

ತ್ವಯೋಪದಿಷ್ಟಂ ಯತ್ನೇನ ಚರಿಷ್ಯಾಮ್ಯಪಿ ದುಶ್ಚರಂ ।
ತದ್ವ್ರತಂ ಬ್ರೂಹಿ ಮೇ ಬ್ರಹ್ಮನ್ವಿಧಾನಂ ವದ ವಿಸ್ತರಾತ್ ॥ ೨೫ ॥

---

೨೦. ಎಲೈ ಬ್ರಾಹ್ಮಣನೆ! ನಿನ್ನ ವಚನವು ಸತ್ಯವಾದುದು. ಒಂದುಸಲವೂ ಸುಳ್ಳಾಗಲಾರದು. ಆದರೆ ಈ ಮಾತು ಅದೃಷ್ಟಹೀನಳಾದ ನನ್ನಲ್ಲಿ ಹೇಗೆ ಫಲಿಸುವುದು ?

೨೧. ಕಲ್ಲಿನ ಮೇಲೆ ಮಳೆಯಂತೆಯೂ, ನಾಯಿಗೆ ಸನ್ಮಾನದಂತೆಯೂ ಅದೃಷ್ಟವಿಲ್ಲದವಳಲ್ಲಿ ಬ್ರಹ್ಮಜ್ಞಾನಿಗಳ ಆಶೀರ್ವಾದವೂ ನಿಷ್ಫಲವಾಗುವುದು.

೨೨. ಎಲೈ ಬ್ರಾಹ್ಮಣನೆ! ದುಷ್ಕರ್ಮಗಳ ಫಲವನ್ನನುಭವಿಸುವ ವಿಧವೆಯಾದ ನಾನು ಈ ನಿನ್ನ ಆಶೀರ್ವಾದಕ್ಕೆ ಹೇಗೆ ಪಾತ್ರಳಾಗುವೆನು ?

೨೩. ಮುನಿಯು ಹೇಳುತ್ತಾನೆ:—ಎಲೌ ಮಂಗಳಕರಳೆ! ಅಂಧನಾದ ನಾನು ನಿನ್ನನ್ನು ನೋಡದೆ ಹೇಳಿದ ಈ ಮಾತನ್ನು ಸಾಧಿಸುವೆನು. ನೀನು ನಾನು ಹೇಳಿದಂತೆ ಕೇಳು.

೨೪. ನೀನು ಉಮಾಮಹೇಶ್ವರವ್ರತವನ್ನಾಚರಿಸಿದರೆ ಆ ವ್ರತದ ಮಾಹಾತ್ಮ್ಯದಿಂದ ಕೂಡಲೆ ಶ್ರೇಯಸ್ಸನ್ನು ಪಡೆಯುವೆ.

೨೫. ಶಾರದೆಯು ಹೇಳುತ್ತಾಳೆ:—ಓ ವಿಪ್ರನೆ! ನೀನು ಆ ವ್ರತವನ್ನು ಉಪದೇಶಮಾಡಿದರೆ ಅದು ಆಚರಿಸಲಸಾಧ್ಯವಾದುದಾದರೂ ನಾನು ಪ್ರಯತ್ನದಿಂದ ಆಚರಿಸುವೆನು. ಆ ವ್ರತವನ್ನು ಮಾಡುವ ವಿಧಾನವನ್ನು ನನಗೆ ವಿಸ್ತಾರವಾಗಿ ಹೇಳು.

CC-0. Jangamwadi Math Collection. Digitized by eGangotri

ಮುನಿರುವಾಚ :—

ಚೈತ್ರೇ ವಾ ಮಾರ್ಗಶೀರ್ಷೇ ವಾ ಶುಕ್ಲಪಕ್ಷೇ ಶುಭೇ ದಿನೇ ।
ವ್ರತಾರಂಭಂ ಪ್ರಕುರ್ವೀತ ಯಥಾವದ್ಗುರ್ವನುಜ್ಞಯಾ ॥ ೨೬ ॥
ಅಷ್ಟಮ್ಯಾಂ ಚ ಚತುರ್ದಶ್ಯಾಮುಭಯೋರಪಿ ಪರ್ವಣೋಃ ।
ಸಂಕಲ್ಪಂ ವಿಧಿವತ್ಕೃತ್ವಾ ಪ್ರಾತಃಸ್ನಾನಂ ಸಮಾಚರೇತ್ ॥ ೨೭ ॥
ಸಂತರ್ಪ್ಯ ಪಿತೃದೇವಾದೀನ್ಗತ್ವಾ ಸ್ವಭವನಂ ಪ್ರತಿ ।
ಮಂಡಪಂ ರಚಯೇದ್ದಿವ್ಯಂ ವಿತಾನಾದ್ಯೈರಲಂಕೃತಂ ॥ ೨೮ ॥
ಫಲಪಲ್ಲವಪುಷ್ಪಾದ್ಯೈಸ್ತೋರಣೈಶ್ಚ ಸಮನ್ವಿತಂ ।
ಪಂಚವರ್ಣೈಶ್ಚ ತನ್ಮಧ್ಯೇ ರಜೋಭಿಃ ಪದ್ಮಮುದ್ಧರೇತ್ ॥ ೨೯ ॥
ಚತುರ್ದಶದಲೈರ್ಬಾಹ್ಯೇ ದ್ವಾವಿಂಶದ್ಭಿಸ್ತದಂತರೇ ।
ತದಂತರೇ ಷೋಡಶಭಿರಷ್ಟಾಭಿಶ್ಚ ತದಂತರೇ ॥ ೩೦ ॥
ಏವಂ ಪದ್ಮಂ ಸಮುದ್ಧೃತ್ಯ ಪಂಚವರ್ಣೈರ್ಮನೋರಮಂ ।
ಚತುರಸ್ರಂ ತತಃ ಕುರ್ಯಾದಂತರ್ವರ್ತುಲಮುತ್ತಮಂ ॥ ೩೧ ॥
ವ್ರೀಹಿತಂಡುಲರಾಶಿಂ ಚ ತನ್ಮಧ್ಯೇ ಚ ಸಕೂರ್ಚಕಂ ।
ಕೂರ್ಚೋಪರಿ ಸುಸಂಸ್ಥಾಪ್ಯ ಕಲಶಂ ವಾರಿಪೂರಿತಂ ॥ ೩೨ ॥

---

೨೬. ಮುನಿಯು ಹೇಳುತ್ತಾನೆ:—ಚೈತ್ರ ಅಥವಾ ಮಾರ್ಗಶೀರ್ಷ ಮಾಸದ ಶುಕ್ಲಪಕ್ಷದ ಶುಭ ದಿನದಲ್ಲಿ ಗುರುವಿನ ಅಪ್ಪಣೆಯಿಂದ ಈ ವ್ರತವನ್ನು ಆರಂಭಿಸಬೇಕು.

೨೭. ಅಷ್ಟಮಿ, ಚತುರ್ದಶೀ, ಅಮಾವಾಸ್ಯೆ, ಹುಣ್ಣಿಮೆ ದಿನಗಳಲ್ಲಿ ವಿಧಿಯಂತೆ ಸಂಕಲ್ಪಮಾಡಿ ಪ್ರಾತಸ್ಸ್ನಾನವನ್ನು ಮಾಡಬೇಕು.

೨೮. ಪಿತೃಗಳನ್ನೂ ದೇವತೆಗಳನ್ನೂ ಸಂತೋಷಗೊಳಿಸಿ ತನ್ನ ಮನೆಗೆ ಹೋಗಿ ಮೇಲ್ಕಟ್ಟು ಮೊದಲಾದವುಗಳಿಂದ ಅಲಂಕೃತವಾದ ದಿವ್ಯ ಮಂಟಪ ವನ್ನು ರಚಿಸಬೇಕು.

೨೯. ಹಣ್ಣು, ಚಿಗುರು, ಹೂವು ಮೊದಲಾಗುಳ್ಳ ತೋರಣಗಳಿಂದ ಕೂಡಿದ ಆ ಮಂಟಪದ ನಡುವೆ ಪಂಚವರ್ಣದ ಪುಡಿಗಳಿಂದ ಪದ್ಮವನ್ನು ಬರೆಯ ಬೇಕು.

೩೦–೩೧. ಈ ಪದ್ಮದಲ್ಲಿ ಹೊರಗಡೆ ಹದಿನಾಲ್ಕು ದಳಗಳನ್ನೂ, ಅದರೊಳಗೆ ಇಪ್ಪತ್ತೆರಡು ದಳಗಳನ್ನೂ, ಅದರೊಳಗೆ ಹದಿನಾರು ದಳಗಳನ್ನೂ, ಅದರೊಳಗೆ ಎಂಟು ದಳಗಳನ್ನೂ ರಚಿಸಿ ಅದರ ಸುತ್ತಲೂ ವರ್ತುಲರೇಖೆಯನ್ನೂ ಅದರ ಹೊರಗಡೆ ಚೌಕವಾದ ರೇಖೆಗಳನ್ನೂ ಬರೆಯಬೇಕು.

೩೨–೩೩. ಅದರ ನಡುವೆ ಭತ್ತ, ಅಕ್ಕಿಗಳ ರಾಶಿಯನ್ನು ಹಾಕಿ ಅದರ ಮೇಲೆ

CC-0. Jangamwadi Math Collection. Digitized by eGangotri

ಕಲಶೋಪರಿ ವಿನ್ಯಸ್ಯ ವಸ್ತ್ರಂ ವರ್ಣಸಮನ್ವಿತಂ ।
ತಸ್ಯೋಪರಿಷ್ಟಾತ್ತೌಸ್ವರ್ಣ್ಯೌ ಪ್ರತಿಮೇ ಶಿವಯೋಃ ಶುಭೇ ।
ನಿಧಾಯ ಪೂಜಯೇದ್ಭಕ್ತ್ಯಾ ಯಥಾವಿಭವವಿಸ್ತರಂ ॥ ೩೩ ॥
ಪಂಚಾಮೃತೈಸ್ತು ಸಂಸ್ನಾಪ್ಯ ತಥಾ ಶುದ್ಧೋದಕೇನ ಚ ।
ರುದ್ರೈಕಾದಶಕಂ ಜಪ್ತ್ವಾ ಪಂಚಾಕ್ಷರಶತಾಷ್ಟಕಂ ॥ ೩೪ ॥
ಅಭಿಮಂತ್ರ್ಯ ಪುನಃ ಸ್ಥಾಪ್ಯ ಪೀಠಮಧ್ಯೇ ತಥಾರ್ಚಯೇತ್ ।
ಸ್ವಯಂ ಶುದ್ಧಾಸನಾಸೀನೋ ಧೌತಶುಕ್ಲಾಂಬರಃ ಸುಧೀಃ ॥ ೩೫ ॥
ಪೀಠಮಾಮಂತ್ರ್ಯ ಮಂತ್ರೇಣ ಪ್ರಾಣಾಯಾಮಾನ್ಸಮಾಚರೇತ್ ।
ಸಂಕಲ್ಪಂ ಪ್ರವದೇತ್ತತ್ರ ಶಿವಾಗ್ರೇ ವಿಹಿತಾಂಜಲಿಃ ॥ ೩೬ ॥
ಯಾನಿ ಪಾಪಾನಿ ಘೋರಾಣಿ ಜನ್ಮಾಂತರಶತೇಷು ಮೇ ।
ತೇಷಾಂ ಸರ್ವವಿನಾಶಾಯ ಶಿವಪೂಜಾಂ ಸಮಾರಭೇ ॥ ೩೭ ॥
ಸೌಭಾಗ್ಯವಿಜಯಾರೋಗ್ಯಧರ್ಮೈಶ್ವರ್ಯಾಭಿವೃದ್ಧಯೇ ।
ಸ್ವರ್ಗಾಪವರ್ಗಸಿದ್ಧ್ಯರ್ಥಂ ಕರಿಷ್ಯೇ ಶಿವಪೂಜನಂ ॥ ೩೮ ॥
ಇತಿ ಸಂಕಲ್ಪಮುಚ್ಚಾರ್ಯ ಯಥಾವತ್ಸುಸಮಾಹಿತಃ ।
ಅಂಗನ್ಯಾಸಂ ತತಃ ಕೃತ್ವಾ ಧ್ಯಾಯೇದೀಶಂ ಚ ಪಾರ್ವತೀಂ ॥ ೩೯ ॥

---

ಕೂರ್ಚೆಯನ್ನಿಟ್ಟು, ಆ ಕೂರ್ಚೆಯಮೇಲೆ ನೀರು ತುಂಬಿದ ಕಲಶವನ್ನು ಸ್ಥಾಪಿಸಬೇಕು. ಆ ಕಲಶದ ಮೇಲೆ ಬಣ್ಣದ ವಸ್ತ್ರವನ್ನಿಟ್ಟು ಅದರ ಮೇಲೆ ಚಿನ್ನದ ಪಾರ್ವತೀಪರಮೇಶ್ವರರ ಪ್ರತಿಮೆಗಳನ್ನಿರಿಸಿ ಭಕ್ತಿಯಿಂದ ತನ್ನ ಸಂಪತ್ತನ್ನನುಸರಿಸಿ ಅರ್ಚಿಸಬೇಕು.

೩೪–೩೫. ಪಂಚಾಮೃತದಿಂದಲೂ, ಶುದ್ಧೋದಕದಿಂದಲೂ ಅಭಿಷೇಕ ಮಾಡಿ ಏಕಾದಶವಾರ ರುದ್ರಮಂತ್ರವನ್ನು ಜಪಿಸಿ ನೂರೆಂಟು ಸಾರಿ ಶಿವಪಂಚಾಕ್ಷರಿಯಿಂದ ಅಭಿಮಂತ್ರಿಸಿ ಮರಳಿ ಪೀಠಮಧ್ಯದಲ್ಲಿ ಆ ಕಲಶವನ್ನಿಟ್ಟು ತಾನು ಮಡಿಬಟ್ಟೆಯನ್ನುಟ್ಟು ಶುದ್ಧವಾದ ಆಸನದಲ್ಲಿ ಕುಳಿತು ಅರ್ಚಿಸಬೇಕು.

೩೬. ಪೀಠವನ್ನಭಿಮಂತ್ರಿಸಿ ಪ್ರಾಣಾಯಾಮ ಮಾಡಿ ಶಿವನ ಮುಂದೆ ಕೈಮುಗಿದುಕೊಂಡು ಸಂಕಲ್ಪವನ್ನು ಹೇಳಬೇಕು.

೩೭. "ನಾನು ಅನೇಕ ಜನ್ಮಗಳಲ್ಲೆಸಗಿದ ಘೋರಪಾಪಗಳ ನಾಶಕ್ಕಾಗಿ ಶಿವಪೂಜೆಯನ್ನು ಆರಂಭಿಸುವೆನು.

೩೮. ಸೌಭಾಗ್ಯ, ಜಯ, ಆರೋಗ್ಯ, ಧರ್ಮ, ಐಶ್ವರ್ಯ ಇವುಗಳ ವೃದ್ಧಿಗಾಗಿಯೂ ಸ್ವರ್ಗಮೋಕ್ಷಗಳ ಸಿದ್ಧಿಗಾಗಿಯೂ ಶಿವಪೂಜೆಯನ್ನು ಮಾಡುವೆನು."

೩೯. ಹೀಗೆ ಸಂಕಲ್ಪವನ್ನುಚ್ಚರಿಸಿ ವಿಧಿಯಂತೆ ಅಂಗನ್ಯಾಸವನ್ನು ಮಾಡಿ ಪಾರ್ವತೀ ಈಶ್ವರರನ್ನು ಧ್ಯಾನಿಸಬೇಕು.

CC-0. Jangamwadi Math Collection. Digitized by eGangotri

ಕುಂದೇಂದುಧವಲಾಕಾರಂ ನಾಗಾಭರಣಭೂಷಿತಂ ।
ವರದಾಭಯಹಸ್ತಂ ಚ ಬಿಭ್ರಾಣಂ ಪರಶುಂ ಮೃಗಂ ॥ ೪೦ ॥
ಸೂರ್ಯಕೋಟಿಪ್ರತೀಕಾಶಂ ಜಗದಾನಂದಕಾರಣಂ ।
ಜಾಹ್ನವೀಜಲಸಂಪರ್ಕಾದ್ದೀರ್ಘಪಿಂಗಜಟಾಧರಂ ॥ ೪೧ ॥
ಉರಗೇಂದ್ರಫಣೋದ್ಭೂತಮಹಾಮುಕುಟಮಂಡಿತಂ ।
ಶೀತಾಂಶುಖಂಡವಿಲಸತ್ಕೋಟೀರಾಂಗದಭೂಷಣಂ ॥ ೪೨ ॥
ಉನ್ಮೀಲದ್ಭಾಲನಯನಂ ತಥಾ ಸೂರ್ಯೇಂದುಲೋಚನಂ ।
ನೀಲಕಂಠಂ ಚತುರ್ಬಾಹುಂ ಗಜೇಂದ್ರಾಽಜಿನವಾಸಸಂ ॥ ೪೩ ॥
ರತ್ನಸಿಂಹಾಸನಾರೂಢಂ ನಾಗಾಭರಣಭೂಷಿತಂ ।
ದೇವೀಂ ಚ ದಿವ್ಯವಸನಾಂ ಬಾಲಸೂರ್ಯಾಽಯುತದ್ಯುತಿಂ ॥ ೪೪ ॥
ಬಾಲವೇಷಾಂ ಚ ತನ್ವಂಗೀಂ ಬಾಲಶೀತಾಂಶುಶೇಖರಾಂ ।
ಪಾಶಾಂಕುಶವರಾಭೀತಿಂ ಬಿಭ್ರತೀಂ ಚ ಚತುರ್ಭುಜಾಂ ॥ ೪೫ ॥
ಪ್ರಸಾದಸುಮುಖೀಮಂಬಾಂ ಲೀಲಾರಸವಿಹಾರಿಣೀಂ ।
ಲಸತ್ಕುರಬಕಾಽಶೋಕಪುನ್ನಾಗನವಚಂಪಕೈಃ ॥ ೪೬ ॥
ಕೃತಾವತಂಸಾಮುತ್ಫುಲ್ಲಮಲ್ಲಿಕೋತ್ಕಲಿತಾಽಲಕಾಂ ।
ಕಾಂಚೀಕಲಾಪಪರ್ಯಸ್ತಜಘನಾಭೋಗಶಾಲಿನೀಂ ॥ ೪೭ ॥

---

೪೦–೫೨. ಮಲ್ಲಿಗೆ ಮತ್ತು ಚಂದ್ರರಂತೆ ಬಿಳಿಯ ಆಕಾರವುಳ್ಳವನೂ, ಸರ್ಪಗಳೆಂಬ ಆಭರಣಗಳಿಂದ ಅಲಂಕೃತನೂ, ವರದ, ಅಭಯಹಸ್ತಗಳುಳ್ಳವನೂ, ಕೊಡಲಿ, ಜಿಂಕೆಗಳನ್ನು ಹಿಡಿದವನೂ, ಅನೇಕ ಸೂರ್ಯರಿಗೆ ಸಮಾನನೂ, ಪ್ರಪಂಚದ ಆನಂದಕ್ಕೆ ಕಾರಣನೂ, ಗಂಗಾಜಲದ ಸಂಬಂಧವುಳ್ಳ ಉದ್ದವಾದ ಹಳದಿಬಣ್ಣದ ಜಟೆಗಳನ್ನು ಧರಿಸಿದವನೂ, ಸರ್ಪರಾಜನ ಹೆಡೆಯಿಂದಾದ ಕಿರೀಟವುಳ್ಳವನೂ, ಚಂದ್ರಕಲೆಯಿಂದ ಪ್ರಕಾಶಮಾನವಾದ ಜಟೆ, ಭುಜಕೀರ್ತಿಗಳುಳ್ಳವನೂ, ತೆರೆದ ಹಣೆಗಣ್ಣುಳ್ಳವನೂ, ಸೂರ್ಯ ಚಂದ್ರರೇ ಕಣ್ಣಾಗುಳ್ಳವನೂ, ನೀಲಕಂಠನೂ, ನಾಲ್ಕು ತೋಳುಗಳುಳ್ಳವನೂ, ಆನೆಯ ಚರ್ಮವನ್ನು ಹೊದ್ದವನೂ, ರತ್ನಮಯವಾದ ಸಿಂಹಾಸನದಲ್ಲಿ ಕುಳಿತವನೂ ಆದ ಶಿವನನ್ನೂ, ದಿವ್ಯ ವಸ್ತ್ರವನ್ನುಟ್ಟವಳೂ, ಹತ್ತುಸಾವಿರ ಬಾಲಸೂರ್ಯರಂತೆ ಕಾಂತಿಯುಳ್ಳವಳೂ, ಕೃಶಾಂಗಿಯೂ, ಬಾಲಚಂದ್ರಶೇಖರಿಯೂ, ಪಾಶ, ಅಂಕುಶ, ವರ, ಅಭಯಹಸ್ತಗಳುಳ್ಳವಳೂ, ಪ್ರಸನ್ನವಾದ ಮುಖವುಳ್ಳವಳೂ, ಹಾವಭಾವಗಳುಳ್ಳವಳೂ, ಕುರವಕ, ಅಶೋಕ, ಪುನ್ನಾಗ, ಸಂಪಗೆ ಹೂವುಗಳನ್ನು ಮುಡಿದವಳೂ, ಅರಳಿದ ಮಲ್ಲಿಗೆಯ ಹೂವುಗಳಿಂದಲಂಕೃತವಾದ ಕುರುಳುಗಳುಳ್ಳವಳೂ, ಡಾಬಿನಿಂದ ಶೋಭಿತವಾದ ನಿತಂಬದಿಂದ ಪ್ರಕಾಶಿಸುವವಳೂ, ಉತ್ತಮವಾದ ಕಿರುಗೆಜ್ಜೆ

CC-0. Jangamwadi Math Collection. Digitized by eGangotri

ಉದಾರಕಿಂಕಿಣೀಶ್ರೇಣೀನೂಪುರಾಢ್ಯಪದದ್ವಯಾಂ ।
ಗಂಡಮುಂಡಲಸಂಸಕ್ತರತ್ನಕುಂಡಲಶೋಭಿತಾಂ ॥ ೪೮ ॥
ಬಿಂಬಾಽಧರಾಽನುರಕ್ತಾಂಶುಲಸದ್ದಶನಕುಡ್ಮಲಾಂ ।
ಮಹಾರ್ಹರತ್ನಗ್ರೈವೇಯತಾರಹಾರವಿರಾಜಿತಾಂ ॥ ೪೯ ॥
ನವಮಾಣಿಕ್ಯರುಚಿರಕಂಕಣಾಂಗದಮುದ್ರಿಕಾಂ ।
ರಕ್ತಾಂಶುಕಪರೀಧಾನಾಂ ರತ್ನಮಾಲ್ಯಾಽನುಲೇಪನಾಂ ॥ ೫೦ ॥
ಉದ್ಯತ್ಪೀನಕುಚದ್ವಂದ್ವನಿಂದಿತಾಂಭೋಜಕುಡ್ಮಲಾಂ ।
ಲೀಲಾಲೋಲಾಸಿತಾಪಾಂಗೀಂ ಭಕ್ತಾನುಗ್ರಹದಾಯಿನೀಂ ॥ ೫೧ ॥
ಏವಂ ಧ್ಯಾತ್ವಾ ತು ಹೃತ್ಪದ್ಮೇ ಜಗತಃ ಪಿತರೌ ಶಿವೌ ।
ಜಪ್ತ್ವಾ ತದಾತ್ಮಕಂ ಮಂತ್ರಂ ತದಂತೇ ಬಹಿರರ್ಚಯೇತ್ ॥ ೫೨ ॥
ಆವಾಹ್ಯ ಪ್ರತಿಮಾಯುಗ್ಮೇ ಕಲ್ಪಯೇದಾಸನಾದಿಕಂ ।
ಅರ್ಘ್ಯಂ ಚ ದದ್ಯಾಚ್ಛಿವಯೋರ್ಮಂತ್ರೇಣಾನೇನ ಮಂತ್ರವಿತ್ ॥ ೫೩ ॥
ನಮಸ್ತೇ ಪಾರ್ವತೀನಾಥ ತ್ರೈಲೋಕ್ಯವರದರ್ಷಭ ।
ತ್ರ್ಯಂಬಕೇಶ ಮಹಾದೇವ ಗೃಹಾಣಾಽರ್ಘ್ಯಂ ನಮೋಽಸ್ತು ತೇ ॥ ೫೪ ॥

---

ಗಳ ಸಾಲುಳ್ಳ ನೂಪುರಗಳಿಂದ ಸಹಿತವಾದ ಚರಣಗಳುಳ್ಳವಳೂ, ಕಪೋಲಗಳಿಗೆ ತಗಲುವ ರತ್ನದೋಲೆಗಳಿಂದ ಶೋಭಿತಳೂ, ತೊಂಡೆಹಣ್ಣಿನಂತಿರುವ ತುಟಿಯ ಕೆಂಪು ಕಾಂತಿಗಳಿಂದ ಪ್ರಕಾಶಮಾನವಾದ ಹಲ್ಲುಗಳುಳ್ಳವಳೂ, ಅತ್ಯಮೂಲ್ಯವಾದ ರತ್ನಗಳ ಹಾರಗಳಿಂದ ವಿರಾಜಿಸುವವಳೂ, ಹೊಸ ಮಾಣಿಕ್ಯಗಳಿಂದ ರಮ್ಯವಾದ ಬಳೆ, ನಾಗಮುರಿಗೆ ಮತ್ತು ಉಂಗುರಗಳುಳ್ಳವಳೂ, ಕೆಂಪು ವಸ್ತ್ರವನ್ನುಟ್ಟವಳೂ, ಕೆಂಪುಹೂವಿನಮಾಲೆ ಮತ್ತು ಗಂಧವುಳ್ಳವಳೂ, ಘನಕುಚದ್ವಂದ್ವದಿಂದ ನಿಂದಿಸಿದ ತಾವರೆ ಮೊಗ್ಗುಳ್ಳವಳೂ, ವಿಲಾಸದಿಂದ ಚಂಚಲವಾದ ಕೃಷ್ಣಕಟಾಕ್ಷವುಳ್ಳವಳೂ, ಭಕ್ತರಿಗೆ ಅನುಗ್ರಹಮಾಡುವವಳೂ ಆದ ಪಾರ್ವತಿಯನ್ನೂ ಹೀಗೆ ಪ್ರಪಂಚದ ತಾಯಿತಂದೆಗಳಾದ ಆ ದಂಪತಿಗಳೀರ್ವರನ್ನೂ ಧ್ಯಾನಿಸಿ ಅವರ ಮಂತ್ರವನ್ನು ಜಪಿಸಿ ಅನಂತರ ಹೊರಗಡೆ ಪೂಜಿಸಬೇಕು.

೫೩. ಮಂತ್ರವನ್ನರಿತವನು ಎರಡು ಪ್ರತಿಮೆಗಳಲ್ಲಿಯೂ ಶಿವಪಾರ್ವತಿಯರನ್ನು ಆವಾಹನೆ ಮಾಡಿ, ಆಸನಾದಿಗಳನ್ನಿತ್ತು, ಈ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು.

೫೪. "ಪಾರ್ವತೀಪತಿಯೂ, ಮೂರುಲೋಕಗಳಲ್ಲಿ ವರವನ್ನು ಕೊಡುವವರಲ್ಲಿ ಶ್ರೇಷ್ಠನೂ, ಮುಕ್ಕಣ್ಣನೂ ಆದ ಮಹಾದೇವ! ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರವು."

CC-0. Jangamwadi Math Collection. Digitized by eGangotri

ನಮಸ್ತೇ ದೇವದೇವೇಶಿ ಪ್ರಪನ್ನಭಯಹಾರಿಣಿ ।
ಅಂಬಿಕೇ ವರದೇ ದೇವಿ ಗೃಹಾಣಾರ್ಘ್ಯಂ ಶಿವಪ್ರಿಯೇ ॥ ೫೫ ॥
ಇತಿ ತ್ರಿವಾರಮುಚ್ಚಾರ್ಯ ದದ್ಯಾದರ್ಘ್ಯಂ ಸಮಾಹಿತಃ ।
ಗಂಧಪುಷ್ಪಾಕ್ಷತಾನ್ಸಮ್ಯಗ್ಧೂಪದೀಪಾನ್ಪ್ರಕಲ್ಪಯೇತ್ ॥ ೫೬ ॥
ನೈವೇದ್ಯಂ ಪಾಯಸಾನ್ನೇನ ಘೃತಾಕ್ತಂ ಪರಿಕಲ್ಪಯೇತ್ ।
ಜುಹುಯಾನ್ಮೂಲಮಂತ್ರೇಣ ಹವಿರಷ್ಟೋತ್ತರಂ ಶತಂ ॥ ೫೭ ॥
ತತ ಉದ್ವಾಸ್ಯ ನೈವೇದ್ಯಂ ಧೂಪನೀರಾಜನಾದಿಕಂ ।
ಕೃತ್ವಾ ನಿವೇದ್ಯ ತಾಂಬೂಲಂ ನಮಸ್ಕುರ್ಯಾತ್ಸಮಾಹಿತಃ ॥ ೫೮ ॥
ಅಥಾಽಭ್ಯರ್ಚ್ಯೋಪಚಾರೇಣ ಭೋಜಯೇದ್ವಿಪ್ರದಂಪತೀ ॥ ೫೯ ॥
ಏವಂ ಸಾಯಂತನೀಂ ಪೂಜಾಂ ಕೃತ್ವಾ ವಿಪ್ರಾಽನುಮೋದಿತಃ ।
ಭುಂಜೀತ ವಾಗ್ಯತೋ ರಾತ್ರೌ ಹವಿಷ್ಯಂ ಕ್ಷೀರಭಾವಿತಂ ॥ ೬೦ ॥
ಏವಂ ಸಂವತ್ಸರಂ ಕುರ್ಯಾದ್ವ್ರತಂ ಪಕ್ಷದ್ವಯೇ ಬುಧಃ ।
ತತಃ ಸಂವತ್ಸರೇ ಪೂರ್ಣೇ ವ್ರತೋದ್ಯಾಪನಮಾಚರೇತ್ ॥ ೬೧ ॥
ಶತರುದ್ರಾಽಭಿಜಪ್ತೇನ ಸ್ನಾಪಯೇತ್ಪ್ರತಿಮೇ ಜಲೈಃ ।
ಆಗಮೋಕ್ತೇನ ಮಂತ್ರೇಣ ಸಂಪೂಜ್ಯ ಗಿರಿಜಾಶಿವೌ ॥ ೬೨ ॥

---

೫೫. "ದೇವತೆಗಳಿಗೆ ಒಡೆಯಳೂ, ಮರೆಹೊಕ್ಕವರ ಭಯವನ್ನು ಪರಿಹರಿಸುವವಳೂ, ವರದಾಯಕಳೂ ಆದ ಓ ಶಿವಸತಿಯೆ! ಅರ್ಘ್ಯವನ್ನು ಪರಿಗ್ರಹಿಸು."

೫೬. ಹೀಗೆ ಮೂರುಸಾರಿ ಉಚ್ಚರಿಸಿ ಒಮ್ಮನಸ್ಸಿನಿಂದ ಅರ್ಘ್ಯವನ್ನು ಕೊಟ್ಟು ಗಂಧ, ಪುಷ್ಪ, ಅಕ್ಷತ, ಧೂಪ, ದೀಪಗಳನ್ನು ಅರ್ಪಿಸಬೇಕು.

೫೭. ತುಪ್ಪದಿಂದ ಸಹಿತವಾದ ಪಾಯಸವನ್ನು ನಿವೇದಿಸಿ ಹವಿಸ್ಸನ್ನು ನೂರೆಂಟು ಸಲ ಮೂಲಮಂತ್ರದಿಂದ ಹೋಮಮಾಡಬೇಕು.

೫೮. ಬಳಿಕ ನೈವೇದ್ಯವನ್ನು ತೆಗೆದು ಧೂಪ, ಮಂಗಳಾರತಿಗಳನ್ನುಮಾಡಿ ತಾಂಬೂಲವನ್ನರ್ಪಿಸಿ ನಮಸ್ಕರಿಸಬೇಕು.

೫೯. ಅನಂತರ ಬ್ರಾಹ್ಮಣದಂಪತಿಗಳನ್ನು ಪೂಜಿಸಿ ಭೋಜನಮಾಡಿಸಬೇಕು.

೬೦. ಹೀಗೆಯೇ ಸಾಯಂಕಾಲವೂ ಪೂಜೆಗೈದು ಬ್ರಾಹ್ಮಣರ ಅನುಮತಿಯಿಂದ ರಾತ್ರಿಯಲ್ಲಿ ಹಾಲಿನಿಂದಾದ ಹವಿಸ್ಸನ್ನು ಮೌನವಾಗಿ ಭುಂಜಿಸಬೇಕು.

೬೧. ಜ್ಞಾನಿಯು ಹೀಗೆ ಒಂದು ವರ್ಷಕಾಲ ಎರಡು ಪಕ್ಷಗಳಲ್ಲಿಯೂ ವ್ರತಾನುಷ್ಠಾನಮಾಡಿ ವರ್ಷಾಂತ್ಯದಲ್ಲಿ ಉದ್ಯಾಪನೆಯನ್ನುಮಾಡಬೇಕು.

೬೨–೬೩. ಪಾರ್ವತೀಪರಮೇಶ್ವರರ ಪ್ರತಿಮೆಗಳಿಗೆ ನೀರಿನಿಂದ ನೂರಾವೃತ್ತಿ ರುದ್ರಾಭಿಷೇಕ ಮಾಡಿ ಆಗಮೋಕ್ತಮಂತ್ರದಿಂದ ಪೂಜಿಸಿ, ಸದಾಚಾರ

CC-0. Jangamwadi Math Collection. Digitized by eGangotri

ಸವಸ್ತ್ರಂ ಸಸುವರ್ಣಂ ಚ ಕಲಶಂ ಪ್ರತಿಮಾನ್ವಿತಂ ।
ದತ್ವಾಚಾರ್ಯಾಯ ಮಹತೇ ಸದಾಚಾರರತಾಯ ಚ ।
ಬ್ರಾಹ್ಮಣಾನ್ಭೋಜಯೇದ್ಭಕ್ತ್ಯಾ ಯಥಾಶಕ್ತ್ಯಾಽಭಿಪೂಜ್ಯ ಚ ॥ ೬೩ ॥
ದದ್ಯಾಚ್ಚ ದಕ್ಷಿಣಾಂ ತೇಭ್ಯೋ ಗೋಹಿರಣ್ಯಾಂಬರಾದಿಕಂ ।
ಭುಂಜೀತ ತದನುಜ್ಞಾತಃ ಸಹೇಷ್ಟಜನಬಂಧುಭಿಃ ॥ ೬೪ ॥
ಏವಂ ಯಃ ಕುರುತೇ ಭಕ್ತ್ಯಾ ವ್ರತಂ ತ್ರೈಲೋಕ್ಯವಿಶ್ರುತಂ ।
ತ್ರಿಃಸಪ್ತಕುಲಮುದ್ಧೃತ್ಯ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ॥ ೬೫ ॥
ಇಂದ್ರಾದಿಲೋಕಪಾಲಾನಾಂ ಸ್ಥಾನೇಷು ರಮತೇ ಧ್ರುವಂ ।
ಬ್ರಹ್ಮಲೋಕೇ ಚ ರಮತೇ ವಿಷ್ಣುಲೋಕೇ ಚ ಶಾಶ್ವತೇ ॥ ೬೬ ॥
ಶಿವಲೋಕಮಥ ಪ್ರಾಪ್ಯ ತತ್ರ ಕಲ್ಪಶತಂ ಪುನಃ ।
ಭುಕ್ತ್ವಾ ಭೋಗಾನ್ಸುವಿಪುಲಾಂಛಿವಮೇವ ಪ್ರಪದ್ಯತೇ ॥ ೬೭ ॥
ಮಹಾವ್ರತಮಿದಂ ಪ್ರೋಕ್ತಂ ತ್ವಮಪಿ ಶ್ರದ್ಧಯಾ ಚರ ।
ಅತ್ಯಂತ ದುರ್ಲಭಂ ವಾಽಪಿ ಲಪ್ಸ್ಯಸೇ ಚ ಮನೋರಥಂ ॥ ೬೮ ॥
ಇತ್ಯಾದಿಷ್ಟಾ ಮುನೀಂದ್ರೇಣ ಸಾ ಬಾಲಾ ಮುದಿತಾಭೃಶಂ ।
ಪ್ರತ್ಯಬ್ರವೀತ್ಸುವಿಶ್ರಬ್ಧಾ ತದ್ವಾಕ್ಯಂ ಸುಮನೋಹರಂ ॥ ೬೯ ॥

---

ನಿರತನಾದ ಉತ್ತಮ ಆಚಾರ್ಯನಿಗೆ ವಸ್ತ್ರ, ಸುವರ್ಣಪ್ರತಿಮೆಗಳಿಂದ ಸಹಿತವಾದ ಕಲಶವನ್ನು ದಾನಮಾಡಿ ಬ್ರಾಹ್ಮಣರನ್ನು ಶಕ್ತ್ಯನುಸಾರ ಪೂಜಿಸಿ ಭಕ್ತಿಯಿಂದ ಭೋಜನಮಾಡಿಸಬೇಕು.

೬೪. ಅವರಿಗೆ ಗೋವು, ಚಿನ್ನ, ಬಟ್ಟೆ, ದಕ್ಷಿಣೆಗಳನ್ನು ಕೊಟ್ಟು ಅವರ ಒಪ್ಪಿಗೆಯನ್ನು ಪಡೆದು ಇಷ್ಟಜನರೊಡನೆ ಊಟಮಾಡಬೇಕು.

೬೫–೬೬. ತ್ರಿಭುವನದಲ್ಲಿ ಪ್ರಸಿದ್ಧವಾದ ಈ ವ್ರತವನ್ನು ಭಕ್ತಿಯಿಂದಾಚರಿಸಿದವನು ತನ್ನ ಇಪ್ಪತ್ತೊಂದು ಕುಲವನ್ನುದ್ಧಾರಮಾಡಿ ಇಷ್ಟವಾದ ಭೋಗಗಳನ್ನನುಭವಿಸಿ ಇಂದ್ರಾದಿಲೋಕಪಾಲಕರ ಸ್ಥಾನಗಳಲ್ಲಿಯೂ, ಬ್ರಹ್ಮ, ವಿಷ್ಣು ಲೋಕಗಳಲ್ಲಿಯೂ ಸುಖಗಳನ್ನನುಭವಿಸುವನು.

೬೭. ತರುವಾಯ ಶಿವಲೋಕವನ್ನು ಹೊಂದಿ ಅಲ್ಲಿ ನೂರು ಕಲ್ಪಕಾಲ ಅತಿಶಯ ಭೋಗಗಳನ್ನನುಭವಿಸಿ ಶಿವನನ್ನು ಸೇರುವನು.

೬೮. ನಾನು ನಿನಗೆ ಹೇಳಿರುವ ಈ ಮಹಾವ್ರತವನ್ನು ಶ್ರದ್ಧೆಯಿಂದಾಚರಿಸು. ಅತಿದುರ್ಲಭವಾದ ಅಭೀಷ್ಟವನ್ನೂ ಪಡೆಯುವೆ.''

೬೯. ಹೀಗೆ ಮುನೀಂದ್ರನು ಅಪ್ಪಣೆಮಾಡಲು ಅವಳು ಬಹು ಸಂತೋಷಗೊಂಡು ಅವನ ಹಿತವಚನವನ್ನು ವಿಶ್ವಾಸದಿಂದ ಸ್ವೀಕರಿಸಿದಳು.

CC-0. Jangamwadi Math Collection. Digitized by eGangotri

ಅಥ ತಸ್ಯಾಃ ಸಮಾಯಾತಾಃ ಪಿತೃಮಾತೃಸಹೋದರಾಃ ।
ತಂ ಮುನಿಂ ಸುಖಮಾಸೀನಂ ದದೃಶುಃ ಕೃತಭೋಜನಂ ॥ ೭೦ ॥
ಸಹಸಾಗತ್ಯ ತೇ ಸರ್ವೇ ನಮಶ್ಚಕ್ರುರ್ಮಹಾತ್ಮನೇ ।
ಪ್ರಸೀದ ನಃ ಪ್ರಸೀದೇತಿ ಗೃಣಂತಃ ಪರ್ಯಪೂಜಯನ್ ॥ ೭೧ ॥
ಶ್ರುತ್ವಾ ಚ ತೇ ತಯಾ ಸಾಧ್ವ್ಯಾ ಪೂಜಿತಂ ಪರಮಂ ಮುನಿಂ ।
ಅನುಗ್ರಹಂ ವ್ರತಂ ತಸ್ಯೈ ಶ್ರುತ್ವಾ ಹರ್ಷಂ ಪರಂ ಯಯುಃ ॥ ೭೨ ॥
ತೇ ಕೃತಾಂಜಲಯಃ ಸರ್ವೇ ತಮೂಚುರ್ಮುನಿಪುಂಗವಂ ॥ ೭೩ ॥
ಅದ್ಯ ಧನ್ಯಾ ವಯಂ ಸರ್ವೇ ತವಾಗಮನಮಾತ್ರತಃ ।
ಪಾವಿತಂ ನಃ ಕುಲಂ ಸರ್ವಂ ಗೃಹಂ ಚ ಸಫಲೀಕೃತಂ ॥ ೭೪ ॥
ಇಯಂ ಚ ಶಾರದಾ ನಾಮ ಕನ್ಯಾ ವೈಧವ್ಯಮಾಗತಾ ।
ಕೇನಾಽಪಿ ಕರ್ಮಯೋಗೇನ ದುರ್ವಿಲಂಘ್ಯೇನ ಭೂಯಸಾ ॥ ೭೫ ॥
ಸೈಷಾದ್ಯ ತವ ಪಾದಾಬ್ಜಂ ಪ್ರಪನ್ನಾ ಶರಣಂ ಸತೀ ।
ಇಮಾಂ ಸಮುದ್ಧರಾಽಸಹ್ಯಾತ್ಸುಘೋರಾದ್ದುಃಖಸಾಗರಾತ್ ॥ ೭೬ ॥
ತ್ವಯಾಽಪಿ ತಾವದತ್ರೈವ ಸ್ಥಾತವ್ಯಂ ನೋ ಗೃಹಾಂತಿಕೇ ।
ಅಸ್ಮದ್ಗೃಹಮಠೇಽಪ್ಯಸ್ಮಿನ್ಸ್ನಾನಪೂಜಾಜಪೋಚಿತೇ ॥ ೭೭ ॥

---

೭೦. ಬಳಿಕ ಅವಳ ತಾಯಿ, ತಂದೆ ಸಹೋದರರು ಮನೆಗೆ ಬಂದು ಊಟಮಾಡಿ ಸುಖದಿಂದ ಕುಳಿತಿರುವ ಆ ಮುನಿಯನ್ನು ಕಂಡರು.

೭೧. ಅವರೆಲ್ಲರೂ ಒಡನೆಯೆ ಮಹಾತ್ಮನಾದ ಆ ಮುನಿಗೆ ವಂದಿಸಿ ಪ್ರಸನ್ನನಾಗೆಂದು ಸ್ತುತಿಸುತ್ತ ಪೂಜಿಸಿದರು.

೭೨. ಪತಿವ್ರತೆಯಾದ ಶಾರದೆಯು ಮಾಡಿದ ಪೂಜೆಗೆ ಒಲಿದ ಆ ಮುನಿಯು ಅವಳಿಗನುಗ್ರಹಿಸಿದ ವ್ರತವನ್ನು ಕೇಳಿ ಅವರೆಲ್ಲರೂ ಆನಂದಿಸಿದರು.

೭೩–೭೪. ಅವರೆಲ್ಲರೂ ಕೈಮುಗಿದುಕೊಂಡು ಆ ಮುನಿಯನ್ನು ಕುರಿತು ಇಂತೆಂದರು :—" ಪೂಜ್ಯನೇ ! ನಿನ್ನ ಆಗಮನದಿಂದ ನಾವೆಲ್ಲ ಧನ್ಯರಾಗಿದ್ದೇವೆ. ನಮ್ಮ ವಂಶವೆಲ್ಲವೂ ಪವಿತ್ರವಾಯಿತು. ನಮ್ಮ ಮನೆಯೂ ಸಫಲವಾಯಿತು.

೭೫. ಈ ನಮ್ಮ ಶಾರದೆಯು ಮೀರಲಾಗದ ಯಾವುದೊ ಒಂದು ಕರ್ಮದ ಸಂಬಂಧದಿಂದ ವಿಧವೆಯಾಗಿದ್ದಾಳೆ.

೭೬. ಇವಳೀಗ ನಿನ್ನ ಅಡಿದಾವರೆಗಳನ್ನು ಮರೆಹೊಕ್ಕಿರುವಳು. ಇವಳನ್ನು ಸಹಿಸಲಾಗದ ಘೋರ ದುಃಖಸಮುದ್ರದಿಂದ ಪಾರುಮಾಡಿಸು.

೭೭. ನೀನು ಇಲ್ಲಿಯೇ ನಮ್ಮ ಮನೆಯ ಹತ್ತಿರದಲ್ಲಿ ಸ್ನಾನ, ಪೂಜೆ, ಜಪಗಳಿಗುಚಿತವಾದ ಮಠದಲ್ಲಿ ವಾಸಿಸು.



CC-0. Jangamwadi Math Collection. Digitized by eGangotri

ಏಷಾ ಬಾಲಾಽಪಿ ಭಗವನ್ಸ್ಕುರ್ವಂತೀ ತ್ವತ್ಪದಾರ್ಚನಂ ।
ವ್ರತಂ ತ್ವತ್ಸನ್ನಿಧಾನೇವ ಚರಿಷ್ಯತಿ ಮಹಾಮುನೇ ॥ ೭೮ ॥
ಯಾವತ್ಸಮಾಪ್ತಿಮಾಯಾತಿ ವ್ರತಮಸ್ಯಾಸ್ತ್ವದಂತಿಕೇ ।
ಉಷಿತ್ವಾ ತಾವದತ್ರೈವ ಕೃತಾರ್ಥಾನ್ಸ್ಕುರು ನೋ ಗುರೋ ॥ ೭೯ ॥
ಏವಮಭ್ಯರ್ಥಿತಃ ಸರ್ವೈಸ್ತಸ್ಯಾ ಭ್ರಾತೃಜನಾದಿಭಿಃ ।
ತಥೇತಿ ಸ ಮುನಿಶ್ರೇಷ್ಠಸ್ತತ್ರೋವಾಸ ಮಠೇ ಶುಭೇ ॥ ೮೦ ॥
ಸಾಽಪಿ ತೇನೋಪದಿಷ್ಟೇನ ಮಾರ್ಗೇಣ ಗಿರಿಜಾಶಿವೌ ।
ಅರ್ಚಯಂತೀ ವ್ರತಂ ಸಮ್ಯಕ್ಚಚಾರ ವಿಮಲಾ ಸತೀ ॥ ೮೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಉಮಾಮಹೇಶ್ವರ ವ್ರತಾಚರಣಂ"ನಾಮಾಽಷ್ಟಾದಶೋಽಧ್ಯಾಯಃ

---

೭೮. ಎಲೈ ಮುನಿವರ್ಯನೆ! ಈ ನಮ್ಮ ಶಾರದೆಯೂ ನಿನ್ನ ಪಾದಗಳನ್ನು ಪೂಜಿಸುತ್ತ ನಿನ್ನ ಹತ್ತಿರವೇ ವ್ರತವನ್ನಾಚರಿಸುವಳು.

೭೯. ಗುರುವೆ! ನಿನ್ನ ಸನ್ನಿಧಿಯಲ್ಲಿ ಇವಳ ವ್ರತವು ಮುಗಿಯುವವರೆಗೆ ನೀನಿಲ್ಲಿ ವಾಸಿಸುತ್ತ ನಮ್ಮನ್ನು ಧನ್ಯರನ್ನಾಗಿಸು."

೮೦. ಆ ಶಾರದೆಯ ಸಹೋದರರೇ ಮೊದಲಾದವರು ಹೀಗೆ ಪ್ರಾರ್ಥಿಸಲು ಆ ಮುನಿವರ್ಯನು ಹಾಗೆಯೇ ಆಗಲೆಂದು ಒಪ್ಪಿ ಶುಭಕರವಾದ ಆ ಮಠದಲ್ಲಿಯೆ ವಾಸಮಾಡಿದನು.

೮೧. ಅವಳೂ ಶುದ್ಧಳಾಗಿ ಅವನು ಹೇಳಿದ ರೀತಿಯಿಂದಲೇ ಉಮಾ ಮಹೇಶ್ವರರನ್ನರ್ಚಿಸುತ್ತ ವ್ರತವನ್ನು ಚೆನ್ನಾಗಿ ಆಚರಿಸಿದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಉಮಾಮಹೇಶ್ವರವ್ರತಾಚರಣ"ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥೈಕೋನವಿಂಶೋಽಧ್ಯಾಯಃ

### ಶಾರದಾಖ್ಯಾನವರ್ಣನಂ

ಸೂತ ಉವಾಚ :—

ಏವಂ ಮಹಾವ್ರತಂ ತಸ್ಯಾಶ್ಚರಂತ್ಯಾ ಗುರುಸನ್ನಿಧೌ ।
ಸಂವತ್ಸರೋ ವ್ಯತೀಯಾಯ ನಿಯಮಾಸಕ್ತಚೇತಸಃ ॥ ೧ ॥
ಸಂವತ್ಸರಾಂತೇ ಸಾ ಬಾಲಾ ತತ್ರೈವ ಪಿತೃಮಂದಿರೇ ।
ಚಕಾರೋದ್ಯಾಪನಂ ಸಮ್ಯಗ್ವಿಪ್ರಭೋಜನಪೂರ್ವಕಂ ॥ ೨ ॥
ದತ್ವಾ ಚ ದಕ್ಷಿಣಾಂ ತೇಭ್ಯೋ ಬ್ರಾಹ್ಮಣೇಭ್ಯೋ ಯಥಾರ್ಹತಃ ।
ವಿಸೃಜ್ಯ ತಾನ್ನಮಸ್ಕೃತ್ಯ ಪಿತೃಭ್ಯಾಮಭಿನಂದಿತಾ ॥ ೩ ॥
ಉಪೋಷಿತಾ ಸ್ವಯಂ ತಸ್ಮಿನ್ದಿನೇ ನಿಯಮಮಾಶ್ರಿತಾ ।
ಜಜಾಪ ಪರಮಂ ಮಂತ್ರಮುಪದಿಷ್ಟಂ ಮಹಾತ್ಮನಾ ॥ ೪ ॥
ಅಥ ಪ್ರದೋಷಸಮಯೇ ಪ್ರಾಪ್ತೇ ಸಂಪೂಜ್ಯ ಶಂಕರಂ ।
ತಸ್ಮಿನ್ಗೃಹಾಂತಿಕಮಠೇ ಗುರೋಸ್ತಸ್ಯ ಚ ಸನ್ನಿಧೌ ॥ ೫ ॥
ಜಪಾಽರ್ಚನರತಾ ಸಾಧ್ವೀ ಧ್ಯಾಯಂತೀ ಪರಮೇಶ್ವರಂ ।
ತಸ್ಮಿನ್ ಜಾಗರಣೇ ರಾತ್ರಾವುಪವಿಷ್ಟಾ ಶಿವಾಂತಿಕೇ ॥ ೬ ॥

---

### ಕನ್ನಡದ ಅನುವಾದ

#### ಶಾರದಾಖ್ಯಾನವರ್ಣನ

೧. ಸೂತನು ಹೇಳುತ್ತಾನೆ:—ಅವಳು ಹೀಗೆ ಗುರುವಿನ ಬಳಿ ನಿಯಮ ನಿರತಳಾಗಿ ಮಹಾವ್ರತವನ್ನಾಚರಿಸುತ್ತಿರಲು ಒಂದು ವರ್ಷವು ಕಳೆಯಿತು.

೨. ವರ್ಷದ ಕೊನೆಯಲ್ಲಿ ತಂದೆಯ ಮನೆಯಲ್ಲಿಯೇ ಉದ್ಯಾಪನೆಯನ್ನು ಮಾಡಿ ಆ ಶಾರದೆಯು ಬ್ರಾಹ್ಮಣಸಂತರ್ಪಣೆಯನ್ನು ಮಾಡಿಸಿದಳು.

೩. ಬ್ರಾಹ್ಮಣರಿಗೆ ಅರ್ಹತೆಗೆ ತಕ್ಕಂತೆ ದಕ್ಷಿಣೆಯನ್ನಿತ್ತು ನಮಸ್ಕರಿಸಿ ಅವರನ್ನು ಕಳುಹಿಸಿದಳು. ಇದರಿಂದ ತಂದೆತಾಯಿಗಳು ಅವಳನ್ನು ಹೊಗಳಿದರು.

೪. ಅವಳು ಆದಿನ ಉಪವಾಸವಿದ್ದು ನಿಯಮದಿಂದ ಮುನಿಯು ಉಪದೇಶಿಸಿದ ಮಂತ್ರವನ್ನು ಜಪಿಸಿದಳು.

೫-೬. ಅನಂತರ ಸಾಯಂಕಾಲ ಆ ಮನೆಯ ಹತ್ತಿರದ ಮಠದಲ್ಲಿ ಗುರುವಿನ ಸನ್ನಿಧಿಯಲ್ಲಿ ಜಪ, ಪೂಜೆಗಳಲ್ಲಿ ಆಸಕ್ತಳಾಗಿ ಶಿವನನ್ನೇ ಧ್ಯಾನಿಸುತ್ತ ನಿದ್ರೆಮಾಡದೆ ಕುಳಿತುಕೊಂಡಳು.

CC-0. Jangamwadi Math Collection. Digitized by eGangotri

ತಸ್ಯಾಂ ರಾತ್ರೌ ತಯಾ ಸಾರ್ಧಂ ಸಮುನಿರ್ಜಗದಂಬಿಕಾಂ ।
ಜಪಧ್ಯಾನ ತಪೋಭಿಶ್ಚ ತೋಷಯಾಮಾಸ ಪಾರ್ವತೀಂ ॥ ೭ ॥

ತಸ್ಯಾಶ್ಚ ಭಕ್ತ್ಯಾ ವ್ರತಭಾವಿತಾಯಾ
ಮುನೇಸ್ತಪೋಯೋಗಸಮಾಧಿನಾ ಚ ।
ತುಷ್ಟಾ ಭವಾನೀ ಜಗದೇಕಮಾತಾ
ಪ್ರಾದುರ್ಬಭೂವಾಽಕೃತಸಾಂದ್ರಮೂರ್ತಿಃ ॥ ೮ ॥

ಪ್ರಾದುರ್ಭೂತಾ ಯದಾ ಗೌರೀ ತಯೋರಗ್ರೇ ಜಗನ್ಮಯೀ ।
ಅಂಧೋಽಪಿ ತತ್ಕ್ಷಣಾದೇವ ಮುನಿಃ ಪ್ರಾಪ ದೃಶೋರ್ದ್ವಯಂ ॥ ೯ ॥
ತಾಂ ವೀಕ್ಷ್ಯ ಜಗತಾಂ ಧಾತ್ರೀಮಾವಿರ್ಭೂತಾಂ ಪುರಃ ಸ್ಥಿತಾಂ ।
ನಿಪೇತತುಸ್ತತ್ಪದಯೋಃ ಸ ಮುನಿಃ ಸಾ ಚ ಕನ್ಯಕಾ ॥ ೧೦ ॥

ತೌ ಭಕ್ತಿಭಾವೋಚ್ಛ್ವಸಿತಾಽಮಲಾಶಯಾ
ವಾನಂದಬಾಷ್ಪೋಕ್ಷಿತಸರ್ವಗಾತ್ರೌ ।
ಉತ್ಥಾಪ್ಯ ದೇವೀ ಕೃಪಯಾ ಪರಿಪ್ಲುತಾ
ಪ್ರೇಮ್ಣಾ ಬಭಾಷೇ ಮೃದುವಲ್ಗುಭಾಷಿಣೀ ॥ ೧೧ ॥

ದೇವ್ಯುವಾಚ :—

ಪ್ರೀತಾಽಸ್ಮಿ ತೇ ಮುನಿಶ್ರೇಷ್ಠ ವತ್ಸೇ ಪ್ರೀತಾಽಸ್ಮಿ ತೇಽನಘೇ ।
ಕಿಂ ವಾ ದದಾಮ್ಯಭಿಮತಂ ದೇವಾನಾಮಪಿ ದುರ್ಲಭಂ ॥ ೧೨ ॥

---

೭. ಆ ರಾತ್ರಿ ಆ ಮುನಿಯು ಆ ಪತಿವ್ರತೆಯೊಡನೆ ಜಪ, ಧ್ಯಾನ, ತಪಸ್ಸುಗಳಿಂದ ಜಗನ್ಮಾತೆಯಾದ ಪಾರ್ವತಿಯನ್ನು ಸಂತೋಷಗೊಳಿಸಿದನು.

೮. ವ್ರತವನ್ನಾಚರಿಸುತ್ತಿರುವ ಆ ಸಾಧ್ವಿಯ ಭಕ್ತಿಯಿಂದಲೂ, ಮುನಿಯ ತಪಸ್ಸು, ಯೋಗ, ಧ್ಯಾನಗಳಿಂದಲೂ, ತುಷ್ಟಳಾದ ಭವಾನಿಯು ಅವರಿಗೆ ಪ್ರತ್ಯಕ್ಷಳಾದಳು.

೯. ಗೌರಿಯು ಪ್ರತ್ಯಕ್ಷಳಾದ ಕೂಡಲೆ ಕುರುಡನಾದ ಆ ಮುನಿಯು ಕೂಡಲೆ ಎರಡು ಕಣ್ಣುಗಳನ್ನೂ ಪಡೆದನು.

೧೦. ಮುನಿಯೂ, ಶಾರದೆಯೂ ಪ್ರತ್ಯಕ್ಷಳಾಗಿ ಮುಂದೆ ನಿಂತಿರುವ ಆ ಜಗಜ್ಜನನಿಯನ್ನು ನೋಡಿ ಅವಳ ಪಾದಗಳಿಗೆರಗಿದರು.

೧೧. ಅವರಲ್ಲಿ ದಯೆಗೊಂಡ ಪಾರ್ವತಿಯು ಭಕ್ತಿಯಿಂದ ಹೆಚ್ಚಿದ ಪವಿತ್ರ ಭಾವನೆಯುಳ್ಳವರೂ, ಆನಂದಬಾಷ್ಪದಿಂದ ಒದ್ದೆಯಾದ ಸಮಸ್ತ ದೇಹವುಳ್ಳವರೂ ಆದ ಆ ಇಬ್ಬರು ಭಕ್ತರನ್ನೂ ಕುರಿತು ಮೃದುಮಧುರವಾದ ಮಾತಿನಿಂದ ಇಂತೆಂದಳು.

೧೨. ಮುನಿವರ್ಯ! ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ಮಗಳೆ! ನಿನ್ನ

CC-0. Jangamwadi Math Collection. Digitized by eGangotri

ಮುನಿರುವಾಚ :—

ಏಷಾ ತು ಶಾರದಾ ನಾಮ ಕನ್ಯಾ ತು ಗತಭರ್ತೃಕಾ ।
ಮಯಾ ಪ್ರತಿಶ್ರುತಂ ಚಾಽಸ್ಯೈ ತುಷ್ಟೇನ ಗತಚಕ್ಷುಷಾ ॥ ೧೩ ॥
ಸಹ ಬರ್ತ್ರಾ ಚಿರಂ ಕಾಲಂ ವಿಹೃತ್ಯ ಸುತಮುತ್ತಮಂ ।
ಲಭಸ್ವೇತಿ ಮಯಾ ಪ್ರೋಕ್ತಂ ಸತ್ಯಂ ಕುರು ನಮೋಽಸ್ತುತೇ ॥ ೧೪ ॥

ಶ್ರೀ ದೇವ್ಯುವಾಚ :—

ಏಷಾ ಪೂರ್ವಭವೇ ಬಾಲಾ ದ್ರಾವಿಡಸ್ಯ ದ್ವಿಜನ್ಮನಃ ।
ಆಸೀದ್ದ್ವಿತೀಯಾ ದಯಿತಾ ಭಾಮಿನೀ ನಾಮ ವಿಶ್ರುತಾ ॥ ೧೫ ॥
ಸಾ ಭರ್ತೃಪ್ರೇಯಸೀ ನಿತ್ಯಂ ರೂಪಮಾಧುರ್ಯಪೇಶಲಾ ।
ಭರ್ತಾರಂ ವಶಮಾನಿನ್ಯೇ ರೂಪವಶ್ಯಾದಿಕೈತವೈಃ ॥ ೧೬ ॥
ಅಸ್ಯಾಂ ಚಾಸಕ್ತಹೃದಯಃ ಸ ವಿಪ್ರೋ ಮೋಹಯಂತ್ರಿತಃ ।
ಕದಾಚಿದಪಿ ನೈವಾಽಗಾಜ್ಜ್ಯೇಷ್ಠಪತ್ನೀಂ ಪತಿವ್ರತಾಂ ॥ ೧೭ ॥
ಅನಭ್ಯಾಗಮನಾದ್ಭರ್ತುಃ ಸಾ ನಾರೀ ಪುತ್ರವರ್ಜಿತಾ ।
ಸದಾ ಶೋಕೇನ ಸಂತಪ್ತಾ ಕಾಲೇನ ನಿಧನಂ ಗತಾ ॥ ೧೮ ॥
ಅಸ್ಯಾ ಗೃಹ ಸಮೀಪಸ್ಥೋ ಯಃ ಕಶ್ಚಿದ್ಬ್ರಾಹ್ಮಣೋ ಯುವಾ ।
ಇಮಾಂ ವೀಕ್ಷ್ಯಾಽಥ ಚಾರ್ವಂಗೀಂ ಕಾಮಾರ್ತಃ ಕರಮಗ್ರಹೀತ್ ॥೧೯॥

---

ತಪಸ್ಸಿಗೂ ಮೆಚ್ಚಿರುವೆನು. ದೇವತೆಗಳಿಗೂ ದುರ್ಲಭವಾದ ಯಾವ ವರವನ್ನು ನಿಮಗೀಯಲಿ.

೧೩–೧೪. "ಕಣ್ಣಿಲ್ಲದ ನಾನು ವಿಧವೆಯಾದ ಈ ಶಾರದೆಗೆ ಒಲಿದು ಗಂಡನೊಡನೆ ಬಹುಕಾಲ ವಿಹರಿಸಿ ಉತ್ತಮ ಪುತ್ರನನ್ನು ಪಡೆಯೆಂದು ಹೇಳಿರುವೆನು. ದೇವಿ! ಇದನ್ನು ನಡೆಯಿಸು. ನಿನಗೆ ನಮಸ್ಕಾರವು."

೧೫–೧೬. ಶ್ರೀದೇವಿಯು ಹೇಳುತ್ತಾಳೆ:—"ಇವಳು ಹಿಂದಿನ ಜನ್ಮದಲ್ಲಿ ದ್ರವಿಡದೇಶದ ಬ್ರಾಹ್ಮಣನಿಗೆ ಭಾಮಿನಿಯೆಂದು ಪ್ರಸಿದ್ಧಳಾಗಿ ಎರಡನೆ ಹೆಂಡತಿಯಾಗಿದ್ದಳು. ಇವಳು ಸೌಂದರ್ಯಾದಿಗಳಿಂದ ಗಂಡನಿಗೆ ಪ್ರಿಯಳಾಗಿ ಅವನನ್ನು ಸೌಂದರ್ಯ, ವಶೀಕರಣ ಸಾಮಗ್ರಿಗಳಿಂದ ತನ್ನ ವಶಮಾಡಿಕೊಂಡಳು.

೧೭. ಅದರಿಂದ ಇವಳಲ್ಲಿ ಆಸಕ್ತನಾದ ಆ ಬ್ರಾಹ್ಮಣನು ಮೋಹಗೊಂಡು ಒಂದುದಿನವಾದರೂ ಪತಿವ್ರತೆಯಾದ ಹಿರಿಯ ಹೆಂಡತಿಯ ಬಳಿಗೆ ಹೋಗಲಿಲ್ಲ.

೧೮. ಗಂಡನು ತನ್ನೆಡೆಗೆ ಬಾರದಿರುವುದರಿಂದ ಮಕ್ಕಳಿಲ್ಲದ ಆ ಹಿರಿಯ ಹೆಂಡತಿಯು ಯಾವಾಗಲೂ ದುಃಖಿಸುತ್ತಿದ್ದು ಕಾಲಕ್ರಮದಿಂದ ಮಡಿದಳು.

೧೯. ಈ ಭಾಮಿನಿಯ ಮನೆಯ ಸಮೀಪದಲ್ಲಿ ವಾಸವಾಗಿದ್ದ ಒಬ್ಬ

CC-0. Jangamwadi Math Collection. Digitized by eGangotri

ಅನಯಾ ರೋಷತಾಮ್ರಾಕ್ಷ್ಯಾ ಸವಿಪ್ರಸ್ತು ನಿವಾರಿತಃ ।
ಇಮಾಂ ಸ್ಮರನ್ದಿವಾ ನಕ್ತಂ ನಿಧನಂ ಪತ್ಯಪದ್ಯತ ॥ ೨೦ ॥
ಏಷಾ ಸಂಮೋಹ್ಯ ಭರ್ತಾರಂ ಜ್ಯೇಷ್ಠಪತ್ನ್ಯಾಂ ಪರಾಙ್ಮುಖಂ ।
ಚಕಾರ ತೇನ ಪಾಪೇನ ಭವೇಽಸ್ಮಿನ್ವಿಧವಾಽಭವತ್ ॥ ೨೧ ॥
ಯಾಃ ಕುರ್ವಂತಿ ಸ್ತ್ರಿಯೋ ಲೋಕೇ ಜಾಯಾಪತ್ಯೋಶ್ಚ ವಿಪ್ರಿಯಂ ।
ತಾಸಾಂ ಕೌಮಾರವೈಧವ್ಯಮೇಕವಿಂಶತಿಜನ್ಮಸು ॥ ೨೨ ॥
ಯದೇತಯಾ ಪೂರ್ವಭವೇ ಮತ್ಪೂಜಾ ಮಹತೀ ಕೃತಾ ।
ತೇನ ಪುಣ್ಯೇನ ತತ್ಪಾಪಂ ನಷ್ಟಂ ಸರ್ವಂ ತದೈವಹಿ ॥ ೨೩ ॥
ಯೋ ವಿಪ್ರೋ ವಿರಹಾರ್ತಃ ಸನ್ಮೃತಃ ಕಾಮವಿಮೋಹಿತಃ ।
ಸೋಽಸ್ಯಾಃ ಪಾಣಿಗ್ರಹಂ ಕೃತ್ವಾ ಭವೇಽಸ್ಮಿನ್ನಿಧನಂ ಗತಃ ॥ ೨೪ ॥
ಪ್ರಾಗ್ಜನ್ಮಪತಿರೇತಸ್ಯಾಃ ಪಾಂಡ್ಯರಾಷ್ಟ್ರೇಷು ಸೋಽಧುನಾ ।
ಜಾತೋ ವಿಪ್ರವರಃ ಶ್ರೀಮಾನ್ಸದಾರಃ ಸಪರಿಚ್ಛದಃ ॥ ೨೫ ॥
ತೇನ ಭರ್ತ್ರಾ ಪ್ರತಿನಿಶಂ ಸ್ವೈಷಾ ಪ್ರೇಮ್ಣಾಽಭಿಸಂಗತಾ ।
ಸ್ವಪ್ನೇ ರತಿಸುಖಂ ಯಾತು ಶ್ರೇಷ್ಠಂ ಜಾಗರಣಾದಪಿ ॥ ೨೬ ॥

---

ಬ್ರಾಹ್ಮಣಯುವಕನು ಸುಂದರಿಯಾದ ಇವಳನ್ನು ನೋಡಿ ಕಾಮಪೀಡಿತನಾಗಿ ಇವಳ ಕೈಯನ್ನು ಹಿಡಿದನು.

೨೦. ಇವಳು ಕೋಪದಿಂದ ಕೆಂಪೇರಿದ ಕಣ್ಣುಳ್ಳವಳಾಗಿ ಆ ಬ್ರಾಹ್ಮಣನನ್ನು ನಿರಾಕರಿಸಲು ಅವನು ಇವಳನ್ನೆ ಹಗಲು ರಾತ್ರಿ ಸ್ಮರಿಸುತ್ತ ಮಡಿದನು.

೨೧. ಇವಳು ಗಂಡನನ್ನು ಮೋಹಗೊಳಿಸಿ ಹಿರಿಯ ಹೆಂಡತಿಯನ್ನು ತೊರೆಯಿಸಿದ ಪಾಪದಿಂದ ಈ ಜನ್ಮದಲ್ಲಿ ವಿಧವೆಯಾದಳು.

೨೨. ಲೋಕದಲ್ಲಿ ದಂಪತಿಗಳಿಗೆ ಯಾರು ಕೆಟ್ಟುದನ್ನು ಮಾಡುವರೊ; ಅವರು ಇಪ್ಪತ್ತೊಂದು ಜನ್ಮಗಳಲ್ಲಿ ಬಾಲವಿಧವೆಯರಾಗುವರು.

೨೩. ಇವಳು ಹಿಂದಿನ ಜನ್ಮದಲ್ಲಿ ಅಧಿಕವಾಗಿ ನನ್ನ ಪೂಜೆಯನ್ನು ಮಾಡಿದ ಪುಣ್ಯದಿಂದ ಆ ಪಾಪವೆಲ್ಲವೂ ಆಗಲೆ ಪರಿಹಾರವಾಯಿತು.

೨೪. ಯಾವ ಬ್ರಾಹ್ಮಣನು ಇವಳ ಅಗಲಿಕೆಯಿಂದ ಕಾಮಪೀಡಿತನಾಗಿ ಮಡಿದನೊ, ಅವನೇ ಈ ಜನ್ಮದಲ್ಲಿ ಇವಳನ್ನು ಮದುವೆಮಾಡಿಕೊಂಡು ಮೃತನಾದನು.

೨೫. ಇವಳ ಹಿಂದಿನ ಜನ್ಮದ ಪತಿಯಾದ ಬ್ರಾಹ್ಮಣನು ಈಗ ಪಾಂಡ್ಯದೇಶದಲ್ಲಿ ಪತ್ನೀಸಮೇತನಾಗಿದ್ದಾನೆ.

೨೬. ಇವಳು ಪ್ರತಿ ರಾತ್ರಿಯೂ ಆ ಗಂಡನೊಡನೆ ಸ್ವಪ್ನದಲ್ಲಿ ಪ್ರೀತಿಯಿಂದ ಸೇರಿ ಜಾಗರಣ ಕಾಲಕ್ಕಿಂತ ಹೆಚ್ಚಾದ ರತಿಸೌಖ್ಯವನ್ನು ಪಡೆಯಲಿ.

CC-0. Jangamwadi Math Collection. Digitized by eGangotri

ಷಷ್ಟ್ಯುತ್ತರತ್ರಿಶತಯೋಜನದೂರಸಂಸ್ಥೇ
ದೇಶಾದಿತೋ ದ್ವಿಜವರಃ ಸ ಚ ಕರ್ಮಗತ್ಯಾ ।
ಏನಾಂ ವಧೂಂ ಪ್ರತಿನಿಶಂ ಮನಸೋಽಭಿರಾಮಾಂ
ಸ್ವಪ್ನೇಷು ಪಶ್ಯತಿ ಚಿರಂ ರತಿಮಾದಧಾನಃ ॥ ೨೭ ॥
ಸೈಷಾ ವೈ ಸ್ವಪ್ನಸಂಗತ್ಯಾ ಪತ್ಯುಃ ಪ್ರತಿನಿಶಂ ಸತೀ ।
ಕಾಲೇನ ಲಪ್ಸ್ಯತೇ ಪುತ್ರಂ ವೇದವೇದಾಂಗಪಾರಗಂ ॥ ೨೮ ॥
ಏತಸ್ಯಾಂ ತನಯಂ ಜಾತಮಾತ್ಮನಶ್ಚಿರಸಂಗಮಾತ್ ।
ಸೋಽಪಿ ವಿಪ್ರೋಽನಿಶಂ ಸ್ವಪ್ನೇ ದ್ರಕ್ಷ್ಯತಿ ಪ್ರೇಮಭಾವಿತಂ ॥ ೨೯ ॥
ಅನಯಾಽರಾಧಿತಾ ಪೂರ್ವೇ ಭವೇ ಸಾಽಹಂ ಮಹಾಮುನೇ ।
ಅಸ್ಯೈವ ವರದಾನಾಯ ಪ್ರಾದುರ್ಭೂತಾಸ್ಮಿ ಸಾಂಪ್ರತಂ ॥ ೩೦ ॥
ಸೂತ ಉವಾಚ :—
ಅಥೋವಾಚ ಮಹಾದೇವೀ ತಾಂ ಬಾಲಾಂ ಪ್ರತಿ ಸಾದರಂ ।
ಅಯಿ ವತ್ಸೇ ಮಹಾಭಾಗೇ ಶೃಣು ಮೇ ಪರಮಂ ವಚಃ ॥ ೩೧ ॥
ಯದಾ ಕದಾಽಪಿ ಭರ್ತಾರಂ ಕ್ವಾಽಪಿ ದೇಶೇ ಪುರಾತನಂ ।
ದ್ರಕ್ಷ್ಯಸಿ ಸ್ವಪ್ನದೃಷ್ಟಂ ಪ್ರಾಕ್ ಜ್ಞಾಸ್ಯಸೇ ತ್ವಂ ವಿಚಕ್ಷಣಾ ॥ ೩೨ ॥

---

೨೭. ಈ ದೇಶದಿಂದ ಮುನ್ನೂರ ಅರುವತ್ತು ಗಾವುದದ ದೂರದಲ್ಲಿರುವ ಆ ಬ್ರಾಹ್ಮಣೋತ್ತಮನು ಕರ್ಮವಶದಿಂದ ಪ್ರತಿ ರಾತ್ರಿಯಲ್ಲಿಯೂ ತನಗೆ ಪ್ರಿಯಳಾದ ಇವಳನ್ನು ಅನುರಾಗದಿಂದ ಸ್ವಪ್ನದಲ್ಲಿ ನೋಡುತ್ತಾನೆ.

೨೮. ಸಾಧ್ವಿಯಾದ ಇವಳು ಪ್ರತಿರಾತ್ರಿಯೂ ಆ ಪತಿಯ ಸ್ವಪ್ನಸಮಾಗಮದಿಂದ ಕೆಲವು ಕಾಲದ ಮೇಲೆ ವೇದವೇದಾಂಗಪಾರಂಗತನಾದ ಮಗನನ್ನು ಪಡೆಯುವಳು.

೨೯. ಆ ಬ್ರಾಹ್ಮಣನು ಇವಳಲ್ಲಿ ತನ್ನಿಂದ ಜನಿಸಿದ ಪ್ರಿಯಪುತ್ರನನ್ನು ಸ್ವಪ್ನದಲ್ಲಿ ಯಾವಾಗಲೂ ನೋಡುವನು.

೩೦. ಮುನಿವರ್ಯ! ಹಿಂದಿನ ಜನ್ಮದಲ್ಲಿ ಇವಳು ನನ್ನನ್ನು ಪೂಜಿಸಿರುವುದರಿಂದ ಇವಳಿಗೆ ವರವನ್ನೀಯಲು ನಾನೀಗ ಪ್ರತ್ಯಕ್ಷಳಾಗಿರುವೆನು.''

೩೧. ಸೂತನು ಹೇಳುತ್ತಾನೆ:— ಬಳಿಕ ಗೌರಿಯು ಆ ಬಾಲೆಯನ್ನು ಕುರಿತು ಪ್ರೀತಿಯಿಂದ ಹೀಗೆಂದಳು :—'' ಮಗು! ಭಾಗ್ಯವಂತಳಾದ ನೀನು ನನ್ನ ಮಾತನ್ನು ಕೇಳು.

೩೨. ಬುದ್ಧಿಶಾಲಿನಿಯಾದ ನೀನು ಯಾವಾಗಲಾದರೂ ಹಿಂದೆ ಸ್ವಪ್ನದಲ್ಲಿ ಕಂಡ ಆ ಹಿಂದಿನ ಪತಿಯನ್ನು ನೋಡುವೆ.

CC-0. Jangamwadi Math Collection. Digitized by eGangotri

ತ್ವಾಂ ದ್ರಕ್ಷ್ಯತಿ ಸ ವಿಪ್ರೋಽಪಿ ಸುನಯಾಂ ಸ್ವಪ್ನಲಕ್ಷಣಾಂ ।
ತದಾ ಪರಸ್ಪರಾಲಾಪೋ ಯುವಯೋಃ ಸಂಭವಿಷ್ಯತಿ ॥ ೩೩ ॥
ತದಾ ಸ್ವತನಯಂ ಭದ್ರೇ ತಸ್ಮೈ ದೇಹಿ ಬಹುಶ್ರುತಂ ।
ಫಲಮಸ್ಯ ವ್ರತಸ್ಯಾಗ್ರ್ಯಂ ತಸ್ಯ ಹಸ್ತೇ ಸಮರ್ಪಯ ॥ ೩೪ ॥
ತತಃ ಪ್ರಭೃತಿ ತಸ್ಯೈವ ವಶೇ ತಿಷ್ಠ ಸುಮಧ್ಯಮೇ ।
ಯುವಯೋರ್ದೈಹಿಕಃ ಸಂಗೋ ಮಾಽಭೂತ್ಸ್ವಪ್ನರತಾದೃತೇ ॥ ೩೫ ॥
ಕಾಲಾತ್ಪಂಚತ್ವಮಾಪನ್ನೇ ತಸ್ಮಿನ್ಬ್ರಾಹ್ಮಣಸತ್ತಮೇ ।
ಅಗ್ನಿಂ ಪ್ರವಿಶ್ಯ ತೇನೈವ ಸಹ ಯಾಸ್ಯಸಿ ಮತ್ಪದಂ ॥ ೩೬ ॥
ಪುತ್ರಸ್ತೇ ಭವಿತಾ ಸುಭ್ರು ಸರ್ವಲೋಕಮನೋರಮಃ ।
ಸಂಪದಶ್ಚ ಭವಿಷ್ಯಂತಿ ಪ್ರಾಪ್ಸ್ಯತೇ ಪರಮಂ ಪದಂ ॥ ೩೭ ॥

ಸೂತ ಉವಾಚ:—

ಇತ್ಯುಕ್ತ್ವಾ ತ್ರಿಜಗನ್ಮಾತಾ ದತ್ವಾ ತಸ್ಯೈ ಮನೋರಥಂ ।
ತಯೋಃ ಸಂಪಶ್ಯತೋರೇವ ಕ್ಷಣೇನಾಽದರ್ಶನಂ ಗತಾ ॥ ೩೮ ॥
ಸಾಽಪಿ ಬಾಲಾ ವರಂ ಲಬ್ಧ್ವಾ ಪಾರ್ವತ್ಯಾಃ ಕರುಣಾನಿಧೇಃ ।
ಅವಾಪ ಪರಮಾನಂದಂ ಪೂಜಯಾಮಾಸ ತಂ ಗುರುಂ ॥ ೩೯ ॥

---

೩೩. ಅವನೂ ಸುನಯಳೆಂಬ ನಿನ್ನನ್ನು ನೋಡುವನು, ಆಗ ನಿಮ್ಮಿಬ್ಬರಿಗೆ ಸಂಭಾಷಣೆ ನಡೆಯುವುದು.

೩೪. ಆಗ ನೀನು ಈ ವ್ರತದ ಶ್ರೇಷ್ಠಫಲರೂಪನೂ, ವಿದ್ವಾಂಸನೂ ಆದ ನಿನ್ನ ಮಗನನ್ನು ಅವನಿಗೆ ಒಪ್ಪಿಸು.

೩೫. ಸುಂದರಿ! ಅದು ಮೊದಲ್ಗೊಂಡು ನೀನು ಅವನ ಅಧೀನದಲ್ಲಿಯೇ ಇರು. ನಿಮ್ಮಿರ್ವರಿಗೆ ಸ್ವಪ್ನಸಂಗದ ಹೊರತು ದೈಹಿಕಸಂಗವು ಆಗದಿರಲಿ.

೩೬. ಕಾಲಕ್ರಮದಿಂದ ಆ ಬ್ರಾಹ್ಮಣೋತ್ತಮನು ಮಡಿಯಲು ನೀನೂ ಅವನೊಡನೆ ಅಗ್ನಿಯನ್ನು ಪ್ರವೇಶಿಸಿ ನನ್ನ ಸ್ಥಾನಕ್ಕೆ ಬರುವೆ.

೩೭. ನಿನಗೆ ಸಮಸ್ತಲೋಕಗಳಲ್ಲಿಯೂ ಮನೋಹರನಾದ ಮಗನು ಜನಿಸುವನು. ಸಂಪತ್ತುಗಳು ವೃದ್ಧಿಯಾಗುವುವು. ಉತ್ತಮಸ್ಥಾನವನ್ನು ಪಡೆಯುವೆ.''

೩೮. ಸೂತನು ಹೇಳುತ್ತಾನೆ:—ಜಗನ್ಮಾತೆಯಾದ ಗೌರೀದೇವಿಯು ಹೀಗೆಂದು ಅವಳ ಅಭೀಷ್ಟವನ್ನಿತ್ತು ಅವರಿಬ್ಬರೂ ನೋಡುತ್ತಿರುವಾಗಲೆ ಕಣ್ಮರೆಯಾದಳು.

೩೯. ಆ ಶಾರದೆಯೂ ದಯಾಳುವಾದ ಆ ಪಾರ್ವತಿಯಿಂದ ವರವನು ಪಡೆದು ಅತ್ಯಾನಂದವನ್ನು ಹೊಂದಿ ಆ ಗುರುವನ್ನು ಪೂಜಿಸಿದಳು.

CC-0. Jangamwadi Math Collection. Digitized by eGangotri

ತಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ಸಮುನಿರ್ಲಬ್ಧಲೋಚನಃ ।
ತಸ್ಯಾಃ ಪಿತ್ರೋರೀಕ್ಷ್ಯ ತತ್ಸರ್ವಂ ರಹಸ್ಯಾಚಷ್ಟ ಧರ್ಮವಿತ್ ॥ ೪೦ ॥
ಅಥ ಸರ್ವಾನುಪಾಮಂತ್ರ್ಯ ಶಾರದಾಂ ಚ ಯಶಸ್ವಿನೀಂ ।
ವಿಧಾಯಾಽನುಗ್ರಹಂ ತೇಷಾಂ ಯಯೌ ಸ್ವೈರಗತಿರ್ಮುನಿಃ ॥ ೪೧ ॥
ಏವಂ ದಿನೇಷು ಗಚ್ಛತ್ಸು ಸಾ ಬಾಲಾ ಚ ಪ್ರತಿಕ್ಷಣಂ ।
ಭರ್ತುಃ ಸಮಾಗಮಂ ಲೇಭೇ ಸ್ವಪ್ನೇ ಸುಖವಿವರ್ಧನಂ ॥ ೪೨ ॥
ಗೌರ್ಯಾ ವರಪ್ರದಾನೇನ ಶಾರದಾ ವಿಶದವ್ರತಾ ।
ದಧಾರ ಗರ್ಭಂ ಸ್ವಪ್ನೇಽಪಿ ಭರ್ತುಃ ಸಂಗಾಽನುಭಾವತಃ ॥ ೪೩ ॥
ತಾಂ ಶ್ರುತ್ವಾ ಭರ್ತೃರಹಿತಾಂ ಶಾರದಾಂ ಗರ್ಭಿಣೀಂ ಸತೀಂ ।
ಸರ್ವೇ ಧಿಗಿತಿ ಪ್ರೋಚುಸ್ತಾಂ ಜಾರಿಣೀತಿ ಜಗುರ್ಜನಾಃ ॥ ೪೪ ॥
ಸಂಪರೇತಸ್ಯ ತದ್ಭರ್ತುರ್ಯೇ ಜಾತಿಕುಲಬಾಂಧವಾಃ ।
ತಾಂ ವಾರ್ತಾಂ ದುಃಸಹಾಂ ಶ್ರುತ್ವಾ ಯಯುಸ್ತತ್ಪಿತೃಮಂದಿರಂ ॥ ೪೫ ॥
ಅಥ ಸರ್ವೇ ಸಮಾಯಾತಾ ಗ್ರಾಮವೃದ್ಧಾಶ್ಚ ಪಂಡಿತಾಃ ।
ಸಮಾಜಂ ಚಕ್ರಿರೇ ತತ್ರ ಕುಲವೃದ್ಧೈಃ ಸಮನ್ವಿತಂ ॥ ೪೬ ॥
ಅಂತರ್ವತ್ನೀಂ ಸಮಾಹೂಯ ಶಾರದಾಂ ವಿನತಾನನಾಂ ।
ಅತರ್ಜಯನ್ಸುಸಂಕ್ರುದ್ಧಾಃ ಕೇಚಿದಾಸನ್ಪರಾಙ್ಮುಖಾಃ ॥ ೪೭ ॥

---

೪೦. ಪಾರ್ವತಿಯಿಂದ ಕಣ್ಣನ್ನು ಪಡೆದ ಧರ್ಮಜ್ಞನಾದ ಆ ಮುನಿಯು ಬೆಳಗಾಗಲು ಅವಳ ತಂದೆತಾಯಿಗಳಿಗೆ ನಡೆದ ವೃತ್ತಾಂತವನ್ನೆಲ್ಲ ಗುಟ್ಟನಲ್ಲಿ ಹೇಳಿದನು.

೪೧–೪೨. ಆ ಮುನಿಯು ತರುವಾಯ ಶಾರದೆಯನ್ನೂ, ಉಳಿದವರನ್ನೂ ಕರೆದು ಸ್ವೇಚ್ಛೆಯಾಗಿ ಹೊರಟುಹೋದನು. ಹೀಗೆ ದಿವಸಗಳು ಕಳೆಯುತ್ತಿರಲು ಆ ಶಾರದೆಯು ಸ್ವಪ್ನದಲ್ಲಿ ಸುಖವನ್ನು ಹೆಚ್ಚಿಸುವ ಪತಿಸಂಗವನ್ನು ಪಡೆದಳು.

೪೩. ಶುದ್ಧವಾದ ವ್ರತವುಳ್ಳ ಅವಳು ಗೌರಿಯ ವರದಾನದಿಂದೊದಗಿದ ಗಂಡನ ಸ್ವಪ್ನಸಮಾಗಮದಿಂದ ಗರ್ಭಿಣಿಯಾದಳು.

೪೪. ವಿಧವೆಯಾದ ಶಾರದೆಯು ಗರ್ಭಿಣಿಯಾಗಿರುವುದನ್ನು ಕೇಳಿ ಅವಳು ಸಾಧ್ವಿಯಾಗಿದ್ದರೂ ಎಲ್ಲರೂ ಅವಳನ್ನು ವ್ಯಭಿಚಾರಿಣಿಯೆಂದು ನಿಂದಿಸಿದರು.

೪೫. ಮೃತನಾದ ಆ ಶಾರದೆಯ ಗಂಡನ ವಂಶದ ಬಂಧುಗಳು ಸಹಿಸಲಾಗದ ಆ ಸಮಾಚಾರವನ್ನು ಕೇಳಿ ಅವಳ ತಂದೆಯ ಮನೆಗೆ ಹೋದರು.

೪೬. ತರುವಾಯ ಬಂದಿರುವ ಬಂಧುಗಳೂ, ಗ್ರಾಮವೃದ್ಧರೂ, ಪಂಡಿತರೂ ವಂಶದಲ್ಲಿ ವೃದ್ಧರಾದವರೂ ಎಲ್ಲರೂ ಸೇರಿ ಸಭೆಯನ್ನು ಮಾಡಿದರು.

೪೭. ಅವರು ಗರ್ಭಿಣಿಯಾಗಿ ತಲೆತಗ್ಗಿಸಿಕೊಂಡಿರುವ ಶಾರದೆಯನ್ನು ಕರೆದು ಸಿಟ್ಟಿನಿಂದ ಹೆದರಿಸಿದರು. ಕೆಲವರು ಮುಖವನ್ನು ತಿರುಗಿಸಿಕೊಂಡರು.


CC-0. Jangamwadi Math Collection. Digitized by eGangotri

ಅಯಿ ಜಾರಿಣಿ ದುರ್ಬುದ್ಧೇ ಕಿಮೇತತ್ತೇ ವಿಚೇಷ್ಟಿತಂ ।
ಅಸ್ಮತ್ಕುಲೇ ಸುದುಷ್ಕೀರ್ತಿಂ ಕೃತವತ್ಯಸಿ ಬಾಲಿಶೇ ॥ ೪೮ ॥
ಇತಿ ಸಂತರ್ಜಯಂತಸ್ತೇ ಗ್ರಾಮವೃದ್ಧಾ ಮನೀಷಿಣಃ ।
ಸರ್ವೇ ಸಮ್ಮಂತ್ರಯಾಮಾಸುಃ ಕಿಂ ಕುರ್ಮ ಇತಿ ಭಾಷಿಣಃ ॥ ೪೯ ॥
ತತ್ರೋಚುಃ ಕೇಚ ವೃದ್ಧಾಸ್ತಾಂ ಬಾಲಾಂ ಪ್ರತಿ ವಿನಿರ್ದಯಾಃ ।
ಏಷಾ ಪಾಪಮತಿರ್ಬಾಲಾ ಕುಲದ್ವಯವಿನಾಶಿನೀಂ ॥ ೫೦ ॥
ಕೃತ್ವಾಽಸ್ಯಾಃ ಕೇಶವಪನಂ ಛಿತ್ವಾ ಕರ್ಣೌಚ ನಾಸಿಕಾಂ ।
ನಿರ್ವಾಸ್ಯತಾಂ ಬಹಿರ್ಗ್ರಾಮಾತ್ಪರಿತ್ಯಜ್ಯ ಸ್ವಗೋತ್ರತಃ ॥ ೫೧ ॥
ಇತಿ ಸರ್ವೇ ಸಮಾಲೋಚ್ಯ ತಾಂ ತಥಾ ಕರ್ತುಮುದ್ಯತಾಃ ।
ಅಥಾಂಽತರಿಕ್ಷೇ ಸಂಭೂತಾ ಶುಶ್ರುವೇ ವಾಗಗೋಚರಾ ॥ ೫೨ ॥
ಅನಯಾ ನ ಕೃತಂ ಪಾಪಂ ನ ಚೈವ ಕುಲದೂಷಣಂ ।
ವ್ರತಭಂಗೋ ನ ಚೈತಸ್ಯಾಸ್ಸುಚರಿತ್ರೇಯಮಂಗನಾ ॥ ೫೩ ॥
ಇತಃ ಪರಮಿಯಂ ನಾರೀ ಜಾರಿಣೀತಿ ವದಂತಿ ಯೇ ।
ತೇಷಾಂ ದೋಷವಿಮೂಢಾನಾಂ ಸದ್ಯೋ ಜಿಹ್ವಾ ವಿದೀರ್ಯತೇ ॥ ೫೪ ॥
ಇತ್ಯಂತರಿಕ್ಷೇ ಜನಿತಾಂ ವಾಣೀಂ ಶ್ರುತ್ವಾಽಶರೀರಿಣೀಂ ।
ಸರ್ವೇ ಪ್ರಜಹೃಷುಸ್ತಸ್ಯಾ ಜನನೀಜನಕಾದಯಃ ॥ ೫೫ ॥

---

೪೮. "ಎಲೌ ದುಷ್ಟಬುದ್ಧಿಯುಳ್ಳ ಮೂಢಳೆ! ನೀನು ವ್ಯಭಿಚಾರಿಣಿಯಾಗಿ ಎಂತಹ ಕಾರ್ಯವನ್ನೆಸಗಿದೆ. ನಮ್ಮ ವಂಶಕ್ಕೆ ಅಪಕೀರ್ತಿಯನ್ನು ತಂದಿರುವೆ."

೪೯. ಹೀಗೆ ಅಜ್ಞಾನಿಗಳಾದ ಗ್ರಾಮವೃದ್ಧರು ಅವಳನ್ನು ಬೆದರಿಸುತ್ತ ಈಗ ಏನನ್ನು ಮಾಡೋಣ ಎಂದು ಹೇಳುತ್ತ ಎಲ್ಲರೂ ಆಲೋಚಿಸಿದರು.

೫೦-೫೧. ಅಲ್ಲಿ ನೆರೆದ ಕೆಲವರು ವೃದ್ಧರು ಆ ಬಾಲೆಯಲ್ಲಿ ದಯೆಯಿಲ್ಲದವರಾಗಿ ಈ ಪಾಪಬುದ್ಧಿಯುಳ್ಳವಳು ಎರಡು ವಂಶಗಳನ್ನೂ ಹಾಳುಮಾಡಿರುವಳು. "ಇವಳ ತಲೆಯನ್ನು ಬೋಳಿಸಿ ಕಿವಿ ಮೂಗುಗಳನ್ನು ಕತ್ತರಿಸಿ ಗೋತ್ರದಿಂದ ಬಿಡಿಸಿ ಗ್ರಾಮದ ಹೊರಗೆ ತಳ್ಳಿರಿ" ಎಂದರು.

೫೨. ಹೀಗೆ ಅವರೆಲ್ಲರೂ ಆಲೋಚಿಸಿ ಅವಳನ್ನು ಹಾಗೆಯೇ ಮಾಡಲು ಉದ್ಯುಕ್ತರಾದರು. ಆಗ ಆಕಾಶದಲ್ಲಿ ಅಶರೀರವಾಣಿಯು ಕೇಳಿಸಿತು.

೫೩. "ಇವಳು ಪಾಪವನ್ನು ಮಾಡಲಿಲ್ಲ. ಕುಲವನ್ನು ಕೆಡಿಸಲಿಲ್ಲ. ಇವಳ ವ್ರತವು ಹಾಳಾಗಲಿಲ್ಲ. ಇವಳು ಒಳ್ಳೆಯ ನಡತೆಯುಳ್ಳವಳು.

೫೪. ಇನ್ನುಮುಂದೆ ಇವಳನ್ನು ಜಾರಿಣಿಯೆಂದು ಹೇಳುವ ದೋಷಜ್ಞಾನವಿಲ್ಲದವರ ನಾಲಿಗೆಯು ಕೂಡಲೆ ಸೀಳಿಹೋಗುವುದು."

೫೫. ಹೀಗೆ ಆಕಾಶದಲ್ಲಿ ಉಂಟಾದ ಅಶರೀರವಾಣಿಯನ್ನು ಕೇಳಿ ಅವಳ ತಾಯಿತಂದೆ ಮೊದಲಾದವರು ಸಂತೋಷಗೊಂಡರು.

CC-0. Jangamwadi Math Collection. Digitized by eGangotri

ತತಃ ಸಸಂಭ್ರಮಾಃ ಸರ್ವೇ ಗ್ರಾಮವೃದ್ಧಾಃ ಸಭಾಜನಾಃ ।
ಮುಹೂರ್ತಂ ಮೌನಮಾಲಂಬ್ಯ ಭೀತಾಸ್ತಸ್ಥುರಧೋಮುಖಾಃ ॥ ೫೬ ॥
ತತ್ರ ಕೇಚಿದವಿಶ್ವಸ್ತಾ ಮಿಥ್ಯಾವಾಣೀತ್ಯವಾದಿಷುಃ ।
ತೇಷಾಂ ಜಿಹ್ವಾ ದ್ವಿಧಾ ಭಿನ್ನಾ ವವಮುಸ್ತೇ ಕೃಮೀನ್ಕ್ಷಣಾತ್ ॥ ೫೭ ॥
ತತಃ ಸಂಪೂಜಯಾಮಾಸುಸ್ತಾಂ ಬಾಲಾಂ ಜ್ಞಾತಿಬಾಂಧವಾಃ ।
ಬಾಂಧವಾಶ್ಚ ಸ್ತ್ರಿಯೋ ವೃದ್ಧಾಃ ಶಶಂಸುಃ ಸಾಧುಸಾಧ್ವಿತಿ ॥ ೫೮ ॥
ಮುಮುಚುಃ ಕೇಚಿದಾನಂದಬಾಷ್ಪಬಿಂದೂನ್ಕುಲೋತ್ತಮಾಃ ।
ಕುಲಸ್ತ್ರಿಯಃ ಪ್ರಮುದಿತಾಸ್ತಾಮುದ್ದಿಶ್ಯ ಸಮಾಶ್ವಸನ್ ॥ ೫೯ ॥
ಅಥ ತತ್ರಾಽಪರೇ ಪ್ರೋಚುರ್ದೇವೋ ವದತಿ ನಾಽನೃತಂ ।
ಕಥಮೇಷಾ ದಧೌ ಗರ್ಭಂ ಶೀಲಾನ್ನ ಚಲಿತಾ ಧ್ರುವಂ ॥ ೬೦ ॥
ಇತಿ ಸರ್ವಾನ್ಸಭ್ಯಜನಾನ್ಸಂಶಯಾವಿಷ್ಟಚೇತಸಃ ।
ವಿಲೋಕ್ಯ ವೃದ್ಧಸ್ತತ್ರೈಕಃ ಸರ್ವಜ್ಞೋ ಲೋಕತತ್ತ್ವವಿತ್ ॥ ೬೧ ॥
ಮಾಯಾಮಯಮಿದಂ ವಿಶ್ವಂ ದೃಶ್ಯತೇ ಶ್ರೂಯತೇ ಚ ಯತ್ ।
ಕಿಂ ಭಾವ್ಯಂ ಕಿಮಭಾವ್ಯಂ ವಾ ಸಂಸಾರೇಽಸ್ಮಿನ್ಕ್ಷಣಾತ್ಮಕೇ ॥ ೬೨ ॥

---

೫೬. ಬಳಿಕ ಸಭೆಯಲ್ಲಿ ಸಂಭ್ರಮದಿಂದ ನೆರೆದ ಗ್ರಾಮವೃದ್ಧರೆಲ್ಲರೂ ಸ್ವಲ್ಪಹೊತ್ತು ಮೌನವಾಗಿದ್ದು ಭಯದಿಂದ ಮುಖತಗ್ಗಿಸಿಕೊಂಡರು..

೫೭. ಅಲ್ಲಿದ್ದ ನಂಬಿಕೆಯಿಲ್ಲದ ಕೆಲವರು ಅಶರೀರವಾಣಿಯು ಸುಳ್ಳೆಂದರು. ಅವರ ನಾಲಿಗೆಗಳು ಸೀಳಿಹೋದುವು. ಕೂಡಲೆ ಅವರು ಕೃಮಿಗಳನ್ನು ವಾಂತಿ ಮಾಡಿದರು.

೫೮. ಅನಂತರ ಬಾಂಧವರು ಅವಳನ್ನು ಪೂಜಿಸಿದರು. ವೃದ್ಧಸ್ತ್ರೀಯರು ಒಳ್ಳೆಯದೆಂದು ಹೊಗಳಿದರು.

೫೯. ಕುಲದಲ್ಲಿ ಶ್ರೇಷ್ಠರಾದ ಕೆಲವರು ಆನಂದಬಾಷ್ಪವನ್ನು ಸುರಿಸಿದರು. ಕುಲಸ್ತ್ರೀಯರು ಸಂತೋಷಗೊಂಡು ಅವಳ ವಿಷಯದಲ್ಲಿ ಸಮಾಧಾನ ಗೊಂಡರು.

೬೦. ಬಳಿಕ ಅಲ್ಲಿರುವ ಕೆಲವರು, "ದೇವತೆಯು ಸುಳ್ಳಾಡುವುದಿಲ್ಲ. ಇವಳ ನಡತೆಯು ಕೆಡಲಿಲ್ಲ. ಇವಳು ಹೇಗೆ ಗರ್ಭಿಣಿಯಾದಳು?" ಎಂದಾಲೋಚಿಸಿದರು.

೬೧. ಹೀಗೆ ಸಂಶಯಗೊಂಡಿರುವ ಸಭಿಕರನ್ನು ನೋಡಿ ಅಲ್ಲಿರುವ ಒಬ್ಬ ಲೋಕದ ವಿಷಯವನ್ನರಿತ ಪ್ರಾಜ್ಞನಾದ ವೃದ್ಧಬ್ರಾಹ್ಮಣನು ಹೀಗೆಂದನು.

೬೨. "ಈ ಕಾಣುತ್ತಿರುವ ಮತ್ತು ಕೇಳುತ್ತಿರುವ ಪ್ರಪಂಚವು ಮಾಯೆ ಯಿಂದಾದುದು. ಅಶಾಶ್ವತವಾದ ಈ ಸಂಸಾರದಲ್ಲಿ ಆಗುವುದೂ, ಆಗದಿರು ವುದೂ ಏನಿದೆ?

CC-0. Jangamwadi Math Collection. Digitized by eGangotri

ಅನಿರೂಪ್ಯಮಭೂತಾರ್ಥಂ ಮಾಯಯಾ ಜಾಯತೇ ಸ್ಫುಟಂ ।
ಈಶ್ವರಸ್ಯ ವಶೇ ಮಾಯಾ ತಸ್ಯ ಕೋ ವೇದ ಚೇಷ್ಟಿತಂ ॥ ೭೩ ॥
ಯೂಪಕೇತೋಶ್ಚ ರಾಜರ್ಷೇಃ ಶುಕ್ರಂ ನಿಪತಿತಂ ಜಲೇ ।
ಸ ಶುಕ್ರಂ ತಜ್ಜಲಂ ಪೀತ್ವಾ ವೇಶ್ಯಾಗರ್ಭಂ ದಧೌ ಕಿಲ ॥ ೭೪ ॥
ಮುನೇರ್ವಿಭಾಂಡಕಸ್ಯಾಽಪಿ ಶುಕ್ರಂ ಪೀತ್ವಾ ಸಹಾಂಭಸಾ ।
ಹರಿಣೀ ಗರ್ಭಿಣೀ ಭೂತ್ವಾ ಋಷ್ಯಶೃಂಗಮಸೂಯತ ॥ ೭೫ ॥
ಸುರಾಷ್ಟ್ರಸ್ಯ ತಥಾ ರಾಜ್ಞಃ ಕರಂ ಸ್ಪೃಷ್ಟ್ವಾ ಮೃಗಾಂಗನಾ ।
ತತ್ಕ್ಷಣಾದ್ಗರ್ಭಿಣೀ ಭೂತ್ವಾ ಮುನಿಂ ಪ್ರಾಸೂತ ತಾಪಸಂ ॥ ೭೬ ॥
ತಥಾ ಸತ್ಯವತೀ ನಾರೀ ಶಫರೀಗರ್ಭಸಂಭವಾ ।
ತಥೈವ ಮಹಿಷೀ ಗರ್ಭೋ ಜಾತಶ್ಚ ಮಹಿಷಾಸುರಃ ॥ ೭೭ ॥
ತಥಾ ಸಂತಿ ಪುರಾ ನಾರ್ಯಃ ಕಾರುಣ್ಯಾದ್ಗರ್ಭಸಂಭವಾಃ ।
ತಥಾ ಹಿ ವಸುದೇವೇನ ರೋಹಿಣ್ಯಾಸ್ತನಯೋಽಭವತ್ ॥ ೭೮ ॥
ದೇವತಾನಾಂ ಮಹರ್ಷೀಣಾಂ ಶಾಪೇನ ಚ ವರೇಣ ಚ ।
ಅಯುಕ್ತಮಪಿ ಯತ್ಕಾರ್ಯಂ ಯುಜ್ಯತೇ ನಾಽತ್ರ ಸಂಶಯಃ ॥ ೭೯ ॥
ಸಾಂಬಸ್ಯ ಜಠರಾಜ್ಜಾತಂ ಮುಸಲಂ ಮುನಿಶಾಪತಃ ।
ಯುವನಾಶ್ವಸ್ಯ ಗರ್ಭೋಽಭೂನ್ಮುನೀನಾಂ ಮಂತ್ರಗೌರವಾತ್ ॥ ೮೦ ॥

---

೭೩–೭೪. ಮಾಯೆಯಿಂದ ಆಲೋಚಿಸದ, ಆಗದಿರುವ ವಿಷಯವೂ ಸ್ಪಷ್ಟವಾಗಿ ಆಗುತ್ತದೆ. ಮಾಯೆಯು ಈಶ್ವರನ ವಶದಲ್ಲಿರುವುದು. ಆ ಈಶ್ವರನ ಕಾರ್ಯವನ್ನು ಬಲ್ಲವರಾರು? ನೀರಿನಲ್ಲಿ ಬಿದ್ದ ಯೂಪಕೇತುವೆಂಬ ರಾಜರ್ಷಿಯ ರೇತಸ್ಸನ್ನು ವೇಶ್ಯೆಯೊಬ್ಬಳು ಕುಡಿದು ಗರ್ಭಿಣಿಯಾದಳು.

೭೫. ಹರಿಣಿ ಎಂಬವಳು ವಿಭಾಂಡಕ ಮುನಿಯ ರೇತಸ್ಸನ್ನು ನೀರಿನೊಡನೆ ಕುಡಿದು ಗರ್ಭಿಣಿಯಾಗಿ ಋಷ್ಯಶೃಂಗನನ್ನು ಹೆತ್ತಳು.

೭೬. ಹೆಣ್ಣುಜಿಂಕೆಯು ಸುರಾಷ್ಟ್ರರಾಜನ ಕೈಯನ್ನು ಮುಟ್ಟಿ ಕೂಡಲೆ ಗರ್ಭಿಣಿಯಾಗಿ ಮುನಿಶಿಶುವನ್ನು ಹಡೆಯಿತು.

೭೭. ಹಾಗೆಯೇ ಸತ್ಯವತಿಯು ಮೀನಿನ ಗರ್ಭದಿಂದ ಹುಟ್ಟಿದಳು. ಹಾಗೆಯೇ ಮಹಿಷಾಸುರನು ಎಮ್ಮೆಯಲ್ಲಿ ಜನಿಸಿದನು.

೭೮. ಹಾಗೆಯೇ ಹಿಂದೆ ಹೆಂಗಸರು ಭಗವತ್ಕಾರುಣ್ಯದಿಂದ ಗರ್ಭಿಣಿಯರಾಗಿದ್ದಾರೆ. ವಸುದೇವನ ಕರುಣೆಯಿಂದ ರೋಹಿಣಿಯಲ್ಲಿ ಮಗನು ಜನಿಸಿದ್ದಾನೆ.

೭೯. ದೇವತೆಗಳ ಮತ್ತು ಮುನಿಗಳ ಶಾಪದಿಂದಲೂ ವರದಿಂದಲೂ ಆಗದಿರುವುದೂ ಆಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

೮೦. ಮುನಿಶಾಪದಿಂದ ಸಾಂಬನ ಹೊಟ್ಟೆಯಿಂದ ಒನಕೆಯು ಹುಟ್ಟಿತು. ಮುನಿಗಳ ಮಂತ್ರಪ್ರಭಾವದಿಂದ ಯುವನಾಶ್ವನು ಗರ್ಭವುಳ್ಳವನಾದನು.

CC-0. Jangamwadi Math Collection. Digitized by eGangotri

ನೂನಮೇಷಾಽಪಿ ಕಲ್ಯಾಣೀ ಮಹರ್ಷೇಃ ಪಾದಸೇವನಾತ್ ।
ಮಹಾವ್ರತಾನುಭಾವಾಚ್ಚ ಧತ್ತೇ ಗರ್ಭಮನಿಂದಿತಾ ॥ ೭೦ ॥
ಅಸ್ಮಿನ್ನರ್ಥೇ ರಹಸ್ಯೇನಾಂ ಸತ್ಯಂ ಪೃಚ್ಛಂತು ಯೋಷಿತಃ ।
ತತೋ ನಿವೃತ್ತಸಂದೇಹೋ ಭವಿಷ್ಯತಿ ಮಹಾಜನಃ ॥ ೭೧ ॥
ತತಸ್ತದ್ವಚನಾದೇವ ತಾಮಪೃಚ್ಛನ್ಸ್ತ್ರಿಯೋ ಮಿಥಃ ।
ತಾಭ್ಯಃ ಶಶಂಸ ತತ್ಸರ್ವಂ ಸಾ ಸ್ವವೃತ್ತಂ ಮಹಾದ್ಭುತಂ ॥ ೭೩ ॥
ವಿಜಾನಂತಸ್ತತಃ ಸರ್ವೇ ಮಾನಯಿತ್ವಾ ಚ ತಾಂ ಸತೀಂ ।
ಮೋದಮಾನಾಃ ಪ್ರಶಂಸಂತಃ ಪ್ರಯಯುಃ ಸ್ವಂ ಸ್ವಮಾಲಯಂ ॥ ೭೪ ॥
ಅಥ ಕಾಲೇ ಶುಭೇ ಪ್ರಾಪ್ತೇ ಶಾರದಾ ವಿಮಲಾಶಯಾ ।
ಅಸೂತ ತನಯಂ ಬಾಲಾ ಬಾಲಾರ್ಕಸಮತೇಜಸಂ ॥ ೭೫ ॥
ಸ ಕುಮಾರೋ ಮಹೋದಾರಲಕ್ಷಣಃ ಕಮಲೇಕ್ಷಣಃ ।
ಅವಾಪ್ಯ ಮಹತೀಂ ವಿದ್ಯಾಂ ಬಾಲ್ಯ ಏವ ಮಹಾಮತಿಃ ॥ ೭೬ ॥
ಅಥೋಪನೀತೋ ಗುರುಣಾ ಕಾಲೇ ಲೋಕಮನೋರಮಃ ।
ಸ ಶಾರದೇಯ ಏವೇತಿ ಲೋಕೇ ಖ್ಯಾತಿಮವಾಪ ಹ ॥ ೭೭ ॥

---

೭೦. ಶ್ಲಾಘ್ಯಳಾದ ಈ ಶಾರದೆಯು ಮಹರ್ಷಿಯ ಚರಣಸೇವೆಯಿಂದಲೂ, ಮಹಾವ್ರತಾನುಷ್ಠಾನದಿಂದಲೂ ಗರ್ಭಿಣಿಯಾಗಿರುವಳು.

೭೧. ಹೆಂಗಸರು ಈ ವಿಷಯದಲ್ಲಿ ಸತ್ಯಾಂಶವನ್ನು ಗುಟ್ಟಿನಲ್ಲಿ ಇವುಗಳನ್ನು ಇವಳನ್ನು ಕೇಳಲಿ. ಅನಂತರ ಜನರೆಲ್ಲರೂ ಸಂದೇಹವಿಲ್ಲದವರಾಗುವರು" ಎಂದನು.

೭೩. ಬಳಿಕ ಅವನ ಮಾತಿನಂತೆ ಹೆಂಗಸರು ಅವಳನ್ನು ಕೇಳಿದರು. ಆ ಶಾರದೆಯು ಅವರಿಗೆ ಅದ್ಭುತವಾದ ತನ್ನ ಸಮಾಚಾರವನ್ನೆಲ್ಲ ತಿಳಿಸಿದಳು.

೭೪. ಬಳಿಕ ಜನರೆಲ್ಲರೂ ನಿಜವನ್ನರಿತು ಆ ಸಾಧ್ವಿಯನ್ನು ಸನ್ಮಾನಿಸಿ ಸಂತೋಷಗೊಂಡು ಅವಳನ್ನು ಹೊಗಳುತ್ತ ತಮ್ಮತಮ್ಮ ಮನೆಗೆ ಹೋದರು.

೭೫. ಬಳಿಕ ಪತಿವ್ರತೆಯಾದ ಶಾರದೆಯು ಶುಭಮುಹೂರ್ತದಲ್ಲಿ ಬಾಲಸೂರ್ಯನಂತೆ ತೇಜಸ್ವಿಯಾದ ಮಗನನ್ನು ಹೆತ್ತಳು.

೭೬. ಉತ್ಕೃಷ್ಟಲಕ್ಷಣವುಳ್ಳವನೂ, ಕಮಲದಂತೆ ಕಣ್ಣುಳ್ಳವನೂ ಆದ ಆ ಕುಮಾರನು ಬಾಲ್ಯದಲ್ಲಿಯೇ ವಿದ್ಯಾಭ್ಯಾಸಮಾಡಿ ಅತಿಶಯಬುದ್ಧಿಶಾಲಿಯಾದನು.

೭೭. ತರುವಾಯ ಸಕಾಲದಲ್ಲಿ ಗುರುವು ಇವನಿಗೆ ಉಪನಯನಮಾಡಲು ಸುಂದರನಾದ ಆ ಕುಮಾರನು ಶಾರದೇಯ ಎಂದು ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದಿದನು.

CC-0. Jangamwadi Math Collection. Digitized by eGangotri

ಋಗ್ವೇದಮಷ್ಟಮೇ ವರ್ಷೇ ನವಮೇ ಯಜುಷಾಂ ಗಣಂ ।
ದಶಮೇ ಸಾಮವೇದಂ ಚ ಲೀಲಯಾಽಧ್ಯಗಮತ್ಸುಧೀಃ ॥ ೭೮ ॥
ಅಥ ತ್ರಿಲೋಕಮಹಿತೇ ಸಂಪ್ರಾಪ್ತೇ ಶಿವಪರ್ವಣಿ ।
ಗೋಕರ್ಣಂ ಪ್ರಯಯುಃ ಸರ್ವೇ ಜನಾಃ ಸರ್ವನಿವಾಸಿನಃ ॥ ೭೯ ॥
ಶಾರದಾಽಪಿ ಸ್ವಪುತ್ರೇಣ ಗೋಕರ್ಣಂ ಪ್ರಯಯೌ ಸತೀ ॥ ೮೦ ॥
ತತ್ರಾಽಪಶ್ಯತ್ಸಮಾಯಾಂತಂ ಸದಾ ಸ್ವಪ್ನೇಷು ಲಕ್ಷಿತಂ ।
ಪೂರ್ವಜನ್ಮನಿ ಭರ್ತಾರಂ ದ್ವಿಜಬಂಧುಜನಾವೃತಂ ॥ ೮೧ ॥
ತಂ ದೃಷ್ಟ್ವಾ ಪ್ರೇಮನಿರ್ವಿಣ್ಣಾ ಪುಲಕಾಂಕಿತವಿಗ್ರಹಾ ।
ನಿರುದ್ಧಬಾಷ್ಪಪ್ರಸರಾ ತಸ್ಥೌ ತನ್ಯಸ್ತಲೋಚನಾ ॥ ೮೨ ॥
ಸ ಚ ವಿಪ್ರೋಽಪಿ ತಾಂ ದೃಷ್ಟ್ವಾ ರೂಪಲಕ್ಷಣಲಕ್ಷಿತಾಂ ।
ಸ್ವಪ್ನೇ ಸದಾ ಭುಜ್ಯಮಾನಾಮಾತ್ಮನೋ ರತಿದಾಯಿನೀಂ ॥ ೮೩ ॥
ತಂ ಕುಮಾರಮಪಿ ಸ್ವಪ್ನೇ ದೃಷ್ಟ್ವಾ ಚಾತ್ಮಶರೀರಜಂ ।
ವಿಲೋಕ್ಯ ವಿಸ್ಮಯಾವಿಷ್ಟಸ್ತದಂತಿಕಮುಪಾಯಯೌ ॥ ೮೪ ॥
ಭದ್ರೇ ತ್ವಾಂ ಪ್ರಷ್ಟುಮಿಚ್ಛಾಮಿ ಯತ್ಕಿಂಚಿನ್ಮನಸಿ ಸ್ಥಿತಂ ।
ಇತಿ ಪ್ರಥಮಮಾಭಾಷ್ಯ ರಹಃ ಸ್ಥಾನಂ ನಿನಾಯ ತಾಂ ॥ ೮೫ ॥

---

೭೮. ಒಳ್ಳೆಯ ಬುದ್ಧಿಯುಳ್ಳ ಈ ಕುಮಾರನು ಎಂಟನೆಯ ವರ್ಷದಲ್ಲಿ ಋಗ್ವೇದವನ್ನೂ, ಒಂಬತ್ತನೆಯ ವರ್ಷದಲ್ಲಿ ಯಜುರ್ವೇದವನ್ನೂ, ಹತ್ತನೆಯ ವರ್ಷದಲ್ಲಿ ಸಾಮವೇದವನ್ನೂ ಅನಾಯಾಸವಾಗಿ ಅಧ್ಯಯನಮಾಡಿದನು.

೭೯. ತರುವಾಯ ತ್ರಿಲೋಕಪೂಜ್ಯವಾದ ಶಿವಪರ್ವತಿಥಿಯು ಒದಗಲು ಎಲ್ಲಾ ದೇಶದ ಜನರೂ ಗೋಕರ್ಣಕ್ಕೆ ಹೊರಟರು.

೮೦–೮೧. ಸಾಧ್ವಿಯಾದ ಶಾರದೆಯೂ ತನ್ನ ಮಗನೊಡನೆ ಗೋಕರ್ಣಕ್ಕೆ ತೆರಳಿದಳು. ಅಲ್ಲಿ ಅವಳು ತಾನು ಪ್ರತಿದಿನವೂ ಸ್ವಪ್ನದಲ್ಲಿ ಕಾಣುತ್ತಿದ್ದ ಹಿಂದಿನ ಜನ್ಮದ ಪತಿಯನ್ನು ಬಂಧುಜನಗಳೊಡನೆ ಅಲ್ಲಿಗೆ ಬಂದಿರುವುದನ್ನು ಕಂಡಳು.

೮೨. ಅವನನ್ನು ನೋಡಿ ಪ್ರೀತಿಯಿಂದ ರೋಮಾಂಚಗೊಂಡ ದೇಹವುಳ್ಳವಳಾಗಿ ಕಣ್ಣೀರನ್ನು ತಡೆದುಕೊಂಡು ಅವನನ್ನು ನೋಡುತ್ತ ನಿಂತಳು.

೮೩–೮೪. ಆ ಬ್ರಾಹ್ಮಣನೂ ಯಾವಾಗಲೂ ಸ್ವಪ್ನದಲ್ಲಿ ತಾನು ರತಿಸುಖವನ್ನು ಅನುಭವಿಸುತ್ತಿದ್ದ ಸುಂದರಿಯಾದ ಆ ತರುಣಿಯನ್ನೂ, ಸ್ವಪ್ನದಲ್ಲಿ ನೋಡಿದ್ದ ತನ್ನ ಕುಮಾರನನ್ನೂ ನೋಡಿ ಆಶ್ಚರ್ಯಗೊಂಡು ಅವಳ ಸಮೀಪಕ್ಕೆ ಬಂದನು.

೮೫. "ಮಂಗಳಕರಳೆ! ನನ್ನ ಮನಸ್ಸಿನಲ್ಲಿರುವ ಯಾವುದೊ ಒಂದು ವಿಷಯವನ್ನು ಕುರಿತು ನಿನ್ನನ್ನು ಕೇಳಲು ಬಯಸುತ್ತೇನೆ.

CC-0. Jangamwadi Math Collection. Digitized by eGangotri

ಕಾ ತ್ವಂ ಕಥಯ ವಾಮೋರು ಕಸ್ಯ ಭಾರ್ಯಾಽಸಿ ಸುವ್ರತೇ ।
ಕೋ ದೇಶಃ ಕಸ್ಯ ವಾ ಪುತ್ರೀ ಕಿನ್ನಾಮೇತ್ಯಬ್ರವೀಚ್ಚ ತಾಂ ॥ ೮೬ ॥
ಇತಿ ತೇನ ಸಮಾಪೃಷ್ಟ್ವಾ ಸಾ ಸಾರೀ ಬಾಷ್ಪಲೋಚನಾ ।
ವ್ಯಾಜಹಾರಾತ್ಮನೋ ವೃತ್ತಂ ಬಾಲ್ಯೇ ವೈಧವ್ಯಕಾರಣಂ ॥ ೮೭ ॥
ಪುನಃ ಪಪ್ರಚ್ಛ ತಾಂ ಬಾಲಾಂ ಪುತ್ರಃ ಕಸ್ಯಾಽಯಮುತ್ತಮಃ ।
ಕಥಂ ಧೃತೋ ವಾ ಜಠರೇ ಬಾಲೋಽಯಂ ಚಂದ್ರಸನ್ನಿಭಃ ॥ ೮೮ ॥

ಶಾರದೋವಾಚ :—

ಏಷ ಮೇ ತನಯಃ ಸ್ವಾಮಿನ್ಸರ್ವವಿದ್ಯಾವಿಶಾರದಃ ।
ಶಾರದೇಯ ಇತಿ ಪ್ರೋಕ್ತೋ ಮಮ ನಾಮ್ನೈವ ಕಲ್ಪಿತಃ ॥ ೮೯ ॥
ಇತಿ ತಸ್ಯಾ ವಚಃ ಶ್ರುತ್ವಾ ವಿಹಸ್ಯ ಬ್ರಾಹ್ಮಣೋತ್ತಮಃ ।
ಪ್ರೋವಾಚ ಕಷ್ಟಾತ್ಕಷ್ಟಂ ಹಿ ಚರಿತಂ ತವ ಭಾಮಿನಿ ॥ ೯೦ ॥
ಪಾಣಿಗ್ರಹಣಮಾತ್ರಂ ತೇ ಕೃತ್ವಾ ಭರ್ತಾ ಮೃತಃ ಕಿಲ ।
ಕಥಂ ಚಾಽಯಂ ಸುತೋ ಜಾತಸ್ತಸ್ಯ ಕಾರಣಮುಚ್ಯತಾಂ ॥ ೯೧ ॥
ಇತಿ ತೇನೋದಿತಾಂ ವಾಣೀಮಾಕರ್ಣ್ಯಾಽತೀವ ಲಜ್ಜಿತಾ ।
ಕ್ಷಣಂ ಚಾಽಶ್ರುಮುಖೀ ಭೂತ್ವಾ ಧೈರ್ಯಾದಿತ್ಥಮಭಾಷತ ॥ ೯೨ ॥

---

೮೬. "ಸುಂದರಿ! ನೀನಾರು? ಯಾರ ಹೆಂಡತಿ? ನಿನ್ನ ದೇಶವಾವುದು? ಯಾರ ಮಗಳು? ನಿನ್ನ ಹೆಸರೇನು?" ಎಂದು ಕೇಳಿದನು.

೮೭. ಅವನು ಹೀಗೆ ಕೇಳಲು ಆ ಶಾರದೆಯು ಕಣ್ಣೀರುಸುರಿಸುತ್ತ ತನಗೆ ಬಾಲ್ಯದಲ್ಲಿ ವೈಧವ್ಯ ಬರಲು ಕಾರಣವನ್ನು ತಿಳಿಸಿದಳು.

೮೮. ಮತ್ತೆ ಆ ವಿಪ್ರನು, "ಸುಂದರನಾದ ಈ ಕುಮಾರನಾರು? ಚಂದ್ರನಂತಿರುವ ಈ ಬಾಲಕನನ್ನು ನೀನು ಹೊಟ್ಟೆಯಲ್ಲಿ ಹೇಗೆ ಹೊತ್ತಿದ್ದೆ?" ಎಂದು ಅವಳನ್ನು ಕೇಳಿದನು.

೮೯. ಶಾರದೆಯು ಹೇಳುತ್ತಾಳೆ:—"ಸ್ವಾಮಿ! ಇವನು ಸಮಸ್ತ ವಿದ್ಯೆಗಳಲ್ಲಿಯೂ ನಿಪುಣನಾದ ನನ್ನ ಮಗನು. ನನ್ನ ಹೆಸರನ್ನನುಸರಿಸಿ ಶಾರದೇಯನೆಂಬ ಹೆಸರನ್ನು ಇಟ್ಟದ್ದೇನೆ."

೯೦. ಹೀಗೆ ಅವಳ ಮಾತನ್ನು ಕೇಳಿ ಬ್ರಾಹ್ಮಣವರ್ಯನು ನಕ್ಕು "ಸುಂದರಿ! ನಿನ್ನ ಚರಿತೆಯು ಅತಿ ಕಷ್ಟವಾದುದು.

೯೧. ನಿನ್ನ ಪತಿಯು ಪಾಣಿಗ್ರಹಣವಾದ ಕೂಡಲೆ ಮೃತನಾದನಷ್ಟೆ. ಈ ಪುತ್ರನು ಹೇಗೆ ಜನಿಸಿದನು? ಅದಕ್ಕೆ ಕಾರಣವನ್ನು ಹೇಳು."

೯೨. ಶಾರದೆಯು ಅವನು ಹೀಗೆ ಹೇಳಿದ ಮಾತನ್ನು ಕೇಳಿ ನಾಚಿಕೆಗೊಂಡು ಸ್ವಲ್ಪಹೊತ್ತು ಕಣ್ಣೀರನ್ನು ಸುರಿಸುತ್ತ ಧೈರ್ಯದಿಂದ ಇಂತೆಂದಳು.

CC-0. Jangamwadi Math Collection. Digitized by eGangotri

ಶಾರದೋವಾಚ :—

ತದಲಂ ಪರಿಹಾಸೋಕ್ತ್ಯಾ ತ್ವಂ ಮಾಂ ವೇತ್ಸಿ ಮಹಾಮತೇ ।
ತ್ವಾಮಹಂ ವೇದ್ಮಿ ಚಾರ್ಥೇಽಸ್ಮಿನ್ಪ್ರಮಾಣಂ ಮನ ಆವಯೋಃ ॥ ೯೩ ॥
ಇತ್ಯುಕ್ತ್ವಾ ಸರ್ವಮಾವೇದ್ಯ ದೇವ್ಯಾ ದತ್ತಂ ವರಾದಿಕಂ ।
ವ್ರತಸ್ಯಾರ್ಧಂ ಕುಮಾರಂ ತಂ ದದೌ ತಸ್ಮೈ ಧೃತವ್ರತಂ ॥ ೯೪ ॥
ಸೋಽಪಿ ಪ್ರಮುದಿತೋ ವಿಪ್ರಃ ಕುಮಾರಂ ಪ್ರತಿಗೃಹ್ಯ ತಂ ।
ಪಿತ್ರೋರನುಮತೇನೈವ ತಾಂ ನಿನಾಯ ನಿಜಾಲಯಂ ॥ ೯೫ ॥
ಸಾಽಪಿ ಸ್ಥಿತ್ವಾ ಬಹೂನ್ಮಾಸಾಂಸ್ತಸ್ಯ ವಿಪ್ರಸ್ಯ ಮಂದಿರೇ ।
ತಸ್ಮಿನ್ಕಾಲವಶಂ ಪ್ರಾಪ್ತೇ ಪ್ರವಿಶ್ಯಾಗ್ನಿಂ ತಮನ್ವಗಾತ್ ॥ ೯೬ ॥
ತತಸ್ತೌ ದಂಪತೀ ಭೂತ್ವಾ ವಿಮಾನಂ ದಿವ್ಯಮಾಸ್ಥಿತೌ ।
ದಿವ್ಯಭೋಗಸಮಾಯುಕ್ತೌ ಜಗ್ಮತುಃ ಶಿವಮಂದಿರಂ ॥ ೯೭ ॥
ಇತ್ಯೇತತ್ಪುಣ್ಯಮಾಖ್ಯಾನಂ ಮಯಾ ಸಮನುವರ್ಣಿತಂ ।
ಪಠತಾಂ ಶೃಣ್ವತಾಂ ಸಮ್ಯಗ್ಭುಕ್ತಿಮುಕ್ತಿಫಲಪ್ರದಂ ॥ ೯೮ ॥
ಆಯುರಾರೋಗ್ಯಸಂಪತ್ತಿಧನಧಾನ್ಯವಿವರ್ಧನಂ ।
ಸ್ತ್ರೀಣಾಂ ಮಂಗಲಸೌಭಾಗ್ಯಸಂತಾನಸುಖಸಾಧನಂ ॥ ೯೯ ॥

---

೯೩. ಶಾರದೆಯು ಹೇಳುತ್ತಾಳೆ:—"ಪ್ರಾಜ್ಞನೆ! ಹಾಸ್ಯದ ಮಾತು ಸಾಕು. ನೀನು ನನ್ನನ್ನು ಬಲ್ಲೆ, ನಾನು ನಿನ್ನನ್ನು ತಿಳಿದಿರುವೆನು. ಈ ವಿಷಯದಲ್ಲಿ ನಮ್ಮಿಬ್ಬರ ಮನಸ್ಸೇ ಪ್ರಮಾಣ."

೯೪. ಹೀಗೆಂದು ಹೇಳಿ ದೇವಿಯು ಕೊಟ್ಟ ವರ ಮೊದಲಾದುವುಗಳನ್ನು ತಿಳಿಸಿ ವ್ರತದ ಅರ್ಧಭಾಗವನ್ನೂ, ಆ ಕುಮಾರನನ್ನೂ ಅವನಿಗೆ ಧಾರೆಯೆರೆದು ಕೊಟ್ಟಳು.

೯೫–೯೬. ಆ ಬ್ರಾಹ್ಮಣನು ಸಂತೋಷಗೊಂಡು ಆ ಪುತ್ರನನ್ನು ಸ್ವೀಕರಿಸಿ ತನ್ನ ತಂದೆತಾಯಿಗಳ ಒಪ್ಪಿಗೆಯಿಂದ ಶಾರದೆಯನ್ನೂ ತನ್ನಮನೆಗೆ ಕರೆದುಕೊಂಡು ಹೋದನು. ಅವಳು ಅನೇಕ ತಿಂಗಳುಗಳು ಆ ಬ್ರಾಹ್ಮಣನ ಮನೆಯಲ್ಲಿಯೇ ಇದ್ದು ಅವನು ಮೃತ್ಯುವಶನಾಗಲು ತಾನೂ ಅವನನ್ನು ಹಿಂಬಾಲಿಸಿದಳು.

೯೭. ಅನಂತರ ಅವರಿಬ್ಬರೂ ದಂಪತಿಗಳಾಗಿ ದಿವ್ಯ ವಿಮಾನದಲ್ಲಿ ಕುಳಿತು ದಿವ್ಯ ಭೋಗಗಳನ್ನನುಭವಿಸುತ್ತ ಶಿವಾಲಯವನ್ನು ಸೇರಿದರು.

೯೮–೯೯. ಹೇಳುವವರಿಗೂ ಕೇಳುವವರಿಗೂ ಭುಕ್ತಿಮುಕ್ತಿಗಳನ್ನೀಯುವುದೂ, ಆಯುಸ್ಸು, ಆರೋಗ್ಯ, ಸಂಪತ್ತು, ಧನ, ಧಾನ್ಯಗಳನ್ನು ಹೆಚ್ಚಿಸುವುದೂ, ಹೆಂಗಸರಿಗೆ ಮಂಗಳ ಸೌಭಾಗ್ಯ, ಸಂತತಿ ಸುಖಗಳನ್ನು ಕೊಡುವುದೂ ಪವಿತ್ರವೂ ಆದ ಈ ಉಪಾಖ್ಯಾನವನ್ನು ವರ್ಣಿಸಿರುವೆನು.

CC-0. Jangamwadi Math Collection. Digitized by eGangotri

ಏತನ್ಮಹಾಖ್ಯಾನಮಘೌಘನಾಶನಂ
ಗೌರೀಮಹೇಶವ್ರತಪುಣ್ಯಕೀರ್ತನಂ ।
ಭಕ್ತ್ಯಾ ಸಕೃದ್ಯಃ ಶೃಣುಯಾಚ್ಚ ಕೀರ್ತಯೇ
ದ್ಭುಕ್ತ್ವಾ ಸ ಭೋಗಾಸ್ಪದಮೇತಿ ಶಾಶ್ವತಂ ॥ ೧೦೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಶಾರದಾಖ್ಯಾನ ವರ್ಣನಂ" ನಾಮೈಕೋನವಿಂಶೋಽಧ್ಯಾಯಃ

---

೧೦೦. ಪಾಪರಾಶಿಯನ್ನು ನೀಗಿಸುವ ಈ ಗೌರೀಮಹೇಶ್ವರವ್ರತ ಮಾಹಾತ್ಮ್ಯವನ್ನು ಭಕ್ತಿಯಿಂದ ಒಂದುಸಾರಿ ಕೇಳುವವನೂ, ಹೇಳುವವನೂ ಈ ಲೋಕದಲ್ಲಿ ಸುಖಗಳನ್ನನುಭವಿಸಿ ಶಾಶ್ವತಪದವಿಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಶಾರದಾಖ್ಯಾನವರ್ಣನ"ವೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ವಿಂಶೋಽಧ್ಯಾಯಃ

### ರುದ್ರಾಕ್ಷಮಹಿಮಾನುವರ್ಣನಂ

ಸೂತ ಉವಾಚ:—

ಅಥ ರುದ್ರಾಕ್ಷಮಾಹಾತ್ಮ್ಯಂ ವರ್ಣಯಾಮಿ ಸಮಾಸತಃ ।
ಸರ್ವಪಾಪಕ್ಷಯಕರಂ ಶೃಣ್ವತಾಂ ಪಠತಾಮಪಿ ॥ ೧ ॥
ಅಭಕ್ತೋ ವಾಽಪಿ ಭಕ್ತೋ ವಾ ನೀಚೋ ನೀಚತರೋಽಪಿ ವಾ ।
ರುದ್ರಾಕ್ಷಾನ್ಧಾರಯೇದ್ಯಸ್ತು ಮುಚ್ಯತೇ ಸರ್ವಪಾತಕೈಃ ॥ ೨ ॥
ರುದ್ರಾಕ್ಷಧಾರಣಂ ಪುಣ್ಯಂ ಕೇನ ವಾ ಸದೃಶಂ ಭವೇತ್ ।
ಮಹಾವ್ರತಮಿದಂ ಪ್ರಾಹುರ್ಮುನಯಸ್ತತ್ವದರ್ಶಿನಃ ॥ ೩ ॥
ಸಹಸ್ರಂ ಧಾರಯೇದ್ಯಸ್ತು ರುದ್ರಾಕ್ಷಾಣಾಂ ಧೃತವ್ರತಃ ।
ತಂ ನಮಂತಿ ಸುರಾಃ ಸರ್ವೇ ಯಥಾ ರುದ್ರಸ್ತಥೈವಸಃ ॥ ೪ ॥
ಅಭಾವೇ ತು ಸಹಸ್ರಸ್ಯ ಬಾಹ್ವೋಃ ಷೋಡಶ ಷೋಡಶ ।
ಏಕಂ ಶಿಖಾಯಾಂ ಕರಯೋರ್ದ್ವಾದಶ ದ್ವಾದಶೈವ ಹಿ ॥ ೫ ॥

---

## ಕನ್ನಡದ ಅನುವಾದ

### ರುದ್ರಾಕ್ಷಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ:—ತರುವಾಯ ಕೇಳುವ ಮತ್ತು ಹೇಳುವವರ ಸಕಲ ಪಾಪಗಳನ್ನೂ ಪರಿಹರಿಸುವ ರುದ್ರಾಕ್ಷಮಾಹಾತ್ಮ್ಯವನ್ನು ಸಂಕ್ಷೇಪವಾಗಿ ವರ್ಣಿಸುತ್ತೇನೆ.

೨. ಶಿವಭಕ್ತನಾಗಲಿ, ಶಿವಭಕ್ತನಲ್ಲದವನಾಗಲಿ, ನೀಚನಾಗಲಿ, ಅತ್ಯಂತ ನಿಕೃಷ್ಟನಾಗಲಿ ರುದ್ರಾಕ್ಷಿಗಳನ್ನು ಧರಿಸಿದರೆ ಸಮಸ್ತ ಪಾಪಗಳೂ ನೀಗುವುವು.

೩. ರುದ್ರಾಕ್ಷಿಗಳನ್ನು ಧರಿಸಿದರೆ ಉಂಟಾಗುವ ಪುಣ್ಯಕ್ಕೆ ಎಣೆಯಾದುದು ಯಾವುದೂ ಇಲ್ಲ. ಜ್ಞಾನಿಗಳಾದ ಮುನಿಗಳು ಇದನ್ನು ಮಹಾವ್ರತವೆಂದು ಹೇಳುವರು.

೪. ವ್ರತವನ್ನಾಚರಿಸುತ್ತ ಸಾವಿರ ರುದ್ರಾಕ್ಷಿಗಳನ್ನು ಧರಿಸಿದ ಭಕ್ತನನ್ನು ದೇವತೆಗಳು ನಮಸ್ಕಾರಮಾಡುವರು. ಅವನು ರುದ್ರನೇ ಆಗುವನು.

೫–೬. ಸಾವಿರ ರುದ್ರಾಕ್ಷಿಗಳು ಸಿಕ್ಕದಿದ್ದರೆ ಎರಡು ತೋಳುಗಳಲ್ಲಿಯೂ ಹದಿನಾರು ರುದ್ರಾಕ್ಷಿಗಳನ್ನೂ, ಶಿಖೆಯಲ್ಲಿ ಒಂದನ್ನೂ, ಕೈಗಳಲ್ಲಿ ಹನ್ನೆರಡನ್ನೂ, ಕಂಠದಲ್ಲಿ ಮೂವತ್ತೆರಡನ್ನೂ, ತಲೆಯಲ್ಲಿ ನಲವತ್ತನ್ನೂ, ಒಂದೊಂದು ಕಿವಿ

CC-0. Jangamwadi Math Collection. Digitized by eGangotri

ದ್ವಾತ್ರಿಂಶತ್ಕಂಠದೇಶೇ ತು ಚತ್ವಾರಿಂಶತ್ತು ಮಸ್ತಕೇ ।
ಏಕೈಕಕರ್ಣಯೋಃ ಷಟ್ ಷಟ್ ವಕ್ಷಸ್ಯಷ್ಟೋತ್ತರಂ ಶತಂ ।
ಯೋ ಧಾರಯತಿ ರುದ್ರಾಕ್ಷಾನ್ರುದ್ರವತ್ಸೋಽಪಿ ಪೂಜ್ಯತೇ ॥ ೭ ॥
ಮುಕ್ತಾಪ್ರವಾಲಸ್ಫಟಿಕರೌಪ್ಯವೈಡೂರ್ಯಕಾಂಚನೈಃ ।
ಸಮೇತಾನ್ಧಾರಯೇದ್ಯಸ್ತು ರುದ್ರಾಕ್ಷಾನ್ಸಶಿವೋ ಭವೇತ್ ॥ ೭ ॥
ಕೇವಲಾನಪಿ ರುದ್ರಾಕ್ಷಾನ್ಯಥಾಲಾಭಂ ಬಿಭರ್ತಿ ಯಃ ।
ತಂ ನ ಸ್ಪೃಶಂತಿ ಪಾಪಾನಿ ತಮಾಂಸೀವ ವಿಭಾವಸುಂ ॥ ೮ ॥
ರುದ್ರಾಕ್ಷಮಾಲಯಾ ಜಪ್ತೋ ಮಂತ್ರೋಽನಂತಫಲಪ್ರದಃ ।
ಅರುದ್ರಾಕ್ಷೋ ಜಪಃ ಪುಂಸಾಂ ತಾವನ್ಮಾತ್ರಫಲಪ್ರದಃ ॥ ೯ ॥
ಯಸ್ಯಾಂಗೇ ನಾಸ್ತಿ ರುದ್ರಾಕ್ಷ ಏಕೋಽಪಿ ಬಹುಪುಣ್ಯದಃ ।
ತಸ್ಯ ಜನ್ಮ ನಿರರ್ಥಂ ಸ್ಯಾತ್ರಿಪುಂಡ್ರರಹಿತಂ ಯದಿ ॥ ೧೦ ॥
ರುದ್ರಾಕ್ಷಂ ಮಸ್ತಕೇ ಬದ್ಧ್ವಾ ಶಿರಃಸ್ನಾನಂ ಕರೋತಿ ಯಃ ।
ಗಂಗಾಸ್ನಾನಫಲಂ ತಸ್ಯ ಜಾಯತೇ ನಾಽತ್ರ ಸಂಶಯಃ ॥ ೧೧ ॥
ರುದ್ರಾಕ್ಷಂ ಪೂಜಯೇದ್ಯಸ್ತು ವಿನಾ ತೋಯಾಽಭಿಷೇಚನಂ ।
ಯತ್ಫಲಂ ಲಿಂಗಪೂಜಾಯಾಸ್ತದೇವಾಪ್ನೋತಿ ನಿಶ್ಚಿತಂ ॥ ೧೨ ॥

---

ಗಳಲ್ಲಿ ಆರು ಆರನ್ನೂ, ಎದೆಯಲ್ಲಿ ನೂರೆಂಟು ರುದ್ರಾಕ್ಷಿಗಳನ್ನೂ ಧರಿಸಿದವನನ್ನು ಶಿವಭಕ್ತರು ರುದ್ರನಂತೆ ಪೂಜಿಸುತ್ತಾರೆ.

೭. ಮುತ್ತು, ಹವಳ, ಸ್ಫಟಿಕಮಣಿ, ಬೆಳ್ಳಿ, ವೈಡೂರ್ಯ, ಸುವರ್ಣಗಳಿಂದ ಕೂಡಿದ ರುದ್ರಾಕ್ಷಿಗಳನ್ನು ಧರಿಸಿದವನು ಶಿವನಾಗುವನು.

೮. ಸಿಕ್ಕಿದಷ್ಟು ರುದ್ರಾಕ್ಷಿಗಳನ್ನು ಮಾತ್ರ ಧರಿಸಿದವನನ್ನೂ ಸೂರ್ಯನನ್ನು ಕತ್ತಲೆಯು ಮುಟ್ಟದಿರುವಂತೆ ಪಾಪಗಳು ಮುಟ್ಟುವುದಿಲ್ಲ.

೯. ರುದ್ರಾಕ್ಷಿಮಾಲೆಯಿಂದ ಜಪಿಸಿದ ಮಂತ್ರವು ಮಿತಿಯಿಲ್ಲದ ಫಲವನ್ನೀಯುವುದು. ರುದ್ರಾಕ್ಷಮಾಲೆಯಿಲ್ಲದೆ ಜಪಿಸಿದ ಮಂತ್ರವು ಆ ಮಂತ್ರ ಸಂಖ್ಯೆಯಷ್ಟೆ ಫಲವನ್ನು ಕೊಡುವುದು.

೧೦. ಬಹುಪುಣ್ಯಗಳನ್ನೀಯುವ ಒಂದು ರುದ್ರಾಕ್ಷಿಯನ್ನೂ, ತ್ರಿಪುಂಡ್ರವನ್ನೂ ಧರಿಸದ ಮನುಜನ ಜನ್ಮವು ನಿಷ್ಫಲವಾದೀತು.

೧೧. ರುದ್ರಾಕ್ಷಿಯನ್ನು ತಲೆಗೆ ಕಟ್ಟಿಕೊಂಡು ಶಿರಸ್ನಾನವನ್ನು ಮಾಡಿದ ನರನಿಗೆ ನಿಶ್ಚಯವಾಗಿಯೂ ಗಂಗಾಸ್ನಾನ ಫಲವು ಲಭಿಸುವುದು.

೧೨. ರುದ್ರಾಕ್ಷಿಯನ್ನು ನೀರಿನಿಂದ ಅಭಿಷೇಕಮಾಡದೆ ಪೂಜಿಸಿದರೆ ಶಿವಲಿಂಗಪೂಜೆಯ ಫಲವು ಲಭಿಸುವುದು.

CC-0. Jangamwadi Math Collection. Digitized by eGangotri

ಏಕವಕ್ತ್ರಾಃ ಪಂಚವಕ್ತ್ರಾ ಏಕಾದಶ ಮುಖಾಃ ಪರೇ ।
ಚತುರ್ದಶ ಮುಖಾಃ ಕೇಚಿದ್ರುದ್ರಾಕ್ಷಾ ಲೋಕಪೂಜಿತಾಃ ॥ ೧೩ ॥
ಭಕ್ತ್ಯಾ ಸಂಪೂಜಿತೋ ನಿತ್ಯಂ ರುದ್ರಾಕ್ಷಃ ಶಂಕರಾತ್ಮಕಃ ।
ದರಿದ್ರಂ ವಾಽಪಿ ಕುರುತೇ ರಾಜರಾಜಶ್ರಿಯಾಽನ್ವಿತಂ ॥ ೧೪ ॥
ಅತ್ರೇದಂ ಪುಣ್ಯಮಾಖ್ಯಾನಂ ವರ್ಣಯಂತಿ ಮನೀಷಿಣಃ ।
ಮಹಾಪಾಪಕ್ಷಯಕರಂ ಶ್ರವಣಾತ್ಕೀರ್ತನಾದಪಿ ॥ ೧೫ ॥
ರಾಜಾ ಕಾಶ್ಮೀರದೇಶಸ್ಯ ಭದ್ರಸೇನ ಇತಿ ಶ್ರುತಃ ।
ತಸ್ಯ ಪುತ್ರೋಽಭವದ್ಧೀಮಾನ್ಸುಧರ್ಮಾ ನಾಮ ವೀರ್ಯವಾನ್ ॥ ೧೬ ॥
ತಸ್ಯಾಽಮಾತ್ಯಸುತಃ ಕಶ್ಚಿತ್ತಾರಕೋ ನಾಮ ಸದ್ಗುಣಃ ।
ಬಭೂವ ರಾಜಪುತ್ರಸ್ಯ ಸಖಾ ಪರಮಶೋಭನಃ ॥ ೧೭ ॥
ತಾವುಭೌ ಪರಮಸ್ನಿಗ್ಧೌ ಕುಮಾರೌ ರೂಪಸುಂದರೌ ।
ವಿದ್ಯಾಽಭ್ಯಾಸಪರೌ ಬಾಲ್ಯೇ ಸಹಕ್ರೀಡಾಂ ಪ್ರಚಕ್ರತುಃ ॥ ೧೮ ॥
ತೌ ಸದಾ ಸರ್ವಗಾತ್ರೇಷು ರುದ್ರಾಕ್ಷಕೃತಭೂಷಣೌ ।
ವಿಚೇರತುರುದಾರಾಂಗೌ ಸತತಂ ಭಸ್ಮಧಾರಿಣೌ ॥ ೧೯ ॥

---

೧೩. ಒಂದು, ಐದು, ಹನ್ನೊಂದು, ಹದಿನಾಲ್ಕು ಮುಖಗಳುಳ್ಳ ರುದ್ರಾಕ್ಷಿಗಳು ಪ್ರಪಂಚದಲ್ಲಿ ಪೂಜ್ಯವಾದುವು.

೧೪. ಪ್ರತಿದಿನವೂ ಶಿವಸ್ವರೂಪವಾದ ರುದ್ರಾಕ್ಷಿಯನ್ನು ಭಕ್ತಿಯಿಂದ ಪೂಜಿಸಿದರೆ ಅದು ಬಡವನನ್ನೂ ಕುಬೇರನ ಐಶ್ವರ್ಯವುಳ್ಳವನನ್ನಾಗಿ ಮಾಡುವುದು.

೧೫. ಈ ವಿಷಯದಲ್ಲಿ ವಿದ್ವಾಂಸರು ಕೇಳುವುದರಿಂದಲೂ, ಹೇಳುವುದರಿಂದಲೂ ಅತಿಶಯಪಾಪವನ್ನು ಪರಿಹರಿಸುವ ಪವಿತ್ರವಾದೊಂದುಪಾಖ್ಯಾನವನ್ನು ಹೇಳುತ್ತಾರೆ.

೧೬. ಕಾಶ್ಮೀರದೇಶದ ದೊರೆಯಾದ ಭದ್ರಸೇನನಿಗೆ ಸುಧರ್ಮನೆಂಬ ಬುದ್ಧಿವಂತನೂ, ವೀರನೂ ಆದ ಪುತ್ರನಿದ್ದನು.

೧೭. ಆ ಭದ್ರಸೇನನ ಮಂತ್ರಿಯ ಮಗನಾದ ಸದ್ಗುಣಗಳುಳ್ಳ ತಾರಕನೆಂಬವನು ಸುಧರ್ಮನಿಗೆ ಗೆಳೆಯನಾಗಿದ್ದನು.

೧೮. ತುಂಬ ಸ್ನೇಹಿತರೂ, ಸುಂದರರೂ ಆದ ಆ ಇಬ್ಬರು ಬಾಲಕರು ಬಾಲ್ಯದಲ್ಲಿ ವಿದ್ಯಾಭ್ಯಾಸಮಾಡುತ್ತ ಒಟ್ಟಿಗೆ ಆಡುತ್ತಿದ್ದರು.

೧೯. ಸುಂದರಾಂಗರಾದ ಅವಿರಿಬ್ಬರೂ ಯಾವಾಗಲೂ ಸಕಲಾಂಗಗಳಲ್ಲಿ ರುದ್ರಾಕ್ಷಿಗಳನ್ನೂ, ಭಸ್ಮವನ್ನೂ ಧರಿಸಿ ಸಂಚರಿಸುತ್ತಿದ್ದರು.

CC-0. Jangamwadi Math Collection. Digitized by eGangotri

ಹಾರಕೇಯೂರಕಟಕಕುಂಡಲಾದಿವಿಭೂಷಣಂ ।
ಹೇಮರತ್ನಮಯಂ ತ್ಯಕ್ತ್ವಾ ರುದ್ರಾಕ್ಷಾನ್ದಧತುಶ್ಚ ತೌ ॥ ೨೦ ॥
ರುದ್ರಾಕ್ಷಮಾಲಿನೌ ನಿತ್ಯಂ ರುದ್ರಾಕ್ಷಕರಕಂಕಣೌ ।
ರುದ್ರಾಕ್ಷಕಂಠಾಭರಣೌ ಸದಾ ರುದ್ರಾಕ್ಷಕುಂಡಲೌ ॥ ೨೧ ॥
ಹೇಮರತ್ನಾದ್ಯಲಂಕಾರೇ ಲೋಷ್ಟಪಾಷಾಣದರ್ಶನೌ ।
ಬೋಧ್ಯಮಾನಾವಪಿ ಜನೈರ್ನರುದ್ರಾಕ್ಷಾನ್ವ್ಯಮುಂಚತಾಂ ॥ ೨೨ ॥
ತಸ್ಯ ಕಾಶ್ಮೀರರಾಜಸ್ಯ ಗೃಹಂ ಪ್ರಾಪ್ತೋ ಯದೃಚ್ಛಯಾ ।
ಪರಾಶರೋ ಮುನಿವರಃ ಸಾಕ್ಷಾದಿವ ಪಿತಾಮಹಃ ॥ ೨೩ ॥
ತಮರ್ಚಯಿತ್ವಾ ವಿಧಿವದ್ರಾಜಾ ಧರ್ಮಭೃತಾಂ ವರಃ ।
ಪಪ್ರಚ್ಛ ಸುಖಮಾಸೀನಂ ತ್ರಿಕಾಲಜ್ಞಂ ಮಹಾಮುನಿಂ ॥ ೨೪ ॥

ರಾಜೋವಾಚ :—

ಭಗವನ್ನೇಷ ಪುತ್ರೋ ಮೇ ಸೋಽಪಿ ಮಂತ್ರಿಸುತಶ್ಚ ಮೇ ।
ರುದ್ರಾಕ್ಷಧಾರಿಣೌ ನಿತ್ಯಂ ರತ್ನಾಭರಣನಿಃಸ್ಪೃಹೌ ॥ ೨೫ ॥
ಶಾಸ್ಯಮಾನಾವಪಿ ಸದಾ ರತ್ನಾಕಲ್ಪಪರಿಗ್ರಹೇ ।
ವಿಲಂಘಿತಾಽಸ್ಮದ್ವಚನೌ ರುದ್ರಾಕ್ಷೇಷ್ವೇವ ತತ್ಪರೌ ॥ ೨೬ ॥

---

೨೦–೨೨. ಅವರು ಹಾರ, ನಾಗಮುರಿಗೆ, ಬಳೆ, ಕುಂಡಲ ಮೊದಲಾದ ಚಿನ್ನರತ್ನಗಳಿಂದ ಮಾಡಿದ ಒಡವೆಗಳನ್ನು ತ್ಯಜಿಸಿ ರುದ್ರಾಕ್ಷಿಗಳನ್ನು ಧರಿಸಿ ಕೊಂಡಿದ್ದರು. ಆ ಕುಮಾರರು ಯಾವಾಗಲೂ ರುದ್ರಾಕ್ಷಿಮಾಲೆಯುಳ್ಳವರೂ, ರುದ್ರಾಕ್ಷಿಯ ಬಳೆ, ಕುಂಡಲಗಳುಳ್ಳವರೂ ಆಗಿ ಸುವರ್ಣ, ರತ್ನಗಳ ಒಡವೆ ಗಳನ್ನು ಮಣ್ಣಿನ ಹೆಂಟೆ ಕಲ್ಲುಗಳಂತೆ ಭಾವಿಸುತ್ತ ಜನರು ಅದು ಸರಿಯಲ್ಲವೆಂದು ತಿಳಿಸಿದರೂ ರುದ್ರಾಕ್ಷಿಗಳನ್ನು ಬಿಡಲಿಲ್ಲ.

೨೩. ಒಂದುದಿನ ಆ ಕಾಶ್ಮೀರದರಸನ ಮನೆಗೆ ಆಸ್ಮಿಕವಾಗಿ ಪ್ರತ್ಯಕ್ಷ ಬ್ರಹ್ಮನಂತಿರುವ ಪರಾಶರ ಮುನಿವರ್ಯರು ಬಂದರು.

೨೪. ಧರ್ಮಾತ್ಮರಲ್ಲಿ ಉತ್ತಮನಾದ ಆ ದೊರೆಯು ಆ ಮುನಿಯನ್ನು ವಿಧಿವತ್ತಾಗಿ ಪೂಜಿಸಿ ಸುಖದಿಂದ ಕುಳಿತಿರುವವನೂ, ತ್ರಿಕಾಲವನ್ನರಿತವನೂ ಆದ ಅವನನ್ನು ಹೀಗೆ ಕೇಳಿದನು.

೨೫. ರಾಜನು ಹೇಳುತ್ತಾನೆ:—"ಎಲೈ ಮುನಿಪುಂಗವನೇ! ಈ ನನ್ನ ಮಗನೂ ಆ ಮಂತ್ರಿಸುತನೂ ಯಾವಾಗಲೂ ರುದ್ರಾಕ್ಷಿಗಳನ್ನು ಧರಿಸುತ್ತ ರತ್ನಾಭರಣಗಳಲ್ಲಿ ಆಶೆಯಿಲ್ಲದವರಾಗಿದ್ದಾರೆ.

೨೬. ಯಾವಾಗಲೂ ರತ್ನಾಭರಣಗಳನ್ನು ತೊಡಲು ನಿರ್ಬಂಧಿಸಿದರೂ ಇವರು ನಮ್ಮಮಾತನ್ನು ಮೀರಿ ರುದ್ರಾಕ್ಷಧಾರಣೆಯಲ್ಲಿಯೇ ನಿರತರಾಗಿರುವರು.

CC-0. Jangamwadi Math Collection. Digitized by eGangotri

ನೋಪದಿಷ್ಟಾವಿಮೌ ಬಾಲೌ ಕದಾಚಿದಪಿ ಕೇನಚಿತ್ ।
ಏಷಾ ಸ್ವಾಭಾವಿಕೀ ವೃತ್ತಿಃ ಕಥಮಾಸೀತ್ಕುಮಾರಯೋಃ ॥ ೨೭ ॥

ಪರಾಶರ ಉವಾಚ:—

ಶೃಣು ರಾಜನ್ಪ್ರವಕ್ಷ್ಯಾಮಿ ತವ ಪುತ್ರಸ್ಯ ಧೀಮತಃ ।
ಯಥಾ ತ್ವಂ ಮಂತ್ರಿಪುತ್ರಸ್ಯ ಪ್ರಾಗ್ವೃತ್ತಂ ವಿಸ್ಮಯಾವಹಂ ॥ ೨೮ ॥
ನಂದಿಗ್ರಾಮೇ ಪುರಾ ಕಾಚಿನ್ಮಹಾನಂದೇತಿ ವಿಶ್ರುತಾ ।
ಬಭೂವ ವಾರವನಿತಾ ಶೃಂಗಾರಲಲಿತಾಕೃತಿಃ ॥ ೨೯ ॥
ಛತ್ರಂ ಪೂರ್ಣೇಂದುಸಂಕಾಶಂ ಯಾನಂ ಸ್ವರ್ಣವಿರಾಜಿತಂ ।
ಚಾಮರಾಣಿ ಸುದಂಡಾನಿ ಪಾದುಕೇ ಚ ಹಿರಣ್ಮಯೇ ॥ ೩೦ ॥
ಅಂಬರಾಣಿ ವಿಚಿತ್ರಾಣಿ ಮಹಾರ್ಹಾಣಿ ದ್ಯುಮಂತಿ ಚ ।
ಚಂದ್ರರಶ್ಮಿನಿಭಾಃ ಶಯ್ಯಾಃ ಪರ್ಯಂಕಾಶ್ಚ ಹಿರಣ್ಮಯಾಃ ॥ ೩೧ ॥
ಗಾವೋ ಮಹಿಷ್ಯಃ ಶತಶೋ ದಾಸಾಶ್ಚ ಶತಶಸ್ತಥಾ ॥ ೩೨ ॥
ಸರ್ವಾಭರಣದೀಪ್ತಾಂಗ್ಯೋ ದಾಸ್ಯಶ್ಚ ನವಯೌವನಾಃ ।
ಭೂಷಣಾನಿ ಪರಾರ್ಧ್ಯಾಣಿ ನವರತ್ನೋಜ್ಜ್ವಲಾನಿ ಚ ॥ ೩೩ ॥
ಗಂಧಕುಂಕುಮಕಸ್ತೂರೀಕರ್ಪೂರಾಗುರುಲೇಪನಂ ।
ಚಿತ್ರಮಾಲ್ಯಾವತಂಸಶ್ಚ ಯಥೇಷ್ಟಂ ಮೃಷ್ಟಭೋಜನಂ ॥ ೩೪ ॥

---

೨೭. ಇವರಿಗೆ ಯಾರೂ ಒಂದಾವೃತ್ತಿಯೂ ಹೀಗೆ ರುದ್ರಾಕ್ಷಿಗಳನ್ನು ಧರಿಸಲು ಉಪದೇಶಮಾಡಲಿಲ್ಲ. ಈ ಕುಮಾರರಿಗೆ ಸ್ವಾಭಾವಿಕವಾಗಿ ಇಂತಹ ನಡತೆಯು ಹೇಗೆ ಬಂದಿತು? ”

೨೮. ಪರಾಶರನು ಹೇಳುತ್ತಾನೆ:—“ ಅರಸ! ಬುದ್ಧಿವಂತನಾದ ನಿನ್ನ ಮಗನ ಮತ್ತು ಮಂತ್ರಿಪುತ್ರನ ಆಶ್ಚರ್ಯಕರವಾದ ಹಿಂದಿನ ಸಮಾಚಾರವನ್ನು ಹೇಳುವೆನು ಕೇಳು.

೨೯. ಹಿಂದೆ ನಂದಿಗ್ರಾಮದಲ್ಲಿ ಶೃಂಗಾರದಿಂದ ಮನೋಹರವಾದ ಆಕೃತಿಯುಳ್ಳ ಮಹಾನಂದೆಯೆಂಬ ವೇಶ್ಯೆಯೋರ್ವಳಿದ್ದಳು.

೩೦–೩೫. ಅವಳಲ್ಲಿ ಪೂರ್ಣಚಂದ್ರನಂತಿರುವ ಕೊಡೆಯೂ, ಚಿನ್ನದಿಂದ ವಿರಾಜಿಸುವ ವಾಹನವೂ, ಒಳ್ಳೆಯ ಹಿಡಿಯುಳ್ಳ ಚಾಮರವೂ, ಚಿನ್ನದ ಪಾದರಕ್ಷೆಗಳೂ, ನಾನಾವಿಧವೂ, ಅತಿಬೆಲೆಯುಳ್ಳವೂ, ಪ್ರಕಾಶಮಾನವೂ ಆಗಿರುವ ಬಟ್ಟೆಗಳೂ, ಬೆಳದಿಂಗಳಂತಿರುವ ಹಾಸಿಗೆಗಳೂ, ಚಿನ್ನದ ಮಂಚಗಳೂ, ನೂರಾರು ಗೋವುಗಳೂ, ಎಮ್ಮೆಗಳೂ, ಸೇವಕರೂ, ಸಮಸ್ತಾಭರಣಗಳಿಂದ ಪ್ರಕಾಶಿಸುವ ಯುವತಿಯರಾದ ದಾಸಿಯರೂ, ಅಮೂಲ್ಯವೂ, ನವರತ್ನಗಳಿಂದ ಉಜ್ಜ್ವಲವೂ ಆಗಿರುವ ಒಡವೆಗಳೂ, ಗಂಧ, ಕುಂಕುಮ, ಕಸ್ತೂರಿ, ಕರ್ಪೂರ,

CC-0. Jangamwadi Math Collection. Digitized by eGangotri

ನಾನಾಚಿತ್ರವಿತಾನಾಢ್ಯಂ ನಾನಾಧಾನ್ಯಮಯಂ ಗೃಹಂ ।
ಬಹುರತ್ನಸಹಸ್ರಾಢ್ಯಂ ಕೋಟಿಸಂಖ್ಯಾಽಧಿಕಂ ಧನಂ ॥ ೩೫ ॥
ಏವಂ ವಿಭವಸಂಪನ್ನಾ ವೇಶ್ಯಾ ಕಾಮವಿಹಾರಿಣೀ ।
ಶಿವಪೂಜಾರತಾ ನಿತ್ಯಂ ಸತ್ಯಧರ್ಮಪರಾಯಣಾ ॥ ೩೬ ॥
ಸದಾಶಿವಕಥಾಸಕ್ತಾ ಶಿವನಾಮಕಥೋತ್ಸುಕಾ ।
ಶಿವಭಕ್ತಾಂಘ್ರ್ಯವನತಾ ಶಿವಭಕ್ತಿರತಾಽನಿಶಂ ॥ ೩೭ ॥
ವಿನೋದಹೇತೋಃ ಸಾ ವೇಶ್ಯಾ ನಾಟ್ಯಮಂಡಪಮಧ್ಯತಃ ।
ರುದ್ರಾಕ್ಷೈರ್ಭೂಷಯಿತ್ವೈಕಂ ಮರ್ಕಟಂ ಚೈವ ಕುಕ್ಕುಟಂ ॥ ೩೮ ॥
ಕರತಾಲೈಶ್ಚ ಗೀತೈಶ್ಚ ಸದಾ ನರ್ತಯತಿ ಸ್ವಯಂ ।
ಪುನಶ್ಚ ವಿಹಸಂತ್ಯುಚ್ಚೈಃ ಸಖೀಭಿಃ ಪರಿವಾರಿತಾ ॥ ೩೯ ॥
ರುದ್ರಾಕ್ಷೈಃ ಕೃತಕೇಯೂರಕರ್ಣಾಭರಣಭೂಷಣಃ ।
ಮರ್ಕಟಃ ಶಿಕ್ಷಯಾ ತಸ್ಯಾಃ ಸದಾ ನೃತ್ಯತಿ ಬಾಲವತ್ ॥ ೪೦ ॥
ಶಿಖಾಯಾಂ ಬದ್ಧರುದ್ರಾಕ್ಷಃ ಕುಕ್ಕುಟಃ ಕಪಿನಾ ಸಹ ।
ಚಿರಂ ನೃತ್ಯತಿ ನೃತ್ಯಜ್ಞಃ ಪಶ್ಯತಾಂ ಚಿತ್ರಮಾವಹನ್ ॥ ೪೧ ॥

---

ಅಗುರುಗಳೂ, ನಾನಾ ಬಗೆಯ ಮಾಲೆಗಳೂ, ಮೃಷ್ಟಾನ್ನಭೋಜನವೂ, ಬಗೆ ಬಗೆಯ ವಿತಾನಗಳಿಂದಲೂ, ನಾನಾಧಾನ್ಯಗಳಿಂದಲೂ ಕೂಡಿದ ಮನೆಯೂ, ಅನೇಕ ಸಹಸ್ರರತ್ನಗಳೂ, ಕೋಟಿಗಿಂತ ಹೆಚ್ಚಾದ ಹಣವೂ ಇದ್ದುವು.

೩೬–೩೭. ಹೀಗೆ ವೈಭವವುಳ್ಳವಳಾಗಿ ಸ್ವೇಚ್ಛೆಯಿಂದ ವಿಹರಿಸುವ ಆ ವೇಶ್ಯೆಯು ಯಾವಾಗಲೂ ಶಿವಪೂಜೆಯಲ್ಲಿಯೂ, ಸತ್ಯಧರ್ಮಗಳಲ್ಲಿಯೂ, ಶಿವಕಥೆಯಲ್ಲಿಯೂ, ಶಿವನಾಮವನ್ನು ಹೇಳುವುದರಲ್ಲಿಯೂ, ಶಿವಭಕ್ತಿಯಲ್ಲಿಯೂ ನಿರತಳಾಗಿ, ಶಿವಭಕ್ತರಡಿಗಳಿಗೆ ವಂದಿಸುವವಳೂ ಆಗಿದ್ದಳು.

೩೮–೩೯. ಆ ಸೂಳೆಯು ಯಾವಾಗಲೂ ವಿನೋದಕ್ಕಾಗಿ ನಾಟ್ಯಶಾಲೆಯ ನಡುವೆ ಒಂದು ಕೋತಿಯನ್ನೂ ಕೋಳಿಯನ್ನೂ ರುದ್ರಾಕ್ಷಿಗಳಿಂದ ಅಲಂಕರಿಸಿ ಕರತಾಳಗಳಿಂದಲೂ, ಹಾಡುಗಳಿಂದಲೂ ಯಾವಾಗಲೂ ಕುಣಿಸುತ್ತ ಸಖಿಯರೊಡನೆ ನಗುತ್ತಿದ್ದಳು.

೪೦. ರುದ್ರಾಕ್ಷಿಯ ಕೇಯೂರ, ಕುಂಡಲಗಳುಳ್ಳ ಆ ಕೋತಿಯು ಅವಳ ಉಪದೇಶದಿಂದ ಯಾವಾಗಲೂ ಬಾಲಕನಂತೆ ಕುಣಿಯುತ್ತಿದ್ದಿತು.

೪೧. ಕುಣಿತವನ್ನರಿತ ಕೋಳಿಯು ಜುಟ್ಟಿನಲ್ಲಿ ರುದ್ರಾಕ್ಷಿಯನ್ನು ಕಟ್ಟಿಸಿಕೊಂಡು ಕಪಿಯೊಡನೆ ನೋಡುವವರಿಗೆ ಆಶ್ಚರ್ಯವನ್ನುಂಟುಮಾಡುತ್ತ ಕುಣಿಯುತ್ತಿದ್ದಿತು.

CC-0. Jangamwadi Math Collection. Digitized by eGangotri

ಏಕದಾ ಭವನಂ ತಸ್ಯಾಃ ಕಶ್ಚಿದ್ವೈಶ್ಯಃ ಶಿವವ್ರತೀ ।
ಆಜಗಾಮ ಸ ರುದ್ರಾಕ್ಷಸ್ತ್ರಿಪುಂಡ್ರೀ ನಿರ್ಮಮಃ ಕೃತೀ ॥ ೪೨ ॥
ಸ ಬಿಭ್ರದ್ಭಸ್ಮವಿಶದೇ ಪ್ರಕೋಷ್ಠೇ ವರಕಂಕಣಂ ।
ಮಹಾರತ್ನಪರಿಸ್ತೀರ್ಣಂ ಜ್ವಲಂತಂ ತರುಣಾರ್ಕವತ್ ॥ ೪೩ ॥
ತಮಾಗತಂ ಸಾ ಗಣಿಕಾ ಸಂಪೂಜ್ಯ ಪರಯಾ ಮುದಾ ।
ತತ್ಪ್ರಕೋಷ್ಠಗತಂ ವೀಕ್ಷ್ಯ ಕಂಕಣಂ ಪ್ರಾಹ ವಿಸ್ಮಿತಾ ॥ ೪೪ ॥
ಮಹಾರತ್ನಮಯಃ ಸೋಽಯಂ ಕಂಕಣಸ್ತ್ವತ್ಕರೇ ಸ್ಥಿತಃ ।
ಮನೋ ಹರತಿ ಮೇ ಸಾಧೋ ದಿವ್ಯಸ್ತ್ರೀಭೂಷಣೋಚಿತಃ ॥ ೪೫ ॥
ಇತಿ ತಾಂ ವರರತ್ನಾಢ್ಯೇ ಸಸ್ಪೃಹಾಂ ಕರಭೂಷಣೇ ।
ವೀಕ್ಷ್ಯೋದಾರಮತಿರ್ವೈಶ್ಯಃ ಸಸ್ಮಿತಂ ಸಮಭಾಷತ ॥ ೪೬ ॥

ವೈಶ್ಯ ಉವಾಚ :—

ಅಸ್ಮಿನ್ರತ್ನವರೇ ದಿವ್ಯೇ ಯದಿ ತೇ ಸಸ್ಪೃಹಂ ಮನಃ ।
ತಮೇವಾದತ್ಸ್ವ ಸುಪ್ರೀತಾ ಮೌಲ್ಯಮಸ್ಯ ದದಾಸಿ ಕಿಂ ॥ ೪೭ ॥

ವೇಶ್ಯೋವಾಚ :—

ವಯಂ ತು ಸ್ವೈರಚಾರಿಣ್ಯೋ ವೇಶ್ಯಾಸ್ತು ನ ಪತಿವ್ರತಾಃ ।
ಅಸ್ಮತ್ಕುಲೋಚಿತೋ ಧರ್ಮೋ ವ್ಯಭಿಚಾರೋ ನ ಸಂಶಯಃ ॥ ೪೮ ॥

---

೪೨–೪೪. ಒಂದಾನೊಂದು ದಿನ ಅವಳ ಮನೆಗೆ ಶಿವವ್ರತವುಳ್ಳವನೂ, ರುದ್ರಾಕ್ಷಿ, ತ್ರಿಪುಂಡ್ರವನ್ನು ಧರಿಸಿದವನೂ, ಅಹಂಕಾರವಿಲ್ಲದವನೂ, ಪುಣ್ಯವಂತನೂ, ಭಸ್ಮದಿಂದ ಬೆಳ್ಳಗಾದ ಮುಂಗೈಯಲ್ಲಿ ಸೂರ್ಯನಂತೆ ಉತ್ತಮ ರತ್ನಗಳಿಂದ ಪ್ರಕಾಶಿಸುವ ಕಂಕಣವನ್ನು ಧರಿಸಿದವನೂ ಆದ ಒಬ್ಬ ವೈಶ್ಯನು ಬಂದನು. ಬಂದಿರುವ ಆ ವೈಶ್ಯನನ್ನು ಆ ವೇಶ್ಯೆಯು ಅತಿ ಸಂತೋಷದಿಂದ ಪೂಜಿಸಿ ಅವನ ಮುಂಗೈಯಲ್ಲಿರುವ ಕಂಕಣವನ್ನು ಕಂಡು ಆಶ್ಚರ್ಯಗೊಂಡು ಹೀಗೆಂದಳು.

೪೫. "ಎಲೈ ಸಾಧುವೆ! ನಿನ್ನ ಕೈಯಲ್ಲಿರುವ ಉತ್ತಮರತ್ನವು ಕೆತ್ತಿದ ದಿವ್ಯಾಂಗನೆಯರಿಗುಚಿತವಾದ ಈ ಕಂಕಣವು ನನ್ನ ಮನಸ್ಸನ್ನು ಸೆಳೆಯುತ್ತದೆ."

೪೬. ಹೀಗೆ ಶ್ರೇಷ್ಠರತ್ನಗಳಿಂದ ಕೆತ್ತಿದ ತನ್ನ ಕಂಕಣದಲ್ಲಿ ಆಶೆಯುಳ್ಳ ಆ ವೇಶ್ಯೆಯನ್ನು ನೋಡಿ ವೈಶ್ಯನು ಮುಗುಳ್ನಗೆಯಿಂದ ಇಂತೆಂದನು.

೪೭. ವೈಶ್ಯನು ಹೇಳುತ್ತಾನೆ:—ಶ್ರೇಷ್ಠವಾದ ಈ ಕಂಕಣದಲ್ಲಿ ನಿನಗೆ ಆಶೆಯಿದ್ದರೆ ಇದನ್ನು ಸಂತೋಷದಿಂದ ತೆಗೆದುಕೊ, ಇದಕ್ಕೆ ಏನು ಬೆಲೆ ಕೊಡುತ್ತೀಯೆ ?

೪೮. ವೇಶ್ಯೆಯು ಹೇಳುತ್ತಾಳೆ:—ಸೂಳೆಯರಾದ ನಾವು ಸ್ವೇಚ್ಛೆಯಿಂದ

CC-0. Jangamwadi Math Collection. Digitized by eGangotri

ಯದ್ಯೇತದ್ರತ್ನಖಚಿತಂ ದದಾಸಿ ಕರಭೂಷಣಂ ।
ದಿನತ್ರಯಮಹೋರಾತ್ರಂ ತವಪತ್ನೀ ಭವಾಮ್ಯಹಂ ॥ ೪೯ ॥
ವೈಶ್ಯ ಉವಾಚ :—
ತಥಾಽಸ್ತು ಯದಿ ತೇ ಸತ್ಯಂ ವಚನಂ ವಾರವಲ್ಲಭೇ ।
ದದಾಮಿ ರತ್ನವಲಯಂ ತ್ರಿರಾತ್ರಂ ಭವ ಮದ್ವಧೂಃ ॥ ೫೦ ॥
ಏತಸ್ಮಿನ್ವ್ಯವಹಾರೇತು ಪ್ರಮಾಣಂ ಶಶಿಭಾಸ್ಕರೌ ।
ತ್ರಿವಾರಂ ಸತ್ಯಮಿತ್ಯುಕ್ತ್ವಾ ಹೃದಯಂ ಮೇ ಸ್ಪೃಶ ಪ್ರಿಯೇ ॥ ೫೧ ॥
ವೇಶ್ಯೋವಾಚ :—
ದಿನತ್ರಯಮಹೋರಾತ್ರಂ ಪತ್ನೀ ಭೂತ್ವಾ ತವ ಪ್ರಭೋ ।
ಸಹ ಧರ್ಮಂ ಚರಾಮೀತಿ ಸಾ ತದ್ಧೃದಯಮಸ್ಪೃಶತ್ ॥ ೫೨ ॥
ಅಥ ತಸ್ಯೈ ಸ ವೈಶ್ಯಸ್ತು ಪ್ರದದೌ ರತ್ನಕಂಕಣಂ ।
ಲಿಂಗಂ ರತ್ನಮಯಂ ಚಾಽಸ್ಯಾ ಹಸ್ತೇ ದತ್ವೇದಮಬ್ರವೀತ್ ॥ ೫೩ ॥
ಇದಂ ರತ್ನಮಯಂ ಶೈವಂ ಲಿಂಗಂ ಮತ್ಪ್ರಾಣಸನ್ನಿಭಂ ।
ರಕ್ಷಣೀಯಂ ತ್ವಯಾ ಕಾಂತೇ ತಸ್ಯ ಹಾನಿರ್ಮೃತಿರ್ಮಮ ॥ ೫೪ ॥

---

ನಡೆಯುವವರು. ಪತಿವ್ರತೆಯರಲ್ಲ. ವ್ಯಭಿಚಾರವು ನಮ್ಮ ವಂಶಕ್ಕೆ ಉಚಿತವಾದ ಧರ್ಮವು.

೪೯. ಈ ರತ್ನಕೆತ್ತಿದ ಕಂಕಣವನ್ನು ನನಗಿತ್ತರೆ ಮೂರುದಿನ ಹಗಲು ರಾತ್ರಿ ನಾನು ನಿನಗೆ ಹೆಂಡತಿಯಾಗುವೆನು.

೫೦. ವೈಶ್ಯನು ಹೇಳುತ್ತಾನೆ:—ವೇಶ್ಯಳೆ! ನಿನ್ನಮಾತು ನಿಜವಾದರೆ ಹಾಗೆಯೇ ಆಗಲಿ. ನಿನಗೆ ರತ್ನದ ಬಳೆಯನ್ನು ಕೊಡುವೆನು. ಮೂರುರಾತ್ರಿ ನನಗೆ ಪತ್ನಿಯಾಗು.

೫೧. ಈ ವಿಷಯದಲ್ಲಿ ಸೂರ್ಯಚಂದ್ರರು ಸಾಕ್ಷಿಗಳು. ಇದು ಸತ್ಯವೆಂದು ನೀನು ಮೂರುಸಲ ಹೇಳಿ ನನ್ನ ಎದೆಯನ್ನು ಮುಟ್ಟು.

೫೨. ವೇಶ್ಯೆಯು ಹೇಳುತ್ತಾಳೆ:— "ಸ್ವಾಮಿ! ನಾನು ಮೂರು ದಿನ ನಿನಗೆ ಹಗಲು ರಾತ್ರಿ ಪತ್ನಿಯಾಗಿ ಒಟ್ಟಗೆ ಧರ್ಮವನ್ನಾಚರಿಸುವೆನು" ಎಂದು ಅವನ ಎದೆಯನ್ನು ಮುಟ್ಟಿದಳು.

೫೩. ಬಳಿಕ ಆ ವೈಶ್ಯನು ಅವಳಿಗೆ ಚಿನ್ನದ ಬಳೆಯನ್ನು ಕೊಟ್ಟನು. ಮತ್ತು ರತ್ನದ ಲಿಂಗವನ್ನು ಅವಳಕೈಯಲ್ಲಿ ಕೊಟ್ಟು ಹೀಗೆಂದನು.

೫೪. ಈ ರತ್ನದ ಶಿವಲಿಂಗವು ನನ್ನ ಪ್ರಾಣಕ್ಕೆ ಸಮಾನವಾದುದು. ಇದನ್ನು ನೀನು ರಕ್ಷಿಸಬೇಕು. ಇದು ನಷ್ಟವಾದರೆ ನಾನು ಸಾಯುವೆನು.

CC-0. Jangamwadi Math Collection. Digitized by eGangotri

ಏವಮಸ್ತ್ವಿತಿ ಸಾ ಕಾಂತಾ ಲಿಂಗಮಾದಾಯ ರತ್ನಜಂ ।
ನಾಟ್ಯಮಂಡಪಿಕಾಸ್ತಂಭೇ ನಿಧಾಯ ಪ್ರಾವಿಶದ್ಗೃಹಂ ॥ ೫೫ ॥
ಸಾ ತೇನ ಸಂಗತಾ ರಾತ್ರೌ ವೈಶ್ಯೇನ ವಿಟಧರ್ಮಿಣಾ ।
ಸುಖಂ ಸುಷ್ವಾಪ ಪರ್ಯಂಕೇ ಮೃದುತಲ್ಪೋಪಶೋಭಿತೇ ॥ ೫೬ ॥
ತತೋ ನಿಶೀಥಸಮಯೇ ನಾಟ್ಯಮಂಡಪಿಕಾಂತರೇ ।
ಅಕಸ್ಮಾದುತ್ಥಿತೋ ವಹ್ನಿಸ್ತಮೇವ ಸಹಸಾವೃಣೋತ್ ॥ ೫೭ ॥
ಮಂಡಪೇ ದಹ್ಯಮಾನೇ ತು ಸಹಸೋತ್ಥಾಯ ಸಂಭ್ರಮಾತ್ ।
ಸಾ ವೇಶ್ಯಾ ಮರ್ಕಟಂ ತತ್ರ ಮೋಚಯಾಮಾಸ ಬಂಧನಾತ್ ॥ ೫೮ ॥
ಸ ಮರ್ಕಟೋ ಮುಕ್ತಬಂಧಃ ಕುಕ್ಕುಟೇನ ಸಹಾಽಮುನಾ ।
ಭೀತೋ ದೂರಂ ಪ್ರದುದ್ರಾವ ವಿಧೂಯಾಽಗ್ನಿಕಣಾನ್ಬಹೂನ್ ॥ ೫೯ ॥
ಸ್ತಂಭೇನ ಸಹನಿರ್ದಗ್ಧಂ ತಲ್ಲಿಂಗಂ ಶಕಲೀಕೃತಂ ।
ದೃಷ್ಟ್ವಾ ವೇಶ್ಯಾ ಚ ವೈಶ್ಯಶ್ಚ ದುರಂತಂ ದುಃಖಮಾಪತುಃ ॥ ೬೦ ॥
ದೃಷ್ಟ್ವಾ ಪ್ರಾಣಸಮಂ ಲಿಂಗಂ ದಗ್ಧಂ ವೈಶ್ಯಪತಿಸ್ತಥಾ ।
ಸ್ವಯಮಪ್ಯಾಪ್ತ ನಿರ್ವೇದೋ ಮರಣಾಯ ಮತಿಂ ದಧೌ ॥ ೬೧ ॥
ನಿರ್ವೇದಾನ್ನಿತರಾಂ ಖೇದಾದ್ವೈಶ್ಯಸ್ತಾಮಾಹ ದುಃಖಿತಾಂ ।
ಶಿವಲಿಂಗೇ ತು ನಿರ್ಭಿನ್ನೇ ನಾಽಹಂ ಜೀವಿತುಮುತ್ಸಹೇ ॥ ೬೨ ॥

---

೫೫. ಆ ವೇಶ್ಯೆಯು ಹಾಗೆಯೇ ಆಗಲೆಂದು ಆ ರತ್ನಲಿಂಗವನ್ನು ತೆಗೆದುಕೊಂಡು ಅದನ್ನು ನಾಟ್ಯಶಾಲೆಯ ಕಂಬದಲ್ಲಿರಿಸಿ ಮನೆಯನ್ನು ಹೊಕ್ಕಳು.

೫೬. ಅವಳು ಆದಿನ ರಾತ್ರಿ ಜಾರನಾದ ಆ ವೈಶ್ಯನೊಡನೆ ಮೃದುವಾದ ಹಾಸಿಗೆಯಿಂದ ಮನೋಹರವಾದ ಮಂಚದಲ್ಲಿ ಸುಖವಾಗಿ ನಿದ್ರಿಸಿದಳು.

೫೭. ಬಳಿಕ ಅರ್ಧರಾತ್ರಿಯ ಸಮಯದಲ್ಲಿ ನಾಟ್ಯಶಾಲೆಯ ಮಧ್ಯದಲ್ಲಿ ಆಕಸ್ಮಿಕವಾಗಿ ಹುಟ್ಟಿದ ಬೆಂಕಿಯು ಆ ಶಾಲೆಯನ್ನು ಕೂಡಲೆ ಆವರಿಸಿತು.

೫೮. ನಾಟ್ಯಮಂಟಪವು ಸುಡಲ್ಪಡುತ್ತಿರಲು ಆ ವೇಶ್ಯೆಯು ಕೂಡಲೆ ಎದ್ದು ಅಲ್ಲಿ ಕಟ್ಟಿರುವ ಕೋತಿಯನ್ನು ಬಿಡಿಸಿದಳು.

೫೯. ಆ ಕಪಿಯು ಬಿಟ್ಟಕೂಡಲೆ ಕೋಳಿಯೊಡನೆ ಭಯದಿಂದ ಬೆಂಕಿಕಿಡಿಗಳನ್ನು ಕೊಡವಿಕೊಂಡು ದೂರ ಓಡಿ ಹೋಯಿತು.

೬೦. ಕಂಬದೊಡನೆ ಸುಟ್ಟು ಚೂರಾದ ಆ ಲಿಂಗವನ್ನು ನೋಡಿ ಆ ವೇಶ್ಯೆಯೂ ವೈಶ್ಯನೂ ಬಹು ದುಃಖಪಟ್ಟರು.

೬೧. ವೈಶ್ಯನು ತನ್ನ ಪ್ರಾಣದಂತಿರುವ ಲಿಂಗವು ಸುಟ್ಟು ಸಿಡಿದಿರುವುದನ್ನು ಕಂಡು ವೈರಾಗ್ಯಗೊಂಡು ಸಾಯಲು ನಿಶ್ಚಯಿಸಿದನು.

೬೨. ಅವನು ವೈರಾಗ್ಯದಿಂದಲೂ, ಅತಿದುಃಖದಿಂದಲೂ ಕೂಡಿ ಶೋಕಿಸು

CC-0. Jangamwadi Math Collection. Digitized by eGangotri

ಚಿತಾಂ ಕಾರಯ ಮೇ ಭದ್ರೇ ತವ ಭೃತ್ಯೈರ್ಬಲಾಽಧಿಕೈಃ ।
ಶಿವೇ ಮನಃ ಸಮಾವೇಶ್ಯ ಪ್ರವಿಶಾಮಿ ಹುತಾಶನಂ ॥ ೬೩ ॥
ಯದಿ ಬ್ರಹ್ಮೇಂದ್ರವಿಷ್ಣ್ವಾದ್ಯಾ ವಾರಯೇಯುಃ ಸಮೇತ್ಯ ಮಾಂ ।
ತಥಾಽಪ್ಯಸ್ಮಿನ್ಕ್ಷಣೇ ಧೀರಃ ಪ್ರವಿಶ್ಯಾಽಗ್ನಿಂ ತ್ಯಜಾಮ್ಯಸೂನ್ ॥ ೬೪ ॥
ತಮೇವಂ ದೃಢಬಂಧಂ ಸಾ ವಿಜ್ಞಾಯ ಬಹುದುಃಖಿತಾ ।
ಸ್ವಭೃತ್ಯೈಃ ಕಾರಯಾಮಾಸ ಚಿತಾಂ ಸ್ವನಗರಾದ್ಬಹಿಃ ॥ ೬೫ ॥
ತತಃ ಸ ವೈಶ್ಯಃ ಶಿವಭಕ್ತಿಪೂತಃ
ಪ್ರದಕ್ಷಿಣೀಕೃತ್ಯ ಸಮಿದ್ಧಮಗ್ನಿಂ ।
ವಿವೇಶ ಪಶ್ಯತ್ಸು ಜನೇಷು ಧೀರಃ
ಸಾ ಚಾಽನುತಾಪಂ ಯುವತೀ ಪ್ರಪೇದೇ ॥ ೬೬ ॥
ಅಥ ಸಾ ದುಃಖಿತಾ ನಾರೀ ಸ್ಮೃತ್ವಾ ಧರ್ಮಂ ಸುನಿರ್ಮಲಂ ।
ಸರ್ವಾನ್ಬಂಧೂನ್ಸಮಾಕ್ಷ್ಯೈವಂ ಬಭಾಷೇ ಕರುಣಂ ವಚಃ ॥ ೬೭ ॥
ರತ್ನಕಂಕಣಮಾದಾಯ ಮಯಾ ಸತ್ಯಮುದಾಹೃತಂ ।
ದಿನತ್ರಯಮಹಂ ಪತ್ನೀ ವೈಶ್ಯಸ್ಯಾಽಮುಷ್ಯ ಸಂಮತಾ ॥ ೬೮ ॥

---

ತ್ತಿರುವ ಆ ವೇಶ್ಯೆಯನ್ನು ಕುರಿತು ಶಿವಲಿಂಗವು ಒಡೆದು ಹೋದ ಮೇಲೆ ನಾನು ಜೀವಿಸಲಿಚ್ಛಿಸುವುದಿಲ್ಲ.

೬೩. ಮಂಗಳಕರಳೆ! ಬಲಿಷ್ಠರಾದ ನಿನ್ನ ಸೇವಕರಿಂದ ನನಗೆ ಚಿತೆಯನ್ನು ಮಾಡಿಸು. ನಾನು ಶಿವನಲ್ಲಿ ಮನಸ್ಸನ್ನಿಟ್ಟು ಅಗ್ನಿಯನ್ನು ಪ್ರವೇಶಿಸುವೆನು.

೬೪. ಬ್ರಹ್ಮ, ಇಂದ್ರ, ವಿಷ್ಣು ಮೊದಲಾದ ದಿವಿಜರು ಬಂದು ನನ್ನನ್ನು ತಡೆದರೂ ನಾನು ಈ ಕ್ಷಣದಲ್ಲಿಯೆ ಧೈರ್ಯದಿಂದ ಅಗ್ನಿಯನ್ನು ಪ್ರವೇಶಿಸಿ ಪ್ರಾಣವನ್ನು ತ್ಯಜಿಸತಕ್ಕವನು.

೬೫. ಆ ವೇಶ್ಯೆಯು ಅವನನ್ನು ದೃಢನಿಶ್ಚಯವುಳ್ಳವನನ್ನಾಗಿ ಅರಿತು ಅತಿದುಃಖವುಳ್ಳವಳಾಗಿ ತನ್ನ ಸೇವಕರಿಂದ ಪಟ್ಟಣದ ಹೊರಗೆ ಚಿತೆಯನ್ನು ಮಾಡಿಸಿದಳು.

೬೬. ಅನಂತರ ಶಿವಭಕ್ತಿಯಿಂದ ಶುದ್ಧನಾದ ಆ ವೈಶ್ಯನು ಉರಿಯುತ್ತಿರುವ ಅಗ್ನಿಯನ್ನು ಪ್ರದಕ್ಷಿಣೆಮಾಡಿ ಜನರೆಲ್ಲರೂ ನೋಡುತ್ತಿರುವಾಗ ಧೈರ್ಯದಿಂದ ಪ್ರವೇಶಿಸಿದನು. ಆ ಸೂಳೆಯು ವ್ಯಥೆಗೊಂಡಳು.

೬೭. ಬಳಿಕ ಅವಳು ಶುದ್ಧವಾದ ಧರ್ಮವನ್ನು ಸ್ಮರಿಸಿ ಬಂಧುಗಳನ್ನೆಲ್ಲ ನೋಡಿ ಹೀಗೆ ದೀನವಾಗಿ ನುಡಿದಳು.

೬೮. "ನಾನು ರತ್ನಕಂಕಣವನ್ನು ತೆಗೆದುಕೊಂಡು ಸತ್ಯವನ್ನು ಹೇಳಿರುವೆನು. ಅದರಂತೆ ಈ ವೈಶ್ಯನಿಗೆ ಮೂರು ದಿನ ಪತ್ನಿಯಾಗಿರುವೆನು.

CC-0. Jangamwadi Math Collection. Digitized by eGangotri

ಕರ್ಮಣಾ ಮತ್ಕೃತೇನಾಽಯಂ ಮೃತೋ ವೈಶ್ಯಃ ಶಿವವ್ರತೀ ।
ತಸ್ಮಾದಹಂ ಪ್ರವೇಕ್ಷ್ಯಾಮಿ ಸಹಾಽನೇನ ಹುತಾಶನಂ ।
ಸ ಧರ್ಮಚಾರಿಣೀತ್ಯುಕ್ತಂ ಸತ್ಯಮೇತದ್ಧಿ ಪಶ್ಯಥ ॥ ೭೯ ॥
ಸತ್ಯೇನ ಪ್ರೀತಿಮಾಯಾಂತಿ ದೇವಾಸ್ತ್ರಿಭುವನೇಶ್ವರಾಃ ।
ಸತ್ಯಾಸಕ್ತಿಃ ಪರೋ ಧರ್ಮಃ ಸತ್ಯೇ ಸರ್ವಂ ಪ್ರತಿಷ್ಠಿತಂ ॥ ೨೦ ॥
ಸತ್ಯೇನ ಸ್ವರ್ಗಮೋಕ್ಷೌ ಚ ನಾಽಸತ್ಯೇನ ಪರಾಗತಿಃ ।
ತಸ್ಮಾತ್ಸತ್ಯಂ ಸಮಾಶ್ರಿತ್ಯ ಪ್ರವೇಕ್ಷ್ಯಾಮಿ ಹುತಾಶನಂ ॥ ೨೧ ॥
ಇತಿ ಸಾ ದೃಢ ನಿರ್ಬಂಧಾ ವಾರ್ಯಮಾಣಾಽಪಿ ಬಂಧುಭಿಃ ।
ಸತ್ಯಲೋಪಭಯಾನ್ನಾರೀ ಪ್ರಾಣಾಂಸ್ತ್ಯಕ್ತುಂ ಮನೋ ದಧೇ ॥ ೨೨ ॥
ಸರ್ವಸ್ವಂ ಶಿವಭಕ್ತೇಭ್ಯೋ ದತ್ವಾ ಧ್ಯಾತ್ವಾ ಸದಾಶಿವಂ ।
ತಮಗ್ನಿಂ ತ್ರಿಃ ಪರಿಕ್ರಮ್ಯ ಪ್ರವೇಶಾಭಿಮುಖೀ ಸ್ಥಿತಾ ॥ ೨೩ ॥
ತಾಂ ಪತಂತೀಂ ಸಮಿದ್ಧೇಽಗ್ನೌ ಸ್ವಪದಾರ್ಪಿತ ಮಾನಸಾಂ ।
ವಾರಯಾಮಾಸ ವಿಶ್ವಾತ್ಮಾ ಪ್ರಾದುರ್ಭೂತಃ ಶಿವಃ ಸ್ವಯಂ ॥ ೨೪ ॥

---

೭೯. ಶಿವವ್ರತವುಳ್ಳ ಈ ವೈಶ್ಯನು ನನ್ನ ಕರ್ಮದಿಂದ ಮಡಿದಿದ್ದಾನೆ. ಅದರಿಂದ ನಾನು ಇವನೊಡನೆ ಅಗ್ನಿಯನ್ನು ಪ್ರವೇಶಿಸುವೆನು. ನಾನು ಸಹಧರ್ಮಚಾರಿಣಿಯಾಗಿರುವೆನೆಂದು ಮಾತುಕೊಟ್ಟಿರುವೆನು. ಇದು ಸತ್ಯ ನೋಡಿರಿ.

೨೦. ಸತ್ಯದಿಂದ ತ್ರಿಭುವನದ ಒಡೆಯರಾದ ದೇವತೆಗಳು ಸಂತೋಷ ಗೊಳ್ಳುತ್ತಾರೆ. ಸತ್ಯದಲ್ಲಿ ಆಸಕ್ತಿಯು ಉತ್ತಮವಾದ ಧರ್ಮವು. ಸತ್ಯದಲ್ಲಿ ಎಲ್ಲವೂ ನೆಲಸಿರುವುದು.

೨೧. ಸತ್ಯದಿಂದ ಸ್ವರ್ಗ, ಮೋಕ್ಷಗಳು ಲಭಿಸುವುವು. ಸುಳ್ಳಿನಿಂದ ಉತ್ತಮಗತಿಯು ದೊರೆಯುವುದಿಲ್ಲ. ಆದುದರಿಂದ ನಾನು ಸತ್ಯವನ್ನಾಶ್ರಯಿಸಿ ಅಗ್ನಿಯನ್ನು ಪ್ರವೇಶಿಸುವೆನು."

೨೨. ಹೀಗೆ ದೃಢನಿಶ್ಚಯವುಳ್ಳ ಅವಳನ್ನು ಬಂಧುಗಳು ತಡೆದರೂ ಅವಳು ಸತ್ಯವು ಕೆಡುವುದೆಂಬ ಭಯದಿಂದ ಪ್ರಾಣಗಳನ್ನು ತ್ಯಜಿಸಲು ನಿಶ್ಚಯಿಸಿದಳು.

೨೩. ಅವಳು ಎಲ್ಲವನ್ನೂ ಶಿವಭಕ್ತರಿಗೆ ದಾನಮಾಡಿ ಶಿವನನ್ನು ಧ್ಯಾನಿಸಿ ಆ ಅಗ್ನಿಯನ್ನು ಮೂರಾವೃತ್ತಿ ಪ್ರದಕ್ಷಿಣೆಗೈದು ಪ್ರವೇಶಿಸಲು ಅಭಿಮುಖಳಾದಳು.

೨೪. ಸರ್ವಾಂತರ್ಯಾಮಿಯಾದ ಶಿವನು ಪ್ರತ್ಯಕ್ಷನಾಗಿ ಜ್ವಲಿಸುತ್ತಿರುವ ಅಗ್ನಿಯಲ್ಲಿ ಬೀಳುತ್ತಿರುವ ತನ್ನ ಚರಣಗಳಲ್ಲಿ ಆಸಕ್ತವಾದ ಮನಸ್ಸುಳ್ಳ ಆ ವೇಶ್ಯೆಯನ್ನು ತಡೆದನು.

CC-0. Jangamwadi Math Collection. Digitized by eGangotri

ಸಾ ತಂ ವಿಲೋಕ್ಯಾಽಖಿಲದೇವದೇವಂ
ತ್ರಿಲೋಚನಂ ಚಂದ್ರಕಲಾವತಂಸಂ ।
ಶಶಾಂಕಸೂರ್ಯಾಽನಲಕೋಟಿಭಾಸಂ
ಸ್ತಬ್ಧೇವ ಭೀತೇವ ತಥೈವ ತಸ್ಥೌ ॥ ೭೫ ॥
ತಾಂ ವಿಹ್ವಲಾಂ ಪರಿತ್ರಸ್ತಾಂ ವೇಪಮಾನಾಂ ಜಡೀಕೃತಾಂ ।
ಸಮಾಶ್ವಾಸ್ಯ ಗಲದ್ಬಾಷ್ಪಾಂ ಕರೇ ಗೃಹ್ಯಾಽಬ್ರವೀದ್ವಚಃ ॥ ೭೬ ॥
ಶಿವ ಉವಾಚ :—
ಸತ್ಯಂ ಧರ್ಮಂ ಚ ತೇ ಧೈರ್ಯಂ ಭಕ್ತಿಂ ಚ ಮಯಿ ನಿಶ್ಚಲಾಂ ।
ನಿರೀಕ್ಷಿತುಂ ತ್ವತ್ಸಕಾಶಂ ವೈಶ್ಯೋ ಭೂತ್ವಾಽಹಮಾಗತಃ ॥ ೭೭ ॥
ಮಾಯಯಾಽಗ್ನಿಂ ಸಮುತ್ಥಾಪ್ಯ ದಗ್ಧವಾನ್ನಾಟ್ಯಮಂಡಪಂ ।
ದಗ್ಧಂ ಕೃತ್ವಾ ರತ್ನಲಿಂಗಂ ಪ್ರವಿಷ್ಟೋಽಸ್ಮಿ ಹುತಾಶನಂ ॥ ೭೮ ॥
ವೇಶ್ಯಾಃ ಕೈತವಕಾರಿಣ್ಯಃ ಸ್ವೈರಿಣ್ಯೋ ಜನವಂಚಕಾಃ ।
ಸಾ ತ್ವಂ ಸತ್ಯಮನುಸ್ಮೃತ್ಯ ಪ್ರವಿಷ್ಟಾಽಗ್ನಿಂ ಮಯಾ ಸಹ ॥ ೭೯ ॥
ಅತಸ್ತೇ ಸಂಪ್ರದಾಸ್ಯಾಮಿ ಭೋಗಾಂಸ್ತ್ರಿದಶದುರ್ಲಭಾನ್ ।
ಆಯುಶ್ಚ ಪರಮಂ ದೀರ್ಘಮಾರೋಗ್ಯಂ ಚ ಪ್ರಜೋನ್ನತಿಂ ।
ಯದ್ಯದಿಚ್ಛಸಿ ಸುಶ್ರೋಣಿ ತತ್ತದೇವ ದದಾಮಿ ತೇ ॥ ೮೦ ॥

---

೭೫. ಅವಳು ಅಖಿಲದೇವತೆಗಳಿಗೆ ಸ್ವಾಮಿಯೂ, ಮುಕ್ಕಣ್ಣನೂ, ಚಂದ್ರಮೌಳಿಯೂ, ಕೋಟಿಚಂದ್ರಸೂರ್ಯರಂತೆ ಕಾಂತಿಯುಳ್ಳವನೂ ಆಗಿರುವ ಆ ಪರಮೇಶ್ವರನನ್ನು ಈಕ್ಷಿಸಿ ಜಡಳಂತೆಯೂ, ಭಯಗೊಂಡವಳಂತೆಯೂ, ಹಾಗೆಯೇ ನಿಂತಳು.

೭೬. ಶಿವನು ವ್ಯಥೆಗೊಂಡವಳೂ, ಭಯಗೊಂಡವಳೂ, ನಡುಗುತ್ತಿರುವವಳೂ, ಜಡಳೂ, ಕಣ್ಣೀರನ್ನು ಸುರಿಸುತ್ತಿರುವವಳೂ ಆಗಿರುವ ಅವಳ ಕೈಯನ್ನು ಹಿಡಿದುಕೊಂಡು ಸಮಾಧಾನಗೊಳಿಸಿ ಇಂತೆಂದನು.

೭೭–೭೯. ಶಿವನು ಹೇಳುತ್ತಾನೆ:—ಎಲೌ! ನಿನ್ನ ಸತ್ಯವನ್ನೂ, ಧರ್ಮವನ್ನೂ, ಧೈರ್ಯವನ್ನೂ, ನನ್ನಲ್ಲಿ ನಿನಗಿರುವ ದೃಢಭಕ್ತಿಯನ್ನೂ ಪರೀಕ್ಷಿಸುವುದಕ್ಕಾಗಿ ನಾನು ವೈಶ್ಯನಾಗಿ ನಿನ್ನೆಡೆಗೆ ಬಂದೆನು. ಮಾಯೆಯಿಂದ ಅಗ್ನಿಯನ್ನು ಉಂಟುಮಾಡಿ ನಾಟ್ಯಮಂಟಪವನ್ನೂ ರತ್ನಲಿಂಗವನ್ನೂ ಸುಟ್ಟು ಅಗ್ನಿಯನ್ನು ಪ್ರವೇಶಿಸಿರುವೆನು. ವೇಶ್ಯೆಯರು ಸ್ವಾಭಾವಿಕವಾಗಿ ವಂಚಕರು, ಜಾರಿಣಿಯರು. ನೀನು ಮಾತ್ರ ಸತ್ಯವಾಕ್ಯವನ್ನು ಸ್ಮರಿಸಿ ನನ್ನೊಡನೆ ಅಗ್ನಿಯನ್ನು ಪ್ರವೇಶಿಸಿರುವೆ.

೮೦. ಆದುದರಿಂದ ನಾನು ನಿನಗೆ ದೇವದುರ್ಲಭವಾದ ಭೋಗ, ದೀರ್ಘಾಯುಸ್ಸು, ಆರೋಗ್ಯ, ಸಂತತಿ ಇವುಗಳನ್ನೂ, ನೀನು ಅಪೇಕ್ಷಿಸಿದುದೆಲ್ಲವನ್ನೂ ಕೊಡುವೆನು.

CC-0. Jangamwadi Math Collection. Digitized by eGangotri

ಸೂತ ಉವಾಚ :—

ಇತಿ ಬ್ರುವತಿ ಗೌರೀಶೇ ಸಾ ವೇಶ್ಯಾ ಪ್ರತ್ಯಭಾಷತ ॥ ೮೧ ॥

ವೇಶ್ಯೋವಾಚ :—

ನ ಮೇ ವಾಂಛಾಽಸ್ತಿ ಭೋಗೇಷು ಭೂಮೌ ಸ್ವರ್ಗೇ ರಸಾತಲೇ ।
ತವ ಪಾದಾಂಬುಜಸ್ಪರ್ಶಾದನ್ಯತ್ಕಿಂಚಿನ್ನ ವೈ ವೃಣೇ ॥ ೮೨ ॥
ಏತೇ ಭೃತ್ಯಾಶ್ಚ ದಾಸ್ಯಶ್ಚ ಯೇ ಚಾಽನ್ಯೇ ಮಮ ಬಾಂಧವಾಃ ।
ಸರ್ವೇ ತ್ವದರ್ಚನಪರಾಸ್ತ್ವಯಿ ಸಂನ್ಯಸ್ತವೃತ್ತಯಃ ॥ ೮೩ ॥
ಸರ್ವಾನೇತಾನ್ಮಯಾ ಸಾರ್ಧಂ ನೀತ್ವಾ ತವ ಪರಂ ಪದಂ ।
ಪುನರ್ಜನ್ಮಭಯಂ ಘೋರಂ ವಿಮೋಚಯ ನಮೋಽಸ್ತುತೇ ॥ ೮೪ ॥
ತಥೇತಿ ತಸ್ಯಾ ವಚನಂ ಪ್ರತಿನಂದ್ಯ ಮಹೇಶ್ವರಃ ।
ತಾನ್ಸರ್ವಾಂಶ್ಚ ತಯಾ ಸಾರ್ಧಂ ನಿನಾಯ ಪರಮಂ ಪದಂ ॥ ೮೫ ॥

ಪರಾಶರ ಉವಾಚ :—

ನಾಟ್ಯಮಂಡಪಿಕಾದಾಹೇ ಯೌ ದೂರಂ ವಿದ್ರುತೌ ಪುರಾ ।
ತತ್ರಾಽವಶಿಷ್ಟೌ ತಾವೇವ ಕುಕ್ಕುಟೋ ಮರ್ಕಟಸ್ತಥಾ ॥ ೮೬ ॥
ಕಾಲೇನ ನಿಧನಂ ಯಾತೋ ಯಸ್ತು ಸ್ಯಾ ನಾಟ್ಯಮರ್ಕಟಃ ।
ಸೋಽಭೂತ್ತವ ಕುಮಾರೋಽಸೌ ಕುಕ್ಕುಟೋ ಮಂತ್ರಿಣಃ ಸುತಃ ॥ ೮೭ ॥

---

೮೧. ಸೂತನು ಹೇಳುತ್ತಾನೆ:—ಶಿವನು ಹೀಗೆನ್ನಲು ಆ ವೇಶ್ಯೆಯು ಉತ್ತರವಿತ್ತಳು.

೮೨. ವೇಶ್ಯೆಯು ಹೇಳುತ್ತಾಳೆ:—ನನಗೆ ಸ್ವರ್ಗ, ಮರ್ತ್ಯ, ಪಾತಾಳ ಲೋಕಗಳ ಭೋಗಗಳ ಅಪೇಕ್ಷೆಯಿಲ್ಲ. ನಾನು ನಿನ್ನ ಚರಣಕಮಲಗಳ ಸ್ಪರ್ಶಕ್ಕಿಂತ ಬೇರೆ ಯಾವುದನ್ನೂ ವರಿಸಲಾರೆನು.

೮೩. ಈ ಸೇವಕರೂ, ದಾಸಿಯರೂ, ಇತರ ಬಾಂಧವರೂ ನಿನ್ನ ಪೂಜೆಯಲ್ಲಿ ನಿರತರಾಗಿ ನಿನ್ನಲ್ಲಿಡಲ್ಪಟ್ಟ ಮನಸ್ಸುಳ್ಳವರು.

೮೪. ಇವರೆಲ್ಲರನ್ನೂ ನನ್ನೊಡನೆ ನಿನ್ನ ಉತ್ತಮಸ್ಥಾನವನ್ನು ಹೊಂದಿಸಿ ಘೋರವಾದ ಪುನರ್ಜನ್ಮದ ಭಯವನ್ನುಪಹರಿಸು. ನಿನಗೆ ನಮಸ್ಕಾರವು.''

೮೫. ಮಹೇಶ್ವರನು ಹಾಗೆಯೇ ಆಗಲೆಂದು ಅವಳ ಮಾತಿಗೆ ಒಪ್ಪಿ ಅವರೆಲ್ಲರನ್ನೂ ಅವಳೊಡನೆ ತನ್ನ ಸ್ಥಾನಕ್ಕೆ ಕರೆದೊಯ್ದನು.

೮೬. ಪರಾಶರನು ಹೇಳುತ್ತಾನೆ:—ಹಿಂದೆ ನಾಟ್ಯಶಾಲೆಯು ಸುಡುವಾಗ ದೂರ ಓಡಿಹೋದ ಕೋಳಿ ಮತ್ತು ಕೋತಿಗಳು ಅಲ್ಲಿಯೇ ಉಳಿದುಕೊಂಡುವು.

೮೭. ಆಕೋತಿಯು ಕಾಲಕ್ರಮದಿಂದ ಮೃತಿಗೊಂಡು ನಿನ್ನ ಮಗನಾಯಿತು. ಕೋಳಿಯು ಮಂತ್ರಿಯ ಸುತನಾಗಿ ಜನಿಸಿತು.

CC-0. Jangamwadi Math Collection. Digitized by eGangotri

ರುದ್ರಾಕ್ಷಧಾರಣೋದ್ಭೂತಾತ್ಪುಣ್ಯಾತ್ಪೂರ್ವಭವಾರ್ಜಿತಾತ್ ।
ಕುಲೇ ಮಹತಿ ಸಂಜಾತೌ ವರ್ತೇತೇ ಬಾಲಕಾವಿಮೌ ॥ ೮೮ ॥
ಪೂರ್ವಾಽಭ್ಯಾಸೇನ ರುದ್ರಾಕ್ಷಾನ್ಸಂಧಾತೇ ಶುದ್ಧಮಾನಸೌ ।
ಅಸ್ಮಿಂಜನ್ಮನಿ ತಂ ಲೋಕಂ ಶಿವಂ ಸಂಪೂಜ್ಯ ಯಾಸ್ಯತಃ ॥ ೮೯ ॥
ಏಷಾ ಪ್ರವೃತ್ತಿಸ್ತ್ವನಯೋರ್ಬಾಲಯೋಃ ಸಮುದಾಹೃತಾ ।
ಕಥಾ ಚ ಶಿವಭಕ್ತಾಯಾ ಕಿಮನ್ಯತ್ಪ್ರಷ್ಟುಮಿಚ್ಛಸಿ ॥ ೯೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ರುದ್ರಾಕ್ಷಮಹಿಮಾನುವರ್ಣನಂ" ನಾಮ ವಿಂಶೋಽಧ್ಯಾಯಃ

---

೮೮. ರುದ್ರಾಕ್ಷಧಾರಣೆಯಿಂದ ಹಿಂದಿನ ಜನ್ಮದಲ್ಲಿ ಸಂಪಾದಿಸಿದ ಪುಣ್ಯದಿಂದ ಈ ಇಬ್ಬರು ಕುಮಾರರೂ ಉತ್ತಮವಂಶದಲ್ಲಿ ಜನಿಸಿದರು.

೮೯. ಶುದ್ಧವಾದ ಮನಸ್ಸುಳ್ಳ ಇವರು ಹಿಂದಿನ ಅಭ್ಯಾಸದಿಂದ ರುದ್ರಾಕ್ಷಿಗಳನ್ನು ಧರಿಸುತ್ತಿದ್ದಾರೆ. ಈ ಜನ್ಮದಲ್ಲಿ ಇವರು ಶಿವನನ್ನು ಪೂಜಿಸಿ ಅವನ ಲೋಕವನ್ನು ಸೇರುವರು.

೯೦. ಈ ಬಾಲಕರ ಸಮಾಚಾರವನ್ನೂ, ಶಿವಭಕ್ತಳಾದ ವೇಶ್ಯೆಯ ಕಥೆಯನ್ನೂ ಹೇಳಿದ್ದೇನೆ. ಇನ್ನು ಬೇರೆ ಏನನ್ನು ಕೇಳಲಿಚ್ಛಿಸುವೆ?

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ರುದ್ರಾಕ್ಷಮಹಿಮಾನುವರ್ಣನ" ವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

# ಅಥೈಕವಿಂಶೋಽಧ್ಯಾಯಃ

## ರುದ್ರಾಧ್ಯಾಯ ಮಹಿಮಾನುವರ್ಣನಂ

ಸೂತ ಉವಾಚ :—

ಏವಂ ಬ್ರಹ್ಮರ್ಷಿಣಾ ಪ್ರೋಕ್ತಾಂ ವಾಣೀಂ ಪೀಯೂಷಸನ್ನಿಭಾಂ ।
ಆಕರ್ಣ್ಯ ಮುದಿತೋ ರಾಜಾ ಪ್ರಾಂಜಲಿಃ ಪುನರಬ್ರವೀತ್ ॥ ೧ ॥

ರಾಜೋವಾಚ :—

ಅಹೋ ಸತ್ಸಂಗಮಃ ಪುಂಸಾಮಶೇಷಾಽಘಪ್ರಶೋಧನಃ ।
ಕಾಮಕ್ರೋಧನಿಹಂತಾ ಚ ಇಷ್ಟದೋಗ್ಧಾ ಜನಸ್ಯ ಹಿ ॥ ೨ ॥
ಮಮ ಮಾಯಾತಮೋ ನಷ್ಟಂ ಜ್ಞಾನದೃಷ್ಟಿಃ ಪ್ರಕಾಶಿತಾ ।
ತವ ದರ್ಶನಮಾತ್ರೇಣ ಪ್ರಾಯೋಽಹಮುಮರೋತ್ತಮಃ ॥ ೩ ॥
ಶ್ರುತಂ ಚ ಪೂರ್ವಚರಿತಂ ಬಾಲಯೋಃ ಸಮ್ಯಗೇತಯೋಃ ।
ಭವಿಷ್ಯದಪಿ ಪೃಚ್ಛಾಮಿ ಮತ್ಪುತ್ರಾಚರಣಂ ಮುನೇ ॥ ೪ ॥
ಅಸ್ಯಾಯುಃ ಕತಿ ವರ್ಷಾಣಿ ಭಾಗ್ಯಂ ವದ ಚ ಕೀದೃಶಂ ।
ವಿದ್ಯಾ ಕೀರ್ತಿಶ್ಚ ಶಕ್ತಿಶ್ಚ ಶ್ರದ್ಧಾ ಭಕ್ತಿಶ್ಚ ಕೀದೃಶೀ ॥ ೫ ॥

---

## ಕನ್ನಡದ ಅನುವಾದ

### ರುದ್ರಾಧ್ಯಾಯ ಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ :—ರಾಜನು ಹೀಗೆ ಬ್ರಹ್ಮರ್ಷಿಯಾದ ಪರಾಶರನು ಹೇಳಿದ ಅಮೃತದಂತಿರುವ ಮಾತನ್ನು ಕೇಳಿ ಸಂತೋಷಗೊಂಡು ಕೈಮುಗಿದು ಮರಳಿ ಇಂತೆಂದನು.

೨. ರಾಜನು ಹೇಳುತ್ತಾನೆ :—ಆಶ್ಚರ್ಯ! ಸಜ್ಜನರ ಸಮಾಗಮವು ಪುರುಷರ ಸಕಲ ಪಾಪಗಳ ಸಮೂಹವನ್ನು ಪರಿಹರಿಸುವುದೂ, ಕಾಮ, ಕ್ರೋಧಗಳನ್ನು ನೀಗಿಸುವುದೂ, ಇಷ್ಟಾರ್ಥವನ್ನೀಯುವುದೂ ಆಗಿರುವುದು.

೩. ನಿನ್ನ ದರ್ಶನದಿಂದ ನನ್ನ ಮಾಯೆಯೆಂಬ ಕತ್ತಲೆಯು ಕಳೆದು ಹೋಯಿತು. ಜ್ಞಾನದೃಷ್ಟಿಯು ಪ್ರಕಾಶಗೊಂಡಿತು. ನಾನೀಗ ಬಹುಮಟ್ಟಿಗೆ ದೇವೋತ್ತಮನಾಗಿದ್ದೇನೆ.

೪. ಮುನಿಯೆ! ಈ ಬಾಲಕರ ಹಿಂದಿನ ಚರಿತ್ರೆಯನ್ನು ಚೆನ್ನಾಗಿ ಕೇಳಿದೆನು. ನನ್ನ ಮಗನ ಮುಂದಿನ ಚರಿತೆಯನ್ನು ಕೇಳುತ್ತೇನೆ.

೫. ಇವನಿಗೆ ಆಯುಸ್ಸು ಎಷ್ಟು ವರ್ಷಕಾಲವಿರುವುದು? ಅದೃಷ್ಟವು ಎಂಥಾದ್ದು? ವಿದ್ಯೆ, ಕೀರ್ತಿ, ಶಕ್ತಿ, ಶ್ರದ್ಧೆ, ಭಕ್ತಿ ಇವುಗಳು ಹೇಗಿರುವುವು?

CC-0. Jangamwadi Math Collection. Digitized by eGangotri

ಏತತ್ಸರ್ವಮಶೇಷೇಣ ಮುನೇ ತ್ವಂ ವಕ್ತುಮರ್ಹಸಿ ।
ತವ ಶಿಷ್ಯೋಽಸ್ಮಿ ಭೃತ್ಯೋಽಸ್ಮಿ ಶರಣಂ ತ್ವಾಂ ಗತೋಽಸ್ಮ್ಯಹಂ ॥ ೬ ॥
ಪರಾಶರ ಉವಾಚ :—
ಅತ್ರಾಽವಾಚ್ಯಂ ಹಿ ಯತ್ಕಿಂಚಿತ್ಕಥಂ ಶಕ್ತೋಽಸ್ಮಿ ಶಂಸಿತುಂ ।
ಯಚ್ಛ್ರುತ್ವಾ ಧೃತಿಮಂತೋಽಪಿ ವಿಷಾದಂ ಪ್ರಾಪ್ನುಯುರ್ಜನಾಃ ॥ ೭ ॥
ತಥಾಽಪಿ ನಿರ್ವ್ಯಲೀಕೇನ ಭಾವೇನ ಪರಿಪೃಚ್ಛತಃ ।
ಅವಾಚ್ಯಮಪಿ ವಕ್ಷ್ಯಾಮಿ ತವ ಸ್ನೇಹಾನ್ಮಹೀಪತೇ ॥ ೮ ॥
ಅಮುಷ್ಯ ತ್ವತ್ಕುಮಾರಸ್ಯ ವರ್ಷಾಣಿ ದ್ವಾದಶಾತ್ಯಯುಃ ।
ಇತಃ ಪರಂ ಪ್ರಪದ್ಯೇತ ಸಪ್ತಮೇ ದಿವಸೇ ಮೃತಿಂ ॥ ೯ ॥
ಇತಿ ತಸ್ಯ ವಚಃ ಶ್ರುತ್ವಾ ಕಾಲಕೂಟಮಿವೋದಿತಂ ।
ಮೂರ್ಛಿತಃ ಸಹಸಾ ಭೂಮೌ ಪತಿತೋ ನೃಪತಿಃ ಶುಚಾ ॥ ೧೦ ॥
ತಮುತ್ಥಾಪ್ಯ ಸಮಾಶ್ವಾಸ್ಯ ಸ ಮುನಿಃ ಕರುಣಾರ್ದ್ರಧೀಃ ।
ಉವಾಚ ಮಾಭೈರ್ನೃಪತೇ ಪುನರ್ವಕ್ಷ್ಯಾಮಿ ತೇ ಹಿತಂ ॥ ೧೧ ॥
ಸರ್ಗಾತ್ಪುರಾ ನಿರಾಲೋಕಂ ಯದೇಕಂ ನಿಷ್ಕಲಂ ಪರಂ ।
ಚಿದಾನಂದಮಯಂ ಜ್ಯೋತಿಃ ಸ ಆದ್ಯಃ ಕೇವಲಃ ಶಿವಃ ॥ ೧೨ ॥

---

೬. ಮುನಿಯೆ! ಇದನ್ನೆಲ್ಲ ಸಂಪೂರ್ಣವಾಗಿ ನೀನು ನನಗೆ ಹೇಳು. ನಿನ್ನ ಶಿಷ್ಯನೂ, ಸೇವಕನೂ ಆಗಿದ್ದೇನೆ. ನಾನು ನಿನ್ನನ್ನು ಮರೆಹೊಕ್ಕಿರುವೆನು.

೭. ಪರಾಶರನು ಹೇಳುತ್ತಾನೆ:—"ಇಲ್ಲಿ ಹೇಳಬಾರದ ಒಂದು ವಿಷಯ ವನ್ನು ನಿನಗೆ ನಾನು ಹೇಗೆ ಹೇಳಲಿ? ಇದನ್ನು ಕೇಳಿದರೆ ಧೈರ್ಯವುಳ್ಳ ಜನರೂ ವ್ಯಥೆಗೊಂಡಾರು.

೮. ಹಾಗಾದರೂ ನಿಷ್ಕಪಟ ಭಾವದಿಂದ ಕೇಳುತ್ತಿರುವ ನಿನಗೆ ಸ್ನೇಹ ದಿಂದ ಹೇಳಕೂಡದಾದುದನ್ನೂ ಹೇಳುವೆನು.

೯. ಈ ನಿನ್ನ ಮಗನಿಗೆ ಹನ್ನೆರಡು ವರ್ಷಗಳಾದುವು. ಇವನು ಈ ದಿನದಿಂದ ಏಳನೆಯ ದಿವಸದಲ್ಲಿ ಮಡಿಯುವನು."

೧೦. ರಾಜನು ಮುನಿಯು ಹೇಳಿದ ವಿಷದಂತಿರುವ ಆ ಮಾತನ್ನು ಕೇಳಿ ದುಃಖದಿಂದ ಮೂರ್ಛೆಗೊಂಡು ಕೂಡಲೆ ನೆಲದ ಮೇಲೆ ಬಿದ್ದನು.

೧೧. ದಯಾಳುವಾದ ಆ ಪರಾಶರನು ಅವನನ್ನು ಎಬ್ಬಿಸಿ ಸಮಾಧಾನ ಗೊಳಿಸಿ, "ಅರಸ! ಹೆದರಬೇಡ; ನಿನಗೆ ಹಿತವಾದುದನ್ನು ಮತ್ತೆ ಹೇಳುವೆನು.

೧೨. ಸೃಷ್ಟಿಗಿಂತಲೂ ಮುಂಚೆ ಪ್ರಕಾಶವಿಲ್ಲದಿರುವುದೂ, ಚಿದಾನಂದ ಸ್ವರೂಪವೂ ಆದ ಜ್ಯೋತಿಯಾವುದಿರುವುದೊ ಅದೇ ಶಿವನು.



CC-0. Jangamwadi Math Collection. Digitized by eGangotri

ಸ ಏವಾದೌ ರಜೋರೂಪಂ ಸೃಷ್ಟ್ವಾ ಬ್ರಹ್ಮಾಣಮಾತ್ಮನಾ ।
ಸೃಷ್ಟಿಕರ್ಮನಿಯುಕ್ತಾಯ ತಸ್ಮೈ ವೇದಾಂಶ್ಚ ದತ್ತವಾನ್ ॥ ೧೩ ॥
ಪುನಶ್ಚ ದತ್ತವಾನೀಶ ಆತ್ಮತತ್ತ್ವೈಕಸಂಗ್ರಹಂ ।
ಸರ್ವೋಽಪನಿಷದಾಂ ಸಾರಂ ರುದ್ರಾಽಧ್ಯಾಯಂ ಚ ದತ್ತವಾನ್ ॥ ೧೪ ॥
ಯದೇಕಮವ್ಯಯಂ ಸಾಕ್ಷಾದ್ಬ್ರಹ್ಮ ಜ್ಯೋತಿಃ ಸನಾತನಂ ।
ಶಿವಾತ್ಮಕಂ ಪರಂ ತತ್ವಂ ರುದ್ರಾಽಧ್ಯಾಯೇ ಪ್ರತಿಷ್ಠಿತಂ ॥ ೧೫ ॥
ಸ ಆತ್ಮಭೂಃ ಸೃಜದ್ವಿಶ್ವಂ ಚತುರ್ಭಿರ್ವದನೈರ್ವಿರಾಟ್ ।
ಸಸರ್ಜ ವೇದಾಂಶ್ಚತುರೋ ಲೋಕಾನಾಂ ಸ್ಥಿತಿಹೇತವೇ ॥ ೧೬ ॥
ತತ್ರಾಽಯಂ ಯಜುಷಾಂ ಮಧ್ಯೇ ಬ್ರಹ್ಮಣೋ ದಕ್ಷಿಣಾನ್ಮುಖಾತ್ ।
ಅಶೇಷೋಪನಿಷತ್ಸಾರೋ ರುದ್ರಾಧ್ಯಾಯಃ ಸಮುದ್ಗತಃ ॥ ೧೭ ॥
ಸ ಏಷ ಮುನಿಭಿಃ ಸರ್ವೈರ್ಮರೀಚ್ಯತ್ರಿಪುರೋಗವೈಃ ।
ಸಹದೇವೈರ್ಧೃತಸ್ತೇಭ್ಯಸ್ತಚ್ಛಿಷ್ಯಾ ಜಗೃಹುಶ್ಚ ತಂ ॥ ೧೮ ॥
ತಚ್ಛಿಷ್ಯಶಿಷ್ಯೈಸ್ತತ್ಪುತ್ರೈಸ್ತತ್ಪುತ್ರೈಶ್ಚ ಕ್ರಮಾಗತೈಃ ।
ಧೃತೋ ರುದ್ರಾತ್ಮಕಃ ಸೋಽಯಂ ವೇದಸಾರಃ ಪ್ರಸಾದಿತಃ ॥ ೧೯ ॥
ಏಷ ಏವ ಪರೋ ಮಂತ್ರ ಏಷ ಏವ ಪರಂ ತಪಃ ।
ರುದ್ರಾಽಧ್ಯಾಯಜಪಃ ಪುಂಸಾಂ ಪರಂ ಕೈವಲ್ಯ ಸಾಧನಂ ॥ ೨೦ ॥

---

೧೩. ಆ ಶಿವನು ಮೊದಲು ತನ್ನಿಂದ ರಜೋರೂಪನಾದ ಬ್ರಹ್ಮನನ್ನು ಸೃಜಿಸಿ ಅವನನ್ನು ಸೃಷ್ಟಿಕಾರ್ಯದಲ್ಲಿ ನೇಮಿಸಿ ಅವನಿಗೆ ವೇದಗಳನ್ನಿತ್ತನು.

೧೪. ಶಿವನು ಅವನಿಗೆ ಮರಳಿಯೂ ಬ್ರಹ್ಮಜ್ಞಾನರೂಪವೂ, ಸಕಲೋಪನಿಷತ್ತುಗಳ ಸಾರವೂ ಆದ ರುದ್ರಾಧ್ಯಾಯವನ್ನು ಕೊಟ್ಟನು.

೧೫. ನಾಶವಿಲ್ಲದುದೂ, ಅನಾದಿಯೂ, ಶಿವಸ್ವರೂಪವೂ ಆದ ಬ್ರಹ್ಮಜ್ಯೋತಿಯು ರುದ್ರಾಧ್ಯಾಯದಲ್ಲಿ ಪ್ರತಿಪಾದ್ಯವಾಗಿರುವುದು.

೧೬. ಆ ಬ್ರಹ್ಮನು ಪ್ರಪಂಚವನ್ನು ಸೃಜಿಸುತ್ತ ಲೋಕದ ಪಾಲನೆಗಾಗಿ ನಾಲ್ಕು ಬಾಯಿಗಳಿಂದಲೂ ನಾಲ್ಕು ವೇದಗಳನ್ನು ಸೃಜಿಸಿದನು.

೧೭. ಅವುಗಳಲ್ಲಿ ಬ್ರಹ್ಮನ ದಕ್ಷಿಣ ಮುಖದಿಂದ ಹುಟ್ಟಿದ ಯಜುರ್ವೇದದ ಮಧ್ಯದಲ್ಲಿ ಸಮಸ್ತೋಽಪನಿಷತ್ತುಗಳ ಸಾರವಾದ ರುದ್ರಾಧ್ಯಾಯವು ಹುಟ್ಟಿತು.

೧೮. ಇದನ್ನು ದೇವತೆಗಳೊಡನೆ ಮರೀಚ್ಯಾದಿ ಸಕಲ ಮುನಿಗಳೂ, ಅವರಿಂದ ಅವರ ಶಿಷ್ಯರೂ ಸ್ವೀಕರಿಸಿದರು.

೧೯. ಅವರ ಶಿಷ್ಯರು, ಅವರ ಮಕ್ಕಳು, ಅವರ ಮಕ್ಕಳು, ಹೀಗೆ ಕ್ರಮದಿಂದ ಈ ವೇದದ ಸಾರವಾದ ರುದ್ರಾಧ್ಯಾಯವು ಪ್ರಚುರಗೊಂಡಿತು.

೨೦. ಇದೇ ಉತ್ತಮವಾದ ಮಂತ್ರವು. ಇದೇ ಉತ್ತಮವಾದ ತಪಸ್ಸು.

CC-0. Jangamwadi Math Collection. Digitized by eGangotri

ಮಹಾಪಾತಕಿನಃ ಪ್ರೋಕ್ತಾ ಉಪಪಾತಕಿನಶ್ಚ ಯೇ ।
ರುದ್ರಾಽಧ್ಯಾಯಜಪಾತ್ಸದ್ಯಸ್ತೇಽಪಿ ಯಾಂತಿ ಪರಾಂಗತಿಂ ॥ ೨೧ ॥
ಭೂಯೋಽಪಿ ಬ್ರಹ್ಮಣಾ ಸೃಷ್ಟಾಃ ಸದಸನ್ಮಿಶ್ರಯೋನಯಃ ।
ದೇವತಿರ್ಯಙ್ಮನುಷ್ಯಾದ್ಯಾಸ್ತತಃ ಸಂಪೂರಿತಂ ಜಗತ್ ॥ ೨೨ ॥
ತೇಷಾಂ ಕರ್ಮಾಣಿ ಸೃಷ್ಟಾನಿ ಸ್ವಜನ್ಮಾಽನುಗುಣಾನಿ ಚ ।
ಲೋಕಾಸ್ತೇಷು ಪ್ರವರ್ತಂತೇ ಭುಂಜತೇ ಚೈವ ತತ್ಫಲಂ ॥ ೨೩ ॥
ಲೋಕಸೃಷ್ಟಿಪ್ರವಾಹಾರ್ಥಂ ಸ್ವಯಮೇವ ಪ್ರಜಾಪತಿಃ ।
ಧರ್ಮಾಽಧರ್ಮೌ ಸಸರ್ಜಾಽಗ್ರೇ ಸ್ವವಕ್ಷಃ ಪೃಷ್ಠಭಾಗತಃ ॥ ೨೪ ॥
ಧರ್ಮಮೇವಾಽನುತಿಷ್ಠಂತಃ ಪುಣ್ಯಂ ವಿಂದಂತಿ ತತ್ಫಲಂ ।
ಅಧರ್ಮಮನುತಿಷ್ಠಂತಸ್ತೇ ಪಾಪಫಲಭೋಗಿನಃ ॥ ೨೫ ॥
ಪುಣ್ಯಕರ್ಮಫಲಂ ಸ್ವರ್ಗೋ ನರಕಸ್ತದ್ವಿಪರ್ಯಯಃ ।
ತಯೋರ್ದ್ವಾವಧಿಪೌ ಧಾತ್ರಾ ಕೃತೌ ಶತಮುಖಾಂತಕೌ ॥ ೨೬ ॥
ಕಾಮಃ ಕ್ರೋಧಶ್ಚ ಲೋಭಶ್ಚ ಮದಮಾನಾದಯಃ ಪರೇ ।
ಅಧರ್ಮಸ್ಯ ಸುತಾ ಆಸನ್ಸರ್ವೇ ನರಕನಾಯಕಾಃ ॥ ೨೭ ॥

---

ಈ ರುದ್ರಾಧ್ಯಾಯಜಪವು ಮರ್ತ್ಯರಿಗೆ ಮೋಕ್ಷವನ್ನು ಕೊಡುವ ಉತ್ತಮ ಸಾಧನವು.

೨೧. ಮಹಾ ಪಾತಕಿಗಳೂ, ಉಪಪಾತಕಿಗಳೂ ರುದ್ರಾಧ್ಯಾಯ ಜಪದಿಂದ ಕೂಡಲೆ ಉತ್ತಮ ಗತಿಯನ್ನು ಪಡೆಯುವರು.

೨೨. ಮತ್ತೆ ಬ್ರಹ್ಮನು ದೇವತೆ, ಪಶು, ಪಕ್ಷಿ, ಮನುಷ್ಯ ಮೊದಲಾದ ಒಳ್ಳೆಯ, ಕೆಟ್ಟ ಮತ್ತು ಮಿಶ್ರಜಾತಿಯ ಜೀವರನ್ನು ಸೃಷ್ಟಿಮಾಡಿದನು.

೨೩–೨೪. ಆ ಜೀವರಿಗೆ ಹುಟ್ಟಿಗೆ ಅನುಗುಣಗಳಾದ ಕರ್ಮಗಳನ್ನೂ ಸೃಜಿಸಿದನು. ಜನರು ಆ ಕರ್ಮಗಳನ್ನವಲಂಬಿಸಿ ಅವುಗಳ ಫಲವನ್ನು ಭುಜಿಸುತ್ತಾರೆ. ಬ್ರಹ್ಮನು ಮೊದಲು ತನ್ನ ಎದೆಯ ಹಿಂಭಾಗದಿಂದ ಲೋಕದ ಸೃಷ್ಟಿಯು ನಡೆಯುವುದಕ್ಕಾಗಿ ಧರ್ಮಾಧರ್ಮಗಳನ್ನು ಸೃಷ್ಟಿಮಾಡಿದನು.

೨೫. ಧರ್ಮಾನುಷ್ಠಾನಮಾಡುವವರು ಅದರಿಂದುಂಟಾದ ಪುಣ್ಯದ ಫಲವನ್ನೂ, ಅಧರ್ಮವನ್ನು ಮಾಡುವವರು ಪಾಪದ ಫಲವನ್ನೂ ಅನುಭವಿಸುವರು.

೨೬. ಪುಣ್ಯಕರ್ಮದ ಫಲವು ಸ್ವರ್ಗವು. ಪಾಪಕರ್ಮದ ಫಲವು ನರಕವು. ಬ್ರಹ್ಮನು ಅವೆರಡಕ್ಕೆ ಪ್ರತ್ಯೇಕವಾಗಿ ಇಂದ್ರ ಮತ್ತು ಯಮರನ್ನು ಒಡೆಯರನ್ನಾಗಿ ಏರ್ಪಡಿಸಿದನು.

೨೭. ಕಾಮ, ಕ್ರೋಧ, ಲೋಭ, ಮದ, ಮಾನಾದಿಗಳು ಅಧರ್ಮದ ಮಕ್ಕಳು. ಇವರೆಲ್ಲರೂ ನರಕದ ಒಡೆಯರು.

CC-0. Jangamwadi Math Collection. Digitized by eGangotri

ಗುರುತಲ್ಪಃ ಸುರಾಪಾನಂ ತಥಾಽನ್ಯಃ ಪುಲ್ಕಸೀಗಮಃ ।
ಕಾಮಸ್ಯ ತನಯಾ ಹ್ಯೇತೇ ಪ್ರಧಾನಾಃ ಪರಿಕೀರ್ತಿತಾಃ ॥ ೨೮ ॥
ಕ್ರೋಧಾತ್ಪಿತೃವಧೋ ಜಾತಸ್ತಥಾ ಮಾತೃವಧಃ ಪರಃ ।
ಬ್ರಹ್ಮಹತ್ಯಾ ಚ ಕನ್ಯೈಕಾ ಕ್ರೋಧಸ್ಯ ತನಯಾ ಅಮೀ ॥ ೨೯ ॥
ದೇವಸ್ವಹರಣಶ್ಚೈವ ಬ್ರಹ್ಮಸ್ವಹರಣಸ್ತಥಾ ।
ಸ್ವರ್ಣಸ್ತೇಯ ಇತಿ ತ್ವೇತೇ ಲೋಭಸ್ಯ ತನಯಾಃ ಸ್ಮೃತಾಃ ॥ ೩೦ ॥
ಏತಾನಾಹೂಯ ಚಾಂಡಾಲಾನ್ಯಮಃ ಪಾತಕನಾಯಕಾನ್ ।
ನರಕಸ್ಯ ವಿವೃದ್ಧ್ಯರ್ಥಮಾಧಿಪತ್ಯಂ ಚಕಾರಹ ॥ ೩೧ ॥
ತೇ ಯಮೇನ ಸಮಾದಿಷ್ಟಾ ನವಪಾತಕನಾಯಕಾಃ ।
ತೇ ಸರ್ವೇ ಸಂಗತಾ ಭೂಯೋ ಘೋರಾಃ ಪಾತಕನಾಯಕಾಃ ॥ ೩೨ ॥
ನರಕಾನ್ಪಾಲಯಾಮಾಸುಃ ಸ್ವಭೃತ್ಯೈಶ್ಚೋಪಪಾತಕೈಃ ।
ರುದ್ರಾಧ್ಯಾಯೇ ಭುವಿ ಪ್ರಾಪ್ತೇ ಸಾಕ್ಷಾತ್ಕೈವಲ್ಯಸಾಧನೇ ॥ ೩೩ ॥
ಭೀತಾಃ ಪ್ರದುದ್ರುವುಃ ಸರ್ವೇ ತೇಽಮೀ ಪಾತಕನಾಯಕಾಃ ।
ಯಮಂ ವಿಜ್ಞಾಪಯಾಮಾಸುಃ ಸಹಾಽನ್ಯೈರುಪಪಾತಕೈಃ ॥ ೩೪ ॥
ಜಯ ದೇವ ಮಹಾರಾಜ ವಯಂ ಹಿ ತವ ಕಿಂಕರಾಃ ।
ನರಕಸ್ಯ ವಿವೃದ್ಧ್ಯರ್ಥಂ ಸಾಧಿಕಾರಾಃ ಕೃತಾಸ್ತ್ವಯಾ ॥ ೩೫ ॥

---

೨೮. ಗುರುಪತ್ನೀಸಂಗ, ಸುರಾಪಾನ, ಚಂಡಾಲಸ್ತ್ರೀಸಂಗ ಇವು ಕಾಮದ ಮುಖ್ಯರಾದ ಮಕ್ಕಳು.

೨೯. ಕ್ರೋಧದಿಂದ ಪಿತೃವಧೆಯೂ, ಮಾತೃವಧೆಯೂ, ಬ್ರಹ್ಮಹತ್ಯೆ ಯೆಂಬ ಕನ್ಯೆಯೂ ಸಂಭವಿಸಿರುವಳು.

೩೦. ದೇವಸ್ವದ ಅಪಹರಣ, ಬ್ರಹ್ಮಸ್ವದ ಅಪಹಾರ, ಸ್ವರ್ಣಸ್ತೇಯ ಇವು ಲೋಭದ ಮಕ್ಕಳು.

೩೧. ಯಮನು ಪಾಪಗಳಿಗೆ ಒಡೆಯರಾದ ಈ ಚಂಡಾಲರನ್ನು ಕರೆಯಿಸಿ ನರಕವು ಹೆಚ್ಚುವುದಕ್ಕಾಗಿ ಅದಕ್ಕೆ ಅಧಿಪತಿಗಳನ್ನಾಗಿ ಮಾಡಿದನು.

೩೨–೩೪. ಈ ಒಂಬತ್ತು ಜನ ಪಾತಕನಾಯಕರೂ, ಘೋರಪಾತಕ ನಾಯಕರೂ ಒಟ್ಟಿಗೆ ಸೇರಿ ತಮ್ಮ ಸೇವಕರಾದ ಉಪಪಾತಕಗಳೊಡನೆ ನರಕ ಗಳನ್ನು ಕಾಪಾಡಿ ಬೆಳಸಿದರು. ಪ್ರತ್ಯಕ್ಷವಾಗಿ ಮೋಕ್ಷವನ್ನು ಸಾಧಿಸಿಕೊಡುವ ರುದ್ರಾಧ್ಯಾಯವು ಭೂಮಿಯನ್ನು ಸೇರಲು ಆ ಪಾಪದೊಡೆಯರೆಲ್ಲ ಓಡಿಹೋಗಿ ಇತರ ಉಪಪಾತಕಗಳೊಡನೆ ಯಮನಲ್ಲಿ ಹೀಗೆ ವಿಜ್ಞಾಪಿಸಿಕೊಂಡರು.

೩೫. "ಪ್ರಭೋ! ಮಹಾರಾಜ! ಜಯಿಸು. ನೀನು ನಿನ್ನ ಸೇವಕರಾದ ನಮಗೆ ನರಕವನ್ನು ವೃದ್ಧಿಗೊಳಸುವುದಕ್ಕಾಗಿ ಅಧಿಕಾರವನ್ನು ಕೊಟ್ಟಿರುವೆ.

CC-0. Jangamwadi Math Collection. Digitized by eGangotri

ಅಧುನಾ ವರ್ತಿತುಂ ಲೋಕೇ ನ ಶಕ್ತಾಃಸ್ಮೋ ವಯಂ ಪ್ರಭೋ ।
ರುದ್ರಾಧ್ಯಾಯಾನುಭಾವೇನ ನಿರ್ದಗ್ಧಾಶ್ಚೈವ ವಿದ್ರುತಾಃ ॥ ೩೬ ॥
ಗ್ರಾಮೇ ಗ್ರಾಮೇ ನದೀಕೂಲೇ ಪುಣ್ಯೇಷ್ವಾಯತನೇಷು ಚ ।
ರುದ್ರಜಾಪ್ಯೇ ತು ಪರ್ಯಾಪ್ತೇ ಕಥಂ ಲೋಕೇ ಚರೇಮಹಿ ॥ ೩೭ ॥
ಪ್ರಾಯಶ್ಚಿತ್ತಸಹಸ್ರಂ ವೈ ಗಣಯಾಮೋ ನ ಕಿಂಚನ ।
ರುದ್ರಜಾಪ್ಯಾಕ್ಷರಾಣ್ಯೇವ ಸೋಢುಂ ಬತ ನ ಶಕ್ನುಮಃ ॥ ೩೮ ॥
ಮಹಾಪಾತಕಮುಖ್ಯಾನಾಮಸ್ಮಾಕಂ ಲೋಕಘಾತಿನಾಂ ।
ರುದ್ರಜಾಪ್ಯಂ ಭಯಂ ಘೋರಂ ರುದ್ರಜಾಪ್ಯಂ ಮಹದ್ವಿಷಂ ॥ ೩೯ ॥
ಅತೋ ದುರ್ವಿಷಹಂ ಘೋರಮಸ್ಮಾಕಂ ವ್ಯಸನಂ ಮಹತ್ ।
ರುದ್ರಜಾಪ್ಯೇನ ಸಂಪ್ರಾಪ್ತಮುಪನೇತುಂ ತ್ವಮರ್ಹಸಿ ॥ ೪೦ ॥
ಇತಿ ವಿಜ್ಞಾಪಿತಃ ಸಾಕ್ಷಾದ್ಯಮಃ ಪಾತಕನಾಯಕೈಃ ।
ಬ್ರಹ್ಮಣೋಽಂತಿಕಮಾಸಾದ್ಯ ತಸ್ಮೈ ಸರ್ವಂ ನ್ಯವೇದಯತ್ ॥ ೪೧ ॥
ದೇವದೇವ ಜಗನ್ನಾಥ ತ್ವಾಮೇವ ಶರಣಂ ಗತಃ ।
ತ್ವಯಾ ನಿಯುಕ್ತೋ ಮರ್ತ್ಯಾನಾಂ ನಿಗ್ರಹೇ ಪಾಪಕಾರಿಣಾಂ ॥ ೪೨ ॥

---

೩೬. ಈಗ ನಾವು ಪ್ರಪಂಚದಲ್ಲಿರಲು ಅಶಕ್ತರಾಗಿದ್ದೇವೆ. ರುದ್ರಾಧ್ಯಾಯದ ಮಾಹಾತ್ಮ್ಯದಿಂದ ಸುಡಲ್ಪಟ್ಟು ಓಡಿಬಂದಿದ್ದೇವೆ.

೩೭. ಹಳ್ಳಿಹಳ್ಳಿಯಲ್ಲಿಯೂ, ನದೀದಡದಲ್ಲಿಯೂ, ಪವಿತ್ರವಾದ ಮನೆಗಳಲ್ಲಿಯೂ ರುದ್ರಾಧ್ಯಾಯ ಪಾರಾಯಣವು ನಡೆಯುತ್ತಿರಲು ನಾವು ಲೋಕದಲ್ಲಿ ಹೇಗೆ ಸಂಚರಿಸಿಯೇವು ?

೩೮. ನಾವು ಸಾವಿರಾರು ಪ್ರಾಯಶ್ಚಿತ್ತಗಳನ್ನೂ ಲೆಕ್ಕಿಸುವುದಿಲ್ಲ. ಆದರೆ ರುದ್ರಾಧ್ಯಾಯದ ಅಕ್ಷರಗಳನ್ನು ಸಹಿಸಲಸಮರ್ಥರಾಗಿದ್ದೇವೆ.

೩೯. ಲೋಕವನ್ನು ನಾಶಗೊಳಿಸುವ ಮಹಾ ಪಾತಕಗಳಲ್ಲಿ ಪ್ರಧಾನರಾದ ನಮಗೆ ರುದ್ರಾಧ್ಯಾಯವು ಭಯವನ್ನುಂಟುಮಾಡುವುದು. ಅದು ನಮಗೆ ಮಹಾ ವಿಷವು.

೪೦. ಆದುದರಿಂದ ನಮಗೆ ಈ ರುದ್ರಾಧ್ಯಾಯದಿಂದುಂಟಾದ ಸಹಿಸಲಾಗದ ಘೋರದುಃಖವನ್ನು ನೀನು ಪರಿಹರಿಸಲರ್ಹನಾಗಿದ್ದೀಯೆ.''

೪೧. ಪಾತಕನಾಯಕರು ಹೀಗೆ ವಿಜ್ಞಾಪಿಸಲು ಯಮನು ಬ್ರಹ್ಮನ ಸಮೀಪಕ್ಕೆ ಹೋಗಿ ಅವನಿಗೆ ಎಲ್ಲವನ್ನೂ ತಿಳಿಸಿದನು.

೪೨. ''ಜಗದೊಡೆಯನಾದ ಚತುರ್ಮುಖನೆ! ನಿನ್ನಿಂದ ಪಾಪಿಗಳ ನಿಗ್ರಹಕ್ಕಾಗಿ ನೇಮಿಸಲ್ಪಟ್ಟ ನಾನು ನಿನ್ನನ್ನು ಮರೆಹೊಕ್ಕಿರುವೆನು.



CC-0. Jangamwadi Math Collection. Digitized by eGangotri

ಅಧುನಾ ಪಾಪಿನೋ ಮರ್ತ್ಯಾ ನ ಸಂತಿ ಪೃಥಿವೀತಲೇ ।
ರುದ್ರಾಧ್ಯಾಯೇನ ನಿಹತಂ ಪಾತಕಾನಾಂ ಮಹತ್ಕುಲಂ ॥ ೪೩ ॥
ಪಾತಕಾನಾಂ ಕುಲೇ ನಷ್ಟೇ ನರಕಾಃ ಶೂನ್ಯತಾಂ ಗತಾಃ ।
ನರಕೇ ಶೂನ್ಯತಾಂ ಯಾತೇ ಮಮ ರಾಜ್ಯಂ ಹಿ ನಿಷ್ಫಲಂ ॥ ೪೪ ॥
ತಸ್ಮಾತ್ತ್ವಯೈವ ಭಗವನ್ನುಪಾಯಃ ಪರಿಚಿಂತ್ಯತಾಂ ।
ಯಥಾ ಮೇ ನ ವಿಹನ್ಯೇತ ಸ್ವಾಮಿತ್ವಂ ಮರ್ತ್ಯದೇಹಿನಾಂ ॥ ೪೫ ॥
ಇತಿ ವಿಜ್ಞಾಪಿತೋ ಧಾತಾ ಯಮೇನ ಪರಿಖಿದ್ಯತಾ ।
ರುದ್ರಜಾಪ್ಯವಿಘಾತಾರ್ಥಮುಪಾಯಂ ಪರ್ಯಕಲ್ಪಯತ್ ॥ ೪೬ ॥
ಅಶ್ರದ್ಧಾಂ ಚೈವ ದುರ್ಮೇಧಾಮವಿದ್ಯಾಯಾಃ ಸುತೇ ಉಭೇ ।
ಶ್ರದ್ಧಾಮೇಧಾವಿಘಾತಿನ್ಯೌ ಮರ್ತ್ಯೇಷು ಪರ್ಯಚೋದಯತ್ ॥ ೪೭ ॥
ತಾಭ್ಯಾಂ ವಿಮೋಹಿತೇ ಲೋಕೇ ರುದ್ರಾಧ್ಯಾಯಪರಾಙ್ಮುಖೇ ।
ಯಮಃ ಸ್ವಸ್ಥಾನಮಾಸಾದ್ಯ ಕೃತಾರ್ಥ ಇವ ಸೋಽಭವತ್ ॥ ೪೮ ॥
ಪೂರ್ವಜನ್ಮಕೃತೈಃ ಪಾಪೈರ್ಜಾಯಂತೇಽಲ್ಪಾಯುಷೋ ಜನಾಃ ।
ತಾನಿ ಪಾಪಾನಿ ನಶ್ಯಂತಿ ರುದ್ರಂ ಜಪ್ತವತಾಂ ನೃಣಾಂ ॥ ೪೯ ॥
ಕ್ಷೀಣೇಷು ಸರ್ವಪಾಪೇಷು ದೀರ್ಘಮಾಯುರ್ಬಲಂ ಧೃತಿಃ ।
ಆರೋಗ್ಯಂ ಜ್ಞಾನಮೈಶ್ವರ್ಯಂ ವರ್ಧತೇ ಸರ್ವದೇಹಿನಾಂ ॥ ೫೦ ॥

---

೪೩. ಈಗ ಪ್ರಪಂಚದಲ್ಲಿ ರುದ್ರಾಧ್ಯಾಯದಿಂದ ಪಾಪಗಳೆಲ್ಲ ನಾಶವಾಗಿರುವ ಕಾರಣ ಪಾಪಿಗಳೇ ಇಲ್ಲವು.

೪೪. ಪಾಪಗಳ ಸಮೂಹವು ಹಾಳಾಗಲು ನರಕಗಳು ಬರಿದಾಗುವುವು. ನರಕವು ಶೂನ್ಯವಾಗಲು ನನ್ನ ರಾಜ್ಯದಿಂದ ಪ್ರಯೋಜನವಿಲ್ಲ.

೪೫. ಆದುದರಿಂದ ನನ್ನ ಮಾನವಾಧಿಪತ್ಯವು ಹಾಳಾಗದಿರಲು ನೀನು ಯುಕ್ತಿಯನ್ನು ಆಲೋಚಿಸು."

೪೬. ಹೀಗೆ ಯಮನು ವ್ಯಸನಗೊಂಡು ವಿಜ್ಞಾಪಿಸಲು ಬ್ರಹ್ಮನು ರುದ್ರಾಧ್ಯಾಯದ ನಾಶಕ್ಕಾಗಿ ಉಪಾಯವನ್ನು ಕಲ್ಪಿಸಿದನು.

೪೭. ಮನುಷ್ಯರ ಶ್ರದ್ಧಾಮೇಧಗಳನ್ನು ಹಾಳುಮಾಡಲು ಅಶ್ರದ್ಧಾ, ದುರ್ಮೇಧೆ ಎಂಬ ಅವಿದ್ಯೆಯ ಇಬ್ಬರು ಮಕ್ಕಳನ್ನು ಪ್ರೇರಿಸಿದನು.

೪೮. ಅವರಿಂದ ಮೋಹಗೊಂಡ ಜನರು ರುದ್ರಾಧ್ಯಾಯದಿಂದ ವಿಮುಖರಾಗಲು ಯಮನು ತನ್ನ ಸ್ಥಾನಕ್ಕೆ ತೆರಳಿ ಧನ್ಯನಾದಂತಾದನು.

೪೯–೫೦. ಹಿಂದಿನ ಜನ್ಮದಲ್ಲೆಸಗಿದ ಪಾಪಗಳಿಂದ ಅಲ್ಪಾಯುಸ್ಸುಳ್ಳ ಜನರು ಜನಿಸುವರು. ರುದ್ರಾಧ್ಯಾಯದ ಜಪದಿಂದ ಆ ಪಾಪಗಳು ಪರಿಹಾರವಾಗುವುವು. ಜನರ ಸಕಲಪಾಪಗಳೂ ನಷ್ಟವಾಗಲು ದೀರ್ಘಾಯುಸ್ಸೂ, ಬಲವೂ, ಧೈರ್ಯವೂ, ಆರೋಗ್ಯವೂ, ಜ್ಞಾನವೂ, ಐಶ್ವರ್ಯವೂ ವೃದ್ಧಿಯಾಗುವುವು.

CC-0. Jangamwadi Math Collection. Digitized by eGangotri

ರುದ್ರಾಧ್ಯಾಯೇನ ಯೇ ದೇವಂ ಸ್ನಾಪಯಂತಿ ಮಹೇಶ್ವರಂ ।
ತಜ್ಜಲೈಃ ಕುರ್ವತಃ ಸ್ನಾನಂ ತೇ ಮೃತ್ಯುಂ ಸಂತರಂತಿ ಚ ॥ ೫೧ ॥
ರುದ್ರಾಧ್ಯಾಯಾಽಭಿಜಪ್ತೇನ ಸ್ನಾನಂ ಕುರ್ವಂತಿ ಯೇಽಂಭಸಾ ।
ತೇಷಾಂ ಮೃತ್ಯುಭಯಂ ನಾಸ್ತಿ ಶಿವಲೋಕೇ ಮಹೀಯತೇ ॥ ೫೨ ॥
ಶತರುದ್ರಾಭಿಷೇಕೇಣ ಶತಾಯುರ್ಜಾಯತೇ ನರಃ ।
ಅಶೇಷಪಾಪನಿರ್ಮುಕ್ತಃ ಶಿವಸ್ಯ ದಯಿತೋ ಭವೇತ್ ॥ ೫೩ ॥
ಏಷ ರುದ್ರಾಽಯುತಸ್ನಾನಂ ಕರೋತು ತವ ಪುತ್ರಕಃ ।
ದಶವರ್ಷಸಹಸ್ರಾಣಿ ಮೋದತೇ ಭುವಿ ಶಕ್ರವತ್ ॥ ೫೪ ॥
ಅವ್ಯಾಹತಬಲೈಶ್ವರ್ಯೋ ಹತಶತ್ರುರ್ನಿರಾಮಯಃ ।
ನಿರ್ಧೂತಾಽಖಿಲಪಾಪೌಘಃ ಶಾಸ್ತಾ ರಾಜ್ಯಮಕಂಟಕಂ ॥ ೫೫ ॥
ವಿಪ್ರಾ ವೇದವಿದಃ ಶಾಂತಾಃ ಕೃತಿನಃ ಶಂಸಿತವ್ರತಾಃ ।
ಜ್ಞಾನಯಜ್ಞತಪೋನಿಷ್ಠಾಃ ಶಿವಭಕ್ತಿಪರಾಯಣಾಃ ॥ ೫೬ ॥
ರುದ್ರಾಽಧ್ಯಾಯಜಪಂ ಸಮ್ಯಕ್ಕುರ್ವಂತು ವಿಮಲಾಶಯಾಃ ।
ತೇಷಾಂ ಜಪಾಽನುಭಾವೇನ ಸದ್ಯಃ ಶ್ರೇಯೋ ಭವಿಷ್ಯತಿ ॥ ೫೭ ॥

---

೫೧. ರುದ್ರಾಧ್ಯಾಯದಿಂದ ಮಹೇಶ್ವರನಿಗೆ ಅಭಿಷೇಕಮಾಡಿ ಆ ನೀರಿನಲ್ಲಿ ಮಿಂದವರು ಮೃತ್ಯುವನ್ನು ದಾಟುವರು.

೫೨. ರುದ್ರಾಧ್ಯಾಯದಿಂದ ಅಭಿಮಂತ್ರಿಸಿದ ನೀರಿನಿಂದ ಸ್ನಾನಮಾಡಿದವರು ಮೃತ್ಯುಭಯ ವಿಮುಕ್ತರಾಗಿ ಶಿವಲೋಕದಲ್ಲಿ ಪೂಜ್ಯರಾಗುವರು.

೫೩. ಮನುಷ್ಯನು ಶತರುದ್ರಾಭಿಷೇಕದಿಂದ ನೂರುವರ್ಷ ಆಯುಸ್ಸುಳ್ಳವನೂ, ಸಮಸ್ತಪಾಪ ವಿಮುಕ್ತನೂ ಆಗಿ ಶಿವನಿಗೆ ಪ್ರಿಯನಾಗುವನು.

೫೪. ಈ ನಿನ್ನ ಮಗನು ಹತ್ತುಸಾವಿರಸಾರಿ ರುದ್ರಾಭಿಷೇಕವನ್ನುಮಾಡಿದರೆ ಹತ್ತುಸಾವಿರ ವರ್ಷ ಭೂಮಿಯಲ್ಲಿ ದೇವೇಂದ್ರನಂತೆ ಸಂತೋಷಗೊಳ್ಳುವನು.

೫೫. ಕ್ಷೀಣವಾಗದ ಬಲ, ಐಶ್ವರ್ಯಗಳುಳ್ಳವನೂ, ಶತ್ರುಗಳನ್ನು ಕೊಂದವನೂ, ರೋಗವಿಲ್ಲದವನೂ, ಸಮಸ್ತಪಾಪಗಳಿಂದ ಮುಕ್ತನೂ ಆಗಿ ಶತ್ರುಗಳಿಲ್ಲದೆ ರಾಜ್ಯವನ್ನು ಆಳುವನು.

೫೬–೫೭. ವೇದಜ್ಞರೂ, ಶಾಂತರೂ, ಪುಣ್ಯವಂತರೂ, ಶ್ಲಾಘ್ಯವಾದ ನಿಯಮವುಳ್ಳವರೂ, ಜ್ಞಾನ, ಯಜ್ಞ, ತಪಸ್ಸುಗಳಲ್ಲಿ ನಿರತರೂ, ಶಿವಭಕ್ತರೂ ಆದ ಬ್ರಾಹ್ಮಣರು ನಿರ್ಮಲಭಾವನೆಯುಳ್ಳವರಾಗಿ ರುದ್ರಾಧ್ಯಾಯವನ್ನು ಚೆನ್ನಾಗಿ ಜಪಿಸಲಿ. ಅವರ ಜಪದ ಮಾಹಾತ್ಮ್ಯದಿಂದ ಕೂಡಲೆ ಶ್ರೇಯಸ್ಸಾಗುವುದು.

CC-0. Jangamwadi Math Collection. Digitized by eGangotri

ಇತ್ಯುಕ್ತವಂತಂ ನೃಪತಿರ್ಮಹಾಮುನಿಂ
ತಮೇವ ವವ್ರೇ ಪ್ರಥಮಂ ಕ್ರಿಯಾಗುರುಂ ।
ಅಥಾಽಪರಾಂಸ್ತ್ಯಕ್ತಧನಾಶಯಾನ್ಮುನೀ
ನಾವಾಹಯಾಮಾಸ ಸಹಸ್ರಶಃ ಕ್ಷಣಾತ್ ॥ ೫೮ ॥

ತೇ ವಿಪ್ರಾಃ ಶಾಂತಮನಸಃ ಸಹಸ್ರಪರಿಸಮ್ಮಿತಾಃ ।
ಕಲಶಾನಾಂ ಶತಂ ಸ್ಥಾಪ್ಯ ಪುಣ್ಯವೃಕ್ಷರಸೈರ್ಯುತಂ ॥ ೫೯ ॥
ರುದ್ರಾಧ್ಯಾಯೇನ ಸಂಸ್ನಾಪ್ಯ ತಮುರ್ವೀಪತಿಪುತ್ರಕಂ ।
ವಿಧಿವತ್ಸ್ನಾಪಯಾಮಾಸುಃ ಸಂಪ್ರಾಪ್ತೇ ಸಪ್ತಮೇ ದಿನೇ ॥ ೬೦ ॥
ಸ್ನಾಪ್ಯಮಾನೋ ಮುನಿಜನೈಃ ಸ ರಾಜಸುಕುಮಾರಕಃ ।
ಅಕಸ್ಮಾದೇವ ಸಂತ್ರಸ್ತಃ ಕ್ಷಣಂ ಮೂರ್ಛಾಮವಾಪಹ ॥ ೬೧ ॥
ಸಹಸೈವ ಪ್ರಬುದ್ಧೋಽಸೌ ಮುನಿಭಿಃ ಕೃತರಕ್ಷಣಃ ।
ಪ್ರೋವಾಚ ಕಶ್ಚಿತ್ಪುರುಷೋ ದಂಡಹಸ್ತಃ ಸಮಾಗತಃ ॥ ೬೨ ॥
ಮಾಂ ಪ್ರಹರ್ತುಂ ಕೃತಮತಿರ್ಭೀಮದಂಡೋ ಭಯಾನಕಃ ।
ಸೋಽಪಿ ಚಾನ್ಯೈರ್ಮಹಾವೀರೈಃ ಪುರುಷೈರಭಿತಾಡಿತಃ ॥ ೬೩ ॥
ಬಧ್ವಾ ಪಾಶೇನ ಮಹತಾ ದೂರಂ ನೀತ ಇವಾಽಭವತ್ ।
ಏತಾವದಹಮದ್ರಾಕ್ಷಂ ಭವದ್ಭಿಃ ಕೃತರಕ್ಷಣಃ ॥ ೬೪ ॥

---

೫೮. ಅರಸನು ಕೂಡಲೆ ಹೀಗೆ ಹೇಳಿದ ಆ ಪರಾಶರಮುನಿಯನ್ನೆ ಜಪದ ಮೊದಲನೆಯ ಮಂತ್ರಗುರುವನ್ನಾಗಿ ವರಿಸಿ ಧನರಾಶಿಯನ್ನು ತ್ಯಜಿಸಿದ ಸಾವಿರಾರು ಇತರ ಮುನಿಗಳನ್ನು ಕರೆಯಿಸಿದನು.

೫೯–೬೧. ಶಾಂತಮನಸ್ಸುಳ್ಳ ಆ ಸಾವಿರ ಜನ ಬ್ರಾಹ್ಮಣರು ಪುಣ್ಯ ವೃಕ್ಷದ ಹಾಲುಗಳಿಂದ ಸಹಿತವಾದ ನೂರು ಕಲಶಗಳನ್ನುಸ್ಥಾಪಿಸಿ, ರುದ್ರಾ ಧ್ಯಾಯದಿಂದ ಅಭಿಷೇಕಮಾಡಿ ರಾಜಕುಮಾರನನ್ನು ಆ ತೀರ್ಥದಿಂದ ಸ್ನಾನ ಮಾಡಿಸಿದರು. ಏಳನೆಯ ದಿನದಲ್ಲಿ ಹೀಗೆ ಮುನಿಗಳು ಸ್ನಾನಮಾಡಿಸುತ್ತಿರಲು ಆ ರಾಜಕುಮಾರನು ಆಕಸ್ಮಾತ್ತಾಗಿ ಭಯಗೊಂಡು ಕ್ಷಣಕಾಲದಲ್ಲಿಯೆ ಮೂರ್ಛೆ ಗೊಂಡನು.

೬೨–೬೪. ಮುನಿಗಳು ಮಾಡಿದ ರಕ್ಷಣೆಯುಳ್ಳ ಆ ರಾಜಕುಮಾರನು ಕೂಡಲೆ ಎಚ್ಚರಗೊಂಡು ಇಂತೆಂದನು. "ನನ್ನನ್ನು ಹೊಡೆಯಲು ನಿಶ್ಚಯಿಸಿ ಒಬ್ಬ ಭಯಂಕರ ಪುರುಷನು ದೊಣ್ಣೆಯನ್ನು ತೆಗೆದುಕೊಂಡು ನನ್ನೆಡೆಗೆ ಬಂದನು. ಅವನನ್ನು ಮಹಾವೀರರಾದ ಇತರ ಪುರುಷರು ಹೊಡೆದು ಮಹಾ ಪಾಶದಿಂದ ಕಟ್ಟಿ ದೂರ ತೆಗೆದುಕೊಂಡು ಹೋದಂತೆ ನಿಮ್ಮಿಂದ ರಕ್ಷಿಸಲ್ಪಟ್ಟ ನಾನು ಕಂಡೆನು."

CC-0. Jangamwadi Math Collection. Digitized by eGangotri

ಇತ್ಯುಕ್ತವಂತಂ ನೃಪತೇಸ್ತನೂಜಂ ದ್ವಿಜಸತ್ತಮಾಃ ।
ಆಶೀರ್ಭಿಃ ಪೂಜಯಾಮಾಸುರ್ಭಯಂ ರಾಜ್ಞೇ ನ್ಯವೇದಯನ್ ॥ ೬೫ ॥
ಅಥ ಸರ್ವಾನೃಷೀಂಛ್ರೇಷ್ಠಾನ್ದಕ್ಷಿಣಾಭಿರ್ನೃಪೋತ್ತಮಃ ।
ಪೂಜಯಿತ್ವಾ ವರಾನ್ನೇನ ಭೋಜಯಿತ್ವಾ ಚ ಭಕ್ತಿತಃ ॥ ೬೬ ॥
ಪ್ರತಿಗೃಹ್ಯಾಶಿಷಸ್ತೇಷಾಂ ಮುನೀನಾಂ ಬ್ರಹ್ಮವಾದಿನಾಂ ।
ಭಕ್ತ್ಯಾ ಬಂಧುಜನೈಃ ಸಾರ್ಧಂ ಸಭಾಯಾಂ ಸಮುಪಾವಿಶತ್ ॥ ೬೭ ॥
ತಸ್ಮಿನ್ಸಮಾಗತೇ ವೀರೇ ಮುನಿಭಿಃ ಸಹ ಪಾರ್ಥಿವೇ ।
ಆಜಗಾಮ ಮಹಾಯೋಗೀ ದೇವರ್ಷಿರ್ನಾರದಃ ಸ್ವಯಂ ॥ ೬೮ ॥

ತಮಾಗತಂ ಪ್ರೇಕ್ಷ್ಯ ಗುರುಂ ಮುನೀನಾಂ
ಸಾರ್ಧಂ ಸದಸ್ಯೈರಖಿಲೈರ್ಮುನೀಂದ್ರೈಃ ।
ಪ್ರಣಮ್ಯ ಭಕ್ತ್ಯಾ ವಿನಿವೇಶ್ಯ ಪೀಠೇ
ಕೃತೋಪಚಾರಂ ನೃಪತಿರ್ಬಭಾಷೇ ॥ ೬೯ ॥

ರಾಜೋವಾಚ :—

ದೃಷ್ಟಂ ಕಿಮಸ್ತಿ ತೇ ಬ್ರಹ್ಮಂಸ್ತ್ರಿಲೋಕ್ಯಾಂ ಕಿಂಚಿದದ್ಭುತಂ ।
ತನ್ನೋ ಬ್ರೂಹಿ ವಯಂ ಸರ್ವೇ ತ್ವದ್ವಾಕ್ಯಾಮೃತಲಾಲಸಾಃ ॥ ೭೦ ॥

ನಾರದ ಉವಾಚ :—

ಅದ್ಯ ಚಿತ್ರಂ ಮಹದ್ದೃಷ್ಟಂ ವ್ಯೋಮ್ನೋಽವತರತಾ ಮಯಾ ।
ತಚ್ಛೃಣುಷ್ವ ಮಹಾರಾಜ ಸಹೈಭಿರ್ಮುನಿಪುಂಗವೈಃ ॥ ೭೧ ॥

---

೬೫. ಬ್ರಾಹ್ಮಣೋತ್ತಮರು ಹೀಗೆಂದ ಆ ರಾಜಪುತ್ರನನ್ನು ಆಶೀರ್ವದಿಸಿ ದೊರೆಗೆ ಭಯದ ವಿಷಯವನ್ನು ತಿಳಿಸಿದರು.

೬೬–೬೭. ಬಳಿಕ ಮಹಾರಾಜನು ಆ ಸಕಲ ಮುನಿವರ್ಯರಿಗೂ ದಕ್ಷಿಣೆಗಳನ್ನಿತ್ತು ಪೂಜಿಸಿ ಭಕ್ತಿಯಿಂದ ಮೃಷ್ಟಾನ್ನಭೋಜನಮಾಡಿಸಿ ಬ್ರಹ್ಮಜ್ಞಾನಿಗಳಾದ ಅವರ ಆಶೀರ್ವಾದವನ್ನು ಭಕ್ತಿಯಿಂದ ಪಡೆದು ಬಂಧುಗಳೊಡನೆ ಸಭೆಯಲ್ಲಿ ಕುಳಿತುಕೊಂಡನು.

೬೮–೬೯. ವೀರನಾದ ಆ ರಾಜನು ಮುನಿಗಳೊಡನೆ ಸಭೆಯಲ್ಲಿ ಕುಳಿತುಕೊಂಡಿರಲು ಯೋಗಿವರ್ಯನಾದ ನಾರದಮಹರ್ಷಿಯು ಅಲ್ಲಿಗೆ ಬಂದನು. ರಾಜನು ಮುನಿಗಳಿಗೆ ಗುರುವಾಗಿ ಬಂದಿರುವ ಆ ನಾರದನನ್ನು ಸಭೆಯಲ್ಲಿರುವ ಸಮಸ್ತಮುನಿಗಳೊಡನೆಯೂ ವಂದಿಸಿ ಆಸನದಲ್ಲಿ ಕುಳ್ಳಿರಿಸಿ ಉಪಚಾರಮಾಡಿ ಇಂತೆಂದನು.

೭೦. ರಾಜನು ಹೇಳುತ್ತಾನೆ:—“ ಎಲೈ ಮುನಿವರ್ಯನೆ! ಮೂರುಲೋಕಗಳಲ್ಲಿ ನೀನು ನೋಡಿರುವ ಅದ್ಭುತವಿಷಯವೊಂದನ್ನು ನಮಗೆ ಹೇಳು. ನಾವು ನಿನ್ನ ವಾಕ್ಯಾಮೃತವನ್ನು ರುಚಿನೋಡಲು ಕುತೂಹಲಗೊಂಡಿದ್ದೇವೆ.

೭೧–೭೫. ನಾರದನು ಹೇಳುತ್ತಾನೆ:—ಅರಸ! ನಾನೀಗ ಆಕಾಶದಿಂದ

CC-0. Jangamwadi Math Collection. Digitized by eGangotri

ಅದ್ಯ ಮೃತ್ಯುರಿಹಾಯಾತೋ ನಿಹಂತುಂ ತವ ಪುತ್ರಕಂ ।
ದಂಡಹಸ್ತೋ ದುರಾಧರ್ಷೋ ಲೋಕಮುದ್ವಾಪಯನ್ಸದಾ ॥ ೭೨ ॥
ಈಶ್ವರೋಽಪಿ ವಿದಿತ್ವೈನಂ ತ್ವತ್ಪುತ್ರಂ ಹಂತುಮಾಗತಂ ।
ಸಹೈವ ಪಾರ್ಷದೈಃ ಕಂಚಿದ್ವೀರಭದ್ರಮುಚೋದಯತ್ ॥ ೭೩ ॥
ಸ ಆಗತ್ಯ ಹಠಾನ್ಮೃತ್ಯುಂ ತ್ವತ್ಪುತ್ರಂ ಹಂತುಮಾಗತಂ ।
ಗೃಹೀತ್ವಾ ಸುದೃಢಂ ಬಧ್ವಾ ದಂಡೇನಾಽಭ್ಯಹನದ್ರುಷಾ ॥ ೭೪ ॥
ತಂ ನೀಯಮಾನಂ ಜಗದೀಶಸನ್ನಿಧಿಂ
ಶೀಘ್ರಂ ವಿದಿತ್ವಾ ಭಗವಾನ್ಯಮಃ ಸ್ವಯಂ ।
ಕೃತಾಂಜಲಿರ್ದೇವ ಜಯೇತ್ಯುದೀರಯ
ನ್ಪ್ರಣಮ್ಯ ಮೂರ್ಧ್ನಾ ನಿಜಗಾದ ಶೂಲಿನಂ ॥ ೭೫ ॥

ಯಮ ಉವಾಚ :—
ದೇವ ದೇವ ಮಹಾರುದ್ರ ವೀರಭದ್ರ ನಮೋಽಸ್ತು ತೇ ।
ನಿರಾಗಸಿ ಕಥಂ ಮೃತ್ಯೌ ಕೋಪಸ್ತವ ಸಮುತ್ಥಿತಃ ॥ ೭೬ ॥
ನಿಜಕರ್ಮಾನುಬಂಧೇನ ರಾಜಪುತ್ರಂ ಗತಾಯುಷಂ ।
ಪ್ರಹರ್ತುಮುದ್ಯತೇ ಮೃತ್ಯೌ ಕೋಽಪರಾಧೋ ವದ ಪ್ರಭೋ ॥ ೭೭ ॥

ವೀರಭದ್ರ ಉವಾಚ :—
ದಶವರ್ಷ ಸಹಸ್ರಾಯುಃ ಸ ರಾಜತನಯಃ ಕಥಂ ।
ವಿಪತ್ತಿಮಂತರಾಯಾತಿ ರುದ್ರಸ್ನಾನಹತಾಽಶುಭಃ ॥ ೭೮ ॥

---

ಇಳಿದುಬರುತ್ತ ಒಂದು ಆಶ್ಚರ್ಯವಿಷಯವನ್ನು ಕಂಡೆನು. ಅದನ್ನು ನೀನು ಈ ಮುನಿಗಳೊಡನೆ ಕೇಳು. ಲೋಕವನ್ನು ಯಾವಾಗಲೂ ಪೀಡಿಸುತ್ತಿರುವ ಮಾರಲಾಗದ ಮೃತ್ಯುವು ದಂಡವನ್ನು ಧರಿಸಿ ನಿನ್ನ ಪುತ್ರನನ್ನು ಕೊಲ್ಲಲು ಇಲ್ಲಿಗೆ ಬಂದನು. ಶಿವನು ಇದನ್ನರಿತು ಪ್ರಮಥಗಣಗಳೊಡನೆ ವೀರಭದ್ರನನ್ನು ಇಲ್ಲಿಗೆ ಕಳುಹಿಸಿದನು.

೭೪. ಅವನು ಇಲ್ಲಿಗೆ ಬಂದು ನಿನ್ನ ಮಗನನ್ನು ಕೊಲ್ಲಲು ಬಂದ ಮೃತ್ಯುವನ್ನು ಹಿಡಿದು ಬಲವಾಗಿ ಬಿಗಿದು ಕೋಪಗೊಂಡು ದಂಡದಿಂದ ಹೊಡೆದನು.

೭೫. ಅವನನ್ನು ಈಶ್ವರನ ಸನ್ನಿಧಿಗೆ ಒಯ್ಯುತ್ತಿರುವವನನ್ನಾಗಿ ಪೂಜ್ಯನಾದ ಯಮನು ತಿಳಿದು ಕೈಮುಗಿದುಕೊಂಡು ಈಶ್ವರನಿಗೆ "ಸ್ವಾಮಿ! ಜಯಿಸೆ"ಂದು ಹೇಳುತ್ತ ಸಾಷ್ಟಾಂಗಪ್ರಣಾಮಮಾಡಿ ಅವನನ್ನು ಕುರಿತು ಇಂತೆಂದನು.

೭೬. ಯಮನು ಹೇಳುತ್ತಾನೆ:—"ವೀರಭದ್ರ! ನಿನಗೆ ನಮಸ್ಕಾರವು. ತಪ್ಪಿಲ್ಲದ ಮೃತ್ಯುವಿನ ಮೇಲೆ ನೀನು ಏತಕ್ಕೆ ಸಿಟ್ಟುಗೊಂಡಿರುವೆ?

೭೭. ಪ್ರಭು! ತನ್ನ ಕರ್ಮದ ವಶದಿಂದ ಆಯುಸ್ಸನ್ನು ಕಳೆದುಕೊಂಡ ರಾಜಕುಮಾರನನ್ನು ಹೊಡೆಯಲುದ್ಯುಕ್ತನಾದ ಮೃತ್ಯುವಿನ ತಪ್ಪೇನಿದೆ? ಹೇಳು."

೭೮. ವೀರಭದ್ರನು ಹೇಳುತ್ತಾನೆ:—ರುದ್ರಾಭಿಷೇಕದಿಂದ ಅಮಂಗಳ

CC-0. Jangamwadi Math Collection. Digitized by eGangotri

ಅಸ್ತಿ ಚೇತ್ತವ ಸಂದೇಹೋ ಮದ್ವಾಕ್ಯೇಽಪ್ಯನಿವಾರಿತೇ ।
ಚಿತ್ರಗುಪ್ತಂ ಸಮಾಹೂಯ ಪ್ರಷ್ಟವ್ಯೋಽದ್ಯೈವ ಮಾಚಿರಂ ॥ ೭೯ ॥

ನಾರದ ಉವಾಚ:—

ಅಥಾಹೂತಶ್ಚಿತ್ರಗುಪ್ತೋ ಯಮೇನ ಸಹಸಾಗತಃ ।
ಆಯುಃ ಪ್ರಮಾಣಂ ತ್ವತ್ಸೂನೋಃ ಪರಿಪೃಷ್ಟಃ ಸ ಚಾಬ್ರವೀತ್ ॥ ೮೦ ॥
ದ್ವಾದಶಾಬ್ದಂ ಚ ತಸ್ಯಾಯುರಿತ್ಯುಕ್ತ್ವಾಽಥ ವಿಮೃಶ್ಯ ಚ ।
ಪುನರ್ಲೇಖ್ಯಗತಂ ಪ್ರಾಹ ಸ ವರ್ಷಾಯುತಜೀವಿತಂ ॥ ೮೧ ॥
ಅಥ ಭೀತೋ ಯಮೋ ರಾಜಾ ವೀರಭದ್ರಂ ಪ್ರಣಮ್ಯ ಚ ।
ಕಥಂಚಿನ್ಮೋಚಯಾಮಾಸ ಮೃತ್ಯುಂ ದುರ್ವಾರಬಂಧನಾತ್ ॥ ೮೨ ॥
ವೀರಭದ್ರೇಣ ಮುಕ್ತೋಽಥ ಯಮೋಽಗಾನ್ನಿಜಮಂದಿರಂ ।
ವೀರಭದ್ರಶ್ಚ ಕೈಲಾಸಮಹಂ ಪ್ರಾಪ್ತಸ್ತವಾಂತಿಕಂ ॥ ೮೩ ॥
ಅತಸ್ತವ ಕುಮಾರೋಽಯಂ ರುದ್ರಜಾಪ್ಯಾಽನುಭಾವತಃ ।
ಮೃತ್ಯೋರ್ಭಯಂ ಸಮುತ್ತೀರ್ಯ ಸುಖೀ ಜಾತೋಽಯುತಂ ಸಮಾಃ ॥

---

ವನ್ನು ಪರಿಹರಿಸಿಕೊಂಡು ಹತ್ತುಸಾವಿರವರ್ಷ ಆಯುಸ್ಸುಳ್ಳ ಈ ರಾಜಕುಮಾರನು ಮಧ್ಯದಲ್ಲಿ ಹೇಗೆ ಸಾಯುವನು?

೭೯. ಈ ನನ್ನ ಮಾತಿನಲ್ಲಿ ನಿನಗೆ ಸಂದೇಹವಿದ್ದರೆ ಈಗಲೇ ಚಿತ್ರಗುಪ್ತನನ್ನು ಕರೆಯಿಸಿ ಅವನನ್ನು ಕೇಳು ಸಾವಕಾಶಬೇಡ.

೮೦. ನಾರದನು ಹೇಳುತ್ತಾನೆ:—"ಯಮನಿಂದ ಕೂಡಲೆ ಕರೆಯಿಸಲ್ಪಟ್ಟ ಚಿತ್ರಗುಪ್ತನು ನಿನ್ನ ಮಗನ ಆಯುಸ್ಸಿನ ಪ್ರಮಾಣವನ್ನು ಹೇಳಿದನು.

೮೧. ಮೊದಲು ಆ ಕುಮಾರನಿಗೆ ಹನ್ನೆರಡು ವರ್ಷವೇ ಆಯುಸ್ಸೆಂದು ಹೇಳಿ ಅನಂತರ ಆಲೋಚಿಸಿ ತಿರುಗಿ ಬರೆದಿರುವ ಹತ್ತುಸಾವಿರ ವರ್ಷ ಆಯುಸ್ಸನ್ನು ತಿಳಿಸಿದನು.

೮೨. ತರುವಾಯ ಯಮನು ಭಯಗೊಂಡು ವೀರಭದ್ರನನ್ನು ನಮಸ್ಕರಿಸಿ ಕಷ್ಟದಿಂದ ಮೃತ್ಯುವಿನ ಬಂಧನವನ್ನು ಬಿಡಿಸಿದನು.

೮೩. ಹೀಗೆ ವೀರಭದ್ರನು ಮೃತ್ಯುವನ್ನು ಬಿಡಲು ಯಮನು ತನ್ನ ಮನೆಗೂ, ವೀರಭದ್ರನು ಕೈಲಾಸಕ್ಕೂ ಹೊರಟುಹೋದರು. ನಾನು ನಿನ್ನೆಡೆಗೆ ಬಂದೆನು.

೮೪. ಆದುದರಿಂದ ಈ ನಿನ್ನ ಕುಮಾರನು ರುದ್ರಜಪದ ಪ್ರಭಾವದಿಂದ ಮೃತ್ಯುವಿನ ಭಯವನ್ನು ಕಳೆದುಕೊಂಡು ಹತ್ತುಸಾವಿರವರ್ಷ ಆಯುಸ್ಸುಳ್ಳವನಾಗಿ ಸುಖಗೊಂಡನು."

CC-0. Jangamwadi Math Collection. Digitized by eGangotri

ಇತ್ಯುಕ್ತ್ವಾ ನೃಪಮಾಮಂತ್ರ್ಯ ನಾರದೇ ತ್ರಿದಿವಂಗತೇ ।
ವಿಪ್ರಾಃ ಸರ್ವೇ ಪ್ರಮುದಿತಾಃ ಸ್ವಂ ಸ್ವಂ ಜಗ್ಮುರಥಾಶ್ರಮಂ ॥ ೮೫ ॥
ಇತ್ಥಂ ಕಾಶ್ಮೀರನೃಪತೀ ರುದ್ರಾಽಧ್ಯಾಯಪ್ರಭಾವತಃ ।
ನಿಸ್ತೀರ್ಯಾಽಶೇಷದುಃಖಾನಿ ಕೃತಾರ್ಥೋಽಭೂತ್ಸಪುತ್ರಕಃ ॥ ೮೬ ॥
ಯೇ ಕೀರ್ತಯಂತಿ ಮನುಜಾಃ ಪರಮೇಶ್ವರಸ್ಯ
ಮಾಹಾತ್ಮ್ಯಮೇತದಥ ಕರ್ಣಪುಟೈಃ ಪಿಬಂತಿ ।
ತೇ ಜನ್ಮಕೋಟಿಕೃತಪಾಪಗಣೈರ್ವಿಮುಕ್ತಾಃ
ಶಾಂತಾಃ ಪ್ರಯಾಂತಿ ಪರಮಂ ಪದಮಿಂದುಮೌಲೇಃ॥ ೮೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ರುದ್ರಾಧ್ಯಾಯ
ಮಹಿಮಾನುವರ್ಣನಂ" ನಾಮೈಕವಿಂಶೋಽಧ್ಯಾಯಃ

---

೮೫. ಹೀಗೆ ನಾರದನು ರಾಜನನ್ನು ಕೇಳಿಕೊಂಡು ದೇವಲೋಕಕ್ಕೆ ತೆರಳಲು ಬ್ರಾಹ್ಮಣರೆಲ್ಲರೂ ಸಂತೋಷಗೊಂಡು ತಮ್ಮತಮ್ಮ ಆಶ್ರಮಕ್ಕೆ ತೆರಳಿದರು.

೮೬. ಹೀಗೆ ಕಾಶ್ಮೀರರಾಜನು ರುದ್ರಾಧ್ಯಾಯದ ಮಾಹಾತ್ಮ್ಯದಿಂದ ಮಗನೊಡನೆ ಸಮಸ್ತದುಃಖಗಳನ್ನೂ ದಾಟಿ ಕೃತಕೃತ್ಯನಾದನು.

೮೭. ಪರಮೇಶ್ವರನ ಈ ಮಾಹಾತ್ಮ್ಯವನ್ನು ಹೇಳುವವರೂ, ಕೇಳುವವರೂ ಆದ ಜನರು ಅನೇಕ ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತರಾಗಿ ಶಾಂತತೆಯಿಂದ ಶಿವನ ಉತ್ತಮ ಸ್ಥಾನಕ್ಕೆ ಹೋಗುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ
ಖಂಡದಲ್ಲಿ "ರುದ್ರಾಧ್ಯಾಯಮಹಿಮಾನುವರ್ಣನ"ವೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

CC-0. Jangamwadi Math Collection. Digitized by eGangotri

॥ ಶ್ರೀಃ ॥

## ಅಥ ದ್ವಾವಿಂಶೋऽಧ್ಯಾಯಃ

### ಪುರಾಣಶ್ರವಣಮಹಿಮಾನುವರ್ಣನಂ

ಸೂತ ಉವಾಚ :—

ಏವಂ ಶಿವತಮಃ ಪಂಥಾಃ ಶಿವೇನೈವ ಪ್ರದರ್ಶಿತಃ ।
ನೃಣಾಂ ಸಂಸೃತಿಬದ್ಧಾನಾಂ ಸದ್ಯೋ ಮುಕ್ತಿಕರಃ ಪರಃ ॥ ೧ ॥
ಅಥ ದುರ್ಮೇಧಸಾಂ ಪುಂಸಾಂ ವೇದೇಷ್ವನಧಿಕಾರಿಣಾಂ ।
ಸ್ತ್ರೀಣಾಂ ದ್ವಿಜಾತಿಬಂಧೂನಾಂ ಸರ್ವೇಷಾಂ ಚ ಶರೀರಿಣಾಂ ॥ ೨ ॥
ಏಷ ಸಾಧಾರಣಃ ಪಂಥಾಃ ಸಾಕ್ಷಾತ್ಕೈವಲ್ಯಸಾಧನಃ ।
ಮಹಾಮುನಿಜನೈಃ ಸೇವ್ಯೋ ದೇವೈರಪಿ ಸುಪೂಜಿತಃ ॥ ೩ ॥
ಯತ್ಕಥಾಶ್ರವಣಂ ಶಂಭೋಃ ಸಂಸಾರ ಭಯನಾಶನಂ ।
ಸದ್ಯೋ ಮುಕ್ತಿಕರಂ ಶ್ಲಾಘ್ಯಂ ಪವಿತ್ರಂ ಸರ್ವದೇಹಿನಾಂ ॥ ೪ ॥
ಅಜ್ಞಾನತಿಮಿರಾಂಧಾನಾಂ ದೀಪೋऽಯಂ ಜ್ಞಾನಸಿದ್ಧಿದಃ ।
ಭವರೋಗನಿಬದ್ಧಾನಾಂ ಸುಸೇವ್ಯಂ ವರಮೌಷಧಂ ॥ ೫ ॥
ಮಹಾಪಾತಕಶೈಲಾನಾಂ ವಜ್ರಘಾತಸ್ಸುದಾರುಣಂ ।
ಭರ್ಜನಂ ಕರ್ಮಬೀಜಾನಾಂ ಸಾಧನಂ ಸರ್ವಸಂಪದಾಂ ॥ ೬ ॥

---

### ಕನ್ನಡದ ಅನುವಾದ

#### ಪುರಾಣಶ್ರವಣಮಹಿಮಾನುವರ್ಣನ

೧. ಸೂತನು ಹೇಳುತ್ತಾನೆ:—ಹೀಗೆ ಸಂಸಾರದುಃಖವನ್ನನುಭವಿಸುವ ಮನುಷ್ಯರಿಗೆ ಕೂಡಲೆ ಮುಕ್ತಿಯನ್ನೀಯುವ ಮಂಗಳಕರವಾದ ಉತ್ತಮ ಮಾರ್ಗವನ್ನು ಶಿವನೇ ತೋರಿಸಿರುತ್ತಾನೆ.

೨-೪. ವೇದಾಧಿಕಾರವಿಲ್ಲದ ಮನುಷ್ಯರು, ಹೆಂಗಸರು, ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿ ಕರ್ಮಭ್ರಷ್ಟರಾದವರು ಇವರಿಗೆ ಶಿವಕಥಾಶ್ರವಣವು ಮೋಕ್ಷವನ್ನೀಯುವುದೂ, ಮುನಿಗಳಿಂದ ಸೇವಿಸಲರ್ಹವಾದುದೂ, ದೇವತೆಗಳಿಂದ ಪೂಜಿಸಲ್ಪಟ್ಟುದೂ, ಸಂಸಾರದ ಭಯವನ್ನು ಪರಿಹರಿಸುವುದೂ, ಶ್ಲಾಘ್ಯವೂ, ಪವಿತ್ರವೂ ಆದ ಸಾಮಾನ್ಯ ಮಾರ್ಗವು.

೫-೬. ಶಿವಕಥಾಶ್ರವಣವು ಅಜ್ಞಾನವೆಂಬ ತಿಮಿರರೋಗದಿಂದ ಕುರುಡಾದವರಿಗೆ ಜ್ಞಾನಸಿದ್ಧಿಯನ್ನು ಕೊಡುವ ದೀಪವೂ, ಸಂಸಾರವೆಂಬ ರೋಗದಿಂದ ಪೀಡಿತರಾದವರಿಗೆ ಸೇವಿಸಲರ್ಹವಾದ ಉತ್ತಮೌಷಧವೂ, ಮಹಾಪಾತಕವೆಂಬ ಬೆಟ್ಟಗಳಿಗೆ ಸಿಡಿಲಿನ ಹೊಡೆತದಂತೆ ಕಠಿನವಾದುದೂ, ಕರ್ಮವೆಂಬ



CC-0. Jangamwadi Math Collection. Digitized by eGangotri

ಯೇ ಶೃಣ್ವಂತಿ ಸದಾ ಶಂಭೋಃ ಕಥಾಂ ಭುವನಪಾವನೀಂ ।
ತೇ ವೈ ಮನುಷ್ಯಾ ಲೋಕೇಽಸ್ಮಿನ್ರುದ್ರಾ ಏವ ನ ಸಂಶಯಃ ॥ ೭ ॥
ಶೃಣ್ವತಾಂ ಶೂಲಿನೋ ಗಾಥಾಂ ತಥಾ ಕೀರ್ತಯತಾಂ ಸತಾಂ ।
ತೇಷಾಂ ಪಾದರಜಾಂಸ್ಯೇವ ತೀರ್ಥಾನಿ ಮುನಯೋ ಜಗುಃ ॥ ೮ ॥
ತಸ್ಮಾನ್ನಿಶ್ರೇಯಸಂ ಗಂತುಂ ಯೇಽಭಿವಾಂಛಂತಿ ದೇಹಿನಃ ।
ತೇ ಶೃಣ್ವಂತು ಸದಾ ಭಕ್ತ್ಯಾ ಶೈವೀಂ ಪೌರಾಣಿಕೀಂ ಕಥಾಂ ॥ ೯ ॥
ಯದ್ಯಶಕ್ತಃ ಸದಾ ಶ್ರೋತುಂ ಕಥಾಂ ಪೌರಾಣಿಕೀಂ ನರಃ ।
ಮುಹೂರ್ತಂ ವಾಽಪಿ ಶೃಣುಯಾನ್ನಿಯತಾತ್ಮಾ ದಿನೇ ದಿನೇ ॥ ೧೦ ॥
ಅಥ ಪ್ರತಿದಿನಂ ಶ್ರೋತುಮಶಕ್ತೋ ಯದಿ ಮಾನವಃ ।
ಪುಣ್ಯಮಾಸೇಷು ವಾ ಪುಣ್ಯೇ ದಿನೇ ಪುಣ್ಯತಿಥಿಷ್ವಪಿ ॥ ೧೧ ॥
ಯಃ ಶೃಣೋತಿ ಕಥಾಂ ರಮ್ಯಾಂ ಪುರಾಣ್ಯೈಃ ಸಮುದೀರಿತಾಂ ।
ಸ ನಿಸ್ತರತಿ ಸಂಸಾರಂ ದಗ್ಧ್ವಾ ಕರ್ಮಮಹಾಟವೀಂ ॥ ೧೨ ॥
ಮುಹೂರ್ತಂ ವಾ ತದರ್ಧಂ ವಾ ಕ್ಷಣಂ ವಾ ಪಾವನೀಂ ಕಥಾಂ ।
ಯೇ ಶೃಣ್ವಂತಿ ಸದಾ ಭಕ್ತ್ಯಾ ನ ತೇಷಾಮಸ್ತಿ ದುರ್ಗತಿಃ ॥ ೧೩ ॥

---

ಬೀಜಗಳನ್ನು ಹುರಿಯುವುದೂ, ಸಮಸ್ತ ಸಂಪತ್ತುಗಳಿಗೆ ಸಾಧಕವಾದುದೂ ಆಗಿರುವುದು.

೭. ಲೋಕಗಳನ್ನು ಪವಿತ್ರಗೊಳಿಸುವ ಪರಮೇಶ್ವರನ ಕಥೆಯನ್ನು ಕೇಳುವ ಮನುಷ್ಯರೂ ರುದ್ರರೇ ಆಗುವರು. ಇದರಲ್ಲಿ ಸಂದೇಹವಿಲ್ಲ.

೮. ಶಿವಕಥೆಯನ್ನು ಕೇಳುವವರು ಮತ್ತು ಹೇಳುವವರ ಪಾದದ ಧೂಳುಗಳನ್ನು ತೀರ್ಥಗಳೆಂದು ಮುನಿಗಳು ಹೇಳುತ್ತಾರೆ.

೯. ಆದುದರಿಂದ ಮೋಕ್ಷವನ್ನು ಹೊಂದಲಪೇಕ್ಷಿಸುವ ಮಾನವರು ಯಾವಾಗಲೂ ಭಕ್ತಿಯಿಂದ ಶಿವಪುರಾಣದ ಕಥೆಯನ್ನು ಕೇಳಲಿ.

೧೦. ಮಾನವನು ಯಾವಾಗಲೂ ಶಿವಪುರಾಣದ ಕಥೆಯನ್ನು ಕೇಳಲಶಕ್ತನಾದರೆ ಪ್ರತಿದಿನವೂ ಮುಹೂರ್ತಕಾಲವಾದರೂ ಅದನ್ನು ದೃಢವಾದ ಮನಸ್ಸುಳ್ಳವನಾಗಿ ಕೇಳಲಿ.

೧೧–೧೨. ನಿತ್ಯವೂ ಕೇಳಲು ಶಕ್ತನಾಗದವನು ಪವಿತ್ರವಾದ ಮಾಸ, ದಿನ, ತಿಥಿಗಳಲ್ಲಿ ಶಿವಪುರಾಣದ ಕಥೆಯನ್ನು ಕೇಳಿದರೂ ಅವನು ಕರ್ಮವೆಂಬ ಮಹಾರಣ್ಯವನ್ನು ಸುಟ್ಟು ಸಂಸಾರವನ್ನು ದಾಟುವನು.

೧೩. ಮುಹೂರ್ತವಾಗಲಿ, ಅರ್ಧಮುಹೂರ್ತವಾಗಲಿ, ಕ್ಷಣಕಾಲವಾಗಲಿ ಪವಿತ್ರವಾದ ಈ ಕಥೆಯನ್ನು ಭಕ್ತಿಯಿಂದ ಕೇಳಿದವರಿಗೆ ದುರ್ಗತಿಯಿರುವುದಿಲ್ಲ.

CC-0. Jangamwadi Math Collection. Digitized by eGangotri

ಯತ್ಫಲಂ ಸರ್ವಯಜ್ಞೇಷು ಸರ್ವದಾನೇಷು ಯತ್ಫಲಂ ।
ಸಕೃತ್ಪುರಾಣಶ್ರವಣಾತ್ತತ್ಫಲಂ ವಿಂದತೇ ನರಃ ॥ ೧೪ ॥
ಕಲೌ ಯುಗೇ ವಿಶೇಷೇಣ ಪುರಾಣಶ್ರವಣಾದೃತೇ ।
ನಾಽಸ್ತಿ ಧರ್ಮಃ ಪರಃ ಪುಂಸಾಂ ನಾಸ್ತಿ ಮುಕ್ತಿಪಥಃ ಪರಃ ॥ ೧೫ ॥
ಪುರಾಣಶ್ರವಣಾಚ್ಛಂಭೋರ್ನಾಸ್ತಿ ಸಂಕೀರ್ತನಂ ಪರಂ ।
ಅತ ಏವ ಮನುಷ್ಯಾಣಾಂ ಕಲ್ಪದ್ರುಮಮಹಾಫಲಂ ॥ ೧೬ ॥
ಕಲೌ ಹೀನಾಯುಷೋ ಮರ್ತ್ಯಾ ದುರ್ಬಲಾಃ ಶ್ರಮಪೀಡಿತಾಃ ।
ದುರ್ಮೇಧಸೋ ದುಃಖಭಾಜೋ ಧರ್ಮಾಚಾರವಿವರ್ಜಿತಾಃ ॥ ೧೭ ॥
ಇತಿ ಸಂಚಿಂತ್ಯ ಕೃಪಯಾ ಭಗವಾನ್ಬಾದರಾಯಣಃ ।
ಹಿತಾಯ ತೇಷಾಂ ವಿದಧೇ ಪುರಾಣಾಖ್ಯಂ ಸುಧಾರಸಂ ॥ ೧೮ ॥
ಪಿಬನ್ನೇವಾಽಮೃತಂ ಯತ್ನಾದೇತಸ್ಯಾದಜರಾಮರಃ ।
ಶಂಭೋಃ ಕಥಾಽಮೃತಂ ಕುರ್ಯಾತ್ಕುಲಮೇವಾಽಜರಾಽಮರಂ ॥ ೧೯ ॥
ಬಾಲೋ ಯುವಾ ದರಿದ್ರೋ ವಾ ವೃದ್ಧೋ ವಾ ದುರ್ಬಲೋಽಪಿ ವಾ ।
ಪುರಾಣಜ್ಞಃ ಸದಾ ವಂದ್ಯಃ ಪೂಜ್ಯಶ್ಚ ಸುಕೃತಾರ್ಥಿಭಿಃ ॥ ೨೦ ॥

---

೧೪. ಒಂದು ಸಲ ಶಿವಪುರಾಣವನ್ನು ಕೇಳುವ ಮಾನವನು ಸಮಸ್ತ ಯಜ್ಞಗಳ ಫಲವನ್ನೂ, ಸಮಸ್ತದಾನಗಳ ಫಲವನ್ನೂ ಹೊಂದುವನು.

೧೫. ಕಲಿಯುಗದಲ್ಲಿ ಪುರಾಣಶ್ರವಣದ ಹೊರತು ಮಾನವರಿಗೆ ಉತ್ತಮವಾದ ಧರ್ಮವೂ ಉತ್ತಮವಾದ ಬೇರಾವ ಮುಕ್ತಿಮಾರ್ಗವೂ ಇರುವುದಿಲ್ಲ.

೧೬. ಶಿವಪುರಾಣವನ್ನು ಕೇಳುವುದಕ್ಕಿಂತ ಉತ್ತಮವಾದ ಮಂತ್ರಪಠನವಿರುವುದಿಲ್ಲ. ಇದರಿಂದಲೇ ನರರಿಗೆ ಕಲ್ಪವೃಕ್ಷದಿಂದಾಗುವ ಮಹಾಫಲವೂ ದೊರೆಯುವುದು.

೧೭–೧೯. ಕಲಿಯುಗದಲ್ಲಿ ಮನುಷ್ಯರು ಅಲ್ಪಾಯುಸ್ಸುಳ್ಳವರೂ, ಅಶಕ್ತರೂ, ಆಯಾಸದಿಂದ ಪೀಡಿತರೂ, ದುಷ್ಟಬುದ್ಧಿಯುಳ್ಳವರೂ, ದುಃಖಿಗಳೂ, ಧರ್ಮ ಮತ್ತು ಆಚಾರಗಳಿಲ್ಲದವರೂ ಆಗುವರೆಂದು ನಿಶ್ಚಯಿಸಿ ಪೂಜ್ಯರಾದ ವೇದವ್ಯಾಸರು ದಯೆಯಿಂದ ಆ ಜನರ ಹಿತಕ್ಕಾಗಿಯೆ ಪುರಾಣವೆಂಬ ಅಮೃತರಸವನ್ನು ಏರ್ಪಡಿಸಿದರು. ಈ ಅಮೃತವನ್ನು ಪಾನಮಾಡುತ್ತ ಮನುಷ್ಯನು ಮುಪ್ಪು ಸಾವುಗಳಿಲ್ಲದವನಾಗುವನು. ಶಿವಕಥಾಮೃತವು ಕೇಳಿದವನ ವಂಶವನ್ನೇ ಮುಪ್ಪು ಸಾವುಗಳಿಂದ ದೂರಮಾಡುವುದು.

೨೦. ಪುರಾಣವನ್ನರಿತವನು ಬಾಲಕನಾಗಲಿ, ಯುವಕನಾಗಲಿ, ಬಡವನಾಗಲಿ, ಮುದುಕನಾಗಲಿ, ಅಶಕ್ತನಾಗಲಿ ಅವನು ಪುಣ್ಯವನ್ನಪೇಕ್ಷಿಸುವವರಿಗೆ ವಂದ್ಯನೂ, ಪೂಜ್ಯನೂ ಆಗುವನು.

CC-0. Jangamwadi Math Collection. Digitized by eGangotri

ನೀಚಬುದ್ಧಿಂ ನ ಕುರ್ವೀತ ಪುರಾಣಜ್ಞೇ ಕದಾಚನ ।
ಯಸ್ಯ ವಕ್ತ್ರಾಂಬುಜಾದ್ವಾಣೀ ಕಾಮಧೇನುಃ ಶರೀರಿಣಾಂ ॥ ೨೧ ॥
ಗುರವಃ ಸಂತಿ ಲೋಕೇಷು ಜನ್ಮತೋ ಗುಣತಸ್ತಥಾ ।
ತೇಷಾಮಪಿ ಚ ಸರ್ವೇಷಾಂ ಪುರಾಣಜ್ಞಃ ಪರೋ ಗುರುಃ ॥ ೨೨ ॥
ಭವಕೋಟಿಸಹಸ್ರೇಷು ಭೂತ್ವಾ ಭೂತ್ವಾವಸೀದತಿ ।
ಯೋ ದದಾತ್ಯಪುನರ್ವೃತ್ತಿಂ ಕೋಽನ್ಯಸ್ತಸ್ಮಾತ್ಪರೋ ಗುರುಃ ॥ ೨೩ ॥
ಪುರಾಣಜ್ಞಃ ಶುಚಿರ್ದಾಂತಃ ಶಾಂತೋ ವಿಜಿತಮತ್ಸರಃ ।
ಸಾಧುಃ ಕಾರುಣ್ಯವಾನ್ವಾಗ್ಮೀ ವದೇತ್ಪುಣ್ಯಕಥಾಂ ಸುಧೀಃ ॥ ೨೪ ॥
ವ್ಯಾಸಾಸನಂ ಸಮಾರೂಢೋ ಯದಾ ಪೌರಾಣಿಕೋ ದ್ವಿಜಃ ।
ಅಸಮಾಪ್ತಪ್ರಸಂಗಶ್ಚ ನಮಸ್ಕುರ್ಯಾನ್ನ ಕಸ್ಯಚಿತ್ ॥ ೨೫ ॥
ಯೇ ಧೂರ್ತಾ ಯೇಚ ದುರ್ವೃತ್ತಾ ಯೇ ಚಾನ್ಯೇ ವಿಜಿಗೀಷವಃ ।
ತೇಷಾಂ ಕುಟಿಲವೃತ್ತೀನಾಮಗ್ರೇ ನೈವ ವದೇತ್ಕಥಾಂ ॥ ೨೬ ॥
ನ ದುರ್ಜನಸಮಾಕೀರ್ಣೇ ನ ಶೂದ್ರಶ್ವಾಪದಾವೃತೇ ।
ದೇಶೇ ನ ದ್ಯೂತಸದನೇ ವದೇತ್ಪುಣ್ಯಕಥಾಂ ಸುಧೀಃ ॥ ೨೭ ॥

---

೨೧. ಮನುಷ್ಯನು ಕಾಮಧೇನುವನ್ನು ಹೋಲಿ ಮಾತನಾಡುವ ಪೌರಾಣಿಕನನ್ನು ಯಾವಾಗಲೂ ಅಲ್ಪನೆಂದು ಭಾವಿಸಬಾರದು.

೨೨. ಲೋಕಗಳಲ್ಲಿ ಜನ್ಮದಿಂದಲೂ ಗುಣದಿಂದಲೂ ಗುರುಗಳಿದ್ದಾರೆ. ಪುರಾಣವನ್ನರಿತವನು ಅವರಲ್ಲೆಲ್ಲ ಉತ್ತಮನಾದ ಗುರುವು.

೨೩. ಅನೇಕ ಕೋಟಿ ಜನ್ಮಗಳನ್ನೆತ್ತಿ ದುಃಖಗೊಳ್ಳುತ್ತಿರುವ ಮನುಷ್ಯನಿಗೆ ಪುನರಾವೃತ್ತಿಯಿಲ್ಲದ ಮೋಕ್ಷವನ್ನೀಯುವ ಗುರುವಿಗಿಂತ ಉತ್ತಮನಾದವನಾರು ?

೨೪. ಪುರಾಣವನ್ನರಿತವನೂ, ಶುದ್ಧನೂ, ಜಿತೇಂದ್ರಿಯನೂ, ಶಾಂತನೂ, ಮಾತ್ಸರ್ಯವಿಲ್ಲದವನೂ, ಸಜ್ಜನನೂ, ದಯೆಯುಳ್ಳವನೂ, ವಾಚಾಲನೂ ಆಗಿ ಪುಣ್ಯ ಕಥೆಯನ್ನು ಹೇಳಬೇಕು.

೨೫. ವ್ಯಾಸಾಸನದಲ್ಲಿ ಕುಳಿತು ಪುರಾಣವನ್ನು ಹೇಳುವ ಬ್ರಾಹ್ಮಣನು ಪ್ರಕರಣವನ್ನು ಮುಗಿಸದೆ ಯಾರಿಗೂ ನಮಸ್ಕಾರಮಾಡಬಾರದು.

೨೬. ಮೂರ್ಖರೂ, ದುರ್ನಡತೆಯುಳ್ಳವರೂ, ಜಯಿಸಲಿಚ್ಛೆಯುಳ್ಳವರೂ ಆದ ಕಪಟಿಗಳ ಮುಂದೆ ಶಿವಕಥೆಯನ್ನು ಹೇಳಕೂಡದು.

೨೭. ಪಂಡಿತನು ದುರ್ಜನರುಳ್ಳುದೂ, ಶೂದ್ರರೂ, ಘಾತುಕಮೃಗಗಳುಳ್ಳುದೂ ಆದ ಸ್ಥಳದಲ್ಲಿಯೂ, ಜೂಜಿನ ಮನೆಯಲ್ಲಿಯೂ ಪುಣ್ಯಕಥೆಯನ್ನು ಹೇಳಬಾರದು.

CC-0. Jangamwadi Math Collection. Digitized by eGangotri

ಸದ್ಗ್ರಾಮೇ ಸುಜನಾಕೀರ್ಣೇ ಸುಕ್ಷೇತ್ರೇ ದೇವತಾಲಯೇ ।
ಪುಣ್ಯೇ ನದನದೀತೀರೇ ವದೇತ್ಪುಣ್ಯಕಥಾಂ ಸುಧೀಃ ॥ ೨೮ ॥
ಶಿವಭಕ್ತಿಸಮಾಯುಕ್ತಾ ನಾಽನ್ಯಕಾರ್ಯೇಷು ಲಾಲಸಾಃ ।
ವಾಗ್ಯತಾಃ ಸುಪ್ರವೋಽವ್ಯಗ್ರಾಃ ಶ್ರೋತಾರಃ ಪುಣ್ಯಭಾಗಿನಃ ॥ ೨೯ ॥
ಅಭಕ್ತಾ ಯೇ ಕಥಾಂ ಪುಣ್ಯಾಂ ಶೃಣ್ವಂತಿ ಮನುಜಾಽಧಮಾಃ ।
ತೇಷಾಂ ಪುಣ್ಯಫಲಂ ನಾಸ್ತಿ ದುಃಖಂ ಸ್ಯಾಜ್ಜನ್ಮಜನ್ಮನಿ ॥ ೩೦ ॥
ಪುರಾಣಂ ಯೇ ತ್ವಸಂಪೂಜ್ಯ ತಾಂಬೂಲಾದ್ಯೈರುಪಾಯನೈಃ ।
ಶೃಣ್ವಂತಿ ಚ ಕಥಾಂ ಭಕ್ತ್ಯಾ ದರಿದ್ರಾಃಸ್ಯುರ್ನ ಪಾಪಿನಃ ॥ ೩೧ ॥
ಕಥಾಯಾಂ ಕೀರ್ತ್ಯಮಾನಾಯಾಂ ಯೇ ಗಚ್ಛಂತ್ಯನ್ಯತೋ ನರಾಃ ।
ಭೋಗಾಂತರೇ ಪ್ರಣಶ್ಯಂತಿ ತೇಷಾಂ ದಾರಾಶ್ಚ ಸಂಪದಃ ॥ ೩೨ ॥
ಸೋಷ್ಣೀಷಮಸ್ತಕಾ ಯೇ ಚ ಕಥಾಂ ಶೃಣ್ವಂತಿ ಪಾವನೀಂ ।
ತೇ ಬಲಾಕಾಃ ಪ್ರಜಾಯಂತೇ ಪಾಪಿನೋ ಮನುಜಾಧಮಾಃ ॥ ೩೩ ॥
ತಾಂಬೂಲಂ ಭಕ್ಷಯಂತೋ ಯೇ ಕಥಾಂ ಶೃಣ್ವಂತಿ ಪಾವನೀಂ ।
ಸ್ವವಿಷ್ಠಾಂ ಖಾದಯಂತ್ಯೇತಾನ್ನರಕೇ ಯಮಕಿಂಕರಾಃ ॥ ೩೪ ॥

---

೨೮. ಒಳ್ಳೆಯ ಗ್ರಾಮದಲ್ಲಿಯೂ, ಸಜ್ಜನರಿರುವ ಸ್ಥಳದಲ್ಲಿಯೂ, ಒಳ್ಳೆಯ ಕ್ಷೇತ್ರದಲ್ಲಿಯೂ, ದೇವಾಲಯದಲ್ಲಿಯೂ, ಪವಿತ್ರವಾದ ನದ, ನದಿಗಳ ದಡದಲ್ಲಿಯೂ ಪುಣ್ಯಕಥೆಯನ್ನು ಹೇಳಬೇಕು.

೨೯. ಶಿವನಲ್ಲಿ ಭಕ್ತಿಯುಳ್ಳವರೂ, ಬೇರೆ ಕೆಲಸಗಳಲ್ಲಿ ಆಸಕ್ತರಾಗದವರೂ ಮೌನವುಳ್ಳವರೂ, ಕಿವಿಕೇಳುವವರೂ ಆಗಿ ಪುರಾಣವನ್ನು ಶ್ರವಣಮಾಡುವವರು ಪುಣ್ಯವನ್ನು ಹೊಂದುವರು.

೩೦. ಭಕ್ತಿಯಿಲ್ಲದೆ ಪುಣ್ಯಕಥೆಯನ್ನು ಕೇಳುವ ನೀಚಮಾನವರು ಪುಣ್ಯವನ್ನು ಪಡೆಯವೆ ಪ್ರತಿ ಜನ್ಮದಲ್ಲಿಯೂ ದುಃಖಿಗಳಾಗುವರು.

೩೧. ಪುರಾಣವನ್ನು ತಾಂಬೂಲಾದಿ ಕಾಣಿಕೆಗಳಿಂದ ಪೂಜಿಸದೆ ಭಕ್ತಿಯಿಂದ ಕೇಳುವವರು ಬಡವರಾಗುವರು; ಪಾಪಿಗಳಾಗುವುದಿಲ್ಲ.

೩೨. ಕಥೆಯನ್ನು ಹೇಳುತ್ತಿರುವಾಗಲೆ ಮಧ್ಯದಲ್ಲಿ ಇನ್ನೊಂದು ಕಾರ್ಯಕ್ಕಾಗಿ ತೆರಳುವ ಜನರ ಹೆಂಡತಿ ಮತ್ತು ಸಂಪತ್ತುಗಳು ಹಾಳಾಗುವುವು.

೩೩. ತಲೆಗೆ ರುಮಾಲನ್ನು ಸುತ್ತಿಕೊಂಡು ಪುಣ್ಯಕಥೆಯನ್ನು ಕೇಳುವ ಪಾಪಿಗಳಾದ ನೀಚಮಾನವರು ಕೊಕ್ಕರೆಗಳಾಗಿ ಹುಟ್ಟುವರು.

೩೪. ತಾಂಬೂಲವನ್ನು ಅಗೆಯುತ್ತ ಪುಣ್ಯಕಥೆಯನ್ನು ಕೇಳುವ ಮನುಷ್ಯರಿಗೆ ಯಮಭೃತ್ಯರು ನರಕದಲ್ಲಿ ಅವರ ಮಲವನ್ನೇ ತಿನ್ನಿಸುತ್ತಾರೆ.

CC-0. Jangamwadi Math Collection. Digitized by eGangotri

ಯೇ ಚ ತುಂಗಾಸನಾರೂಢಾಃ ಕಥಾಂ ಶೃಣ್ವಂತಿ ದಾಂಭಿಕಾಃ ।
ಅಕ್ಷಯಾನ್ನರಕಾನ್ಭುಕ್ತ್ವಾ ತೇ ಭವಂತ್ಯೇವ ವಾಯಸಾಃ ॥ ೩೫ ॥
ಯೇ ಚ ವೀರಾಸನಾರೂಢಾ ಯೇ ಚ ಮಂಚಕಸಂಸ್ಥಿತಾಃ ।
ಶೃಣ್ವಂತಿ ಸತ್ಕಥಾಂ ತೇವೈ ಭವಂತ್ಯನೃಜುಪಾದಪಾಃ ॥ ೩೬ ॥
ಅಸಂಪ್ರಣಮ್ಯ ಶೃಣ್ವಂತೋ ವಿಷವೃಕ್ಷಾ ಭವಂತಿ ತೇ ।
ಕಥಾಂ ಶಯಾನಾಃ ಶೃಣ್ವಂತೋ ಭವಂತ್ಯಜಗರಾ ನರಾಃ ॥ ೩೭ ॥
ಯಃ ಶೃಣೋತಿ ಕಥಾಂ ವಕ್ತುಃ ಸಮಾನಾಸನಮಾಶ್ರಿತಃ ।
ಗುರುತಲ್ಪಸಮಂ ಪಾಪಂ ಸಂಪ್ರಾಪ್ಯ ನರಕಂ ವ್ರಜೇತ್ ॥ ೩೮ ॥
ಯೇ ನಿಂದಂತಿ ಪುರಾಣಜ್ಞಂ ಕಥಾಂ ವಾ ಪಾಪಹಾರಿಣೀಂ ।
ತೇ ವೈ ಜನ್ಮಶತಂ ಮರ್ತ್ಯಾಃ ಶುನಕಾಃ ಸಂಭವಂತಿ ಚ ॥ ೩೯ ॥
ಕಥಾಯಾಂ ವರ್ತಮಾನಾಯಾಂ ಯೇ ವದಂತಿ ನರಾಧಮಾಃ ।
ತೇ ಗರ್ದಭಾಃ ಪ್ರಜಾಯಂತೇ ಕೃಕಲಾಸಾಸ್ತತಃ ಪರಂ ॥ ೪೦ ॥
ಕದಾಚಿದಪಿ ಯೇ ಪುಣ್ಯಾಂ ನ ಶೃಣ್ವಂತಿ ಕಥಾಂ ನರಾಃ ।
ತೇ ಭುಕ್ತ್ವಾ ನರಕಾನ್ಘೋರಾನ್ಭವಂತಿ ವನಸೂಕರಾಃ ॥ ೪೧ ॥
ಯೇ ಕಥಾಮನುಮೋದಂತೇ ಕೀರ್ತ್ಯಮಾನಾಂ ನರೋತ್ತಮಾಃ ।
ಅಶೃಣ್ವಂತೋಽಪಿ ತೇ ಯಾಂತಿ ಶಾಶ್ವತಂ ಪರಮಂ ಪದಂ ॥ ೪೨ ॥

---

೩೫. ಉನ್ನತಾಸನದಲ್ಲಿ ಕುಳಿತು ಅಹಂಕಾರದಿಂದ ಕಥೆಯನ್ನು ಕೇಳುವವರು ಶಾಶ್ವತವಾದ ನರಕದಲ್ಲಿ ವಾಸಿಸಿ ಕಾಗೆಗಳಾಗುತ್ತಾರೆ.

೩೬. ವೀರಾಸನದಲ್ಲಿಯೂ, ಮಂಚದಲ್ಲಿಯೂ ಕುಳಿತು ಕಥೆಯನ್ನು ಕೇಳುವವರು ವಕ್ರವೃಕ್ಷಗಳಾಗುವರು.

೩೭. ನಮಸ್ಕಾರಮಾಡದೆ ಕೇಳುವವರು ವಿಷವೃಕ್ಷಗಳಾಗುವರು. ಮಲಗಿಕೊಂಡು ಕೇಳುವವರು ದಾಸರಹಾವುಗಳಾಗುವರು.

೩೮–೩೯. ಪೌರಾಣಿಕನ ಆಸನಕ್ಕೆ ಸಮಾನವಾದ ಆಸನದಲ್ಲಿ ಕುಳಿತು ಕೇಳುವವನು ಗುರುಪತ್ನೀಗಮನಕ್ಕೆ ಸಮಾನವಾದ ಪಾಪವನ್ನು ಹೊಂದಿ ನರಕಕ್ಕೆ ಹೋಗುವನು. ಪುರಾಣ ಹೇಳುವವನನ್ನೂ, ಪುಣ್ಯಕಥೆಯನ್ನೂ ನಿಂದಿಸುವವರು ನೂರು ಜನ್ಮಗಳಲ್ಲಿ ನಾಯಿಯಾಗುವರು.

೪೦. ಕಥೆಯು ನಡೆಯುತ್ತಿರುವಾಗ ಮಧ್ಯದಲ್ಲಿ ಮಾತನಾಡುವ ನೀಚರು ಮೊದಲು ಕತ್ತೆಯಾಗಿ ಬಳಿಕ ಓತೀಕೇತಗಳಾಗಿ ಹುಟ್ಟುವರು.

೪೧. ಒಂದು ಸಲವಾದರೂ ಪುಣ್ಯಕಥೆಯನ್ನು ಕೇಳದಿರುವ ಪಾಪಿಗಳು ಘೋರನರಕವನ್ನನುಭವಿಸಿ ಕಾಡುಹಂದಿಗಳಾಗಿ ಜನಿಸುವರು.

೪೨. ಕಥೆಯನ್ನು ಹೇಳುತ್ತಿರುವಾಗ ಕೇಳದಿದ್ದರೂ ಅದನ್ನು ಅನುಮೋದಿಸುವ ಮಾನವೋತ್ತಮರು ಉತ್ತಮಸ್ಥಾನವನ್ನು ಪಡೆಯುವರು.

CC-0. Jangamwadi Math Collection. Digitized by eGangotri

ಕಥಾಯಾಂ ಕೀರ್ತ್ಯಮಾನಾಯಾಂ ವಿಘ್ನಂ ಕುರ್ವಂತಿ ಯೇ ಶಠಾಃ ।
ಕೋಟ್ಯಬ್ದಾನ್ನರಕಾನ್ಭುಕ್ತ್ವಾ ಭವಂತಿ ಗ್ರಾಮಸೂಕರಾಃ ॥ ೪೩ ॥
ಯೇ ಶ್ರಾವಯಂತಿ ಮನುಜಾಃ ಪುಣ್ಯಾಂ ಪೌರಾಣಿಕೀಂ ಕಥಾಂ ।
ಕಲ್ಪಕೋಟಿಶತಂ ಸಾಗ್ರಂ ತಿಷ್ಠಂತಿ ಬ್ರಹ್ಮಣಃ ಪದಂ ॥ ೪೪ ॥
ಆಸನಾರ್ಥಂ ಪ್ರಯಚ್ಛಂತಿ ಪುರಾಣಸ್ಯ ಯೇ ನರಾಃ ।
ಕಂಬಲಾಽಜಿನವಾಸಾಂಸಿ ಮಂಚಂ ಫಲಕಮೇವ ಚ ॥ ೪೫ ॥
ಸ್ವರ್ಗಲೋಕಂ ಸಮಾಸಾದ್ಯ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।
ಸ್ಥಿತ್ವಾ ಬ್ರಹ್ಮಾದಿಲೋಕೇಷು ಪದಂ ಯಾಂತಿ ನಿರಾಮಯಂ ॥ ೪೬ ॥
ಪುರಾಣಜ್ಞಸ್ಯ ಯಚ್ಛಂತಿ ಯೇ ಸೂತ್ರವಸನಂ ನವಂ ।
ಭೋಗಿನೋ ಜ್ಞಾನಸಂಪನ್ನಾಸ್ತೇ ಭವಂತಿ ಭವೇ ಭವೇ ॥ ೪೭ ॥
ಯೇ ಮಹಾಪಾತಕೈರ್ಯುಕ್ತಾ ಉಪಪಾತಕಿನಶ್ಚ ಯೇ ।
ಪುರಾಣಶ್ರವಣಾದೇವ ತೇ ಯಾಂತಿ ಪರಮಂ ಪದಂ ॥ ೪೮ ॥
ಅತ್ರ ವಕ್ಷ್ಯೇ ಮಹಾಪುಣ್ಯಮಿತಿಹಾಸಂ ದ್ವಿಜೋತ್ತಮಾಃ ।
ಶೃಣ್ವತಾಂ ಸರ್ವಪಾಪಘ್ನಂ ವಿಚಿತ್ರಂ ಸುಮನೋಹರಂ ॥ ೪೯ ॥

---

೪೩. ಕಥೆಯನ್ನು ಹೇಳುತ್ತಿರುವಾಗ ಅಡ್ಡಿಯುಂಟುಮಾಡುವ ಮೂರ್ಖರು ಕೋಟಿವರ್ಷಗಳಕಾಲ ನರಕವನ್ನನುಭವಿಸಿ ಗ್ರಾಮದ ಹಂದಿಗಳಾಗಿ ಹುಟ್ಟುತ್ತಾರೆ.

೪೪. ಪವಿತ್ರವಾದ ಶಿವಕಥೆಯನ್ನು ಹೇಳುವ ಪೌರಾಣಿಕರು ನೂರುಕೋಟಿ ಕಲ್ಪಕಾಲ ಬ್ರಹ್ಮನ ಸ್ಥಾನದಲ್ಲಿರುವರು.

೪೫–೪೬. ಪೌರಾಣಿಕನಿಗೆ ಆಸನಕ್ಕಾಗಿ ಕಂಬಳಿ, ಕೃಷ್ಣಾಜಿನ, ಬಟ್ಟೆ, ಮಂಚ, ಮಣೆ ಇವುಗಳನ್ನು ದಾನಮಾಡಿದವರು ಸ್ವರ್ಗಲೋಕವನ್ನು ಹೊಂದಿ ಇಷ್ಟಭೋಗಗಳನ್ನನುಭವಿಸಿ, ಬ್ರಹ್ಮಾದಿಲೋಕಗಳಲ್ಲಿ ವಾಸಿಸಿ ಮೋಕ್ಷವನ್ನು ಪಡೆಯುವರು.

೪೭. ಪುರಾಣವನ್ನರಿತವನಿಗೆ ಹೊಸ ನೂಲಿನ ಬಟ್ಟೆಯನ್ನು ಕೊಟ್ಟವರು ಪ್ರತಿಜನ್ಮದಲ್ಲಿಯೂ ಭೋಗಿಗಳೂ, ಜ್ಞಾನಿಗಳೂ ಆಗುವರು.

೪೮. ಮಹಾಪಾತಕ, ಉಪಪಾತಕಗಳುಳ್ಳವರು ಪುರಾಣವನ್ನು ಕೇಳುವುದರಿಂದಲೇ ಉತ್ತಮಸ್ಥಾನವನ್ನು ಹೊಂದುವರು.

೪೯. ಅಯ್ಯಾ ಬ್ರಾಹ್ಮಣವರ್ಯರೆ! ಈ ವಿಷಯದಲ್ಲಿ ಅತಿ ಪುಣ್ಯಕರವೂ, ಕೇಳುವವರ ಸಕಲ ಪಾಪಗಳನ್ನು ನೀಗಿಸುವುದೂ, ಆಶ್ಚರ್ಯಕರವೂ, ರಮ್ಯವೂ ಆದ ಒಂದು ಕಥೆಯನ್ನು ಹೇಳುವೆನು.

CC-0. Jangamwadi Math Collection. Digitized by eGangotri

ದಕ್ಷಿಣಾಪಥಮಧ್ಯೇ ವೈ ಗ್ರಾಮೋ ಬಾಷ್ಕಲಸಂಜ್ಞಿತಃ ।
ತತ್ರ ಸಂತಿ ಜನಾಃ ಸರ್ವೇ ಮೂಢಾಃ ಕರ್ಮವಿವರ್ಜಿತಾಃ ॥ ೫೦ ॥
ನ ತತ್ರ ಬ್ರಾಹ್ಮಣಾಚಾರಾಃ ಶ್ರುತಿಸ್ಮೃತಿಪರಾಙ್ಮುಖಾಃ ।
ಜಪಸ್ವಾಧ್ಯಾಯರಹಿತಾಃ ಪರಸ್ತ್ರೀವಿಷಯಾತುರಾಃ ॥ ೫೧ ॥
ಕೃಷೀವಲಾಃ ಶಸ್ತ್ರಧರಾ ನಿರ್ದೇವಾ ಜಿಹ್ಮವೃತ್ತಯಃ ।
ನ ಜಾನಂತಿ ಪರಂ ಧರ್ಮಂ ಜ್ಞಾನವೈರಾಗ್ಯಲಕ್ಷಣಂ ॥ ೫೨ ॥
ಸ್ತ್ರಿಯಶ್ಚ ಪಾಪನಿರತಾಃ ಸ್ವೈರಿಣ್ಯಃ ಕಾಮಲಾಲಸಾಃ ।
ದುರ್ಬುದ್ಧಯಃ ಕುಟಿಲಗಾಃ ಸದ್ವ್ರತಾಚಾರವರ್ಜಿತಾಃ ॥ ೫೩ ॥
ತತ್ರೈಕೋ ವಿದುರೋ ನಾಮ ದುರಾತ್ಮಾ ಬ್ರಾಹ್ಮಣಾಧಮಃ ।
ಆಸೀದ್ವೇಶ್ಯಾಪತಿರ್ಯೋಽಸೌ ಸದಾರೋಽಪಿ ಕುಮಾರ್ಗಗಃ ॥ ೫೪ ॥
ಸ್ವಪತ್ನೀಂ ಬಂದುಲಾಂ ನಾಮ ಹಿತ್ವಾ ಪ್ರತಿನಿಶಂ ತಥಾ ।
ವೇಶ್ಯಾ ಭವನಮಾಸಾದ್ಯ ರಮತೇ ಸ್ಮರಪೀಡಿತಃ ॥ ೫೫ ॥
ಸಾಽಪಿ ತಸ್ಯಾಂಗನಾ ರಾತ್ರೌ ವಿಯುಕ್ತಾ ನವಯೌವನಾ ।
ಅಸಹಂತೀ ಸ್ಮರಾವೇಶಂ ರೇಮೇ ಜಾರೇಣ ಸಂಗತಾ ॥ ೫೬ ॥

---

೫೦. ದಕ್ಷಿಣಾಪಥದಲ್ಲಿ ಬಾಷ್ಕಲವೆಂಬ ಗ್ರಾಮವಿದ್ದಿತು. ಅಲ್ಲಿ ಎಲ್ಲ ಜನರೂ ಮೂಢರೂ, ಕರ್ಮಭ್ರಷ್ಟರೂ ಆಗಿದ್ದರು.

೫೧–೫೨. ಬ್ರಾಹ್ಮಣಾಚಾರವಿಲ್ಲದವರೂ, ಶ್ರುತಿಸ್ಮೃತಿಯನ್ನರಿಯದವರೂ, ಜಪ ವೇದಾಧ್ಯಯನಮಾಡದವರೂ, ಪರಸ್ತ್ರೀಸಂಗನಿರತರೂ, ರೈತರೂ, ಆಯುಧ ವನ್ನು ಧರಿಸಿದವರೂ, ದೇವರನ್ನು ಪೂಜಿಸದವರೂ, ಕುಟಿಲವಾದ ನಡತೆಯುಳ್ಳ ವರೂ ಆದ ಆ ಬ್ರಾಹ್ಮಣರು ಜ್ಞಾನ, ವೈರಾಗ್ಯರೂಪವಾದ ಉತ್ತಮಧರ್ಮದಲ್ಲಿ ಮೂಢರಾಗಿದ್ದರು.

೫೩. ಹೆಂಗಸರೂ ಪಾಪಿಷ್ಠರೂ, ವ್ಯಭಿಚಾರಿಣಿಯರೂ, ಕಾಮಾಸಕ್ತರೂ, ದುಷ್ಟಬುದ್ಧಿಯುಳ್ಳವರೂ, ವಕ್ರವಾದ ನಡತೆಯುಳ್ಳವರೂ, ಒಳ್ಳೆಯ ವ್ರತಾ ಚಾರವಿಲ್ಲದವರೂ ಆಗಿದ್ದರು.

೫೪. ಅಲ್ಲಿ ದುಷ್ಟನೂ, ಹೆಂಡತಿಯಿದ್ದರೂ ವೇಶ್ಯಾಪತಿಯೂ, ದುರ್ಮಾರ್ಗ ಗಾಮಿಯೂ ಆದ ವಿದುರನೆಂಬ ನೀಚನಾದ ಬ್ರಾಹ್ಮಣನಿದ್ದನು.

೫೫. ಅವನು ತನ್ನ ಪತ್ನಿಯಾದ ಬಂದುಲೆಯನ್ನು ಬಿಟ್ಟು ಪ್ರತಿ ರಾತ್ರಿಯೂ ಕಾಮಪೀಡಿತನಾಗಿ ವೇಶ್ಯೆಯ ಮನೆಗೆ ಹೋಗಿ ವಿನೋದಪಡು ತ್ತಿದ್ದನು.

೫೬. ಯುವತಿಯಾದ ಅವನ ಹೆಂಡತಿಯು ರಾತ್ರಿಯಲ್ಲಿ ಪತಿಯಿಲ್ಲದಿರು ವುದರಿಂದ ಕಾಮಪೀಡೆಯನ್ನು ಸಹಿಸದೆ ಜಾರನೊಡನೆ ರಮಿಸುತ್ತಿದ್ದಳು.

CC-0. Jangamwadi Math Collection. Digitized by eGangotri

ತಾಂ ಕದಾಚಿದ್ದುರಾಚಾರಾಂ ಜಾರೇಣ ಸಹ ಸಂಗತಾಂ ।
ದೃಷ್ಟ್ವಾ ತಸ್ಯಾಃ ಪತಿಃ ಕ್ರೋಧಾದಭಿದುದ್ರಾವ ಸತ್ವರಃ ॥ ೫೭ ॥
ಜಾರೇ ಪಲಾಯಿತೇ ಪತ್ನೀಂ ಗೃಹೀತ್ವಾ ಸದುರಾಶಯಃ ।
ಸಂತಾಡ್ಯ ಮುಷ್ಟಿಬಂಧೇನ ಮುಹುರ್ಮುಹುರತಾಡಯತ್ ॥ ೫೮ ॥
ಸಾ ನಾರೀ ಪೀಡಿತಾ ಭರ್ತ್ರಾ ಕುಪಿತಾ ಪ್ರಾಹ ನಿರ್ಭಯಾ ।
ಭವಾನ್ಪ್ರತಿನಿಶಂ ವೇಶ್ಯಾಂ ರಮತೇ ಕಾ ಗತಿರ್ಮನು ॥ ೫೯ ॥
ಅಹಂ ರೂಪವತೀ ಯೋಷಾ ನವಯೌವನಶಾಲಿನೀ ।
ಕಥಂ ಸಹಿಷ್ಯೇ ಕಾಮಾರ್ತಾ ತವ ಸಂಗತಿವರ್ಜಿತಾ ॥ ೬೦ ॥
ಇತ್ಯುಕ್ತಃ ಸ ತಯಾ ತನ್ವ್ಯಾ ಪ್ರೋವಾಚ ಬ್ರಾಹ್ಮಣಾಧಮಃ ।
ಯುಕ್ತಮೇವ ತ್ವಯೋಕ್ತಂ ಹಿ ತಸ್ಮಾದ್ವಕ್ಷ್ಯಾಮಿ ತೇ ಹಿತಂ ॥ ೬೧ ॥
ಜಾರೇಭ್ಯೋ ಧನಮಾಕೃಷ್ಯ ತೇಭ್ಯೋ ದೇಹಿ ಪರಾಂ ರತಿಂ ।
ತದ್ಧನಂ ದೇಹಿ ಮೇ ಸರ್ವಂ ಪಣ್ಯಸ್ತ್ರೀಣಾಂ ದದಾಮಿ ತತ್ ॥ ೬೨ ॥
ಏವಂ ಸಂಪೂರ್ಯತೇ ಕಾಮೋ ಮಮಾಪಿ ಚ ವರಾನನೇ ।
ತಥೇತಿ ಭರ್ತೃವಚನಂ ಪ್ರತಿಜಗ್ರಾಹ ಸಾ ವಧೂಃ ॥ ೬೩ ॥

---

೫೭. ಒಂದಾನೊಂದು ದಿನ ಜಾರನೊಡನೆ ಇರುವ ಅವಳನ್ನು ಪತಿಯು ಕಂಡು ಕೋಪದಿಂದ ಬೇಗನೆ ಅಟ್ಟಿಸಿಕೊಂಡು ಬಂದನು.

೫೮. ಜಾರನು ಓಡಿಹೋಗಲು ದುಷ್ಟನಾದ ವಿದುರನು ಹೆಂಡತಿಯನ್ನು ಹಿಡಿದುಕೊಂಡು ಮುಷ್ಟಿಯಿಂದ ಗುದ್ದಿ ಬಹುವಾಗಿ ಹೊಡೆದನು.

೫೯. ಅವಳು ಗಂಡನು ಹೊಡೆಯಲು ಅತ್ಯಂತ ಕೋಪಗೊಂಡು ನಿರ್ಭಯಳಾಗಿ "ನೀನು ಪ್ರತಿ ರಾತ್ರಿಯೂ ಸೂಳೆಯೊಡನೆ ರಮಿಸುತ್ತಿದ್ದರೆ ನನ್ನ ಗತಿ ಯೇನು?

೬೦. ಸುಂದರಿಯೂ, ಯುವತಿಯೂ ಆದ ನಾನು ನಿನ್ನ ಸಂಗವಿಲ್ಲದೆ ಕಾಮವನ್ನು ಹೇಗೆ ಸಹಿಸಲಿ?" ಎಂದಳು.

೬೧. ಕೃಶಾಂಗಿಯಾದ ಪತ್ನಿಯು ಹೀಗೆ ಹೇಳಲು ಆ ನೀಚಬ್ರಾಹ್ಮಣನು ಅವಳನ್ನು ಕುರಿತು, "ನೀನು ಹೇಳಿರುವುದು ಸರಿ. ಆದುದರಿಂದ ನಿನಗೆ ಹಿತವಾದುದನ್ನು ಹೇಳುವೆನು.

೬೨. ನೀನು ಜಾರರಿಗೆ ರತಿಸೌಖ್ಯವನ್ನುಂಟುಮಾಡಿ ಅವರಿಂದ ಹಣವನ್ನು ತೆಗೆದುಕೊಂಡು ನನಗೆ ಕೊಡು. ನಾನು ಅದನ್ನು ವೇಶ್ಯೆಯರಿಗೆ ಕೊಡುವೆನು.

೬೩. ಸುಂದರಿ! ಹೀಗೆ ಮಾಡಿದರೆ ನಾನೂ ಕಾಮತೃಪ್ತನಾಗುವೆನು" ಎಂದನು. ಅವಳು ಹಾಗೆಯೇ ಆಗಲೆಂದು ಪತಿಯ ಮಾತಿಗೆ ಒಪ್ಪಿಕೊಂಡಳು.

CC-0. Jangamwadi Math Collection. Digitized by eGangotri

ಏವಂ ತಯೋಸ್ತು ದಂಪತ್ಯೋರ್ದುರಾಚಾರಪ್ರವೃತ್ತಯೋಃ ।
ಕಾಲೇನ ನಿಧನಂ ಪ್ರಾಪ್ತಃ ಸ ವಿಪ್ರೋ ವೃಷಲೀಪತಿಃ ॥ ೬೪ ॥
ಮೃತೇ ಭರ್ತರಿ ಸಾ ನಾರೀ ಪುತ್ರೈಃ ಸಹ ನಿಜಾಲಯೇ ।
ಉವಾಸ ಸುಚಿರಂ ಕಾಲಂ ಕಿಂಚಿದುತ್ಕ್ರಾಂತಯೌವನಾ ॥ ೬೫ ॥
ಏಕದಾ ದೈವಯೋಗೇನ ಸಂಪ್ರಾಪ್ತೇ ಪುಣ್ಯಪರ್ವಣಿ ।
ಸಾ ನಾರೀ ಬಂಧುಭಿಃ ಸಾರ್ಧಂ ಗೋಕರ್ಣಂ ಕ್ಷೇತ್ರಮಾಯಯೌ ॥೬೬॥
ತತ್ರ ತೀರ್ಥಜಲೇ ಸ್ನಾತ್ವಾ ಕಸ್ಮಿಂಶ್ಚಿದ್ದೇವತಾಲಯೇ ।
ಶುಶ್ರಾವ ದೇವಮುಖ್ಯಾನಾಂ ಪುಣ್ಯಾಂ ಪೌರಾಣಿಕೀಂ ಕಥಾಂ ॥ ೬೭ ॥
ಯೋಷಿತಾಂ ಜಾರಸಕ್ತಾನಾಂ ನರಕೇ ಯಮಕಿಂಕರಾಃ ।
ಸಂತಪ್ತಲೋಹಪರಿಘಂ ಕ್ಷಿಪಂತಿ ಸ್ಮರಮಂದಿರೇ ॥ ೬೮ ॥
ಇತಿ ಪೌರಾಣಿಕೇನೋಕ್ತಾಂ ಸಾ ಶ್ರುತ್ವಾ ಧರ್ಮಸಂಹಿತಾಂ ।
ತಮುವಾಚ ರಹಸ್ಯೇಷಾ ಭೀತಾ ಬ್ರಾಹ್ಮಣಪುಂಗವಂ ॥ ೬೯ ॥
ಬ್ರಹ್ಮನ್ಪಾಪಮಜಾನಂತ್ಯಾ ಮಯಾ ಚರಿತಮುಲ್ಬಣಂ ।
ಯೌವನೇ ಕಾಮಚಾರೇಣ ಕೌಟಿಲ್ಯೇನ ಪ್ರವರ್ತಿತಂ ॥ ೭೦ ॥
ಇದಂ ತದ್ವಚನಂ ಶ್ರುತ್ವಾ ಪುರಾಣಾರ್ಥವಿಜೃಂಭಿತಂ ।
ಭೀತಿರ್ಮೇ ಮಹತೀ ಜಾತಾ ಶರೀರಂ ವೇಪತೇ ಮುಹುಃ ॥ ೭೧ ॥

---

೬೪. ಹೀಗೆ ಆ ದಂಪತಿಗಳು ದುರ್ನಡತೆಯಲ್ಲಿ ತೊಡಗಿರಲು ಕಾಲಕ್ರಮದಿಂದ ಆ ಶೂದ್ರಸ್ತ್ರೀಯ ಪತಿಯಾದ ಬ್ರಾಹ್ಮಣನು ಮೃತನಾದನು.

೬೫. ಗಂಡನು ಮಡಿಯಲು ವಯಸ್ಸಾದ ಆ ಬ್ರಾಹ್ಮಣಸ್ತ್ರೀಯು ತನ್ನ ಮನೆಯಲ್ಲಿ ಮಕ್ಕಳೊಡನೆ ಬಹಳಕಾಲ ವಾಸಿಸಿದಳು.

೬೬. ಒಂದಾನೊಂದು ದಿನ ದೈವವಶದಿಂದ ಪರ್ವಕಾಲವು ಒದಗಲು ಆ ವ್ಯಭಿಚಾರಿಣಿಯು ಬಂಧುಗಳೊಡನೆ ಗೋಕರ್ಣಕ್ಷೇತ್ರಕ್ಕೆ ಬಂದಳು.

೬೭. ಅಲ್ಲಿಯ ತೀರ್ಥಜಲದಲ್ಲಿ ಮಿಂದು ಯಾವುದೊ ಒಂದು ದೇವಾಲಯದಲ್ಲಿ ದೇವಶ್ರೇಷ್ಠರ ಪುಣ್ಯಕರವಾದ ಪುರಾಣಕಥೆಯನ್ನು ಕೇಳಿದಳು.

೬೮. "ಜಾರರ ಸಂಗಮಾಡಿರುವ ಹೆಂಗಸರ ಯೋನಿಯಲ್ಲಿ ಯಮಕಿಂಕರರು ನರಕದಲ್ಲಿ ಕಾಯಿಸಿದ ಕಬ್ಬಿಣದ ಹಾರೆಯನ್ನು ಇಡುತ್ತಾರೆ."

೬೯. ಆ ವ್ಯಭಿಚಾರಿಣಿಯು ಪೌರಾಣಿಕನು ಹೇಳಿದ ಈ ಧರ್ಮದ ಮಾತನ್ನು ಕೇಳಿ ಭಯಗೊಂಡು ಗುಟ್ಟಿನಲ್ಲಿ ಆ ಬ್ರಾಹ್ಮಣೋತ್ತಮನನ್ನು ಕುರಿತು ಇಂತೆಂದಳು.

೭೦. "ಎಲೈ ದ್ವಿಜನೆ! ತಿಳಿಯದೆ ನಾನು ಯೌವನದಲ್ಲಿ ಸ್ವೇಚ್ಛಾಚಾರಿಣಿಯಾಗಿ ಕುಟಿಲ ಮಾರ್ಗವನ್ನವಲಂಬಿಸಿ ಬಹುಪಾಪವನ್ನಾಚರಿಸಿರುವೆನು.

೭೧. ಈಗ ಪುರಾಣದಲ್ಲಿ ಹೇಳಿದ ಈ ನಿನ್ನ ಮಾತನ್ನು ಕೇಳಿ ನನಗೆ ಬಹಳ ಭಯವಾಗಿದೆ. ನನ್ನ ಶರೀರವು ನಡುಗುತ್ತಿದೆ.

CC-0. Jangamwadi Math Collection. Digitized by eGangotri

ಧಿಙ್ಮಾಂ ದುರಿಂದ್ರಿಯಾಸಕ್ತಾಂ ಪಾಪಾಂ ಸ್ಮರವಿಮೋಹಿತಾಂ ।
ಅಲ್ಪಸ್ಯ ಯತ್ಸುಖಸ್ಯಾರ್ಥೇ ಘೋರಾಂ ಯಾಸ್ಯಾಮಿ ದುರ್ಗತಿಂ ॥ ೭೨ ॥
ಕಥಂ ಪಶ್ಯಾಮಿ ಮರಣೇ ಯಮದೂತಾನ್ಭಯಂಕರಾನ್ ।
ಕಥಂ ಪಾಶೈರ್ಬಲಾತ್ಕಂಠೇ ಬಧ್ಯಮಾನಾ ಧೃತಿಂ ಲಭೇ ॥ ೭೩ ॥
ಕಥಂ ಸಹಿಷ್ಯೇ ನರಕೇ ಖಂಡಶೋ ದೇಹಕೃಂತನಂ ।
ಪುನಃ ಕಥಂ ಪತಿಷ್ಯಾಮಿ ಸಂತಪ್ತಾ ಕ್ಷಾರಕರ್ದಮೇ ॥ ೭೪ ॥
ಕಥಂ ಚ ಯೋನಿಲಕ್ಷೇಷು ಕೃಮಿಕೀಟಖಗಾದಿಷು ।
ಪರಿಭ್ರಮಾಮಿ ದುಃಖೌಘಾತ್ಪೀಡ್ಯಮಾನಾ ನಿರಂತರಂ ॥ ೭೫ ॥
ಕಥಂ ಚ ರೋಚತೇ ಮಹ್ಯಮದ್ಯಪ್ರಭೃತಿ ಭೋಜನಂ ।
ರಾತ್ರೌ ಕಥಂ ಚ ಸೇವಿಷ್ಯೇ ನಿದ್ರಾಂ ದುಃಖಪರಿಪ್ಲುತಾ ॥ ೭೬ ॥
ಹಾಹಾ ಹತಾಽಸ್ಮಿ ದಗ್ಧಾಽಸ್ಮಿ ವಿದೀರ್ಣಹೃದಯಾಸ್ಮಿ ಚ ।
ಹಾ ವಿಧೇ ಮಾಂ ಮಹಾಪಾಪೇ ದತ್ವಾ ಬುದ್ಧಿಮಪಾತಯಃ ॥ ೭೭ ॥
ಪತತಸ್ತುಂಗಶೈಲಾಗ್ರಾಚ್ಛೂಲಾಕ್ರಾಂತಸ್ಯ ದೇಹಿನಃ ।
ಯದ್ದುಃಖಂ ಜಾಯತೇ ಘೋರಂ ತಸ್ಮಾತ್ಕೋಟಿಗುಣಂ ಮಮ ॥ ೭೮ ॥

---

೭೨. ದುಷ್ಟೇಂದ್ರಿಯಗಳಿಗೆ ಪರವಶಳಾಗಿ ಕಾಮದಿಂದ ಪಾಪವನ್ನೆಸಗಿದ ನನ್ನನ್ನು ನಿಂದಿಸು. ಈಗ ನಾನು ಅಲ್ಪಸುಖಕ್ಕಾಗಿ ಮಾಡಿದ ಪಾಪದಿಂದ ಘೋರ ಕಷ್ಟವನ್ನು ಅನುಭವಿಸಬೇಕಾಗಿದೆಯಲ್ಲವೆ?

೭೩. ಸತ್ತಕೂಡಲೆ ಭಯಂಕರರಾದ ಯಮದೂತರನ್ನು ಹೇಗೆ ನೋಡುವೆನು? ಅವರು ಹಗ್ಗದಿಂದ ಬಲಾತ್ಕಾರವಾಗಿ ಕುತ್ತಿಗೆಯನ್ನು ಕಟ್ಟುತ್ತಿದ್ದರೆ ನಾನು ಹೇಗೆ ಧೈರ್ಯತಾಳಲಿ.

೭೪. ನರಕದಲ್ಲಿ ತುಂಡುತುಂಡಾಗಿ ದೇಹವನ್ನು ಕತ್ತರಿಸುವುದನ್ನು ಹೇಗೆ ಸಹಿಸಲಿ. ಮರಳಿ ಕಾಯಿಸಲ್ಪಟ್ಟವಳಾಗಿ ಉಪ್ಪಿನ ಕೆಸರಿನಲ್ಲಿ ಹೇಗೆ ಬೀಳುವೆನು?

೭೫. ಕೃಮಿ, ಕೀಟ, ಪಕ್ಷಿ ಮೊದಲಾದ ಅನೇಕ ಯೋನಿಗಳಲ್ಲಿ ದುಃಖದಿಂದ ಪೀಡಿತಳಾಗಿ ಯಾವಾಗಲೂ ಹೇಗೆ ಸಂಚರಿಸುವೆನು.

೭೬. ಇದು ಮೊದಲ್ಗೊಂಡು ನನಗೆ ಊಟವು ಹೇಗೆ ಹಿತವಾಗುವುದು? ದುಃಖಿಸುತ್ತ ರಾತ್ರಿಯಲ್ಲಿ ಹೇಗೆ ನಿದ್ರಿಸುವೆನು?

೭೭. ಅಯ್ಯೋ! ನಾನು ಹಾಳಾದೆನು. ಅಯ್ಯೋ! ಸುಟ್ಟುಹೋದೆನು. ಎದೆಯು ಒಡೆದು ಹೋಯಿತು. ಅಯ್ಯೋ! ದೈವವೆ! ನೀನು ನನಗೆ ಕೆಟ್ಟಬುದ್ಧಿಯನ್ನಿತ್ತು ಘೋರ ಪಾಪದಲ್ಲಿ ತಳ್ಳಿರುವೆ.

೭೮. ಉನ್ನತವಾದ ಬೆಟ್ಟದ ತುದಿಯಿಂದ ಬಿದ್ದ ಶೂಲಕ್ಕೆ ಸಿಕ್ಕಿದ ನರನಿಗೆ ಉಂಟಾಗುವ ದುಃಖಕ್ಕಿಂತಲೂ ಕೋಟಿಯಷ್ಟು ಹೆಚ್ಚು ದುಃಖವು ನನಗಾಗಿದೆ.

CC-0. Jangamwadi Math Collection. Digitized by eGangotri

ಅಶ್ವಮೇಧಾಯುತಂ ಕೃತ್ವಾ ಗಂಗಾಂ ಸ್ನಾತ್ವಾ ಶತಂ ಸಮಾಃ ।
ನ ಶುದ್ಧಿರ್ಜಾಯತೇ ಪ್ರಾಯೋ ಮತ್ಪಾಪಸ್ಯ ಗರೀಯಸಃ ॥ ೭೯ ॥
ಕಿಂ ಕರೋಮಿ ಕ್ವ ಗಚ್ಛಾಮಿ ಕಂ ವಾ ಶರಣಮಾಶ್ರಯೇ ।
ಕೋ ವಾ ಮಾಂತ್ರಾಯತೇ ಲೋಕೇ ಪತಂತೀಂ ನರಕಾರ್ಣವೇ ॥ ೮೦ ॥
ತ್ವಮೇವ ಮೇ ಗುರುರ್ಬ್ರಹ್ಮಂಸ್ತ್ವಂ ಮಾತಾ ತ್ವಂ ಪಿತಾಽಸಿ ಚ ।
ಉದ್ಧರೋದ್ಧರ ಮಾಂ ದೀನಾಂ ತ್ವಾಮೇವ ಶರಣಂ ಗತಾಂ ॥ ೮೧ ॥
ಇತಿ ತಾಂ ಜಾತನಿರ್ವೇದಾಂ ಪತಿತಾಂ ಚರಣದ್ವಯೇ ।
ಉತ್ಥಾಪ್ಯ ಕೃಪಯಾ ಧೀಮಾನ್ಪಭಾಷೇ ದ್ವಿಜಪುಂಗವಃ ॥ ೮೨ ॥

ಬ್ರಾಹ್ಮಣ ಉವಾಚ :—

ದಿಷ್ಟ್ಯಾ ಕಾಲೇ ಪ್ರಬುದ್ಧಾಽಸಿ ಶ್ರುತ್ವೇಮಾಂ ಮಹತೀಂ ಕಥಾಂ ।
ಮಾಭೈಷೀಸ್ತವ ಕ್ಷ್ಯಾಮಿ ಗತಿಂ ಚೈವ ಸುಖಾವಹಾಂ ॥ ೮೩ ॥
ಸತ್ಕಥಾಶ್ರವಣಾದೇವ ಜಾತಾ ತೇ ಗತಿರೀದೃಶೀ ।
ಇಂದ್ರಿಯಾರ್ಥೇಷು ವೈರಾಗ್ಯಂ ಪಶ್ಚಾತ್ತಾಪೋ ಮಹಾನಭೂತ್ ॥ ೮೪ ॥

---

೭೯. ಹತ್ತುಸಾವಿರ ಅಶ್ವಮೇಧಯಾಗಗಳನ್ನೂ, ನೂರು ವರ್ಷ ಗಂಗಾ ಸ್ನಾನವನ್ನೂ ಮಾಡಿದರೂ ಪ್ರಾಯಶಃ ನನ್ನ ಈ ಮಹಾ ಪಾಪವು ಪರಿಹಾರ ವಾಗಲಾರದು.

೮೦. ಏನು ಮಾಡಲಿ? ಎಲ್ಲಿಗೆ ಹೋಗಲಿ? ಯಾರನ್ನು ಮರೆಹೊಗಲಿ? ನರಕ ಸಮುದ್ರದಲ್ಲಿ ಬೀಳುತ್ತಿರುವ ನನ್ನನ್ನು ಈ ಪ್ರಪಂಚದಲ್ಲಿ ಯಾರು ಕಾಪಾಡುವರು?

೮೧. ಎಲೈ ದ್ವಿಜೋತ್ತಮನೆ! ನೀನೇ ನನಗೆ ಗುರುವು. ನೀನೇ ತಾಯಿಯು; ನೀನೇ ತಂದೆಯು. ನಿನ್ನನ್ನು ಮರೆಹೊಕ್ಕಿರುವ ದೀನಳಾದ ನನ್ನನ್ನು ಉದ್ಧಾರ ಮಾಡು.''

೮೨. ಆ ಬ್ರಾಹ್ಮಣ ಶ್ರೇಷ್ಠನು ಹೀಗೆ ನಿರ್ವಿಣ್ಣಳಾಗಿ ಪಾದಗಳಲ್ಲಿ ಬಿದ್ದ ಅವಳನ್ನು ದಯೆಯಿಂದ ಎಬ್ಬಿಸಿ ಹೀಗೆಂದನು.

೮೩. ಬ್ರಾಹ್ಮಣನು ಹೇಳುತ್ತಾನೆ:—ನೀನು ಅದೃಷ್ಟವಶದಿಂದ ಈ ದೊಡ್ಡ ಕಥೆಯನ್ನು ಕೇಳಿ ಸಕಾಲದಲ್ಲಿ ಎಚ್ಚರಗೊಂಡಿರುವೆ, ಹೆದರಬೇಡ. ನಿನಗೆ ಸುಖ ವನ್ನೀಯುವ ಗತಿಯನ್ನು ತಿಳಿಸುವೆನು.

೮೪. ಸತ್ಕಥೆಯನ್ನು ಕೇಳುವುದರಿಂದಲೆ ನಿನಗೆ ಇಂತಹ ಬುದ್ಧಿಯುಂಟಾ ಗಿದೆ. ಇಂದ್ರಿಯಗಳ ವಿಷಯಗಳಲ್ಲಿ ವೈರಾಗ್ಯವೂ, ಬಹು ಪಶ್ಚಾತ್ತಾಪವೂ ಉಂಟಾಗಿದೆ.

CC-0. Jangamwadi Math Collection. Digitized by eGangotri

ಪಶ್ಚಾತ್ತಾಪೋ ಹಿ ಸರ್ವೇಷಾಮಘಾನಾಂ ನಿಷ್ಕೃತಿಃ ಪರಾ ।
ತೇನೈವ ಕುರುತೇ ಸದ್ಯಃ ಪ್ರಾಯಶ್ಚಿತ್ತಂ ಸುಧೀರ್ನರಃ ॥ ೮೫ ॥
ಪ್ರಾಯಶ್ಚಿತ್ತಾನಿ ಸರ್ವಾಣಿ ಕೃತ್ವಾ ಚ ವಿಧಿವತ್ಪುನಃ ।
ಅಪಶ್ಚಾತ್ತಾಪಿನೋ ಮರ್ತ್ಯಾ ನ ಯಾಂತಿ ಗತಿಮುತ್ತಮಾಂ ॥ ೮೬ ॥
ಸತ್ಕಥಾಶ್ರವಣಾನ್ನಿತ್ಯಂ ಸಂಯಾತಿ ಪರಮಾಂ ಗತಿಂ ।
ಪುಣ್ಯಕ್ಷೇತ್ರನಿವಾಸಾಚ್ಚ ಚಿತ್ತಶುದ್ಧಿಃ ಪ್ರಜಾಯತೇ ॥ ೮೭ ॥
ಯಥಾ ಸತ್ಕಥಯಾ ನಿತ್ಯಂ ಸಯಾತಿ ಪರಮಾಂ ಗತಿಂ ।
ತಥಾಽನ್ಯೈಃ ಸದ್ವ್ರತೈರ್ಜಂತೋರ್ನಭವೇನ್ಮತಿರುತ್ತಮಾ ॥ ೮೮ ॥
ಯಥಾ ಮುಹುಃ ಶೋಧ್ಯಮಾನೋ ದರ್ಪಣೋ ನಿರ್ಮಲೋ ಭವೇತ್ ।
ತಥಾ ಸತ್ಕಥಯಾ ಚೇತೋ ವಿಶುದ್ಧಿಂ ಪರಮಾಂ ವ್ರಜೇತ್ ॥ ೮೯ ॥
ವಿಶುದ್ಧೇ ಚೇತಸಿ ನೃಣಾಂ ಧ್ಯಾನಂ ಸಿಧ್ಯತ್ಯುಮಾಪತೇಃ ।
ಧ್ಯಾನೇನ ಸರ್ವಂ ಮಲಿನಂ ಮನೋವಾಕ್ಕಾಯಸಂಭೃತಂ ॥ ೯೦ ॥
ಸದ್ಯೋ ವಿಧೂಯ ಕೃತಿನೋ ಯಾಂತಿ ಶಂಭೋಃ ಪರಂ ಪದಂ ।
ಅತಃ ಸನ್ನ್ಯಸ್ತಪುಣ್ಯಾನಾಂ ಸತ್ಕಥಾ ಸಾಧನಂ ಪರಂ ॥ ೯೧ ॥

---

೮೫. ಪಶ್ಚಾತ್ತಾಪವು ಎಲ್ಲಾ ಪಾಪಗಳನ್ನು ಪರಿಹರಿಸುವುದು. ಅದರಿಂದ ಜ್ಞಾನಿಯಾದ ಮನುಷ್ಯನು ಕೂಡಲೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾನೆ.

೮೬. ಸಕಲ ಪ್ರಾಯಶ್ಚಿತ್ತಗಳನ್ನೂ ವಿಧಿಯಂತೆ ಮಾಡಿದರೂ ಪಶ್ಚಾತ್ತಾಪವಿಲ್ಲದ ಮನುಷ್ಯರು ಉತ್ತಮಗತಿಯನ್ನು ಪಡೆಯುವುದಿಲ್ಲ.

೮೭. ಯಾವಾಗಲೂ ಸತ್ಕಥೆಯನ್ನು ಕೇಳುವುದರಿಂದ ಉತ್ತಮಗತಿಯನ್ನು ಹೊಂದುವನು. ಪುಣ್ಯಕ್ಷೇತ್ರಗಳಲ್ಲಿ ವಾಸಮಾಡುವುದರಿಂದ ಮನಸ್ಸು ನಿರ್ಮಲವಾಗುವುದು.

೮೮. ಸತ್ಕಥೆಯಿಂದ ಉತ್ತಮಗತಿಯನ್ನು ಪಡೆಯುವಂತೆ ಇತರ ಸದ್ವ್ರತಾನುಷ್ಠಾನಗಳಿಂದ ಮನುಷ್ಯನಿಗೆ ಉತ್ತಮ ಬುದ್ಧಿಯುಂಟಾಗಲಾರದು.

೮೯. ಬಾರಿಬಾರಿಗೂ ತೊಳೆದ ಕನ್ನಡಿಯು ನಿರ್ಮಲವಾಗುವಂತೆ ಸತ್ಕಥೆಯಿಂದ ಮನಸ್ಸು ಶುದ್ಧವಾಗುವುದು.

೯೦–೯೧. ಶುದ್ಧವಾದ ಮನುಷ್ಯರ ಮನಸ್ಸಿನಲ್ಲಿ ಶಿವಧ್ಯಾನವು ಸಿದ್ಧಿಸುವುದು. ಪುಣ್ಯವಂತರು ಧ್ಯಾನದಿಂದ ಮನಸ್ಸು, ಮಾತು, ದೇಹಗಳಿಂದ ಸಂಪಾದಿಸಿದ ಕೊಳೆಯನ್ನು ಕೂಡಲೆ ಹೋಗಲಾಡಿಸಿಕೊಂಡು ಶಿವನ ಉತ್ತಮ ಸ್ಥಾನಕ್ಕೆ ಹೋಗುತ್ತಾರೆ. ಆದುದರಿಂದ ಪಾಪಿಗಳಿಗೆ ಸತ್ಕಥಾಶ್ರವಣವು ಶ್ರೇಷ್ಠವಾದ ಸಾಧನವು.

CC-0. Jangamwadi Math Collection. Digitized by eGangotri

ಕಥಯಾ ಸಿಧ್ಯತಿ ಧ್ಯಾನಂ ಧ್ಯಾನಾತ್ಕೈವಲ್ಯಮುತ್ತಮಂ ।
ಅಸಿದ್ಧಪರಮಧ್ಯಾನಃ ಕಥಾಮೇತಾಂ ಶೃಣೋತಿ ಯಃ ।
ಸೋಽನ್ಯಜನ್ಮನಿ ಸಂಪ್ರಾಪ್ಯ ಧ್ಯಾನಂ ಯಾತಿ ಪರಾಂ ಗತಿಂ ॥ ೯೨ ॥
ನಾಮೋಚ್ಚಾರಣಮಾತ್ರೇಣ ಜಪ್ತ್ವಾ ಮಂತ್ರಮಜಾಮಿಲಃ ।
ಪಶ್ಚಾತ್ತಾಪಸಮಾಯುಕ್ತಸ್ತ್ವವಾಪ ಪರಮಾಂ ಗತಿಂ ॥ ೯೩ ॥
ಸರ್ವೇಷಾಂ ಶ್ರೇಯಸಾಂ ಬೀಜಂ ಸತ್ಕಥಾಶ್ರವಣಂ ನೃಣಾಂ ।
ಯಸ್ತದ್ವಿಹೀನಃ ಸ ಪಶುಃ ಕಥಂ ಮುಚ್ಯೇತ ಬಂಧನಾತ್ ॥ ೯೪ ॥
ಅತಸ್ತ್ವಮಪಿ ಸರ್ವೇಭ್ಯೋ ವಿಷಯೇಭ್ಯೋ ನಿವೃತ್ತಧೀಃ ।
ಭಕ್ತಿಂ ಪರಾಂ ಸಮಾಧಾಯ ಸತ್ಕಥಾಂ ಶೃಣು ಸರ್ವದಾ ।
ಶೃಣ್ವಂತ್ಯಾಃ ಸತ್ಕಥಾಂ ನಿತ್ಯಂ ಚೇತಸ್ತೇ ಶುದ್ಧಿಮೇಷ್ಯತಿ ॥ ೯೫ ॥
ತೇನ ಧ್ಯಾಯಸಿ ವಿಶ್ವೇಶಂ ತತೋ ಮುಕ್ತಿಮವಾಪ್ಸ್ಯಸಿ ।
ಧ್ಯಾಯತಃ ಶಿವಪಾದಾಬ್ಜಂ ಮುಕ್ತಿರೇಕೇನ ಜನ್ಮನಾ ॥ ೯೬ ॥
ಭವಿಷ್ಯತಿ ನ ಸಂದೇಹಃ ಸತ್ಯಂ ಸತ್ಯಂ ವದಾಮ್ಯಹಂ ।
ಇತ್ಯುಕ್ತ್ವಾ ತೇನ ವಿಪ್ರೇಣ ಸಾ ನಾರೀ ಬಾಷ್ಪಸಂಕುಲಾ ॥ ೯೭ ॥
ಪತಿತ್ವಾ ಪಾದಯೋಸ್ತಸ್ಯ ಕೃತಾರ್ಥಾಽಸ್ಮೀತ್ಯಭಾಷತ ।
ತಸ್ಮಿನ್ನೇವ ಮಹಾಕ್ಷೇತ್ರೇ ತಸ್ಮಾದೇವ ದ್ವಿಜೋತ್ತಮಾತ್ ॥ ೯೮ ॥

---

೯೨. ಸತ್ಕಥೆಯಿಂದ ಈಶ್ವರಧ್ಯಾನವೂ, ಧ್ಯಾನದಿಂದ ಉತ್ತಮವಾದ ಮೋಕ್ಷವೂ ಸಿದ್ಧಿಸುವುದು. ಸತ್ಕಥೆಯನ್ನು ಕೇಳಿ ಈಶ್ವರನ ಧ್ಯಾನಸಿದ್ಧಿಯನ್ನು ಪಡೆಯದ ಮಾನವನು ಬೇರೆ ಜನ್ಮದಲ್ಲಿ ಧ್ಯಾನವನ್ನು ಹೊಂದಿ ಉತ್ತಮಗತಿಯನ್ನೈದುವನು.

೯೩. ಅಜಾಮಿಲನು ನಾರಾಯಣನ ನಾಮವನ್ನು ಉಚ್ಚರಿಸಿದ ಮಾತ್ರದಿಂದ ಮಂತ್ರವನ್ನು ಜಪಿಸಿ ಪಶ್ಚಾತ್ತಾಪಪಟ್ಟು ಉತ್ತಮಗತಿಯನ್ನು ಪಡೆದನು.

೯೪. ಮನುಷ್ಯರ ಸಮಸ್ತ ಶ್ರೇಯಸ್ಸಿಗೂ ಸತ್ಕಥೆಯನ್ನು ಕೇಳುವುದೇ ಕಾರಣವು. ಸತ್ಕಥೆಯನ್ನು ಕೇಳದೆ ಪಶುವಿನಂತಿರುವ ಮನುಷ್ಯನು ಸಂಸಾರ ಬಂಧನದಿಂದ ಹೇಗೆ ಮುಕ್ತನಾದಾನು.

೯೫. ಆದುದರಿಂದ ನೀನು ಸಕಲವಿಷಯಗಳಿಂದಲೂ ಬುದ್ಧಿಯನ್ನು ಹಿಂತಿರುಗಿಸಿಕೊಂಡು ಅತಿಶಯವಾದ ಭಕ್ತಿಯನ್ನಿಟ್ಟು ಯಾವಾಗಲೂ ಸತ್ಕಥಾಶ್ರವಣಮಾಡು. ಅದರಿಂದ ನಿನ್ನ ಮನಸ್ಸು ಶುದ್ಧವಾಗುವುದು.

೯೬–೧೦೦. ಅದರಿಂದ ಶಿವನನ್ನು ಧ್ಯಾನಿಸಿ ಮುಕ್ತಿಯನ್ನು ಪಡೆಯುವೆ. ಮಹೇಶ್ವರನ ಚರಣಕಮಲವನ್ನು ಧ್ಯಾನಿಸುವ ಮನುಷ್ಯನಿಗೆ ಒಂದೇ ಜನ್ಮದಲ್ಲಿ ಮುಕ್ತಿಯು ಲಭಿಸುವುದು. ಇದು ನಿಜವಾದುದು. ಆ ಬ್ರಾಹ್ಮಣನು ಹೀಗೆನ್ನಲು

CC-0. Jangamwadi Math Collection. Digitized by eGangotri

ಶುಶ್ರಾವ ಸತ್ಕಥಾಂ ಸಾಧ್ವೀಂ ಕೈವಲ್ಯಫಲದಾಯಿನೀಂ ।
ಸ ಉವಾಚ ದ್ವಿಜಸ್ತಸ್ಯೈ ಕಥಾಂ ವೈರಾಗ್ಯಬೃಂಹಿತಾಂ ॥ ೯೯ ॥
ಯಾಂ ಶ್ರುತ್ವಾ ಮನುಜಃ ಸದ್ಯಸ್ತ್ಯಜೇದ್ವಿಷಯವಾಸನಾಂ ।
ತಸ್ಯಾಶ್ಚಿತ್ತಂ ಯಥಾ ಶುದ್ಧಂ ವೈರಾಗ್ಯರಸಗಂ ಯಥಾ ॥ ೧೦೦ ॥
ತಥೋವಾಚ ದ್ವಿಜಃ ಶೈವೀಂ ಕಥಾಂ ಭಕ್ತಿಸಮನ್ವಿತಾಂ ।
ಯಥಾ ಯಥಾ ಮನಸ್ತಸ್ಯಾಃ ಪ್ರಸಾದಮಭಿಗಚ್ಛತಿ ।
ತಥಾ ತಥಾ ಶನೈಃ ಶಂಭೋರ್ಧ್ಯಾನಯೋಗಮುಪಾದಿಶತ್ ॥ ೧೦೧ ॥
ಶನೈಃ ಶನೈರ್ಧ್ವಸ್ತರಜಸ್ತಮೋಮಲಂ
ವಿಮುಕ್ತಸರ್ವೇಂದ್ರಿಯಭೋಗವಿಗ್ರಹಂ ।
ವಿಶುದ್ಧತತ್ತ್ವಂ ಹೃದಯಂ ದ್ವಿಜಸ್ತ್ರಿಯಾ
ವಿವೇಶ ವಿಶ್ವೇಶ್ವರರೂಪಚಿಂತನಂ ॥ ೧೦೨ ॥
ಇತ್ಥಂ ಸದ್ಗುರುಮಾಶ್ರಿತ್ಯ ಸಾ ನಾರೀ ಪ್ರಾಪ್ತಸನ್ಮತಿಃ ।
ದಧ್ಯೌ ಮುಹುರ್ಮುಹುಃ ಶಂಭೋಶ್ಚಿದಾನಂದಮಯಂ ವಪುಃ ॥ ೧೦೩ ॥
ನಿತ್ಯಂ ತೀರ್ಥಜಲೇ ಸ್ನಾತ್ವಾ ಜಟಾವಲ್ಕಲಧಾರಿಣೀ ।
ಭಸ್ಮೋದ್ಧೂಲಿತಸರ್ವಾಂಗೀ ರುದ್ರಾಕ್ಷಕೃತಭೂಷಣಾ ॥ ೧೦೪ ॥

---

ಆ ಹೆಂಗಸು ಕಂಬನಿಯನ್ನು ಸುರಿಸುತ್ತ ಅವನ ಕಾಲುಗಳಿಗೆರಗಿ "ಧನ್ಯಳಾದೆ" ನೆಂದಳು. ಅದೇ ಗೋಕರ್ಣಕ್ಷೇತ್ರದಲ್ಲಿ ಆ ಬ್ರಾಹ್ಮಣೋತ್ತಮನಿಂದ ಮೋಕ್ಷ ಫಲವನ್ನೀಯುವ ಸತ್ಕಥೆಯನ್ನು ಕೇಳಿದಳು. ಆ ದ್ವಿಜನು ಕೇಳಿದೊಡನೆ ಮನುಷ್ಯನಿಗೆ ವಿಷಯಗಳ ಆಶೆಯನ್ನು ನೀಗಿಸುವ ವೈರಾಗ್ಯದಿಂದ ತುಂಬಿದ ಕಥೆಯನ್ನು ಅವಳ ಮನಸ್ಸು ಶುದ್ಧವಾಗುವಂತೆಯೂ, ವೈರಾಗ್ಯಗೊಳ್ಳು ವಂತೆಯೂ ಹೇಳಿದನು.

೧೦೧. ಅವನು ಅವಳ ಮನಸ್ಸು ಪ್ರಸನ್ನವಾಗುವಂತೆ ಭಕ್ತಿಯುಕ್ತವಾದ ಶಿವಕಥೆಯನ್ನು ಹೇಳಿ ಮೆಲ್ಲಗೆ ಶಿವನ ಧ್ಯಾನಯೋಗವನ್ನೂ ಉಪದೇಶಿಸಿದನು.

೧೦೨. ಮೆಲ್ಲಮೆಲ್ಲಗೆ ನಾಶವಾದ ರಜಸ್ತಮೋಗುಣದೋಷವುಳ್ಳುದೂ, ಸಮಸ್ತೇಂದ್ರಿಯಭೋಗಗಳನ್ನು ತ್ಯಜಿಸಿದುದೂ, ಶುದ್ಧತತ್ವವನ್ನರಿತುದೂ ಆದ ಆ ಬ್ರಾಹ್ಮಣಸ್ತ್ರೀಯ ಮನಸ್ಸು ಶಿವಧ್ಯಾನದಲ್ಲಾಸಕ್ತವಾಯಿತು.

೧೦೩. ಆ ಹೆಂಗಸು ಹೀಗೆ ಒಳ್ಳೆಯ ಗುರುವನ್ನಾಶ್ರಯಿಸಿ ಒಳ್ಳೆಯ ವಿವೇಕ ವನ್ನು ಪಡೆದು ಮಹೇಶ್ವರನ ಚಿದಾನಂದಸ್ವರೂಪವಾದ ದೇಹವನ್ನು ಬಾರಿ ಬಾರಿಗೂ ಧ್ಯಾನಿಸಿದಳು.

೧೦೪–೧೦೭. ಅವಳು ಪ್ರತಿದಿನವೂ ತೀರ್ಥಜಲದಲ್ಲಿ ಮಿಂದು ಜಟೆ, ನಾರು ಬಟ್ಟೆಗಳನ್ನು ಧರಿಸಿದವಳೂ, ಭಸ್ಮಲಿಪ್ತವಾದ ಸಮಸ್ತಾವಯವವುಳ್ಳ

CC-0. Jangamwadi Math Collection. Digitized by eGangotri

ಶಿವನಾಮ ಜಪಾಸಕ್ತಾ ವಾಗ್ಯತಾ ಮಿತಭೋಜನಾ ।
ಬದ್ಧಪದ್ಮಾಸನಾಽವ್ಯಗ್ರಾ ಸತ್ಕಥಾಶ್ರವಣೋತ್ಸುಕಾ ॥ ೧೧೫ ॥
ಗುರುಶುಶ್ರೂಷಣರತಾ ತ್ಯಕ್ತಾಽಪತ್ಯ ಸುಹೃಜ್ಜನಾ ।
ಗುರೂಪದಿಷ್ಟಯೋಗೇನ ಶಿವಮೇವ ಮತೋಷಯತ್ ॥ ೧೧೬ ॥

ವಿಶ್ವೇಶವಿಶ್ವನಿಲಯಸ್ಥಿತಿಜನ್ಮಹೇತೋ
ವಿಶ್ವೈಕವಂದ್ಯ ಶಿವಶಾಶ್ವತ ವಿಶ್ವರೂಪ ।
ವಿಧ್ವಸ್ತ ಕಾಲವಿಪರೀತ ಗುಣಾವಭಾಸ
ಶ್ರೀಮನ್ಮಹೇಶ ಮಯಿ ಧೇಹಿ ಕೃಪಾಕಟಾಕ್ಷಂ ॥ ೧೧೭ ॥
ಶಂಭೋ ಶಶಾಂಕ ಕೃತಶೇಖರ ಶಾಂತಮೂರ್ತೇ
ಗಂಗಾಧರಾಽಮರವರಾರ್ಚಿತ ಪಾದಪದ್ಮ ।
ನಾಗೇಂದ್ರಭೂಷಣ ನಗೇಂದ್ರ ನಿಕೇತನೇಶ
ಭಕ್ತಾರ್ತಿಹೃನ್ಮಯಿ ನಿಧೇಹಿ ಕೃಪಾಕಟಾಕ್ಷಂ ॥ ೧೧೮ ॥
ಶ್ರೀವಿಶ್ವನಾಥ ಕರುಣಾಕರ ಶೂಲಪಾಣೇ
ಭೂತೇಶ ಭರ್ಗಭುವನತ್ರಯಗೀತಕೀರ್ತೇ ।
ಶ್ರೀನೀಲಕಂಠ ಮದನಾಂತಕ ವಿಶ್ವಮೂರ್ತೇ
ಗೌರೀಪತೇ ಮಯಿ ನಿಧೇಹಿ ಕೃಪಾಕಟಾಕ್ಷಂ ॥ ೧೧೯ ॥

---

ವಳೂ, ರುದ್ರಾಕ್ಷಿಯಿಂದ ಅಲಂಕಾರಗೊಂಡವಳೂ, ಶಿವನಾಮ ಜಪದಲ್ಲಿ ನಿರತಳೂ, ಮೌನಗೊಂಡವಳೂ, ಮಿತವಾಗಿ ಭುಜಿಸುವವಳೂ, ಪದ್ಮಾಸನದಿಂದ ಕುಳಿತವಳೂ, ಏಕಚಿತ್ತಳೂ, ಸತ್ಕಥೆಯನ್ನು ಕೇಳಲು ಕುತೂಹಲವುಳ್ಳವಳೂ, ಗುರುಸೇವೆಯಲ್ಲಿ ಆಸಕ್ತಳೂ, ಮಕ್ಕಳು, ಸ್ನೇಹಿತರನ್ನು ಬಿಟ್ಟವಳೂ ಆಗಿ ಗುರುವು ಉಪದೇಶಮಾಡಿದ ಧ್ಯಾನಯೋಗದಿಂದ ಶಿವನನ್ನು ಸಂತೋಷಗೊಳಿಸಿದಳು.

೧೧೭. "ಪ್ರಪಂಚದ ಸೃಷ್ಟಿ, ಸ್ಥಿತಿ ಲಯಗಳಿಗೆ ಕಾರಣನೂ, ಜಗತ್ತಿನಲ್ಲಿ ಮುಖ್ಯವಾಗಿ ವಂದಿಸಲರ್ಹನೂ, ಶಾಶ್ವತನೂ, ಪ್ರಪಂಚರೂಪನೂ, ಕಾಲಕೃತವಾದ ಗುಣದೋಷಗಳನ್ನು ಪರಿಹರಿಸಿದವನೂ ಆದ ಓ ಮಹೇಶ್ವರನೆ! ನನ್ನ ಮೇಲೆ ದಯಾಕಟಾಕ್ಷವನ್ನು ಬೀರು.

೧೧೮. ಚಂದ್ರಮೌಲಿಯೂ, ಶಾಂತಸ್ವರೂಪನೂ, ಗಂಗೆಯನ್ನು ಧರಿಸಿದವನೂ, ದೇವತೆಗಳಿಂದ ಪೂಜಿಸಲ್ಪಟ್ಟ ಚರಣಕಮಲವುಳ್ಳವನೂ, ಸರ್ಪಭೂಷಣನೂ, ಕೈಲಾಸವಾಸಿಯೂ, ಭಕ್ತರ ದುಃಖವನ್ನು ಪರಿಹರಿಸುವವನೂ, ಆದ ಎಲೈ ಈಶ್ವರನೆ! ನನ್ನಲ್ಲಿ ದಯಾಕಟಾಕ್ಷವನ್ನಿಡು.

೧೧೯. ಪ್ರಪಂಚದೊಡೆಯನೂ, ದಯಾಳುವೂ, ತ್ರಿಶೂಲವನ್ನು ಹಿಡಿ

CC-0. Jangamwadi Math Collection. Digitized by eGangotri

ಇತ್ಥಂ ಪ್ರತಿದಿನಂ ಭಕ್ತ್ಯಾ ಪ್ರಾರ್ಥಯಂತೀ ಮಹೇಶ್ವರಂ ।
ಶೃಣ್ವಂತೀ ಸತ್ಕಥಾಂ ಸಮ್ಯಕ್ಕರ್ಮಬಂಧಂ ಸಮಾಚ್ಛಿನತ್ ॥ ೧೧೦ ॥
ಅಥ ಕಾಲೇನ ಸಾ ನಾರೀ ಸಮುತ್ಸೃಜ್ಯಕಲೇವರಂ ।
ಮಹೇಶಾನುಚರೈರ್ನೀತಾ ಸಂಪ್ರಾಪ್ತಾ ಶಿವಮಂದಿರಂ ॥ ೧೧೧ ॥
ತತ್ರ ದೇವೈರ್ಮಹಾದೇವಂ ಸೇವ್ಯಮಾನಂ ಸಹೋಮಯಾ ।
ಗಣೇಶನಂದಿಭೃಂಗ್ಯಾದ್ಯೈರ್ವೀರಭದ್ರೇಶ್ವರಾದಿಭಿಃ ॥ ೧೧೨ ॥
ಉಪಾಸ್ಯಮಾನಂ ಗೌರೀಶಂ ಕೋಟಿಸೂರ್ಯಸಮಪ್ರಭಂ ।
ತ್ರಿಲೋಚನಂ ಪಂಚಮುಖಂ ನೀಲಗ್ರೀವಂ ಸದಾಶಿವಂ ॥ ೧೧೩ ॥
ವಾಮಾಂಕೇ ಬಿಭ್ರತಂ ಗೌರೀಂ ವಿದ್ಯುಚ್ಚಂದ್ರಸಮಪ್ರಭಾಂ ।
ದೃಷ್ಟ್ವಾ ಸಸಂಭ್ರಮಂ ನಾರೀ ಸಾ ಪ್ರಣಮ್ಯ ಪುನಃ ಪುನಃ ॥ ೧೧೪ ॥
ಆನಂದಾಶ್ರುಜಲೋತ್ಸಿಕ್ತಾ ರೋಮಹರ್ಷಸಮಾಕುಲಾ ।
ಸಂಮಾನಿತಾ ಕರುಣಯಾ ಪಾರ್ವತ್ಯಾ ಶಂಕರೇಣ ಚ ॥ ೧೧೫ ॥
ತಸ್ಮಿಂಲ್ಲೋಕೇ ಪರಾನಂದಘನಜ್ಯೋತಿಷಿ ಶಾಶ್ವತೇ ।
ಲಬ್ಧ್ವಾ ನಿವಾಸಮಚಲಂ ಲೇಭೇ ಸುಖಮನಾಹತಂ ॥ ೧೧೬ ॥

---

ದವನೂ, ಮೂರು ಲೋಕದವರಿಂದ ಹೊಗಳಲ್ಪಟ್ಟ ಕೀರ್ತಿಯುಳ್ಳವನೂ, ನೀಲ ಕಂಠನೂ, ಕಾಮವೈರಿಯೂ, ಗೌರೀಪತಿಯೂ ಆದ ಓ ಶಂಕರ! ನನ್ನಲ್ಲಿ ನಿನ್ನ ಕೃಪೆಯ ಕಟಾಕ್ಷವನ್ನು ಬೀರು.''

೧೧೦. ಅವಳು ಹೀಗೆ ಪ್ರತಿದಿನವೂ ಭಕ್ತಿಯಿಂದ ಶಿವನನ್ನು ಪ್ರಾರ್ಥಿಸುತ್ತ ಸತ್ಕಥೆಯನ್ನು ಚೆನ್ನಾಗಿ ಕೇಳುತ್ತ ಕರ್ಮದ ಬಂಧನವನ್ನು ಬಿಡಿಸಿಕೊಂಡಳು.

೧೧೧. ತರುವಾಯ ಕಾಲಕ್ರಮದಿಂದ ಅವಳು ಮೃತಳಾಗಲು ಶಿವನ ಸೇವಕರು ಅವಳನ್ನು ಶಿವಾಲಯಕ್ಕೆ ಕರೆದುಕೊಂಡು ಹೋದರು.

೧೧೨-೧೧೬. ಅಲ್ಲಿ ಅವಳು ಪಾರ್ವತಿಯೊಡನೆ ದೇವತೆಗಳಿಂದ ಸೇವಿಸಲ್ಪಡುವವನೂ, ಗಣೇಶ, ನಂದಿ, ಭೃಂಗಿ, ವೀರಭದ್ರ ಮೊದಲಾದವರಿಂದ ಸೇವೆಗೊಳ್ಳುತ್ತಿರುವವನೂ, ಕೋಟಿ ಸೂರ್ಯರಂತೆ ಕಾಂತಿಯುಳ್ಳವನೂ, ಮೂರು ಕಣ್ಣುಗಳುಳ್ಳವನೂ, ಐದು ಮುಖವುಳ್ಳವನೂ, ನೀಲಕಂಠನೂ, ಎಡತೊಡೆಯಲ್ಲಿ ಮಿಂಚು ಚಂದ್ರರಿಗೆ ಸಮಾನವಾದ ಕಾಂತಿಯುಳ್ಳ ಗೌರಿಯನ್ನು ಕುಳ್ಳಿರಿಸಿಕೊಂಡಿರುವವನೂ ಆದ ಮಹೇಶ್ವರನನ್ನು ನೋಡಿ ಅನೇಕಸಾರಿ ವಂದಿಸಿ ಆನಂದಬಾಷ್ಪಗಳಿಂದ ಒದ್ದೆಯಾದವಳೂ, ರೋಮಾಂಚಗೊಂಡವಳೂ, ಪಾರ್ವತಿಯಿಂದಲೂ ಶಿವನಿಂದಲೂ ದಯೆಗೊಂಡು ಸನ್ಮಾನಿಸಲ್ಪಟ್ಟವಳೂ ಆಗಿ ಆನಂದಸಾಂದ್ರವಾದ ತೇಜಸ್ಸುಳ್ಳ ಆ ಲೋಕದಲ್ಲಿ ಸ್ಥಿರವಾಗಿ ವಾಸಿಸಿ ಶಾಶ್ವತ ಸುಖವನ್ನು ಪಡೆದಳು.

CC-0. Jangamwadi Math Collection. Digitized by eGangotri

ಸಾ ಕದಾಚಿದುಮಾಂ ದೇವೀಮುಪಸೃತ್ಯ ಪ್ರಣಮ್ಯ ಚ ।
ಪರ್ಯಪೃಚ್ಛತ ಮೇ ಭರ್ತಾ ಕಾಂ ಗತಿಂ ಗತವಾನಿತಿ ॥ ೧೧೭ ॥
ತಾಮುವಾಚ ಮಹಾದೇವೀ ಸತೇ ಭರ್ತಾ ದುರಾಶಯಃ ।
ಭುಕ್ತ್ವಾ ನರಕದುಃಖಾನಿ ವಿಂಧ್ಯೇ ಜಾತಃ ಪಿಶಾಚಕಃ ॥ ೧೧೮ ॥
ಪುನಃ ಪಪ್ರಚ್ಛ ಸಾ ನಾರೀ ದೇವೀಂ ತ್ರಿಭುವನೇಶ್ವರೀಂ ।
ಕೇನೋಪಾಯೇನ ಮೇ ಭರ್ತಾ ಸದ್ಗತಿಂ ಪ್ರಾಪ್ನುಯಾದಿತಿ ॥ ೧೧೯ ॥

ದೇವ್ಯುವಾಚ :—

ಸೋಽಸ್ಮತ್ಕಥಾಂ ಮಹಾಪುಣ್ಯಾಂ ಕಥಾಚಿಚ್ಛೃಣುಯಾದ್ಯದಿ ।
ನಿಸ್ತೀರ್ಯ ದುರ್ಗತಿಂ ಸರ್ವಾಮಿಮಂ ಲೋಕಂ ಪ್ರಯಾಸ್ಯತಿ ॥ ೧೨೦ ॥
ಇತಿ ಗೌರ್ಯಾ ವಚಃ ಶ್ರುತ್ವಾ ಸಾ ನಾರೀ ವಿಹಿತಾಂಜಲಿಃ ।
ಪ್ರಾರ್ಥಯಾಮಾಸ ತಾಂ ದೇವೀಂ ಭರ್ತುಃ ಪಾಪವಿಶೋಧನೇ ॥ ೧೨೧ ॥
ತಯಾ ಮುಹುಃ ಪ್ರಾರ್ಥ್ಯಮಾನಾ ಪಾರ್ವತೀ ಕರುಣಾಯುತಾ ।
ತುಂಬುರುಂ ನಾಮ ಗಂಧರ್ವಮಾಹೂಯೇದಮಥಾಬ್ರವೀತ್ ॥ ೧೨೨ ॥
ತುಂಬುರೋ ಗಚ್ಛ ಭದ್ರಂ ತೇ ವಿಂಧ್ಯಶೈಲಂ ಸಹಾಽನಯಾ ।
ಆಸ್ತೇ ಪಿಶಾಚಕಸ್ತತ್ರ ಯೋಽಸ್ಯಾಃ ಪತಿರಸನ್ಮತಿಃ ॥ ೧೨೩ ॥

---

೧೧೭. ಅವಳು ಒಂದಾನೊಂದು ದಿನ ಪಾರ್ವತೀದೇವಿಯನ್ನು ಸಮೀಪಿಸಿ ನಮಸ್ಕಾರಮಾಡಿ, "ದೇವಿ! ನನ್ನ ಪತಿಯು ಯಾವ ಗತಿಯನ್ನು ಪಡೆದನು" ಎಂದು ಕೇಳಿದಳು.

೧೧೮. ಗೌರಿಯು ಅವಳನ್ನು ಕುರಿತು, "ದುಷ್ಟನಾದ ನಿನ್ನ ಗಂಡನು ನರಕದುಃಖಗಳನ್ನು ಅನುಭವಿಸಿ ಈಗ ವಿಂಧ್ಯಪರ್ವತದಲ್ಲಿ ಪಿಶಾಚನಾಗಿ ಜನಿಸಿರುವನು" ಎಂದಳು.

೧೧೯. ಅವಳು ಪುನಃ ಪಾರ್ವತಿಯನ್ನು "ಯಾವ ಉಪಾಯದಿಂದ ನನ್ನ ಪತಿಯು ಸದ್ಗತಿಯನ್ನು ಹೊಂದಿಯಾನು" ಎಂದು ಕೇಳಿದಳು.

೧೨೦. ದೇವಿಯು ಹೇಳುತ್ತಾಳೆ:—ಅವನು ಒಂದುವೇಳೆ ಪುಣ್ಯಕರವಾದ ನಮ್ಮ ಕಥೆಯನ್ನು ಕೇಳಿದರೆ ಸಕಲ ಕಷ್ಟಗಳನ್ನೂ ದಾಟಿ ನಮ್ಮ ಈ ಲೋಕಕ್ಕೆ ಬರುವನು.

೧೨೧. ಆ ಸ್ತ್ರೀಯು ಗೌರೀದೇವಿಯ ಈ ಮಾತನ್ನು ಕೇಳಿ ಕೈಮುಗಿದುಕೊಂಡು ತನ್ನ ಪತಿಯ ಪಾಪವನ್ನು ಪರಿಹರಿಸಬೇಕೆಂದು ಬೇಡಿಕೊಂಡಳು.

೧೨೨. ಅವಳು ಅನೇಕಸಾರಿ ಬೇಡಿಕೊಳ್ಳಲು ಪಾರ್ವತಿಯು ದಯೆಗೊಂಡು ತುಂಬುರುವೆಂಬ ಗಂಧರ್ವನನ್ನು ಕರೆದು ಹೀಗೆಂದಳು.

೧೨೩. "ಎಲೈ ತುಂಬುರುವೆ! ನಿನಗೆ ಶುಭವಾಗಲಿ. ಇವಳೊಡನೆ ನೀನು

CC-0. Jangamwadi Math Collection. Digitized by eGangotri

ತಸ್ಯಾಃಗ್ರೇ ಪರಮಾಂ ಪುಣ್ಯಾಂ ಕಥಾಮಸ್ಮದ್ಗುಣೈರ್ಯುತಾಂ ।
ಆಖ್ಯಾಯ ದುರ್ಗತೇರ್ಮುಕ್ತಂ ತಮಾನಯ ಶಿವಾಂತಿಕಂ ॥ ೧೨೪ ॥
ಇತಿ ದೇವ್ಯಾ ಸಮಾದಿಷ್ಟಸ್ತುಂಬುರುಸ್ತಾಂ ಪ್ರಣಮ್ಯ ಚ ।
ತಯಾ ಸಹ ವಿಮಾನೇನ ವಿಂಧ್ಯಾದ್ರಿಂ ಸಹಸಾ ಯಯೌ ॥ ೧೨೫ ॥
ತತ್ರಾಃಪಶ್ಯನ್ಮಹಾಕಾಯಂ ರಕ್ತನೇತ್ರಂ ಮಹಾಹನುಂ ।
ಪ್ರಹಸಂತಂ ರುದಂತಂ ಚ ವಲ್ಗಂತಂ ಚ ಪಿಶಾಚಕಂ ॥ ೧೨೬ ॥
ಬಲಾದ್ಗೃಹೀತ್ವಾ ತಂ ಪಾಶೈರ್ಬಧ್ವಾ ವೈ ಸನ್ನಿವೇಶ್ಯ ಚ ।
ತುಂಬುರುರ್ವಲ್ಲಕೀಹಸ್ತೋ ಜಗೌ ಗೌರೀಪತೇಃ ಕಥಾಂ ॥ ೧೨೭ ॥
ಸ ಪಿಶಾಚೋ ಮಹಾಪುಣ್ಯಾಂ ಕಥಾಂ ಶ್ರುತ್ವಾ ಪುರದ್ವಿಷಃ ।
ವಿಧೂಯ ಕಲುಷಂ ಸರ್ವಂ ಸಪ್ತಾಹಾತ್ಪ್ರಾಪ ಸಂಸ್ಮೃತಿಂ ॥ ೧೨೮ ॥
ಸ ಪೈಶಾಚಂ ವಪುಸ್ತ್ಯಕ್ತ್ವಾ ಸ್ವರೂಪಂ ದಿವ್ಯಮಾಪ್ಯ ಚ ।
ಜಗೌ ಸ್ವಯಮಪಿ ಶ್ರೀಮಚ್ಚರಿತಂ ಪಾರ್ವತೀ ಪತೇಃ ॥ ೧೨೯ ॥

---

ವಿಂಧ್ಯಪರ್ವತಕ್ಕೆ ಹೋಗು. ದುಷ್ಟನಾದ ಇವಳ ಗಂಡನು ಅಲ್ಲಿ ಪಿಶಾಚನಾಗಿರುವನು.

೧೨೪. ಅವನ ಮುಂದೆ ನಮ್ಮ ಗುಣಗಳಿಂದ ಸಹಿತವಾದ ಪುಣ್ಯಕಥೆಯನ್ನು ಹೇಳಿ ದುಃಖದಿಂದ ಪಾರಾದ ಅವನನ್ನು ಶಿವನ ಬಳಿಗೆ ಕರೆದುಕೊಂಡುಬಾ.''

೧೨೫. ದೇವಿಯು ಹೀಗೆ ಆಜ್ಞಾಪಿಸಲು ತುಂಬುರುವು ಅವಳನ್ನು ವಂದಿಸಿ ಆ ಬ್ರಾಹ್ಮಣಸ್ತ್ರೀಯೊಡನೆ ವಿಮಾನವನ್ನೇರಿ ಕೂಡಲೆ ವಿಂಧ್ಯಪರ್ವತಕ್ಕೆ ಹೋದನು.

೧೨೬. ಅಲ್ಲಿ ದೊಡ್ಡ ದೇಹವುಳ್ಳವನೂ, ಕೆಂಪು ಕಣ್ಣುಳ್ಳುವನೂ, ವಿಶಾಲವಾದ ಕಪೋಲವುಳ್ಳವನೂ, ನಗುತ್ತಿರುವವನೂ ಅಳುತ್ತಿರುವವನೂ, ನಡುಗುತ್ತಿರುವವನೂ ಆಗಿರುವ ಆ ಪಿಶಾಚನನ್ನು ಕಂಡನು.

೧೨೭. ತುಂಬುರುವು ಆ ಪಿಶಾಚನನ್ನು ಬಲಾತ್ಕಾರವಾಗಿ ಹಿಡಿದು ಹಗ್ಗಗಳಿಂದ ಕಟ್ಟಿ ಒಂದೆಡೆ ಕೆಡವಿ ವೀಣೆಯನ್ನು ನುಡಿಸುತ್ತ ಶಿವನ ಕಥೆಯನ್ನು ಹಾಡಿದನು.

೧೨೮. ಆ ಪಿಶಾಚನು ಪುಣ್ಯಕರವಾದ ಶಿವಕಥೆಯನ್ನು ಕೇಳಿ ಸಮಸ್ತ ಪಾಪವನ್ನೂ ಪರಿಹರಿಸಿಕೊಂಡು ಏಳು ದಿನಗಳಲ್ಲಿ ಸ್ಮೃತಿಯನ್ನು ಹೊಂದಿದನು.

೧೨೯. ಅವನು ಪಿಶಾಚದೇಹವನ್ನು ತ್ಯಜಿಸಿ ದಿವ್ಯಸ್ವರೂಪವನ್ನು ಹೊಂದಿ ತಾನೂ ಶಿವಚರಿತೆಯನ್ನು ಹಾಡಿದನು.

CC-0. Jangamwadi Math Collection. Digitized by eGangotri

ವಿಮಾನಮಾರುಹ್ಯ ಸ ದಿವ್ಯರೂಪಧೃಕ್
ಸ ತುಂಬುರುಃ ಪಾರ್ಶ್ವಗತಃ ಸ್ವಕಾಂತಯಾ ।
ಗಾಯನ್ಮಹೇಶಸ್ಯ ಗುಣಾನ್ಮನೋರಮಾ
ನ್ಜಗಾಮ ಕೈವಲ್ಯಪದಂ ಸನಾತನಂ ॥ ೧೩೦ ॥

ಸೂತ ಉವಾಚ :—

ಇತ್ಯೇತತ್ಕಥಿತಂ ಪುಣ್ಯಮಾಖ್ಯಾನಂ ದುರಿತಾಪಹಂ ।
ಮಹೇಶ್ವರಪ್ರೀತಿಕರಂ ನಿರ್ಮಲಜ್ಞಾನಸಾಧನಂ ॥ ೧೩೧ ॥
ಯ ಇದಂ ಶೃಣುಯಾನ್ಮರ್ತ್ಯಃ ಕೀರ್ತಯೇದ್ವಾ ಸಮಾಹಿತಃ ।
ಶಂಭೋರ್ಗುಣಾನುಕಥನಂ ವಿಚಿತ್ರಂ ಪಾಪನಾಶನಂ ॥ ೧೩೨ ॥
ಪರಮಾನಂದಜನಕಂ ಭವರೋಗಮಹೌಷಧಂ ।
ಭುಕ್ತ್ವೇಹ ವಿವಿಧಾನ್ಭೋಗಾನ್ಮುಕ್ತೋ ಯಾತಿ ಪರಾಂ ಗತಿಂ ॥ ೧೩೩ ॥

ಸೂತ ಉವಾಚ :—

ಯೂಯಂ ಖಲು ಮಹಾಭಾಗಾಃ ಕೃತಾರ್ಥಾ ಮುನಿಸತ್ತಮಾಃ ।
ಯೇ ಸೇವಂತೇ ಸದಾ ಶಂಭೋಃ ಕಥಾಮೃತರಸಂ ನವಂ ॥ ೧೩೪ ॥
ತೇ ಜನ್ಮಭಾಜಃ ಖಲು ಜೀವಲೋಕೇ
ಯೇಷಾಂ ಮನೋ ಧ್ಯಾಯತಿ ವಿಶ್ವನಾಥಂ ।

---

೧೩೦. ದಿವ್ಯರೂಪವನ್ನು ಧರಿಸಿ ಅವನು ತನ್ನ ಪತ್ನಿ, ತುಂಬುರುಗಳೊಡನೆ ವಿಮಾನವನ್ನೇರಿ ಮಹೇಶ್ವರನ ಮನೋಹರವಾದ ಗುಣಗಳನ್ನು ಹಾಡುತ್ತ ಶಾಶ್ವತವಾದ ಶಿವನ ಕೈವಲ್ಯಸ್ಥಾನಕ್ಕೆ ಹೋದನು.

೧೩೧. ಸೂತನು ಹೇಳುತ್ತಾನೆ:—ಹೀಗೆ ಪುಣ್ಯಕರವೂ, ಪಾಪವನ್ನು ಪರಿಹರಿಸುವುದೂ, ಶಿವನಿಗೆ ಸಂತೋಷವನ್ನುಂಟುಮಾಡುವುದೂ, ಶುದ್ಧಜ್ಞಾನ ಸಾಧಕವೂ ಆದ ಉಪಾಖ್ಯಾನವನ್ನು ಹೇಳಿರುವೆನು.

೧೩೨—೧೩೩. ಈ ವಿಚಿತ್ರವೂ, ಪಾಪನಾಶಕವೂ, ಅತ್ಯಾನಂದವನ್ನುಂಟುಮಾಡುವುದೂ, ಸಂಸಾರವೆಂಬ ರೋಗಕ್ಕೆ ಔಷಧವೂ ಆಗಿರುವ ಶಿವನ ಗುಣ ಕಥನವನ್ನು ಒಮ್ಮನಸ್ಸಿನಿಂದ ಹೇಳುವವನೂ, ಕೇಳುವವನೂ ಈ ಲೋಕದಲ್ಲಿ ವಿವಿಧಭೋಗಗಳನ್ನನುಭವಿಸಿ ಮುಕ್ತನಾಗಿ ಉತ್ತಮಗತಿಯನ್ನು ಪಡೆಯುವನು.

೧೩೪. ಸೂತನು ಹೇಳುತ್ತಾನೆ:—ಎಲೈ ಮುನಿವರ್ಯರೆ! ಯಾವಾಗಲೂ ಶಿವಕಥಾಮೃತರಸವನ್ನು ಆಸ್ವಾದಿಸುತ್ತಿರುವ ನೀವು ಭಾಗ್ಯವಂತರೂ, ಕೃತಕೃತ್ಯರೂ ಆಗಿರುವಿರಿ.

೧೩೫. ಪ್ರಪಂಚದಲ್ಲಿ ವಿಶ್ವೇಶ್ವರನನ್ನು ಮನಸ್ಸಿನಿಂದ ಧ್ಯಾನಿಸುವವರೂ,

CC-0. Jangamwadi Math Collection. Digitized by eGangotri

ವಾಣೀ ಗುಣಾನ್ಸ್ತೌತಿ ಕಥಾಂ ಶೃಣೋತಿ
ಶ್ರೋತ್ರದ್ವಯಂ ತೇ ಭವಮುತ್ತರಂತಿ ॥ ೧೩೫ ॥
ವಿವಿಧಗುಣವಿಭೇದೈರ್ನಿತ್ಯಮಸ್ಪೃಷ್ಟರೂಪಂ
ಜಗತಿ ಚ ಬಹಿರಂತರ್ಭಾಸಮಾನಂ ಮಹಿಮ್ನಾ ।
ಸ್ವಮಹಸಿ ವಿಹರಂತಂ ವಾಙ್ಮನೋವೃತ್ತಿದೂರಂ
ಪರಮಶಿವಮನಂತಾನಂದಸಾಂದ್ರಂ ಪ್ರಪದ್ಯೇ ॥ ೧೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ತೃತೀಯೇ ಬ್ರಹ್ಮಖಂಡೇ ತೃತೀಯೇ ಬ್ರಹ್ಮೋತ್ತರಖಂಡೇ "ಪುರಾಣಶ್ರವಣ ಮಹಿಮಾನುವರ್ಣನಂ"ನಾಮ ದ್ವಾವಿಂಶೋಽಧ್ಯಾಯಃ

ಬ್ರಹ್ಮಖಂಡೇ ತೃತೀಯಂ ಬ್ರಹ್ಮೋತ್ತರಖಂಡಂ ಸಮಾಪ್ತಂ

ತೃತೀಯಂ ಬ್ರಹ್ಮಖಂಡಂ ಸಂಪೂರ್ಣಂ

---

ಮಾತಿನಿಂದ ಅವನ ಗುಣಗಳನ್ನು ಸ್ತುತಿಸುವವರೂ, ಕಿವಿಯಿಂದ ಅವನ ಕಥೆಯನ್ನು ಕೇಳುವವರೂ ಸಂಸಾರವನ್ನು ದಾಟುವರು.

೧೩೬. ಜಗತ್ತಿನಲ್ಲಿ ನಾನಾವಿಧಗುಣಗಳ ಸ್ಪರ್ಶವಿಲ್ಲದವನೂ ಒಳಗೂ ಹೊರಗೂ ಸಮಾನವಾದ ಮಾಹಾತ್ಮ್ಯವುಳ್ಳವನೂ, ಸ್ವಪ್ರಕಾಶನೂ, ಮಾತು ಮನಸ್ಸುಗಳಿಗೆ ಅಗೋಚರನೂ ಅನಂತಾನಂದಗಳಿಂದ ಸಾಂದ್ರನೂ ನಿತ್ಯನೂ ಆದ ಪರಮೇಶ್ವರನನ್ನು ಮರೆಹೋಗುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮೂರನೆಯ ಬ್ರಹ್ಮಖಂಡದ ಮೂರನೆಯ ಬ್ರಹ್ಮೋತ್ತರ ಖಂಡದಲ್ಲಿ "ಪುರಾಣಶ್ರವಣ ಮಹಿಮಾನುವರ್ಣನ"ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

ಇಲ್ಲಿಗೆ ಬ್ರಹ್ಮಖಂಡದಲ್ಲಿ ಮೂರನೆಯ ಬ್ರಹ್ಮೋತ್ತರಖಂಡವು ಮುಗಿದುದು

ಶ್ರೀ ಸ್ಕಾಂದಪುರಾಣದ ಮೂರನೆಯ ಬ್ರಹ್ಮಖಂಡವು ಸಂಪೂರ್ಣವಾದುದು

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI.
Acc. No. 1540 4853

CC-0. Jangamwadi Math Collection. Digitized by eGangotri

